# ಜಿ.ಸು.ಕೃಷ್ಣಸೆಟ್ಟಿಯವರ

## ದೃಶ್ಯಕಲಾ ಸಾಹಿತ್ಯ ಮತ್ತು ಕಲಾಕೃತಿಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು
ಡಿ. ಎಸ್. ಶ್ವೇತ

ಮಾರ್ಗದರ್ಶಕರು
ಪ್ರೊ. ಎಸ್. ಸಿ. ಪಾಟೀಲ



ಲಲಿತಕಲಾ ನಿಕಾಯ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೨

# ಟಿ.ಸು.ಕೃಷ್ಣಸೆಟ್ಟಿಯವರ

# ದೃಶ್ಯಕಲಾ ಸಾಹಿತ್ಯ ಮತ್ತು ಕಲಾಕೃತಿಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು

**ಡಿ.ಎಸ್.ಶ್ವೇತ**

ಮಾರ್ಗದರ್ಶಕರು

**ಡಾ.ಎಸ್.ಸಿ.ಪಾಟೀಲ**

ವಿಶೇಷಾಧಿಕಾರಿಗಳು(ವಿಶ್ರಾಂತ)
ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯ
ಪ್ರಾದೇಶಿಕ ಕಛೇರಿ, ಬೆಂಗಳೂರು



ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩ ೨೭೬

೨೦೧೭



# ಸಂಶೋಧಕರ ಘೋಷಣಾ ಪತ್ರ

**ಚಿ.ಸು.ಕೃಷ್ಣಸೆಟ್ಟಿಯವರ ದೃಶ್ಯಕಲಾ ಸಾಹಿತ್ಯ ಮತ್ತು ಕಲಾಕೃತಿಗಳ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, **ದೃಶ್ಯಕಲಾ** ವಿಭಾಗದ, ಪ್ರಾಧ್ಯಾಪಕರಾದ **ಡಾ.ಎಸ್.ಸಿ.ಪಾಟೀಲ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

Shwetha D.S

**ಡಿ.ಎಸ್.ಶ್ವೇತ**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿನಿ
**ದೃಶ್ಯಕಲಾ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:** ಕ.ವಿ.ವಿ. ಹಂಪಿ
**ದಿನಾಂಕ:** 6/9/17

## ಮಾರ್ಗದರ್ಶಕರ ದೃಢೀಕರಣ ಪತ್ರ

**ಡಿ.ಎಸ್.ಶ್ವೇತ** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಚಿ.ಸು.ಕೃಷ್ಣಸೆಟ್ಟಿಯವರ ದೃಶ್ಯಕಲಾ ಸಾಹಿತ್ಯ ಮತ್ತು ಕಲಾಕೃತಿಗಳ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ದೃಶ್ಯಕಲಾ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

6/9/17
ಮಾರ್ಗದರ್ಶಕರು

**ಡಾ.ಎಸ್.ಸಿ.ಪಾಟೀಲ**
ನಿವೃತ್ತ ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:**
**ದಿನಾಂಕ:**

# ಪರಿವಿಡಿ


ಅಧ್ಯಾಯ : ಒಂದು

**ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ** ೧–೨೫

ಅಧ್ಯಾಯ : ಎರಡು

**ಚಿ.ಸು. ಕೃಷ್ಣಸೆಟ್ಟಿಯವರ ಬಾಲ್ಯ ಪರಿಸರ, ವಿದ್ಯಾಭ್ಯಾಸ ಮತ್ತು ವೃತ್ತಿ ಜೀವನ** ೨೬–೫೭

ಅಧ್ಯಾಯ : ಮೂರು

**ಚಿ.ಸು. ಕೃಷ್ಣಸೆಟ್ಟಿಯವರ ಕಲಾ ಸಾಹಿತ್ಯ ಮತ್ತು ಕಲಾವಿಮರ್ಶೆ** ೫೮–೨೦೫

ಅಧ್ಯಾಯ : ನಾಲ್ಕು

**ಚಿ.ಸು. ಕೃಷ್ಣಸೆಟ್ಟಿಯವರ ಚಿತ್ರಕಲಾಕೃತಿಗಳು** ೨೦೬–೨೯೨

ಅಧ್ಯಾಯ : ಐದು

**ಚಿ.ಸು. ಕೃಷ್ಣಸೆಟ್ಟಿಯವರ ಕಲಾ ಚಟುವಟಿಕೆಗಳು** ೨೯೩–೩೧೬

ಅಧ್ಯಾಯ : ಆರು

**ಕಲಾಕೃತಿಗಳು ಮತ್ತು ಕಲಾ ಸಾಹಿತ್ಯದ ಮೇಲಾದ ಪ್ರಭಾವ,**
**ಪ್ರೇರಣೆ, ಶೈಲಿ ಮತ್ತು ಪ್ರಮುಖ ವೈಲಕ್ಷಣಗಳು** ೩೧೭–೩೩೧

ಅಧ್ಯಾಯ : ಏಳು

**ಸಮಾರೋಪ** ೩೩೨–೩೪೭

**ಅನುಬಂಧಗಳು** ೩೪೮–೩೮೫

೧. ಸಂಕ್ಷೇಪಗಳು

೨. ಲೇಖನಗಳ ಗ್ರಂಥಗಳ ಪಟ್ಟಿ

೩. ಕಲಾಕೃತಿಗಳ ಸಂಗ್ರಹ

೪. ಗ್ರಂಥಋಣ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

ಮಾನವ ಸಂಸ್ಕೃತಿಯಲ್ಲಿ 'ಕಲೆ'ಗೆ ಅಗ್ರ ಸ್ಥಾನವಿದೆ. ಕಲೆಯಿಂದ ಮಾನವ ನಾಗರೀಕತೆಯ ಬೆಳವಣಿಗೆ, ಅಭಿವೃದ್ಧಿಯನ್ನು ಅರ್ಥೈಸಿಕೊಳ್ಳಬಹುದು. ಕಲೆಯ ಅಧ್ಯಯನದಿಂದ ಮಾತ್ರ ಮಾನವ ನಾಗರೀಕತೆ ಮತ್ತು ಸಂಸ್ಕೃತಿಗಳ ಅಧ್ಯಯನ ಪೂರ್ಣವಾಗುತ್ತದೆ. ಆದಿಕಾಲದಿಂದಲೂ ಕಲೆ ಮನುಷ್ಯನ ಕೈಹಿಡಿದುಕೊಂಡೇ ಬಂದಿದೆ.[೧] ಕಲೆ ಮನುಷ್ಯನ ಮನಸ್ಸನ್ನು ಮುದಗೊಳಿಸಿ ಅವನಲ್ಲಿ ವಿಶಿಷ್ಟವಾದ ಸಂಸ್ಕಾರವನ್ನು ಮೂಡಿಸುತ್ತದೆ. ಮನಸ್ಸನ್ನು ಎತ್ತರ ಎತ್ತರಕ್ಕೊಯ್ದು ಸಂಸ್ಕಾರಗೊಂಡ, ಹದವಾದ ವ್ಯಕ್ತಿತ್ವವನ್ನು ರೂಪಿಸಲು ಅದು ನೆರವಾಗುತ್ತದೆ. ಭೌತಿಕ ಜೀವನದ ಹೋರಾಟದಲ್ಲಿ ಸದಾ ತೊಳಲುವ ಮಾನವ ಕಲೆಯನ್ನು ಆರಾಧಿಸದಿದ್ದರೆ ಅವನ ಪಾಲಿಗೆ ಮಾನಸಿಕ ಸೌಖ್ಯ ದೂರವಾಗುತ್ತದೆ. ಜೀವನದಲ್ಲಿ ನೆಮ್ಮದಿ ಸಂತೃಪ್ತಿಗಳು ದೊರೆಯದಾಗುತ್ತವೆ. ಅವನಲ್ಲಿ ಮಾನವೀಯ ಗುಣಗಳನ್ನು ಜಾಗೃತಗೊಳಿಸಲು, ಸೌಂದರ್ಯಪ್ರಜ್ಞೆಯನ್ನು ಎಚ್ಚರಿಸಲು ಒಳ್ಳೆಯದರ ಕಡೆ ಅವನು ಸದಾ ಆಲೋಚಿಸುವಂತೆ ಮಾಡಲು ಕಲೆ ಅವನಿಗೆ ಸಹಾಯಕವಾಗಿದೆ. ಶರೀರದ ಬೆಳವಣಿಗೆಗೆ ಆಹಾರ ಎಷ್ಟು ಅಗತ್ಯವೋ ಅದೇ ರೀತಿ ಮನಸ್ಸಿನ ಬೆಳವಣಿಗೆಗೆ ಸಂಸ್ಕಾರಕ್ಕೆ ಕಲೆ ಅಷ್ಟೇ ಅವಶ್ಯಕ.[೨] ತನ್ನನ್ನು ಅಲಂಕರಿಸಿಕೊಳ್ಳುವುದರಲ್ಲಿ, ತನ್ನ ಕೆಲಸ ಕಾರ್ಯಗಳನ್ನು ಹಗುರ ಮಾಡಿಕೊಳ್ಳುವಲ್ಲಿ, ಶ್ರಮವನ್ನು ಮರೆತು ಕೆಲಕಾಲ ಆನಂದದಲ್ಲಿ ಮೈಮರೆಯುವಲ್ಲಿ ಕಲೆ ಅವನಿಗೆ ಸಹಾಯಕ. ಯಾವುದರಲ್ಲಿ ನಿರ್ಮಾಣ ಪ್ರಕ್ರಿಯೆ ಸೌಂದರ್ಯಶಾಸ್ತ್ರ ಇದೆಯೋ ಅದೇ ಕಲೆ ಎಂದು ಪ್ಲೇಟೋ ಹೇಳುತ್ತಾನೆ.

ಅವನ ಪ್ರಕಾರ ಕಲೆಯು ಆನಂದ ಕೊಡುವ ಮಾಧ್ಯಮ ಮಾತ್ರವಾಗಿರದೆ, ಅದು ರಾಷ್ಟ್ರ ಹಾಗೂ ನಾಗರಿಕರಿಗೆ ಪ್ರಯೋಜನಕಾರಿಯೂ ಆಗಿರಬೇಕು. ಯಾವ ಕಲೆಯು ಸದ್ಗುಣಗಳಿಗೆ

---

೧. ಬಿ.ವಿ.ಕೆ.ಶಾಸ್ತ್ರಿ: ಸಮಕಾಲೀನ ಕಲೆ, ಪು.೧

೨. ಅದೇ.ಪು.

ಆಶ್ರಯ ಕೊಡುವುದಿಲ್ಲವೋ, ಆತ್ಮೋತ್ಕರ್ಷಕ್ಕೆ ಕಾರಣವಾಗುವುದಿಲ್ಲವೋ ಹಾಗೂ ಭ್ರಮೆಗಳನ್ನು ಬೆಳೆಸುತ್ತಿದೆಯೋ ಅದು ನಿರಾಕರಣೆಗೆ ಯೋಗ್ಯ. ಕಲೆಯಲ್ಲಿಯೇ ದುರ್ಗುಣಗಳಿದ್ದರೆ ಅದು ಕಲಾರಾಧಕನ ಮೇಲೆ ಕೆಟ್ಟ ಪರಿಣಾಮ ಬೀರುವುದಲ್ಲದೇ ಅಪ್ರಯೋಜಕವಾದುದು ಆಗಿರುತ್ತದೆ.[೩]

ಕಲೆಯಲ್ಲಿ ಅನೇಕ ಪ್ರಕಾರಗಳಿವೆ. ಅವುಗಳಲ್ಲಿ ಲಲಿತಕಲೆಗಳು ಸಹಾ ಅತಿ ಮುಖ್ಯವಾಗಿದ್ದು, ಅವು ಮಾನವ ಸಂಸ್ಕೃತಿಯ ವಿವಿಧ ಮಜಲುಗಳನ್ನು ಅರಿಯಲು ನಮಗೆ ಸಹಾಯಕವಾಗಿವೆ. ಲಲಿತಕಲೆಗಳಲ್ಲಿ ಚಿತ್ರ, ಶಿಲ್ಪ, ಸಾಹಿತ್ಯ, ಸಂಗೀತ, ನೃತ್ಯ ಮತ್ತು ನಾಟಕ ಮೊದಲಾದವು ಮುಖ್ಯ ವಾಗಿವೆ.[೪] ಇವು ಒಂದರೊಡನೆ ಮತ್ತೊಂದು ಉತ್ತಮ ಸಂಬಂಧವನ್ನು ಹೊಂದಿವೆ. ಶಿಲ್ಪಕಲೆ ಬಲ್ಲವನು ವಾಸ್ತುಶಿಲ್ಪವನ್ನು ಅರಿಯಬೇಕಾಗುತ್ತದೆ. ಸಂಗೀತವನ್ನು ಬಲ್ಲವನು ನೃತ್ಯದ ತಿರುಳನ್ನು ಅರಿಯಬೇಕಾಗಿರುತ್ತದೆ. ಚಿತ್ರಕಲೆ ಬಲ್ಲವನು ಸಾಹಿತ್ಯವನ್ನು ತಿಳಿದಿರಬೇಕಾಗಿರುತ್ತದೆ. ನಾಟಕ, ನಟನೆ ಹಾಗೂ ಕಥೆಗಳನ್ನು ಸೃಷ್ಟಿಸುವವನು ಸಾಹಿತ್ಯಕ್ಕೆ ಮೊರೆಹೋಗಲೇಬೇಕು. ಆದ್ದರಿಂದ ಕಲೆಗಳಲ್ಲಿ ಈ ಲಲಿತಕಲೆ ಕೊಂಡಿಯಂತೆ ಒಂದನ್ನೊಂದು ಬಿಟ್ಟಿರದ ರೀತಿಯಲ್ಲಿ ಸಂಬಂಧವನ್ನು ಬೆಳೆಸಿಕೊಂಡಿರುತ್ತವೆ. ಇವುಗಳಲ್ಲಿ ಚಿತ್ರಕಲೆ ಮತ್ತು ದೃಶ್ಯಕಲೆಗಳು ಕಲಾ ಕ್ಷೇತ್ರದಲ್ಲಿ ಮಹತ್ವದ ಸ್ಥಾನ ಪಡೆದಿವೆ. ಇವುಗಳಲ್ಲಿ ಕಲಾವಿದ ಮುಖ್ಯ. "ಕಾಲ, ಸಮಯ, ಸಂದರ್ಭ, ಪ್ರದೇಶಗಳ ಎಲ್ಲೆಗಳನ್ನು ಮೀರಿ ಕಲಾವಿದ ತನ್ನ ಒಳಗಿನ ಸುಪ್ತಪ್ರತಿಭೆಗಳನ್ನು, ತನ್ನ ಸಮಕಾಲೀನ ಅನುಭವಗಳನ್ನು ಅಲ್ಲದೆ ದೇಶವೊಂದರ ಇತಿಹಾಸ ಮತ್ತು ಸಂಸ್ಕೃತಿಯನ್ನು, ಹಿರಿಮೆ ಗರಿಮೆಗಳನ್ನು, ವೈಭವಗಳನ್ನು ಚಿತ್ರ/ದೃಶ್ಯ ಮಾಧ್ಯಮದ ಮೂಲಕ ಅಭಿವ್ಯಕ್ತಿಸುತ್ತಾನೆ. ಈ ದೃಷ್ಟಿಯಲ್ಲಿ **ಕಲಾವಿದ ದೇಶವೊಂದರ ನಿಜವಾದ ಸಾಂಸ್ಕೃತಿಕ ರಾಯಭಾರಿ** ಎನಿಸುತ್ತಾನೆ".[೫] ಅದರಂತೆ ಒಬ್ಬ ಚಿತ್ರಕಾರನ ಕುಂಚದ ಕೈಚಳಕದಲ್ಲಿ ಹತ್ತು ಬಗೆಯ ವರ್ಣರಂಜನೆಯ ಹೊಸ ಹೊಸ ಕಲೆಗಳು ಹೊರಹೊಮ್ಮುತ್ತವೆ. ತನ್ನ ಕಲ್ಪನಾ ಶಕ್ತಿಯಿಂದ ಅಳಿದುದ್ದನ್ನು ಸಹ ಜೀವಂತವಾಗಿರಿಸುವ ಪ್ರತಿಭೆ ಕಲಾವಿದನಲ್ಲಿರುತ್ತದೆ. ಆತನ ಕುಂಚದಿಂದ ಚಿತ್ರಿತವಾದ ಚಿತ್ರಕಲೆ ಅತನ ಅಪ್ರತಿಮ ಪ್ರತಿಭೆಯನ್ನು ಸೂಚಿಸುತ್ತದೆ. ಇದಕ್ಕೆ ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಂಡಿರುವ ಅನೇಕ ಚಿತ್ರಕಲಾವಿದರೇ ಸಾಕ್ಷಿಯಾಗಿದ್ದಾರೆ. ಅದೇ ರೀತಿ ನಮ್ಮ ಭಾರತೀಯ ಸಂಸ್ಕೃತಿಗೆ ಹೆಚ್ಚು ಮೆರಗನ್ನು ತಂದುಕೊಟ್ಟವರು ಸಹ ಇದೇ ಕಲಾವಿದರೇ. ತನ್ನ ಅಂತರಾಳದಲ್ಲಿ ಅಡಗಿರುವ ಕಲೆಯ ಸೊಬಗನ್ನು ಸಂವೇದನಾ ಶೀಲತೆಯಿಂದ ಪ್ರಪಂಚಕ್ಕೆ ಪಸರಿಸಿ ತನ್ನಲ್ಲಿರುವ ಶಕ್ತಿಯನ್ನು ಪ್ರದರ್ಶಿಸುವ ಮೂಲಕ ಕಲಾವಿದ ಗುರುತರನಾಗುತ್ತಾನೆ. ಅದೇ ಎಷ್ಟೋ ಕಲಾವಿದರು ತೋರಿಕೆಗೆ ಆಸ್ಪದಕೊಡದೇ ಕಣ್ಮರೆಯಾಗಿರುತ್ತಾರೆ.

---

೩. ಸಾ.ಕಾಸಿನಾಥ ಅಂಬಲಗೆ: ಸೌಂದರ್ಯಶಾಸ್ತ್ರ, ಪು.೭, ಕ.ಲ.ಕ.ಅ., ೨೦೦೧

೪. ಅದೇ.

೫. ಡಾ.ಹೆಚ್.ತಿಪ್ಪೇಸ್ವಾಮಿ, **ಆದಿಮ**, ಪು.೧೬–೧೯, ಮಾಲತೇಶ ಪ್ರಕಾಶನ, ಬೆಂಗಳೂರು, ೨೦೦೩.

ಹಾಗೆಯೇ ಅವರ ಕಲಾಕೃತಿಗಳು ಜನಮನ್ನಣೆ ಪಡೆದು ಇತಿಹಾಸ ನಿರ್ಮಿಸಿದ ಅದೆಷ್ಟೋ ಉದಾಹರಣೆಗಳನ್ನು ದೇಶ-ವಿದೇಶಗಳಲ್ಲಿ ಕಾಣಬಹುದು. ಕಲೆಗಾಗಿಯೇ ತಮ್ಮ ಜೀವನವನ್ನೇ ಮುಡಪಾಗಿಟ್ಟ ನೂರಾರು ಮಹಾನ್ ಕಲಾವಿದರು ನಮ್ಮ ನಡುವೆ ಇದ್ದಾರೆ. ಅವರಲ್ಲಿ ಕೆಲವರು ನಮ್ಮಿಂದ ಕಣ್ಮರೆಯಾಗಿದ್ದಾರೆ. ಇಂತಹ ಕಲಾವಿದರ ಜೀವನ, ಸಾಧನೆ, ಕೊಡುಗೆಗಳ ಕುರಿತು ಹೆಚ್ಚು ವ್ಯವಸ್ಥಿತ ಸಂಶೋಧನೆ ಮತ್ತು ಅಧ್ಯಯನಗಳು ತುರ್ತಾಗಿ ಆಗಬೇಕಾದ ಅವಶ್ಯಕತೆ ಇದೆ. ಇಂತಹ ಮಹಾನ್ ಕಲಾವಿದರಲ್ಲಿ ಚಿ.ಸು.ಕೃಷ್ಣಸೆಟ್ಟಿ('ಚಿ'ಎಂದರೆ ಚಿಕ್ಕನಾಯಕನಹಳ್ಳಿ, 'ಸು' ಎಂದರೆ ಸುಬ್ಬಯ್ಯಶೆಟ್ಟಿ)ಯವರು ಒಬ್ಬರಾಗಿದ್ದು, ಅವರನ್ನು ಕೃ.ಸೆ.ಯವರೆಂದೇ ಕಲಾವಲಯದಲ್ಲಿ ಗುರುತಿಸಲಾಗುತ್ತದೆ.[೬]

ಚಿತ್ರಕಲಾವಿದ, ಕಲಾಸಾಹಿತಿ, ಕಲಾಸಾಹಿತ್ಯ ಹಾಗೂ ಕಲಾಕೃತಿಗಳ ವಿಮರ್ಶಕ ಎಂದು ಇವರು ಖ್ಯಾತರಾಗಿದ್ದಾರೆ. ಈ ಕ್ಷೇತ್ರಗಳಲ್ಲಿ ೮೦ರ ದಶಕದಿಂದ ತೊಡಗಿಕೊಂಡ ಶ್ರೀಯುತರ ಸೇವೆ ಅಪರಿಮಿತವಾದದು. ಅವರ ಗುರುತರ ಸೇವೆಯನ್ನು ಗುರುತಿಸಿ ಹತ್ತಾರು ಪ್ರಶಸ್ತಿ-ಪುರಸ್ಕಾರಗಳು ಅವರನ್ನು ಹುಡುಕಿಕೊಂಡು ಬಂದಿವೆ. ಕೆಲ ಪುಸ್ತಕ ಮತ್ತು ನೂರಾರು ಲೇಖನಗಳು ಇವರಿಂದ ರಚಿತವಾಗಿದ್ದು, ಸಾಕಷ್ಟು ಜನಮನ್ನಣೆಗೊಂಡಿವೆ.[೭] ಕಲಾವಲಯದಲ್ಲಿ ವಿಶಿಷ್ಟ ಸಾಧನೆಮಾಡಿರುವ ಈ ಕಲಾವಿದ, ಕಲಾವಿಮರ್ಶಕ, ಕಲಾಸಾಹಿತಿಯನ್ನು ಕುರಿತು ಮತ್ತು ಅವರ ಕೊಡುಗೆಗಳ ಕುರಿತು ವ್ಯವಸ್ಥಿತವಾಗಿ ಗುರುತಿಸುವ ಪ್ರಯತ್ನವನ್ನು ಈ ಅಧ್ಯಯನದ ಮೂಲಕ ಕೈಗೆತ್ತಿಕೊಳ್ಳಲಾಗಿದೆ.

## ಅಧ್ಯಯನದ ಉದ್ದೇಶ

ಕರ್ನಾಟಕದಲ್ಲಿ ೮೦ರ ದಶಕದಿಂದ ಗಂಭೀರವಾಗಿ ಚಿತ್ರಕಲೆಯ ಕುರಿತು ಚಿಂತನೆಗಳು, ಆಲೋಚನೆಗಳು, ಸಂಶೋಧನೆಗಳು ಆರಂಭವಾಗಿವೆ. ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ಇತಿಹಾಸದಲ್ಲಿ ಲಲಿತಕಲೆಗಳ ಪಾತ್ರ ತುಂಬಾ ಮೌಲಿಕವಾದದ್ದು. ಈ ನಾಡನ್ನು ಕಟ್ಟುವಲ್ಲಿ ಅನೇಕ ಜನರ ಪರಿಶ್ರಮದ ಬೆವರಿದೆ. ಅದರಲ್ಲಿ ಕಲಾವಿದನ ಪಾತ್ರವನ್ನು ನಿರ್ಲಕ್ಷಿಸುವಂತಿಲ್ಲ. ಚಿತ್ರ, ಶಿಲ್ಪ ಕಲೆಗಳು ನಾಡಿನ ಅಮೂಲ್ಯ ಆಸ್ತಿಗಳಾಗಿವೆ. ಅಲ್ಲದೇ ಅವುಗಳು ಸಾವಿರಾರು ವರ್ಷದ ಇತಿಹಾಸವನ್ನು ಇಂದಿಗೂ ಸಾರಿ ಹೇಳುತ್ತಿವೆ.[೮] ಅವುಗಳ ಸಂರಕ್ಷಣೆಯ ದೃಷ್ಟಿಯಿಂದ ಹೆಚ್ಚಿನ ಪ್ರಮಾಣದಲ್ಲಿ ಅಧ್ಯಯನಗಳು ನಡೆಯದೇ ಇರುವುದು ಕಂಡುಬರುತ್ತದೆ. ನಾಡಿನ ಸಾಂಸ್ಕೃತಿಕ ಪರಂಪರೆಯ ಪ್ರತೀಕವಾಗಿರುವ ಚಿತ್ರ, ಶಿಲ್ಪಕಲೆಗಳು ಸಾಂಸ್ಕೃತಿಕ ಪರಂಪರೆಯ ಹರಿಕಾರರಾದ ಕಲಾವಿದರ

---

೬. ಬೆಂಗಳೂರಿನಲ್ಲಿ ಚಿ.ಸು.ಕೃಷ್ಣಸೆಟ್ಟಿ (೭೨)ಯವರು ಸಂದರ್ಶನದಲ್ಲಿ ನೀಡಿದ ಮಾಹಿತಿ ದಿನಾಂಕ: ೨೫-೧೨-೨೦೧೫

೭. ಅದೇ.

೮. ಡಾ.ಎಸ್.ಸಿ.ಪಾಟೀಲ: ಹಚ್ಚೆ ಚಿತ್ರಕಲೆ, ಪು.ಸ.೧



ಕುರಿತಾದ ಸಂಶೋಧನೆಗಳು ಗಮನಾರ್ಹವಾಗಿ ನಡೆಯಬೇಕಾಗಿರುವುದು ಅವಶ್ಯಕವಾಗಿದೆ. ಕರ್ನಾಟಕ ಪ್ರದೇಶದಲ್ಲಿ ಹಲವಾರು ಕಲಾವಿದರು ಹಾಗೂ ಕೆಲವೇ ಕೆಲವು ಕಲಾ ಸಾಹಿತಿಗಳು ತಮ್ಮ ಬದುಕನ್ನೇ ಕಲೆಗಾಗಿ ಮತ್ತು ಕಲಾ ಸಾಹಿತ್ಯಕ್ಕಾಗಿ ಮುಡುಪಾಗಿಟ್ಟಿರುವ ನಿದರ್ಶನಗಳಿರುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ನಾಡಿನ ವಿಶ್ವವಿದ್ಯಾಲಯಗಳು ಕಲೆ, ಸಂಸ್ಕೃತಿಯನ್ನು ಸಮಾಜಕ್ಕೆ ಪರಿಚಯಿಸುವ ಪ್ರಯತ್ನ ಮಾಡಿರುವುದು ನಿಜಕ್ಕೂ ಶ್ಲಾಘನೀಯ. ಅದರಂತೆ ಕರ್ನಾಟಕದಲ್ಲಿ ೮೦ರ ದಶಕದಿಂದ ಪ್ರಾರಂಭವಾದ ದೃಶ್ಯಕಲಾ ಸಾಹಿತ್ಯ(ಸಂಶೋಧನೆ)ಪ್ರಸ್ತುತ ದಿನಗಳವರೆಗೂ ಅದು ನಿರಂತರವಾಗಿ ಸಾಗಿದೆ. ಇದರ ಹಿಂದೆ ಪ್ರಬಲ ಕಲಾ ಸಾಹಿತಿಗಳು, ಕಲಾವಿದರು ಹಾಗೂ ಸಂಶೋಧನಾ ಮಾರ್ಗದರ್ಶಕರ ಬೆಂಬಲ ದಟ್ಟವಾಗಿದೆ. ಅದರ ಫಲವಾಗಿಯೇ ಪ್ರಸ್ತುತ ಕರ್ನಾಟಕದ ಸಾಂಸ್ಕೃತಿಕ ಕಲೆಗೆ ತನ್ನದೇ ಆದ ಪ್ರಾಬಲ್ಯವನ್ನು ಪಡೆದುಕೊಂಡು ವಿವಿಧ ಕ್ಷೇತ್ರಗಳ ಸಾಲಿಗೆ 'ದೃಶ್ಯಕಲೆ' ನಿಂತುಕೊಂಡಿರುವುದು ವಿಶೇಷಗಳಲ್ಲೊಂದು. ಇಷ್ಟೆಲ್ಲಾ ಹೇಳುವ ಉದ್ದೇಶವೂ ಪ್ರಮುಖವಾದದ್ದಾಗಿದೆ. ಅದೇನೆಂದರೆ ಮೇಲೆ ತಿಳಿಸಿರುವಂತೆ ಕರ್ನಾಟಕ ರಾಜ್ಯದಲ್ಲಿ ಸಾವಿರಾರು ಕಲಾವಿದರಿರುವುದು ಕಂಡುಬರುತ್ತದೆ. ಅದರಲ್ಲೂ ಚಿತ್ರ, ಶಿಲ್ಪಕಲಾವಿದರ ಸಂಖ್ಯೆ ಅಧಿಕ. ಇನ್ನೂ ಕಲಾ ಸಾಹಿತಿಗಳು ಎಂದಾಗ ಬೆರಳೆಣಿಕೆಯಷ್ಟು ಮಾತ್ರ ಕಂಡುಬರುತ್ತಾರೆ. ಕಲಾ ಸಾಹಿತ್ಯಕ್ಕೆ ಅಷ್ಟಾಗಿ ಮಾನ್ಯತೆ ಯಾಕೆ ಸಿಕ್ಕಿಲ್ಲ? ಎಂಬ ಪ್ರಶ್ನೆಗೆ ಕಲಾವಿದ ಸೃಜನಶೀಲತೆಗೆ ಹೆಚ್ಚು ಪ್ರಾಮುಖ್ಯತೆ ನೀಡಿ ಬಣ್ಣಗಳ ಮೇಲೆಯೇ ಅವಲಂಬಿತನಾಗುತ್ತಾನೆ. ಕಲೆಯಲ್ಲಿಯೇ ಉನ್ನತಮಟ್ಟಕ್ಕೇರುವ ಆಕಾಂಕ್ಷೆ ಉಳ್ಳವನಾಗಿರುತ್ತಾನೆ. ಆದ್ದರಿಂದಲೇ ಕಲಾವಿದ (ಚಿತ್ರ-ಶಿಲ್ಪ) ಹೆಚ್ಚೆಚ್ಚು ಕಲೆಗೆ ಮಾತ್ರ ಮೀಸಲಾಗಿರುತ್ತಿದ್ದುದನ್ನು ಇತಿಹಾಸದ ಪುಟಗಳಲ್ಲಿ ಕಾಣಬಹುದು.[೯] ಅದರಂತೆ ಮುಂದುವರೆದ ನಾಡಿನ ಕಲಾವಿದರ ಬದುಕು ಕುರಿತು ಅಲ್ಲೊಂದು, ಇಲ್ಲೊಂದು ಕಲೆಗೆ ಸಂಬಂಧಿಸಿದ ಲೇಖನಗಳು ಮತ್ತು ಪುಸ್ತಕಗಳು ಬಂದಿರುತ್ತವೆ. ಆದರೆ ಕಲಾ ವಿಮರ್ಶೆ ಮಾತ್ರ ಗೌಣವಾಗಿರುತ್ತವೆ. ಅದು ೮೦ರ ದಶಕದಿಂದ ಕೆಲವು ಕಲಾ ಸಾಹಿತಿಗಳು ಲೇಖನದ ರೂಪದಲ್ಲಿ ಕಲಾಕೃತಿಗಳನ್ನು ವಿಮರ್ಶಿಸುವ ಮೂಲಕ ಪ್ರದರ್ಶಿಸಿರುವುದನ್ನು ಕಾಣಬಹುದು. ಅದೇ ಸಾಲಿನಲ್ಲಿ ಕಲೆಯ ಕುರಿತು ಸಂಶೋಧನೆಗಳು ಕೂಡ ಪ್ರಾರಂಭವಾದವು. ಮೊಟ್ಟಮೊದಲು ಧಾರವಾಡ ವಿಶ್ವವಿದ್ಯಾಲಯದಲ್ಲಿ ಪ್ರಾರಂಭವಾದ ಸಂಶೋಧನೆ ಮುಂದುವರೆದು ಕನ್ನಡ ವಿಶ್ವವಿದ್ಯಾಲಯ ಮತ್ತು ಗುಲ್ಬರ್ಗ ವಿಶ್ವವಿದ್ಯಾಲಯಕ್ಕೂ ವಿಸ್ತರಿಸಿದ್ದು, ಇಲ್ಲಿ ದೃಶ್ಯಕಲೆಗೆ ಸಂಬಂಧಿಸಿದ ವಿಭಾಗಗಳಿರುತ್ತವೆ. ಕಲಾವಿದರಿಗೆ ಕಲಾ ಸಾಹಿತ್ಯದ ಅರಿವನ್ನು ಮೂಡಿಸುವ ಪ್ರಯತ್ನದಲ್ಲಿ ಇಲ್ಲಿಂದ ಹೊರಬಂದ ಸಂಶೋಧನ ಗ್ರಂಥಗಳು ಯಶಸ್ವಿಯಾಗಿವೆ.

ಕಲಾವಲಯದಲ್ಲಿ ಚಿತ್ರ ಮತ್ತು ಶಿಲ್ಪಕಲೆಗೆ ಸಂಬಂಧಿಸಿದಂತೆ ಸಂಶೋಧನೆಗಳು ನಡೆದಿರುತ್ತವೆ. ಅವುಗಳಲ್ಲಿ ಕರ್ನಾಟಕದ ಜನಪದ ಚಿತ್ರಕಲೆ, ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಉತ್ತರ ಕರ್ನಾಟಕದ

೯. ಡಾ.ಎಸ್.ಸಿ.ಪಾಟೀಲ್: ಸಾಧನೆಯ ಸಮುಚ್ಚಯ, ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ, ಧಾರವಾಡ, ೨೦೧೦

ಶಿಲ್ಪಕಲೆ, ಕರ್ನಾಟಕದ ಗಾಜಿನ ಚಿತ್ರಕಲೆ, ಕರ್ನಾಟಕದ ಗಂಜೀಫಾ ಚಿತ್ರಕಲೆ, ಕರ್ನಾಟಕದ ತೊಗಲುಗೊಂಬೆ ಚಿತ್ರಕಲೆ, ಕರ್ನಾಟಕದ ಜನಪದ ಚಿತ್ರಕಲೆ, ಕರ್ನಾಟಕದ ಲಂಬಾಣಿ ಕರಕುಶಲ ಚಿತ್ರಕಲೆ, ವಿಜಯನಗರ ಚಿತ್ರಕಲೆ, ದಕ್ಷಿಣ ಕರ್ನಾಟಕದ ರಥ ಶಿಲ್ಪಕಲೆ, ದಕ್ಷಿಣ ಕರ್ನಾಟಕದ ಶಿಲ್ಪಕಲೆ ಮುಂತಾದ ವಿವಿಧ ಆಯಾಮಗಳಲ್ಲಿ ಚಿತ್ರ ಮತ್ತು ಶಿಲ್ಪಕಲೆಗಳ ಕುರಿತು ಉಪಯುಕ್ತ ಅಂಶಗಳನ್ನು ಹೊರತರುವಲ್ಲಿ ಸಂಶೋಧನ ಅಧ್ಯಯನಗಳು ಪೂರಕವಾಗಿ ಕೆಲಸ ನಿರ್ವಹಿಸಿರುತ್ತವೆ.[೧೦] ಇಷ್ಟಕ್ಕೆ ಸೀಮಿತವಾಗದ ಈ ಕಲೆ, ಚಿತ್ರ ಮತ್ತು ಶಿಲ್ಪ ರಚಿಸುವ ಅದೆಷ್ಟೋ ಕಲಾವಿದರು ಕರ್ನಾಟಕದ ನಾನಾ ಮೂಲೆಗಳಲ್ಲಿದ್ದು ಅಂಥವರ ಕುರಿತು ಸಮಗ್ರ ಅಧ್ಯಯನಗಳು ಕೂಡ ನಡೆದಿರುತ್ತವೆ. ಅವುಗಳೆಂದರೆ ಕಲಾವಿದ ವಿಜಯ ಸಿಂಧೂರ ಜೀವನ ಮತ್ತು ಕಲಾಕೃತಿಗಳು, ಕಲಾವಿದ ಎಂ.ಎ.ಚೆಟ್ಟಿಯವರ ಜೀವನ ಮತ್ತು ಕಲಾಕೃತಿಗಳ ಒಂದು ಅಧ್ಯಯನ, ಕಲಾವಿದ ಆರ್.ಎಂ. ಹಡಪದ್‌ರ ಕಲಾಕೃತಿಗಳ ಅಧ್ಯಯನ, ಕಲಾವಿದ ವಿ.ಬಿ.ಹಿರೇಗೌಡರ ಕಲಾಕೃತಿಗಳು ಮತ್ತು ಜೀವನ, ಎಂ.ಬಿ.ಪಾಟೀಲರ ಜೀವನ ಮತ್ತು ಕಲಾಕೃತಿಗಳು, ಡಾ.ವಿ.ಟಿ.ಕಾಳೆ ಕಲೆ ಮತ್ತು ಜೀವನ, ಹೀಗೆ ಅನೇಕ ಕಲಾವಿದರ ಕಲೆಯ ಬದುಕನ್ನು ಸಂಶೋಧನೆಯ ಮೂಲಕ ಸಮಗ್ರ ಮಾಹಿತಿಯನ್ನು ಕಲೆ ಹಾಕಿ ಮಹಾಪ್ರಬಂಧದ ರೂಪದಲ್ಲಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುತ್ತಾರೆ.[೧೧] ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದು ಗುರುತಿಸಿಕೊಂಡಿರುವ ಕಲಾವಿದ ಮತ್ತು ಕಲಾ ಸಾಹಿತಿಗಳನ್ನು ಈ ರೀತಿ ಗುರುತಿಸುವ ಕೆಲಸ ನಿರಂತರವಾಗಿರಬೇಕಾದದ್ದು ಎಲ್ಲರ ಆಶಯ. ಅದೇ ರೀತಿ ಮೇಲೆ ಸೂಚಿಸಿದ ಕಲಾವಿದರ ಸಾಲಿನಲ್ಲಿ ನಿಂತಿರುವ ಕರ್ನಾಟಕದ ಮತ್ತೊಬ್ಬ ಕಲಾವಿದ ಮತ್ತು ಕಲಾವಿಮರ್ಶಕ ಎಂದರೆ ಚಿ.ಸು.ಕೃಷ್ಣಸೆಟ್ಟಿಯವರು. ಇವರು ಮೂಲತಃ ಶಿವಮೊಗ್ಗದ ತೀರ್ಥಹಳ್ಳಿ ಯವರು. ಖ್ಯಾತ ಕವಿಗಳ ನಾಡಲ್ಲಿ ಜನಿಸಿದ ಇವರು ಇಂದು ಕಲೆ ಮತ್ತು ಸಾಹಿತ್ಯದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿರುತ್ತಾರೆ. ಇಂತಹ ಸಂವೇದನಾಶೀಲ ವ್ಯಕ್ತಿಯ ಕಲೆಯ ಬದುಕು, ಕಲಾ ಸಾಹಿತ್ಯದಲ್ಲಿನ ಒಡನಾಟದ ದಾರಿಯ ಒಳನೋಟವನ್ನು ಸಂಶೋಧನೆಯ ಮೂಲಕ ಸಮಾಜಕ್ಕೆ ಪರಿಚಯಿಸುವ ಮುಖ್ಯ ಉದ್ದೇಶ ಈ ಅಧ್ಯಯನದ್ದಾಗಿದೆ.

## ಉದ್ದೇಶಗಳು

೧. ಚಿ.ಸು.ಕೃಷ್ಣಸೆಟ್ಟಿಯವರ ಬಾಲ್ಯಜೀವನ, ಶಿಕ್ಷಣ, ವೃತ್ತಿ ಜೀವನದ ಸಾಧನೆಗಳನ್ನು ಗುರುತಿಸುವುದು.

೨. ಚಿ.ಸು.ಕೃಷ್ಣಸೆಟ್ಟಿಯವರಿಂದ ರಚನೆಯಾದ ದೃಶ್ಯಕಲಾ ಸಾಹಿತ್ಯವನ್ನು ಗುರುತಿಸಿ(ವಿಶೇಷವಾಗಿ ಗ್ರಂಥಗಳು, ಲೇಖನಗಳು) ಅಧ್ಯಯನ ಮಾಡುವುದು

---

೧೦. ಡಾ.ಎಸ್.ಸಿ.ಪಾಟೀಲ: ಕ್ಯಾಟ್‌ಲಾಗ್, ಪು.ಸ.೧೨

೧೧. ಅದೇ.

೩. ಚಿ.ಸು.ಕೃಷ್ಣಸೆಟ್ಟಿಯವರಿಂದ ರಚಿತವಾದ ವೈವಿಧ್ಯಮಯವಾದ ಕಲಾಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸುವುದು

೪. ಚಿ.ಸು.ಕೃಷ್ಣಸೆಟ್ಟಿಯವರ ಕಲಾಕೃತಿಗಳ ವಸ್ತು ವಿಷಯ ಅವರ ಶೈಲಿ, ಅವರು ಬಳಸಿದ ಕಲಾತಂತ್ರ ಮೊದಲಾದ ಅಂಶಗಳನ್ನು ವಿವರಿಸುವುದು.

೫. ಚಿ.ಸು.ಕೃಷ್ಣಸೆಟ್ಟಿಯವರಿಂದ ರಚಿತವಾದ ಕಲಾಕೃತಿಗಳ ಕುರಿತು ಸಮಕಾಲೀನ ವಿದ್ವಾಂಸರ ಅಭಿಪ್ರಾಯ ಏನು? ಆ ಕಲಾಕೃತಿಗಳು ಜನರ ಮೇಲೆ ಯಾವ ರೀತಿಯ ಪರಿಣಾಮವನ್ನುಂಟು ಮಾಡಿವೆ ಎಂಬುದನ್ನು ಗುರುತಿಸುವುದು.

೬. ಚಿ.ಸು.ಕೃಷ್ಣಸೆಟ್ಟಿಯವರು ಆಯೋಜಿಸಿದ ರಾಷ್ಟ್ರ ಮತ್ತು ಅಂತರಾಷ್ಟ್ರೀಯ ವಿಚಾರ ಸಂಕಿರಣ, ಚಿತ್ರಶಿಬಿರ, ಚಿತ್ರ ಪ್ರದರ್ಶನಗಳನ್ನು ದಾಖಲಿಸುವುದು.

೭. ಚಿ.ಸು.ಕೃಷ್ಣಸೆಟ್ಟಿಯವರ ಕಲಾಚಟುವಟಿಕೆಗಳ ಸ್ವರೂಪವನ್ನು ವಿವೇಚಿಸುವುದು.

೮. ಚಿ.ಸು.ಕೃಷ್ಣಸೆಟ್ಟಿಯವರಿಂದ ರಚಿತವಾದ ಪುಸ್ತಕ ಮತ್ತು ಲೇಖನ, ವಿಮರ್ಶಾಲೇಖನ ಮೊದಲಾದವುಗಳನ್ನು ಅಧ್ಯಯನಕ್ಕೆ ಒಳಪಡಿಸುವುದು.

೯. ಚಿ.ಸು.ಕೃಷ್ಣಸೆಟ್ಟಿಯವರ ಸಂಘಟನಾ ಚತುರತೆ, ವಿವಿಧ ಸಂಘಟನೆಗಳಲ್ಲಿ ಇವರ ಪಾತ್ರ ಹಾಗು ರಾಜಕೀಯ ನಾಯಕರೊಂದಿಗಿನ ಸಂಬಂಧ ಮತ್ತು ಒಡನಾಟಗಳನ್ನು ವಿಶ್ಲೇಷಿಸುವುದು.

೧೦. ಚಿ.ಸು.ಕೃಷ್ಣಸೆಟ್ಟಿಯವರು ಪಡೆದ ಪ್ರಶಸ್ತಿ/ಪುರಸ್ಕಾರ ಮತ್ತು ಬಹುಮಾನ ಮೊದಲಾದ ಅಂಶಗಳನ್ನು ಗುರುತಿಸುವುದು.

೧೧. ಚಿ.ಸು.ಕೃಷ್ಣಸೆಟ್ಟಿಯವರ ಕಲಾಕೃತಿ ಮತ್ತು ಕಲಾಸಾಹಿತ್ಯದ ಮೇಲಾದ ಪ್ರಭಾವ ಪ್ರೇರಣೆ ಮತ್ತು ಶೈಲಿ ವೈಲಕ್ಷಣಗಳನ್ನು ಗುರುತಿಸುವುದು.

೧೧. ವಿವಿಧ ಇಲಾಖೆ/ಸಂಸ್ಥೆ/ಅಕಾಡೆಮಿಗಳಲ್ಲಿ ಪಡೆದ ಸ್ಥಾನಮಾನ, ಸದಸ್ಯತ್ವ ಮತ್ತು ಕಲಾಕ್ಷೇತ್ರಕ್ಕೆ ನೀಡಿದ ಕೊಡುಗೆಗಳನ್ನು ಗುರುತಿಸುವುದು.

ಒಟ್ಟಾರೆ ಕರ್ನಾಟಕ ರಾಜ್ಯದ ಪ್ರತಿಭಾನ್ವಿತ ವ್ಯಕ್ತಿಯಲ್ಲಿನ ಗುಣಾವಶೇಷಗಳನ್ನು ಕೇವಲ ಅಳೆಯುವುದರ ಬದಲು ಸಂಶೋಧನೆಯ ಮೂಲಕ ಅವರ ಸಮಗ್ರ ಸಾಧನೆಗಳನ್ನು ಗುರುತಿಸಬೇಕೆಂಬ ಅಪೇಕ್ಷೆ ಮತ್ತು ದೃಷ್ಟಿಯಿಂದ ಪ್ರಸಕ್ತ ಸಂಶೋಧನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ಚಿ.ಸು.ಕೃಷ್ಣಸೆಟ್ಟಿ ಸಾಮಾನ್ಯರಲ್ಲಿ ಸಾಮಾನ್ಯರಂತೆ ಕಂಡರೂ ಅವರಲ್ಲಡಗಿರುವ ಕಲಾಸಾಹಿತ್ಯ, ಕಲಾಕೃತಿಗಳು ಮತ್ತು ಕಲಾವಿಮರ್ಶೆ ಅವರನ್ನರಿತವರಿಗೆ ಮಾತ್ರ ಗೊತ್ತು. ಅಂತಹ ವಿಶಿಷ್ಟ ವ್ಯಕ್ತಿಯ ಕುರಿತು ಸಂಶೋಧನ ಅಧ್ಯಯನ ಮಾಡುವ ಪ್ರಮುಖ ಉದ್ದೇಶ ಇಲ್ಲಿದೆ.

ಕರ್ನಾಟಕದಲ್ಲಿ ಚಿತ್ರಕಲಾವಿದರ ಸಂಖ್ಯೆ ಸಾವಿರಕ್ಕೂ ಮಿಗಿಲು ಆದರೆ ಕಲಾಸಾಹಿತ್ಯದಲ್ಲಿ ಮಾತ್ರ ಬೆರಳೆಣಿಕೆಯಷ್ಟು ಮಾತ್ರ. ಅಂತವರಲ್ಲಿ ಕೆ.ಶಿವರಾಮಮೂರ್ತಿ, ಡಾ.ಶಿವರಾಮಕಾರಂತ, ಬಿ.ವ್ಹಿ.ಕೆ.ಶಾಸ್ತ್ರಿ, ಪಿ.ಆರ್.ತಿಪ್ಪೇಸ್ವಾಮಿ, ಅ.ಲ.ನರಸಿಂಹನ್, ಪ್ರೊ.ಎಸ್.ಸಿ.ಪಾಟೀಲ, ಕೆ.ವಿ.ಸುಬ್ರಹ್ಮಣ್ಯಂ, ಎನ್.ಮರಿಶಾಮಾಚಾರ್, ಎಲ್.ಶಿವಲಿಂಗಪ್ಪ, ಎಸ್.ಕೆ.ರಾಮಚಂದ್ರರಾವ್ ಮುಂತಾದವರು ಮುಖ್ಯವಾಗಿದ್ದಾರೆ.[೧೨] ಅವರ ಸಾಲಲ್ಲಿ ನಿಲ್ಲುವ ಮತ್ತೊಬ್ಬ ಕಲಾವಿದರೆಂದರೆ ಚಿ.ಸು.ಕೃಷ್ಣಸೆಟ್ಟಿಯವರು. ವಿಶೇಷವಾಗಿ ಚಿ.ಸು.ಕೃಷ್ಣಸೆಟ್ಟಿಯವರು ಕಲಾವಿಮರ್ಶೆಯಲ್ಲಿ ಹೆಚ್ಚು ಪರಿಣತಿಯನ್ನು ಹೊಂದಿದವರು ಮತ್ತು ಕಲೆ ಮತ್ತು ಸಾಹಿತ್ಯವನ್ನು ಮೈಗೂಡಿಸಿಕೊಂಡು ಬಂದಿರುವ ಇವರ ಕೃತಿಗಳ ಜೊತೆಗೆ ಜೀವನದ ನಾನಾ ದಾರಿಗಳನ್ನು ಅನಾವರಣ ಮಾಡುವ ಉದ್ದೇಶವೇ ಈ ಸಂಶೋಧನೆ. ಆದ್ದರಿಂದ ಉಪಯುಕ್ತ ಅಂಶಗಳನ್ನೊಳಗೊಂಡಿರುವ ಇವರ ಬದುಕಿನ ಒಳನೋಟಗಳಲ್ಲಿ ಆಯ್ದು ಬರುವ ಸನ್ನಿವೇಶಗಳು ಕುತೂಹಲಕಾರಿಯಾದವು. ಅಂತಹ ದೃಶ್ಯಗಳನ್ನು ಬರವಣಿಗೆಯ ಮೂಲಕ ಸೆರೆಹಿಡಿಯುವುದು ಒಂದು ಕಡೆಯಾದರೆ ಮತ್ತೊಂದು ಕಲಾವಿದ ಮತ್ತು ಕಲಾಸಾಹಿತಿ, ವಿಮರ್ಶೆಯನ್ನು ಸಮಾಜಕ್ಕೆ ಪರಿಚಯಿಸುವುದು, ರಕ್ಷಿಸುವುದು ಕೂಡ ಈ ಅಧ್ಯಯನದ ಬಹುಮುಖ್ಯ ಉದ್ದೇಶಗಳಲ್ಲೊಂದು.

## ದೃಶ್ಯಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಸಂಶೋಧನ ಅಧ್ಯಯನಗಳು

ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಸಂಶೋಧನೆಯ ಅಧ್ಯಯನ ಪ್ರಾರಂಭಗೊಂಡಿರುವುದು ತೊಂಬತ್ತರ ದಶಕದಿಂದೀಚೆಗೆ ಬಹಳಷ್ಟು ತಡವಾಗಿ ದೃಶ್ಯಕಲೆಗಳ ಕುರಿತು ಸಂಶೋಧನಾ ಅಧ್ಯಯನ ವಿಶೇಷವಾಗಿ ವಿಶ್ವವಿದ್ಯಾಲಯ ಮಟ್ಟದಲ್ಲಿ ಎಂ.ಫಿಲ್. ಪಿಎಚ್.ಡಿಯಂತಹ ಪದವಿಯ ಹಿನ್ನೆಲೆಯಲ್ಲಿ ಪ್ರಾರಂಭವಾಗಿರುವುದು ಕಂಡುಬರುತ್ತದೆ. ಇಷ್ಟು ತಡವಾಗಿ ಈ ಕ್ಷೇತ್ರದಲ್ಲಿ ಸಂಶೋಧನೆ ನಡೆಯಲು ಮುಖ್ಯ ಕಾರಣ ಚಿತ್ರಕಲೆಯ ಅಧ್ಯಯನದ ಕೋರ್ಸ್‌ಗಳು ಕರ್ನಾಟಕದಲ್ಲಿ ಎಸ್.ಎಸ್.ಎಲ್.ಸಿ. ಬೋರ್ಡ್‌ನಲ್ಲಿ ನಡೆಯುತ್ತಿದ್ದವು. ವಿಶೇಷವಾಗಿ ಈ ಎಲ್ಲಾ ಕೋರ್ಸ್‌ಗಳು ಡಿಪ್ಲೊಮಾ ಹಂತಕ್ಕೆ ಸೀಮಿತವಾಗಿದ್ದವು. ಈ ಕೋರ್ಸ್‌ಗಳನ್ನು ಮುಗಿಸಿದ ವಿದ್ಯಾರ್ಥಿಗಳು ಸಾಮಾನ್ಯವಾಗಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಚಿತ್ರಕಲಾ ಶಿಕ್ಷಕರಾಗಿ ನೇಮಕಗೊಳ್ಳುತ್ತಿದ್ದರು. ಇನ್ನುಳಿದವರು ಹವ್ಯಾಸಿ ಚಿತ್ರಕಲಾವಿದರಾಗಿ, ಕಮರ್ಶಿಯಲ್ ಆರ್ಟಿಸ್ಟಾಗಿ ವೃತ್ತಿಜೀವನವನ್ನು ನಡೆಸಿಕೊಂಡು ಬರುತ್ತಿದ್ದರು. ಈ ಐದು ವರ್ಷದ ಡಿಪ್ಲೊಮಾ ಪಾಸಾದ ವಿದ್ಯಾರ್ಥಿಗಳಿಗೆ ಪದವಿ ತರಗತಿಗೆ ಸೇರಲು ಅವಕಾಶವಿರುತ್ತಿರಲಿಲ್ಲ. ಅವರು ಪದವಿ ತರಗತಿಗೆ ಸೇರಲೇಬೇಕೆಂದರೆ ಒಂದು ವರ್ಷದ ಬ್ರಿಡ್ಜ್ ಕೋರ್ಸ್‌ನ್ನು ಕಡ್ಡಾಯವಾಗಿ ಮಾಡಿಕೊಂಡಲ್ಲಿ ಮಾತ್ರ ಸ್ನಾತಕೋತ್ತರ ಹಂತಕ್ಕೆ ಹೋಗಲು ಅವಕಾಶವಿದ್ದ ಕಾರಣ ಬಹುಪಾಲು ವಿದ್ಯಾರ್ಥಿಗಳು ಪದವಿ ಮತ್ತು ಸ್ನಾತಕೋತ್ತರ ಪದವಿ

---

೧೨. ಡಿ.ಆರ್.ಸುರೇಂದ್ರನಾಥ್, ಹೈದರಾಬಾದ್ ಕರ್ನಾಟಕದ ನಾಲ್ವರು ದೃಶ್ಯಕಲಾ ಸಾಹಿತಿಗಳು, ೨೦೧೧, ಕ.ವಿ.ಹಂಪಿಗೆ ಸಲ್ಲಿಸಿದ ಕಿರು ಪ್ರಬಂಧ



ಪಡೆಯಲು ಸಾಧ್ಯವಾಗುತ್ತಿರಲಿಲ್ಲ. ಇನ್ನು ಸ್ನಾತಕೋತ್ತರ ಹಂತದಲ್ಲಿ ದೃಶ್ಯಕಲೆ ಅಧ್ಯಯನಕ್ಕೆ ಕರ್ನಾಟಕದ ಯಾವ ವಿಶ್ವವಿದ್ಯಾಲಯಗಳಲ್ಲಿಯೂ ಸ್ವತಂತ್ರವಾದ ದೃಶ್ಯಕಲಾ ಅಧ್ಯಯನದ ವಿಭಾಗಗಳು ಪ್ರಾರಂಭಗೊಳ್ಳಲಿಲ್ಲ. ಈ ಎಲ್ಲಾ ಕಾರಣಗಳಿಂದಾಗಿ ಈ ಕ್ಷೇತ್ರದಲ್ಲಿ ಸಂಶೋಧನಾ ಅಧ್ಯಯನ ಮುಖ್ಯವಾಗಿ ಹಿಂದುಳಿಯಲು ಕಾರಣವಾಯಿತು. ಪದವಿಯ ಹಂತದಲ್ಲಿ ಬೆರಳೆಣಿಕೆಯಷ್ಟು ಲಲಿತಕಲಾ ಮಹಾವಿದ್ಯಾಲಯಗಳು ಪ್ರಾರಂಭಗೊಂಡಿದ್ದು, ಅವು ಹೆಚ್ಚಾಗಿ ಪದವಿಹಂತಕ್ಕೆ ಮಾತ್ರ ಸೀಮಿತಗೊಂಡು ಕಾರ್ಯನಿರ್ವಹಿಸಿವೆ. ಅಲ್ಲಿ ಸ್ನಾತಕೋತ್ತರ ದೃಶ್ಯಕಲೆಗಳ ಅಧ್ಯಯನಕ್ಕೆ ಅವಕಾಶಗಳು ಲಭ್ಯವಾಗದೇ ಇರುವುದು ಇನ್ನೊಂದು ಪ್ರಮುಖ ಕಾರಣವಾಗಿದೆ ಎನ್ನಬಹುದು.

ಧಾರವಾಡ, ಗದಗ, ಗುಲಬರ್ಗಾ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಮೈಸೂರು, ದಾವಣಗೆರೆ ಹಾಗೂ ಬೆಂಗಳೂರು ಈ ಕೆಲವು ಸ್ಥಳಗಳಲ್ಲಿ ಸ್ನಾತಕೋತ್ತರ ದೃಶ್ಯಕಲಾ ಪದವಿ ಕೋರ್ಸ್‌ಗಳು ಪ್ರಾರಂಭಗೊಂಡರೂ ಈ ಕೋರ್ಸ್‌ಗಳು ಪ್ರಾಯೋಗಿಕತೆಗೆ ಹೆಚ್ಚು ಮಹತ್ವ ಕೊಟ್ಟ ಕಾರಣವಾಗಿ ಹಾಗೂ ಅಲ್ಲಿ ಇದ್ದುದು ಈ ಕ್ಷೇತ್ರದಲ್ಲಿ ದೃಶ್ಯಕಲೆಗಳ ಶಿಕ್ಷಣವೆಂದರೆ ಕೇವಲ ಪ್ರಾಯೋಗಿಕವಾದ ಕಲೆಗಳ ಅಧ್ಯಯನ ಎಂಬ ಪ್ರಧಾನ ದೃಷ್ಟಿಕೋನವು ಈ ಹಂತದಲ್ಲಿ ಪ್ರಮುಖವಾಗಿತ್ತು. ಹೀಗಾಗಿ ಈ ಕ್ಷೇತ್ರದಲ್ಲಿ ಸಂಶೋಧನಾ ಪ್ರಜ್ಞೆಯ ಕೊರತೆಯಿಂದಾಗಿ ಕೇವಲ ಸ್ನಾತಕೋತ್ತರ ಪದವಿಗಳನ್ನು ಮಾತ್ರ ವಿದ್ಯಾರ್ಥಿಗಳು ಪಡೆದುಕೊಳ್ಳುವಂತಾಯಿತು. ಸ್ನಾತಕೋತ್ತರ ನಂತರದ ಎಂ.ಫಿಲ್, ಪಿಎಚ್.ಡಿಯಂತಹ ಅಧ್ಯಯನಗಳಿಗೆ ಇಲ್ಲಿ ಅವಕಾಶವಿಲ್ಲದಂತಾಗಿ ಈ ಕ್ಷೇತ್ರದ ಸಂಶೋಧನೆ ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿ ನಡೆಯಬೇಕಾದಷ್ಟು ಪ್ರಮಾಣದಲ್ಲಿ ನಡೆಯಲಿಲ್ಲ.

ಈ ಪರಂಪರೆ ತೊಂಭತ್ತರ ದಶಕದವರೆಗೂ ಮುಂದುವರೆದುಕೊಂಡು ಬಂದಿತು. ತೊಂಬತ್ತರ ದಶಕದ ನಂತರದಲ್ಲಿ ೧೯೯೭ರಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ದೃಶ್ಯಕಲಾ ವಿಭಾಗದಲ್ಲಿ ಎಂ.ಫಿಲ್, ಪಿಎಚ್.ಡಿ ಸಂಶೋಧನ, ಅಧ್ಯಯನ ಪ್ರಾರಂಭಗೊಳ್ಳುವುದರ ಮೂಲಕ ಈ ವಾತಾವರಣ ಸ್ವಲ್ಪ ಬದಲಾಗಿ ಸ್ನಾತಕೋತ್ತರ ಹಂತದಲ್ಲಿ ಸಂಶೋಧನಾಧ್ಯಯನಕ್ಕೆ ಅವಕಾಶ ದೊರೆಯಿತು. ಇಲ್ಲಿ ಸ್ನಾತಕೋತ್ತರ ಹಂತದಲ್ಲಿ ಪ್ರಾಯೋಗಿಕತೆಗೆ ಮತ್ತು ಸಿದ್ಧಾಂತ ಪತ್ರಿಕೆಗಳಿಗೆ ಸಮಾನಾವಕಾಶ ಸಿಕ್ಕ ಪರಿಣಾಮ, ದೃಶ್ಯಕಲಾ ಸಂಶೋಧನೆಯ ಹೊಸಪರಂಪರೆಗೆ ಈ ವಿಶ್ವವಿದ್ಯಾಲಯವು ಹೊಸದಾರಿಯನ್ನು ಹಾಕಿಕೊಟ್ಟಿತು. ನಂತರದಲ್ಲಿ ಕರ್ನಾಟಕದ ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ದೃಶ್ಯಕಲಾ ಸಂಶೋಧನೆಯ ಅಧ್ಯಯನಕ್ಕೆ ಅವಕಾಶಗಳು ದೊರಕಿವೆ.[೧೩]

ಈ ಕ್ಷೇತ್ರದಲ್ಲಿ ಸಂಶೋಧನಾಧ್ಯಯನವು ಈಗ ವಿಶ್ವವಿದ್ಯಾಲಯ ಮಟ್ಟದಲ್ಲಿ ಇನ್ನುಳಿದ ವಿಷಯಗಳಂತೆ ದೃಶ್ಯಕಲೆಗಳ ಸಂಶೋಧನೆಗೆ ಪ್ರಾಧಾನ್ಯತೆ ಸಿಕ್ಕ ಕಾರಣವಾಗಿ ಈಗ ಸಾಕಷ್ಟು ವಿದ್ಯಾರ್ಥಿಗಳು, ಅಧ್ಯಾಪಕರು ತಮ್ಮನ್ನು ದೃಶ್ಯಕಲಾ ಕ್ಷೇತ್ರದ ಸಂಶೋಧನಾಧ್ಯಯನದಲ್ಲಿ ತೊಡಗಿಸಿಕೊಳ್ಳಲು ಕಾರಣವಾಗಿದೆ. ಹೀಗೆ ತೊಂಭತ್ತರ ದಶಕದಿಂದ ಪ್ರಾರಂಭವಾದ ದೃಶ್ಯಕಲಾ

೧೩. ಪ್ರೊ.ಎಸ್.ಸಿ.ಪಾಟೀಲ: ಕಲ್ಯಾಣ ಕರ್ನಾಟಕದ ಚಿತ್ರಕಲಾ ಪಥ, ಪು.೧೧೩-೧೧೪

ಅಧ್ಯಯನದ ಸ್ಥೂಲವಾದ ನೋಟವನ್ನು ಇಲ್ಲಿ ನೋಡಬಹುದಾಗಿದೆ. ಮುಖ್ಯವಾಗಿ ಎಂ.ಫಿಲ್. ಪದವಿಗಾಗಿ, ಪಿಎಚ್.ಡಿ. ಪದವಿಗಾಗಿ ನಡೆಸಿದ ಅಧ್ಯಯನಗಳು ಹಾಗೂ ಡಿ.ಲಿಟ್ ಪದವಿಗಾಗಿ ಸಂಶೋಧನಾ ಅಧ್ಯಯನ ಪ್ರಾರಂಭವಾಗಿದ್ದು, ಅವುಗಳಲ್ಲಿ ಇಲ್ಲಿ ೧. ಪಿಎಚ್.ಡಿ. ಪ್ರಬಂಧಗಳು ೨. ಎಂ.ಫಿಲ್. ಪ್ರಬಂಧಗಳು ೩. ಡಿ.ಲಿಟ್ ಪ್ರಬಂಧಗಳು ಎಂದು ವಿಂಗಡಿಸಿ ನೋಡಬಹುದಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಯನ್ನು ಕುರಿತು ಡಾ.ಎಸ್.ಸಿ.ಪಾಟೀಲ ಅವರು ೧೯೮೩ರಲ್ಲಿ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ–ಒಂದು ಅಧ್ಯಯನ,**[೧೪] ಎಂಬ ಕಿರು ಸಂಶೋಧನ ಪ್ರಬಂಧವನ್ನು ಸ್ನಾತಕೋತ್ತರ ಶಿಕ್ಷಣ ಪದವಿಯ ಅಂಶಿಕ ಅವಶ್ಯಕತೆಗಾಗಿ ೧೯೮೩ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ ಸಲ್ಲಿಸಿದ್ದು, ಇದು ದೃಶ್ಯಕಲಾ ಕ್ಷೇತ್ರದಲ್ಲಿ, ವಿಶ್ವವಿದ್ಯಾಲಯ ಹಂತದಲ್ಲಿ ಕಲಾವಿದರೊಬ್ಬರು ದೃಶ್ಯಕಲೆಯಲ್ಲಿ ನಡೆಸಿದ ಪ್ರಥಮ ಚಿತ್ರಕಲಾ ಶಿಕ್ಷಣದ ಕಿರು ಸಂಶೋಧನಾ ಅಧ್ಯಯನವಾಗಿದೆ.

೧೯೮೭ರಲ್ಲಿ ಡಾ.ಚೂಡಾಮಣಿ ನಂದಗೋಪಾಲರ **ಡ್ಯಾನ್ಸ್ ಆಂಡ್ ಅದರ್ ಫೈನ್ ಆರ್ಟ್ಸ್ ಇನ್ ಕರ್ನಾಟಕ ಸ್ಕಲ್ಪಚರ್ ಅಂಡ್ ಪೇಂಟಿಂಗ್ಸ್,**[೧೫] ಎಂಬ ಪಿಹೆಚ್.ಡಿ ಮಹಾಪ್ರಬಂಧವು ಮೈಸೂರು ವಿಶ್ವವಿದ್ಯಾಲನಿಯದಿಂದ ಬಂದಿದೆ. ಇಲ್ಲಿ ವಿಶೇಷವಾಗಿ ನೃತ್ಯವನ್ನು ಪ್ರಮುಖವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ಪೂರಕವಾಗಿ ಚಿತ್ರಕಲೆಯ ಕುರಿತು ಪ್ರಸ್ತಾಪಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದಿಂದ "ಡಾ. ಬಿ.ಕೆ. ಹಿರೇಮಠರ **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ,**[೧೬] ಎಂಬ ಪಿಎಚ್.ಡಿ. ಪ್ರಬಂಧ ಬಂದಿದ್ದು, ಇದರಲ್ಲಿ ಸಹ ಚಿತ್ರಕಲೆಯ ಕುರಿತು ಒಂದೆರಡು ಅಧ್ಯಾಯಗಳು ಪ್ರಾಸಂಗಿಕವಾಗಿ ಚರ್ಚೆಗೊಂಡಿವೆ. ಆದರೆ ಇವರ ಮುಖ್ಯವಾದ ಅಧ್ಯಯನವು ಕನ್ನಡ ಹಸ್ತಪ್ರತಿಗಳ ಕುರಿತ ಅಧ್ಯಯನವಾಗಿದೆ. ಇವು ಪ್ರಾರಂಭಿಕ ಹಂತದಲ್ಲಿ ನಡೆದ ಒಂದೆರಡು ಸಣ್ಣ ಪ್ರಯತ್ನಗಳಾಗಿವೆ.

**ಪಿಎಚ್.ಡಿ. ಮಹಾಪ್ರಬಂಧಗಳು**

ಚಿತ್ರಕಲೆಯನ್ನೇ ಕುರಿತು ಕರ್ನಾಟಕದಲ್ಲಿ ಸಂಶೋಧನಾಧ್ಯಯನವು ಪೂರ್ಣಪ್ರಮಾಣದಲ್ಲಿ ಕಂಡುಬಂದಿರುವುದು ೧೯೯೧ರಲ್ಲಿ. ಇಲ್ಲಿ ಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಪಿಹೆಚ್.ಡಿ. ಮಹಾಪ್ರಬಂಧ

---

೧೪. ಡಾ.ಎಸ್.ಸಿ.ಪಾಟೀಲ: ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ–ಒಂದು ಅಧ್ಯಯನ, ಕರ್ನಾಟಕ ವಿ.ವಿ.೧೯೮೩

೧೫. ಡಾ.ಚೂಡಾಮಣಿ ನಂದಗೋಪಾಲ: ಡ್ಯಾನ್ಸ್ ಆಂಡ್ ಅದರ್ ಫೈನ್ ಆರ್ಟ್ಸ್ ಇನ್ ಕರ್ನಾಟಕ ಸ್ಕಲ್ಪಚರ್ ಅಂಡ್ ಪೇಂಟಿಂಗ್ಸ್, ಬೆಂಗಳೂರು ವಿ.ವಿ.೧೯೮೭

೧೬. ಡಾ. ಬಿ.ಕೆ. ಹಿರೇಮಠ: ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಕರ್ನಾಟಕ ವಿ ವಿ., ಧಾರವಾಡ

**ಕರ್ನಾಟಕ ಜನಪದ ಚಿತ್ರಕಲೆ,**[೧೭] ಈ ಮಹಾಪ್ರಬಂಧವನ್ನು ಡಾ. ಎಸ್.ಸಿ. ಪಾಟೀಲರು ಸಿದ್ಧಪಡಿಸಿದ್ದು ದೃಶ್ಯಕಲಾ ಕ್ಷೇತ್ರದ ಮೊದಲ ಅಧ್ಯಯನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ.ಅ.ಲ.ನರಸಿಂಹನ್ ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು,**[೧೮] ೧೯೯೭ರಲ್ಲಿ ಡಾ. ಸಂಪದಾ ಭಟ್ ಅವರ **ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲಾ ಚಿತ್ರಗಳು,**[೧೯] ಬೆಂಗಳೂರು ವಿಶ್ವವಿದ್ಯಾಲಯಕ್ಕೆ, ೧೯೯೭ರಲ್ಲಿ ಡಾ. ಪುಷ್ಪಾ ದ್ರಾವಿಡ ಇವರು ಮಂಡಿಸಿದ **ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು,**[೨೦] ೨೦೦೧ರಲ್ಲಿ ಡಾ. ಯಾದಪ್ಪ ಪರದೇಶಿಯವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಒಂದು ಅಧ್ಯಯನ,**[೨೧] ೨೦೦೨ರಲ್ಲಿ ಡಾ. ಶಿವಾನಂದ ಬಂಟನೂರು ಇವರ **ಕರ್ನಾಟಕ ಜನಪದ ಶಿಲ್ಪಕಲೆ : ಒಂದು ಅಧ್ಯಯನ**[೨೨] ಡಾ.ಗಿರೀಶ ಅವರ **ಬುಡಕಟ್ಟು ಚಿತ್ರಕಲೆ,**[೨೩] ೨೦೦೨ರಲ್ಲಿ ಡಾ. ಲಕ್ಷ್ಮೀದೇವಿ ಗವಾಯಿಯವರ **ಕಲಾವಿದ ಎಂ.ಎ.ಚೆಟ್ಟಿಯವರ ಜೀವನ– ಕಲಾಕೃತಿಗಳು : ಒಂದು ಅಧ್ಯಯನ,**[೨೪] ಡಾ. ಶಂಕ್ರಪ್ಪ ಕೋಲ್ಕಾರ್ ಅವರ **ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ,**[೨೫] ಡಾ. ಸೌಮ್ಯಾ ಅವರ **ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್,**[೨೬]

---

೧೭. ಡಾ.ಎಸ್.ಸಿ.ಪಾಟೀಲ: ಕರ್ನಾಟಕ ಜನಪದ ಚಿತ್ರಕಲೆ, ಪಿಎಚ್.ಡಿ ಮಹಾಪ್ರಬಂಧ, ಕರ್ನಾಟಕ ವಿ.ವಿ.೧೯೯೧

೧೮. ಡಾ.ಅ.ಲ.ನರಸಿಂಹನ್: ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಪಿಎಚ್.ಡಿ ಮಹಾಪ್ರಬಂಧ, ಬೆಂಗಳೂರು ವಿ.ವಿ.೧೯೯೭

೧೯. ಡಾ. ಸಂಪದಾ ಭಟ್: ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲಾ ಚಿತ್ರಗಳು, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೨೦. ಡಾ. ಪುಷ್ಪಾ ದ್ರಾವಿಡ :ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು, ಪಿಎಚ್.ಡಿ ಮಹಾಪ್ರಬಂಧ, ಬೆಂಗಳೂರು ವಿ.ವಿ.೧೯೯೭

೨೧. ಡಾ. ಯಾದಪ್ಪ ಪರದೇಶಿ: ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ: ಒಂದು ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೧

೨೨. ಡಾ. ಶಿವಾನಂದ ಬಂಟನೂರು: ಕರ್ನಾಟಕ ಜನಪದ ಶಿಲ್ಪಕಲೆ: ಒಂದು ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೨

೨೩. ಡಾ.ಗಿರೀಶ: ಬುಡಕಟ್ಟು ಚಿತ್ರಕಲೆ. ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ,೨೦೦೨

೨೪. ಡಾ.ಲಕ್ಷ್ಮೀದೇವಿ ಗವಾಯಿ: ಕಲಾವಿದ ಎಂ.ಎ.ಚೆಟ್ಟಿಯವರ ಜೀವನ– ಕಲಾಕೃತಿಗಳು : ಒಂದು ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ,೨೦೦೨

೨೫. ಡಾ.ಶಂಕ್ರಪ್ಪ ಕೋಲ್ಕಾರ್: ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ.೨೦೦೨

೨೬. ಡಾ.ಸೌಮ್ಯಾ: ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್, ಪಿಎಚ್.ಡಿ ಮಹಾಪ್ರಬಂಧ, ಬೆಂಗಳೂರು ವಿ.ವಿ.೨೦೦೨

ಡಾ. ಪ್ರಮಿಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್‌ಮೆಂಟ್ ಆಫ್ ರಾಗಮಾಲಾ ಆಂಡ್ ಕಾಂಟೆಂಪರರಿ ಪೇಂಟಿಂಗ್,**[೨೭] ೨೦೦೩ರಲ್ಲಿ ಡಾ. ವೀಣಾ ಶೇಖರ ಮಂಡಿಸಿದ **ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ** (೧೭೮೦ –೧೮೨೦),[೨೮] ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್.ಎಮ್. ಹಡಪದ : ಒಂದು ಅಧ್ಯಯನ,**[೨೯] ಡಾ.ಎಸ್.ಸಿ.ಪಾಟೀಲರು ಕರ್ನಾಟಕ ವಿ.ವಿ.ಗೆ ಮಂಡಿಸಿದ **ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಎಟ್ ಸ್ಕೂಲ್ ಲೇವಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೇಷಲ್ ರೆಫರನ್ಸ್ ಟು ಡ್ರಾಯಿಂಗ್ ಆಂಡ್ ಪೇಂಟಿಂಗ್,**[೩೦] ಇದು ಡಾ.ಎಸ್.ಸಿ.ಪಾಟೀಲ ಅವರ ಎರಡನೆ ಪಿಹೆಚ್.ಡಿ ಮಹಾಪ್ರಬಂಧವಾಗಿದೆ. ೨೦೦೪ರಲ್ಲಿ ಡಾ. ವಿ.ಎಮ್.ಬಾಗಾಯತ್ ಅವರ **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ: ಒಂದು ಅಧ್ಯಯನ(೧೪೦೦–೧೮೦೦),**[೩೧] ಡಾ.ಶಿವಕುಮಾರ.ಜಿ.ಓ. ಅವರ **ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು,**[೩೨] ಡಾ.ಪಿ.ಗೌರೀಶ ಅವರ **ಮೈಸೂರು ಜಿಲ್ಲೆಯ ಜನಪದ ಚಿತ್ರಕಲೆ,**[೩೩] ೨೦೦೫ರಲ್ಲಿ ಡಾ.ಶಶಿಕಲಾ ಹೂಗಾರ ಅವರ **ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ,**[೩೪] ಡಾ.ಶಿವಪ್ರಕಾಶ ತುಕ್ಕಣ್ಣವರ ಅವರ **ಕರ್ನಾಟಕ ರಥ ಶಿಲ್ಪಕಲೆ,**[೩೫] ಡಾ.ಎಚ್.ಎನ್.ಚಿತ್ರಗಾರ ಅವರ **ಕರ್ನಾಟಕ**

---

೨೭. ಡಾ.ಪ್ರಮಿಳಾ ಲೋಚನ: ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್‌ಮೆಂಟ್ ಆಫ್ ರಾಗಮಾಲಾ ಆಂಡ್ ಕಾಂಟೆಂಪರರಿ ಪೇಂಟಿಂಗ್, ಪಿಎಚ್.ಡಿ ಮಹಾಪ್ರಬಂಧ, ಬೆಂಗಳೂರು ವಿ.ವಿ.೨೦೦೨

೨೮. ಡಾ.ವೀಣಾಶೇಖರ: ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦ –೧೮೨೦), ಪಿಎಚ್.ಡಿ ಮಹಾಪ್ರಬಂಧ, ಬೆಂಗಳೂರು ವಿ.ವಿ., ೨೦೦೩

೨೯. ಡಾ.ಸಿದ್ಧಲಿಂಗಸ್ವಾಮಿಹಿರೇಮಠ: ಕಲಾವಿದ ಆರ್.ಎಮ್. ಹಡಪದ: ಒಂದು ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೩

೩೦. ಡಾ. ಎಸ್.ಸಿ.ಪಾಟೀಲ: ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಎಟ್ ಸ್ಕೂಲ್ ಲೇವಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೇಷಲ್ ರೆಫರನ್ಸ್ ಟು ಡ್ರಾಯಿಂಗ್ ಆಂಡ್ ಪೇಂಟಿಂಗ್, ಪಿಎಚ್.ಡಿ ಮಹಾಪ್ರಬಂಧ, ಕರ್ನಾಟಕ ವಿ.ವಿ.ಧಾರವಾಡ, ೨೦೦೩

೩೧. ಡಾ.ವಿ.ಎಮ್.ಬಾಗಾಯತ್: ಕರ್ನಾಟಕ ಮುಸ್ಲಿಂಅರಸರ ಕಾಲದ ಚಿತ್ರಕಲೆ : ಒಂದು ಅಧ್ಯಯನ (೧೪೦೦–೧೮೦೦), ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೪

೩೨. ಡಾ.ಶಿವಕುಮಾರ.ಜಿ.ಓ.: ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯಮೇಳಗಳ ವಿವಿಧ ಆಯಾಮಗಳು, ಪಿಎಚ್.ಡಿ ಮಹಾಪ್ರಬಂಧ, ಗು.ವಿ.ವಿ.

೩೩. ಡಾ.ಪಿ.ಗೌರೀಶ: ಮೈಸೂರು ಜಿಲ್ಲೆಯ ಜನಪದ ಚಿತ್ರಕಲೆ, ಪಿ.ಎಚ್.ಡಿ ಮಹಾಪ್ರಬಂಧ, ಮೈ.ವಿ.ವಿ, ೨೦೦೫

೩೪. ಡಾ.ಶಶಿಕಲಾ ಹೂಗಾರ: ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ, ೨೦೦೫

೩೫. ಡಾ.ಶಿವಪ್ರಕಾಶ ತುಕ್ಕಣ್ಣವರ: ಕರ್ನಾಟಕ ರಥ ಶಿಲ್ಪಕಲೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ

**ಹಸ್ತಪ್ರತಿ ಚಿತ್ರಕಲೆ,**[೩೬] ಡಾ.ಎಸ್.ವಿ.ವೆಂಕಟೇಶಯ್ಯ ಅವರ **ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು: ಒಂದು ಅಧ್ಯಯನ,**[೩೭] ೨೦೦೬ರಲ್ಲಿ ಡಾ.ವಿಶ್ವೇಶ್ವರಿ ತಿವಾರಿ ಅವರ **ರಂಗೋಲಿ ಕಲೆ,**[೩೮] ೨೦೦೭ರಲ್ಲಿ ಡಾ.ಮಲ್ಲಿಕಾರ್ಜುನ ಸಿ. ಬಾಗೋಡಿ ಅವರ **ಸುರಪುರ ಶೈಲಿಯ ಚಿತ್ರಕಲೆ ಒಂದು ಅಧ್ಯಯನ,**[೩೯] ಡಾ.ಗೀತಾಂಜಲಿ ಬಿ.ಆರ್. ಅವರ **ಐತಿಹಾಸಿಕ ದೀಪಸ್ತಂಭಗಳು,**[೪೦] ಡಾ. ರಾಠೋಡ್ ಅವರ **ಅನ್ವಯಿಕ ಕಲೆ–ಹಿಂದಿನಿಂದ ಇಂದಿನವರೆಗೆ,**[೪೧] ೨೦೦೮ರಲ್ಲಿ ಡಾ.ಮೋಹನ್‌ರಾವ್ ಬಿ.ಪಂಚಾಳ ಅವರ **ಚಿತ್ರ ಕಲಾವಿದ ಡಾ. ಎಸ್.ಎಮ್.ಪಂಡಿತ್ ಅವರ ಜೀವನ ಮತ್ತು ಕಲಾಕೃತಿಗಳು,**[೪೨] ಡಾ.ವಿಶ್ವನಾಥ ಎ.ಎಸ್. ಅವರ **ಕರಾವಳಿ ಕರ್ನಾಟಕದ ಯಕ್ಷಗಾನ ಮುಖವರ್ಣಿಕೆ ಹಾಗೂ ವೇಷಭೂಷಣಗಳು,**[೪೩] ಡಾ.ರವೀಂದ್ರ ಎಸ್. ಕಮ್ಮಾರ ಅವರ **ಕಲಾವಿದ ವಿ.ಬಿ. ಹಿರೇಗೌಡರ್– ಬದುಕು ಮತ್ತು ಕಲಾಕೃತಿಗಳು,**[೪೪] ಪ್ರೇಮಾನಂದ ಟಿ. ಲಕ್ಕಣ್ಣನವರ ಅವರ **ಕರ್ನಾಟಕದ ದೃಶ್ಯಕಲಾ ಸಾಹಿತ್ಯ– ಒಂದು ವೈಚಾರಿಕ ಅಧ್ಯಯನ,**[೪೫] ಡಾ. ಜಿ. ಲಕ್ಷ್ಮೀಪತಿ ಅವರ **ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ,**[೪೬] ಡಾ. ಮಂಟಗಿ ಅವರ **ಧನಂಜಯ ಶಿಲ್ಪಿಯವರ ಜೀವನ ಮತ್ತು ಕಲೆ – ಒಂದು ಅಧ್ಯಯನ,**[೪೭] ಡಾ. ರೆಹಮಾನ್ ಪಟೇಲ್ ಅವರ **ಕರ್ನಾಟಕದ ಬಿದರಿಕಲೆ– ಒಂದು**

---

೩೬. ಡಾ.ಎಚ್.ಎನ್.ಚಿತ್ರಗಾರ: ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೬

೩೭. ಡಾ.ಎಸ್.ವಿ.ವೆಂಕಟೇಶಯ್ಯ: ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು : ಒಂದು ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ., ೨೦೦೬

೩೮. ಡಾ.ವಿಶ್ವೇಶ್ವರಿ ತಿವಾರಿ: ರಂಗೋಲಿ ಕಲೆ, ಗುಲ್ಬರ್ಗಾ.ವಿ.ವಿ. ಪಿಎಚ್.ಡಿ ಮಹಾಪ್ರಬಂಧ, ೨೦೦೬

೩೯. ಡಾ.ಮಲ್ಲಿಕಾರ್ಜುನ ಸಿ. ಬಾಗೋಡಿ: ಸುರಪುರ ಶೈಲಿಯ ಚಿತ್ರಕಲೆ ಒಂದು ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಗುಲ್ಬರ್ಗಾ ವಿ.ವಿ., ೨೦೦೭

೪೦. ಡಾ.ಗೀತಾಂಜಲಿ ಬಿ.ಆರ್: ಐತಿಹಾಸಿಕ ದೀಪಸ್ತಂಭಗಳು, ಕ.ವಿ.ವಿ. ಪಿಎಚ್.ಡಿ ಮಹಾಪ್ರಬಂಧ, ಹಂಪಿ, ೨೦೦೮

೪೧. ಡಾ.ರಾಠೋಡ್: ಅನ್ವಯಿಕ ಕಲೆ–ಹಿಂದಿನಿಂದ ಇಂದಿನವರೆಗೆ, ಪಿಎಚ್.ಡಿ ಮಹಾಪ್ರಬಂಧ, ಕ ವಿ.ವಿ.ಹಂಪಿ, ೨೦೦೮

೪೨. ಡಾ.ಮೋಹನ್‌ರಾವ್ ಬಿ. ಪಂಚಾಳ: ಚಿತ್ರ ಕಲಾವಿದ ಡಾ. ಎಸ್.ಎಮ್.ಪಂಡಿತ್ ಅವರ ಜೀವನ ಮತ್ತು ಕಲಾಕೃತಿಗಳು, ಪಿಎಚ್.ಡಿ ಮಹಾಪ್ರಬಂಧ, ಗುಲ್ಬರ್ಗಾ ವಿ.ವಿ., ೨೦೦೮

೪೩. ಡಾ.ವಿಶ್ವನಾಥ ಎ.ಎಸ್: ಕರಾವಳಿ ಕರ್ನಾಟಕದ ಯಕ್ಷಗಾನ ಮತ್ತು ಮುಖವರ್ಣಿಕೆ ಹಾಗೂ ವೇಷಭೂಷಣಗಳು, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೮

೪೪. ಡಾ.ರವೀಂದ್ರ ಎಸ್. ಕಮ್ಮಾರ: ಕಲಾವಿದ ವಿ.ಬಿ. ಹಿರೇಗೌಡರ್– ಬದುಕು ಮತ್ತು ಕಲಾಕೃತಿಗಳು, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೯

೪೫. ಡಾ.ಪ್ರೇಮಾನಂದ ಟಿ. ಲಕ್ಕಣ್ಣನವರ್: ಕರ್ನಾಟಕದ ದೃಶ್ಯಕಲಾ ಸಾಹಿತ್ಯ–ಒಂದು ವೈಚಾರಿಕ ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೯

೪೬. ಡಾ.ಜಿ.ಲಕ್ಷ್ಮೀಪತಿ: ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೯

೪೭. ಡಾ.ಮಂಟಗಿ: ಧನಂಜಯ ಶಿಲ್ಪಿಯವರ ಜೀವನ ಮತ್ತು ಕಲೆ–ಒಂದು ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಗು.ವಿ.ವಿ., ೨೦೦೯

**ಅಧ್ಯಯನ- ವಿಶೇಷವಾಗಿ ಬೀದರ್ ಜಿಲ್ಲೆಯನ್ನು ಅನುಲಕ್ಷಿಸಿ,**[೪೮] ೨೦೧೦ರಲ್ಲಿ ಡಾ. ಸುನಿತಾ ಪಾಟೀಲ್ ಅವರ **ವಿಜಯ ಸಿಂಧೂರ ಅವರ ಕಲಾಕೃತಿಗಳ ಒಳನೋಟಗಳು,**[೪೯] ಡಾ. ನಿಂಗಪ್ಪ ಎಂ. ಅಂಗಡಿಯವರ **ಗಾಜಿನ ಮೇಲಿನ ಚಿತ್ರಗಳು : ಒಂದು ಅಧ್ಯಯನ,**[೫೦] ಡಾ. ಕಿಶೋರ್ ಎನ್. ದಾಟನಾಳ್ ಅವರ **ಕಲಾವಿದ ಶಂಕರ ಪಾಟೀಲರ ಜೀವನ ಮತ್ತು ಕಲಾಕೃತಿಗಳು : ಒಂದು ಅಧ್ಯಯನ,**[೫೧] ೨೦೧೧ರಲ್ಲಿ ಡಾ. ಕಾಶಿನಾಥ ಡಿ. ವಡ್ಡರ ಅವರ **ಶಾಂತಿನಿಕೇತನದ ಭಿತ್ತಿಚಿತ್ರಗಳು,**[೫೨] ಡಾ.ಸತೀಶಕುಮಾರ ವಲ್ಲ್ಯೇಪೂರೆ ಅವರ **ಜೆ. ಜೆ. ಕಲಾಶಾಲೆಯ ಪ್ರಾತಿನಿಧಿಕ ಕಲಾವಿದರು,**[೫೩] ಡಾ. ಶಂಕ್ರಪ್ಪ ಎಂ. ಕುಂದಗೋಳ ಅವರ **ಕರ್ನಾಟಕದ ಗಂಜೀಫಾ ಚಿತ್ರಕಲೆ,**[೫೪] ೨೦೧೨ರಲ್ಲಿ ಡಾ. ಭಾರತಿ ಮರವಂತಿ ಅವರ **ಕರಾವಳಿ ಕರ್ನಾಟಕದ ರಂಗೋಲಿ ಚಿತ್ರಕಲೆ,**[೫೫] ಡಾ. ಕಾಮಾಕ್ಷಿ ಸಿ. ಸೊಪ್ಪಣ ಅವರ **ಕರ್ನಾಟಕದ ಬಟ್ಟೆ ಮಾಧ್ಯಮದ ಚಿತ್ರಕಲೆ,**[೫೬] ಡಾ.ಪರಶುರಾಮ ಪಿ. ಅವರ **ಕರ್ನಾಟಕದ ಕಲಾಗ್ಯಾಲರಿಗಳು ಒಂದು ವಿಶ್ಲೇಷಣಾತ್ಮಕ ಅಧ್ಯಯನ,**[೫೭] ಡಾ. ಷಾಹಿದ್ ಪಾಷಾ ಅವರ **ಕಲಾವಿದ ಎ. ಎ. ಆಲಮೇಲಕರ ಬದುಕು ಮತ್ತು ಕಲಾಕೃತಿಗಳು,**[೫೮] ೨೦೧೩ರಲ್ಲಿ ಡಾ.

---

೪೮. ಡಾ. ರೆಹಮಾನ್ ಪಟೇಲ್: ಕರ್ನಾಟಕದ ಬಿದರಿ ಕಲೆ-ಒಂದು ಅಧ್ಯಯನ-ವಿಶೇಷವಾಗಿ ಬೀದರ್ ಜಿಲ್ಲೆಯನ್ನು ಅನುಲಕ್ಷಿಸಿ, ಪಿಎಚ್.ಡಿ ಮಹಾಪ್ರಬಂಧ, ಗುಲ್ಬರ್ಗಾ ವಿ.ವಿ., ೨೦೦೯

೪೯. ಡಾ.ಸುನಿತಾ ಪಾಟೀಲ್: ವಿಜಯ ಸಿಂಧೂರ ಅವರ ಕಲಾಕೃತಿಗಳ ಒಳನೋಟಗಳು, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೯

೫೦. ಡಾ.ನಿಂಗಪ್ಪ ಎಂ. ಅಂಗಡಿ: ಗಾಜಿನ ಮೇಲಿನ ಚಿತ್ರಗಳು : ಒಂದು ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೯

೫೧. ಡಾ.ಕಿಶೋರ್ ಎನ್. ದಾಟನಾಳ್: ಕಲಾವಿದ ಶಂಕರ ಪಾಟೀಲರ ಜೀವನ ಮತ್ತು ಕಲಾಕೃತಿಗಳು : ಒಂದು ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೯

೫೨. ಡಾ.ಕಾಶಿನಾಥ ಡಿ. ವಡ್ಡರ: ಶಾಂತಿನಿಕೇತನದ ಭಿತ್ತಿಚಿತ್ರಗಳು, ಪಿಎಚ್.ಡಿ ಮಹಾಪ್ರಬಂಧ, ಗು.ವಿ.ವಿ., ೨೦೦೯

೫೩. ಡಾ.ಸತೀಶಕುಮಾರ ವಲ್ಲ್ಯೇಪೂರೆ: ಜೆ. ಜೆ. ಕಲಾಶಾಲೆಯ ಪ್ರಾತಿನಿಧಿಕ ಕಲಾವಿದರು, ಪಿಎಚ್.ಡಿ ಮಹಾಪ್ರಬಂಧ, ೨೦೦೯

೫೪. ಡಾ.ಶಂಕ್ರಪ್ಪ ಎಂ. ಕುಂದಗೋಳ: ಕರ್ನಾಟಕದ ಗಂಜೀಫಾ ಚಿತ್ರಕಲೆ,ಕ.ವಿ.ವಿ.ಹಂಪಿ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೯

೫೫. ಡಾ.ಭಾರತಿ ಮರವಂತಿ: ಕರಾವಳಿ ಕರ್ನಾಟಕದ ರಂಗೋಲಿ ಚಿತ್ರಕಲೆ. ಪಿಎಚ್.ಡಿ ಮಹಾಪ್ರಬಂಧ, ಮೈಸೂರು ವಿ.ವಿ., ೨೦೦೯

೫೬. ಡಾ. ಕಾಮಾಕ್ಷಿ ಸಿ. ಸೊಪ್ಪಣ: ಕರ್ನಾಟಕದ ಬಟ್ಟೆ ಮಾಧ್ಯಮದ ಚಿತ್ರಕಲೆ, ಪಿಎಚ್.ಡಿ ಮಹಾಪ್ರಬಂಧ, ಗು.ವಿ.ವಿ., ೨೦೦೯

೫೭. ಡಾ. ಪರಶುರಾಮ ಪಿ: ಕರ್ನಾಟಕದ ಕಲಾಗ್ಯಾಲರಿಗಳು ಒಂದು ವಿಶ್ಲೇಷಣಾತ್ಮಕ ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಗುಲ್ಬರ್ಗಾ ವಿ.ವಿ., ೨೦೦೯

೫೮. ಡಾ.ಷಾಹಿದ್ ಪಾಷಾ: ಕಲಾವಿದ ಎ. ಎ. ಆಲಮೇಲಕರ ಬದುಕು ಮತ್ತು ಕಲಾಕೃತಿಗಳು, ಪಿಎಚ್.ಡಿ ಮಹಾಪ್ರಬಂಧ, ಗುಲ್ಬರ್ಗಾ ವಿ.ವಿ., ೨೦೦೯

ಬಿ.ಎಲ್ ಲಮಾಣಿ ಅವರ **ಚಿತ್ರಕಲಾ ಕ್ಷೇತ್ರಕ್ಕೆ ಗದಗ ಜಿಲ್ಲೆಯ ಕೊಡುಗೆ,**[೫೯] ಡಾ. ರೇಣುಕಾ ಮಾರ್ಕಾಂಡೆಯವರ **ಕರ್ನಾಟಕದ ವೈಷ್ಣವಪರಂಪರೆಯ ಚಿತ್ರಕಲೆ,**[೬೦] ಡಾ. ಶಶಿಕಲಾ ನಂದನಗೌಡ ಅವರ **ಕರ್ನಾಟಕದ ಹುದುಗು ಕಲೆ,**[೬೧] ಡಾ.ಕೃಷ್ಣೇಗೌಡ ಹೆಚ್. ಎನ್ ಅವರ **ಕರ್ನಾಟಕದ ಬೌದ್ಧ ಚಿತ್ರಕಲೆ,**[೬೨] ಡಾ. ಬಿ. ಎಂ. ಪಾಟೀಲ ಅವರ **ಕರ್ನಾಟಕದ ವೀರಶೈವಪರಂಪರೆಯ ಚಿತ್ರಕಲೆ,**[೬೩] ಡಾ.ಕೃಷ್ಣವೇಣಿ ಅವರ **ಬಳ್ಳಾರಿ ಜಿಲ್ಲೆಯ ಚಿತ್ರಕಲೆ,**[೬೪] ಡಾ. ರವಿ ವಸಾರಾಮ ನಾಯಕ ಅವರ **ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು,**[೬೫] ಡಾ. ಮಹಾಂತೇಶ ಎಂ. ಪಲದಿನ್ನಿ ಅವರ **ಬಾದಾಮಿ ಚಾಲುಕ್ಯರ ಕಾಲದ ಶಿಲ್ಪಗಳು,**[೬೬] ಡಾ.ಪಿ.ಬಿ.ಗವಾನಿ ಅವರ **ಕರ್ನಾಟಕದ ವಸ್ತುಸಂಗ್ರಹಾಲಯಗಳಲ್ಲಿನ ಚಿತ್ರಕಲೆ,**[೬೭] ಡಾ.ಸುಚಿತ್ರಾ ಜಿ. ಲಿಂಗದಳ್ಳಿ ಅವರ **ಕಲಾವಿದ ವಿ.ಟಿ.ಕಾಳೆ ಅವರ ಬದುಕು ಮತ್ತು ಕಲಾಕೃತಿಗಳು,**[೬೮] ಡಾ.ಬಸವಯ್ಯ ಗವಿಮಠ ಅವರ **ಬಾಗಲಕೋಟ ಜಿಲ್ಲೆಯ ಚಿತ್ರಕಲೆ,**[೬೯] ಸುಬ್ಬಯ್ಯ ಮಹಾದೇವಯ್ಯ ನೀಲಾ ಅವರ **ಶರಣಬಸವೇಶ್ವರರ ಕುರಿತು ರಚಿಸಿದ ವರ್ಣಚಿತ್ರಗಳು–ಒಂದು ಅಧ್ಯಯನ,**[೭೦] ಇವು ದೃಶ್ಯಕಲೆಗಳ ಕುರಿತು ಬಂದ ಪಿಎಚ್.ಡಿ.

---

೫೯. ಡಾ.ಬಿ.ಎಲ್.ಲಮಾಣಿ: ಚಿತ್ರಕಲಾ ಕ್ಷೇತ್ರಕ್ಕೆ ಗದಗ ಜಿಲ್ಲೆಯ ಕೊಡುಗೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೬೦. ಡಾ. ರೇಣುಕಾ ಮಾರ್ಕಾಂಡೆ: ಕರ್ನಾಟಕದ ವೈಷ್ಣವಪರಂಪರೆಯ ಚಿತ್ರಕಲೆ , ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೬೧. ಡಾ.ಶಶಿಕಲಾ ನಂದನಗೌಡ: ಕರ್ನಾಟಕದ ಹುದುಗು ಚಿತ್ರಕಲೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೬೨. ಡಾ.ಕೃಷ್ಣೇಗೌಡ ಹೆಚ್. ಎನ್: ಕರ್ನಾಟಕದ ಬೌದ್ಧ ಚಿತ್ರಕಲೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೬೩. ಡಾ.ಬಿ.ಎಂ.ಪಾಟೀಲ: ಕರ್ನಾಟಕದ ವೀರಶೈವಪರಂಪರೆಯ ಚಿತ್ರಕಲೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೬೪. ಡಾ. ಕೃಷ್ಣವೇಣಿ: ಬಳ್ಳಾರಿ ಜಿಲ್ಲೆಯ ಚಿತ್ರಕಲೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೬೫. ಡಾ. ರವಿ ವಸಾರಾಮ ನಾಯಕ: ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೬೬. ಡಾ. ಮಹಾಂತೇಶ ಎಂ. ಪಲದಿನ್ನಿ: ಬಾದಾಮಿ ಚಾಲುಕ್ಯರ ಕಾಲದ ಶಿಲ್ಪಗಳು, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೬೭. ಡಾ. ಪಿ. ಬಿ. ಗವಾನಿ: ಕರ್ನಾಟಕದ ವಸ್ತುಸಂಗ್ರಹಾಲಯಗಳಲ್ಲಿನ ಚಿತ್ರಕಲೆ, ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೬೮. ಡಾ. ಸುಚಿತ್ರಾ ಜಿ. ಲಿಂಗದಳ್ಳಿ: ಕಲಾವಿದ ವಿ.ಟಿ.ಕಾಳೆ ಅವರ ಬದುಕು ಮತ್ತು ಕಲಾಕೃತಿಗಳು, ಪಿ.ಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೬೯. ಡಾ. ಬಸವಯ್ಯ ಗವಿಮಠ: ಬಾಗಲಕೋಟ ಜಿಲ್ಲೆಯ ಚಿತ್ರಕಲೆ, ಪಿ.ಎಚ್.ಡಿ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩

೭೦. ಸುಬ್ಬಯ್ಯ ಮಹಾದೇವಯ್ಯ ನೀಲಾ: ಶರಣಬಸವೇಶ್ವರರ ಕುರಿತು ರಚಿಸಿದ ವರ್ಣಚಿತ್ರಗಳು–ಒಂದು ಅಧ್ಯಯನ, ಪಿ.ಎಚ್.ಡಿ ಮಹಾಪ್ರಬಂಧ, ಗುಲ್ಬರ್ಗಾ ವಿ.ವಿ., ೨೦೧೩

ಮಹಾಪ್ರಬಂಧಗಳಾಗಿವೆ. ಅನೇಕ ಜನ ವಿದ್ಯಾರ್ಥಿಗಳು ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ಈಗ ದೃಶ್ಯಕಲಾ ಕ್ಷೇತ್ರದಲ್ಲಿ ಸಂಶೋಧನಾಧ್ಯಯನ ಕೈಗೊಂಡಿದ್ದಾರೆ.

**೨. ಡಿ.ಲಿಟ್.ಮಹಾಪ್ರಬಂಧಗಳು**

ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದಲ್ಲಿ ಮೊದಲಬಾರಿಗೆ ದೃಶ್ಯಕಲೆಗಳಿಗೆ ಸಂಬಂಧಿಸಿದಂತೆ ಡಿ.ಲಿಟ್. ಸಂಶೋಧನಾ ಅಧ್ಯಯನಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದು, ಈ ಹಿನ್ನೆಲೆಯಲ್ಲಿ ಹೊರಬಂದ ಡಿ.ಲಿಟ್. ಪ್ರಬಂಧಗಳು ಹೀಗಿವೆ: ೨೦೦೧ರಲ್ಲಿ ದೇವದಾಸ ಕಳಸದ ಇವರ **ಕರ್ನಾಟಕದ ರಂಗಭೂಮಿ, ರಂಗಸಜ್ಜಿಕೆ ಮತ್ತು ಪ್ರಸಾಧನ ಕಲೆ,**[೭೧] ೨೦೦೫ರಲ್ಲಿ ಬಂದ ಆನಂದ ಪೂಜಾರರ **ಕರಾವಳಿಯ ಕಾವಿ ಚಿತ್ರಕಲೆ,**[೭೨] ಡಿ.ಎ. ಉಪಾಧ್ಯ ಅವರ **ವಾಸ್ತು-ಶಿಲ್ಪ-ಚಿತ್ರಕಲೆಯ ಹಿನ್ನೆಲೆಯಲ್ಲಿ ದೃಶ್ಯಕಲೆಗಳ ತೌಲನಿಕ ಅಧ್ಯಯನ,**[೭೩] ೨೦೧೦ರಲ್ಲಿ ಎಮ್.ಎಸ್.ಮೂರ್ತಿ ಅವರ **ಮಕ್ಕಳಮನಸ್ಸಿನ ಚಿತ್ರಗಳು,**[೭೪] ೨೦೧೩ರಲ್ಲಿ ಜಿ. ಎಸ್.ಭೂಸಗೊಂಡ ಅವರ **ಚಿತ್ರಕಲಾವಿದ ಚಂದ್ರವರ್ಮ ಬಿ.ಆರ್.ಕೋಟ್ಯಾಳಕರ-ಒಂದು ಅಧ್ಯಯನ,**[೭೫] ಹೀಗೆ ಹಲವು ಡಿ.ಲಿಟ್ ಮಹಾ ಪ್ರಬಂಧಗಳು ಹೊರಬಂದಿವೆ. ಈ ಡಿ.ಲಿಟ್. ಅಧ್ಯಯನಕ್ಕೆ ಯಾವುದೇ ರೀತಿಯ ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿಗಳ ಅವಶ್ಯಕತೆ ಇರುವುದಿಲ್ಲ. ಆಯಾ ಕ್ಷೇತ್ರದಲ್ಲಿ ಅಧ್ಯಯನ ಮಾಡುವವರ ತಜ್ಞತೆಯನ್ನೇ ಮುಖ್ಯವಾಗಿ ಪರಿಗಣಿಸಿ, ಕನ್ನಡ ವಿಶ್ವವಿದ್ಯಾಲಯವು ತಜ್ಞರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಇಂತಹ ಅಧ್ಯಯನಕ್ಕೆ ಅವಕಾಶವನ್ನು ನೀಡುತ್ತಾ ಬಂದಿದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಮಾತ್ರ ಇಂತಹ ಡಿ.ಲಿಟ್. ಸಂಶೋಧನ ಅಧ್ಯಯನಕ್ಕೆ ಅವಕಾಶವಿರುವುದು ಗಮನಾರ್ಹ ಅಂಶವಾಗಿದೆ.

**೩. ಎಂ.ಫಿಲ್. ಅಧ್ಯಯನಗಳು**

ಕರ್ನಾಟಕದಲ್ಲಿ ಮೊದಲಬಾರಿಗೆ ಎಂ.ಫಿಲ್. ಸಂಶೋಧನಾ ಅಧ್ಯಯನವು ಪ್ರಾರಂಭ ಗೊಂಡಿದ್ದು ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ, ಇದೊಂದು ಗಮನಾರ್ಹ ಅಂಶವಾಗಿದೆ.

---

೭೧. ದೇವದಾಸ ಕಳಸದ: ಕರ್ನಾಟಕದ ರಂಗಭೂಮಿ, ರಂಗಸಜ್ಜಿಕೆ ಮತ್ತು ಪ್ರಸಾಧನ ಕಲೆ, ಡಿ.ಲಿಟ್ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೧

೭೨. ಆನಂದ ಪೂಜಾರಿ: ಕರ್ನಾಟಕದ ಕಾವಿ ಕಲೆ, ಡಿ.ಲಿಟ್ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೫

೭೩. ಡಿ.ಎ.ಉಪಾಧ್ಯ: ಕರಾವಳಿಯ ಕಾವಿ ಚಿತ್ರಕಲೆ,ವಾಸ್ತು-ಶಿಲ್ಪ-ಚಿತ್ರಕಲೆಯ ಹಿನ್ನೆಲೆಯಲ್ಲಿ ದೃಶ್ಯಕಲೆಗಳ ತೌಲನಿಕ ಅಧ್ಯಯನ, ಡಿ.ಲಿಟ್ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೦೫

೭೪. ಎಮ್.ಎಸ್.ಮೂರ್ತಿ: ಮಕ್ಕಳ ಮನಸ್ಸಿನ ಚಿತ್ರಗಳು, ಡಿ.ಲಿಟ್ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೨

೭೫. ಜಿ.ಎಸ್.ಭೂಸಗೊಂಡ: ಚಿತ್ರಕಲಾವಿದ ಚಂದ್ರವರ್ಮ ಬಿ. ಆರ್. ಕೋಟ್ಯಾಳಕರ-ಒಂದು ಅಧ್ಯಯನ, ಡಿ.ಲಿಟ್ ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೪

ಈಗ ಕನ್ನಡ ವಿಶ್ವವಿದ್ಯಾಲಯದಲ್ಲಿ ಮಾತ್ರ ಎಂ.ಫಿಲ್. ಸಂಶೋಧನಾ ಅಧ್ಯಯನ ನಡೆಯುತ್ತಿದೆ. ಹೀಗೆ ನಡೆದು ಬಂದ ಎಂ.ಫಿಲ್. ಸಂಶೋಧನಾ ಅಧ್ಯಯನಗಳು ಹೀಗಿವೆ. ೨೦೦೨ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರ **ಚಿತ್ರಕಲಾವಿದ ಜೆ.ಎಸ್.ಖಂಡೇರಾವ : ಒಂದು ಅಧ್ಯಯನ,**[೩೬] ೨೦೦೩ ರಲ್ಲಿ ಎ.ಎಸ್. ವಿಶ್ವನಾಥ ಅವರ **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು,**[೩೭] ೨೦೦೫ ರಲ್ಲಿ ಸಿ.ಡಿ. ಜಟ್ಟೆಣ್ಣನವರ ಅವರ **ಎಂ.ವಿ. ಮಿಣಜಗಿಯವರ ಜೀವನ ಮತ್ತು ಕಲಾಬದುಕು,**[೩೮] ಶಂಕರ ಕುಂದಗೋಳರ **ಡಿ.ವಿ. ಹಾಲಭಾವಿಯವರ ಜೀವನ ಮತ್ತು ಕಲಾಬದುಕು,**[೩೯] ೨೦೦೬ ರಲ್ಲಿ ಸುಚಿತ್ರಾ ಲಿಂಗದಳ್ಳಿಯವರ **ವಿಜಯನಗರದ ಭಿತ್ತಿ ಚಿತ್ರಕಲೆ,**[೪೦] ರಾಜಕುಮಾರ ಎಸ್. ಕಾಳೆ ಅವರ **ಔಂಧ್ ಗ್ಯಾಲರಿ,**[೪೧] ಕುರಿತು. ೨೦೦೭ರಲ್ಲಿ ಜಿತೇಂದ್ರ ಜಿ. ಕೋತಳಿಕರ ಅವರ **ಕಲಾವಿದ ವಿದ್ಯಾಭೂಷಣರ ಕಲಾಕೃತಿಗಳು,**[೪೨] ಬಿ.ಎಂ. ಪಾಟೀಲರ **ನಿಪ್ಪಾಣಿ ವಾಡೆಯ ಭಿತ್ತಿ ಚಿತ್ರಗಳು,**[೪೩] ಉಮೇಶ ಎ.ಎಸ್. **ಕರ್ನಾಟಕ ಜೈನ ಚಿತ್ರಕಲೆ,**[೪೪] ರವಿ ವಸಾರಾಮನಾಯಕ **ಕಿನ್ನಾಳ ಕಲೆ,**[೪೫] ಶಶಿಕಾಂತ ಬಸರಿಕಟ್ಟಿಯವರ **ಕಲಘಗಿಯ ಚಿತ್ರಕಲೆ,**[೪೬] ಶೈಲಾ ಬರಡೋಲರ **ಸಂತ ಕಲಾವಿದ ಶುಭಾರಾಯರ ಜೀವನ ಮತ್ತು ಕಲಾಕೃತಿಗಳು,**[೪೭] ಎಂಬ ಪ್ರಬಂಧಗಳು ಹೊರಬಂದಿವೆ. ೨೦೦೮ರಲ್ಲಿ ಕೃಷ್ಣವೇಣಿ **ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ,**[೪೮] ಯೋಗೀಶ ಹೆಚ್. **ಚಿತ್ರದುರ್ಗ**

---

೩೬. ಮಲ್ಲಿಕಾರ್ಜುನ ಬಾಗೋಡಿ: ಚಿತ್ರಕಲಾವಿದ ಜೆ.ಎಸ್.ಖಂಡೇರಾವ: ಒಂದು ಅಧ್ಯಯನ, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ, ೨೦೦೩

೩೭. ಎ.ಎಸ್. ವಿಶ್ವನಾಥ: ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ, ೨೦೦೫

೩೮. ಸಿ.ಡಿ. ಜಟ್ಟೆಣ್ಣನವರ: ಎಂ.ವಿ. ಮಿಣಜಗಿಯವರ ಜೀವನ ಮತ್ತು ಕಲಾಬದುಕು, ಕ.ವಿ.ವಿ.ಹಂಪಿ, ೨೦೦೫

೩೯. ಶಂಕರ ಕುಂದಗೋಳ: ಡಿ.ವಿ. ಹಾಲಭಾವಿಯವರ ಜೀವನ ಮತ್ತು ಕಲಾಬದುಕು, ಕ.ವಿ.ವಿ.ಹಂಪಿ, ೨೦೦೬

೪೦. ಸುಚಿತ್ರಾ ಲಿಂಗದಳ್ಳಿ: ವಿಜಯನಗರದ ಭಿತ್ತಿ ಚಿತ್ರಕಲೆ, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ, ೨೦೦೬

೪೧. ರಾಜಕುಮಾರ ಎಸ್. ಕಾಳೆ: ಚಂಧ್ ಗ್ಯಾಲರಿ, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ, ೨೦೦೬

೪೨. ಜಿತೇಂದ್ರ ಜಿ. ಕೋತಳಿಕರ: ಕಲಾವಿದ ವಿದ್ಯಾಭೂಷಣರ ಕಲಾಕೃತಿಗಳು, ಎಂ.ಫಿಲ್ ಪ್ರಬಂಧ, ೨೦೦೭

೪೩. ಬಿ.ಎಂ. ಪಾಟೀಲರ: ನಿಪ್ಪಾಣಿ ವಾಡೆಯ ಭಿತ್ತಿ ಚಿತ್ರಗಳು, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ, ೨೦೦೭

೪೪. ಉಮೇಶ ಎ.ಎಸ್: ಕರ್ನಾಟಕ ಜೈನ ಚಿತ್ರಕಲೆ, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ, ೨೦೦೭

೪೫. ರವಿ ವಸಾರಾಮನಾಯಕ: ಕಿನ್ನಾಳ ಕಲೆ, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ, ೨೦೦೭

೪೬. ಶಶಿಕಾಂತ ಬಸರಿಕಟ್ಟಿ: ಕಲಘಗಿಯ ಚಿತ್ರಕಲೆ, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ, ೨೦೦೭

೪೭. ಶೈಲಾ ಬರಡೋಲ: ಸಂತ ಕಲಾವಿದ ಶುಭಾರಾಯರ ಜೀವನ ಮತ್ತು ಕಲಾಕೃತಿಗಳು, ಕ.ವಿ.ವಿ.ಹಂಪಿ, ೨೦೦೭

೪೮. ಕೃಷ್ಣವೇಣಿ: ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ, ೨೦೦೮

೪೯. ಯೋಗೀಶ ಹೆಚ್: ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ, ೨೦೦೮

೫೦. ಮಹಾಕೊಟೇಶ್ವರಗೌಡ ಪಾಟೀಲ: ಬೆಳಗಾವಿ ಜಿಲ್ಲೆಯ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೦೮

**ಜಿಲ್ಲೆಯ ಚಿತ್ರಕಲೆ,**[೮೯] ಮಹಾಕೊಟೇಶ್ವರಗೌಡ ಪಾಟೀಲ **ಬೆಳಗಾವಿ ಜಿಲ್ಲೆಯ ಚಿತ್ರಕಲೆ,**[೯೦] ಸುರೇಶ ಬಡಿಗೇರರ **ಕನ್ನಡ ವಿಶ್ವವಿದ್ಯಾಲಯದ ಸಂಗ್ರಹದ ಹಸ್ತಪ್ರತಿಗಳ ಚಿತ್ರಕಲೆ,**[೯೧] ಸಂತೋಷಕುಮಾರ ಕುಲಕರ್ಣಿ ಅವರ **ದಾವಣಗೆರೆ ಜಿಲ್ಲೆಯ ಚಿತ್ರಕಲೆ,**[೯೨] ಜಯರಾಜ ಚಿಕ್ಕಪಾಟೀಲರ **ಕರ್ನಾಟಕದ ಜಾಹೀರಾತುಗಳಲ್ಲಿ ಸಾಂಸ್ಕೃತಿಕ ನೆಲೆಗಳು,**[೯೩] ಮಹೇಶ ಉಮತಾರ ಅವರ **ಬಿ.ಪಿ. ಬಾಯಿರಿ ಕಲೆ ಮತ್ತು ಕಲಾ ಸಾಹಿತ್ಯ,**[೯೪] ಗಿರಿಜಾ ಬಿರಾದಾರರ **ವಿಜಾಪೂರ ಜಿಲ್ಲೆಯ ಚಿತ್ರಕಲೆ,**[೯೫] ಬಸಯ್ಯ ಗವಿಮಠ ಅವರ **ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ,**[೯೬] ಕೃಷ್ಣಗೌಡ ಹೆಚ್.ಎನ್. ಅವರ **ಕರ್ನಾಟಕದಲ್ಲಿ ಟಿಬೇಟಿಯನ್ನರ ಚಿತ್ರಕಲೆ,**[೯೭] ಮಹಾಂತೇಶ ಪಲದಿನ್ನಿ ಅವರ **ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು,**[೯೮] ಮತ್ತು ೨೦೦೯ರಲ್ಲಿ ಕಾಂತರಾಜ ಅವರ **ಸಿಬಿ ದೇವಾಲಯದ ಭಿತ್ತಿ ಚಿತ್ರಕಲೆ,**[೯೯] ರಂಗಸ್ವಾಮಿ ಅವರ **ಚಿತ್ರಕಲಾವಿದ ರುಮಾಲೆ ಚನ್ನಬಸಯ್ಯನವರ ಬದುಕು ಮತ್ತು ಕಲೆ,**[೧೦೦] ಶ್ಯಾಮ ತಾ. ಜಮಾದಾರ ಅವರ **ಕಲಾವಿದ ಸಿ.ಎನ್. ಪಾಟೀಲರ ಬದುಕು ಮತ್ತು ಕಲಾಕೃತಿಗಳು,**[೧೦೧] ೨೦೧೦ ರಲ್ಲಿ ಭಾನುಮತಿ ಕೆ.ಎಲ್. ಅವರ **ಚಿತ್ರಕಲಾವಿದ ಎಂ.ಜಿ. ವಾಚೇದಮಠ ಬದುಕು ಮತ್ತು ಕಲಾಕೃತಿಗಳು,**[೧೦೨] ದಿನೇಶ ಬಿ. ಅವರ **ಚನ್ನಪಟ್ಟಣದ ಚಿತ್ತಾರ ಗೊಂಬೆಗಳು,**[೧೦೩] ವಾದಿರಾಜ ಎ. ಅವರ **ಕಲಾವಿದ ಎಲ್.**

---

೯೧. ಸುರೇಶ ಬಡಿಗೇರ: ಕನ್ನಡ ವಿಶ್ವವಿದ್ಯಾಲಯದ ಸಂಗ್ರಹದ ಹಸ್ತಪ್ರತಿಗಳ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೦೮

೯೨. ಸಂತೋಷಕುಮಾರ ಕುಲಕರ್ಣಿ: ದಾವಣಗೆರೆ ಜಿಲ್ಲೆಯ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೦೮

೯೩. ಜಯರಾಜ ಚಿಕ್ಕಪಾಟೀಲ: ಕರ್ನಾಟಕದ ಜಾಹೀರಾತುಗಳಲ್ಲಿಸಾಂಸ್ಕೃತಿಕ ನೆಲೆಗಳು, ಕ.ವಿ.ವಿ.ಹಂಪಿ, ೨೦೦೮

೯೪. ಮಹೇಶ ಉಮತಾರ: ಬಿ.ಪಿ. ಬಾಯಿರಿ ಕಲೆ ಮತ್ತು ಕಲಾ ಸಾಹಿತ್ಯ, ಕ.ವಿ.ವಿ.ಹಂಪಿ, ೨೦೦೮

೯೫. ಗಿರಿಜಾ ಬಿರಾದಾರ: ವಿಜಾಪೂರ ಜಿಲ್ಲೆಯ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೦೮

೯೬. ಬಸಯ್ಯ ಗವಿಮಠ: ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೦೮

೯೭. ಕೃಷ್ಣಗೌಡ ಹೆಚ್.ಎನ್: ಕರ್ನಾಟಕದಲ್ಲಿ ಟಿಬೇಟಿಯನ್ನರ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೦೮

೯೮. ಮಹಾಂತೇಶ ಪಲದಿನ್ನಿ: ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು, ಕ ವಿ.ವಿ.ಹಂಪಿ, ೨೦೦೯

೯೯. ಕಾಂತರಾಜ: ಸಿಭಿ ದೇವಾಲಯದ ಭಿತ್ತಿಚಿತ್ರಕಲೆ, ಕ.ವಿ.ಹಂಪಿ, ೨೦೦೯

೧೦೦. ರಂಗಸ್ವಾಮಿ: ಚಿತ್ರಕಲಾವಿದ ರುಮಾಲೆ ಚನ್ನಬಸಯ್ಯನವರ ಬದುಕು ಮತ್ತು ಕಲೆ, ಕ.ವಿ.ವಿ.ಹಂಪಿ, ೨೦೦೯

೧೦೧. ಶ್ಯಾಮ ತಾ. ಜಮಾದಾರ: ಕಲಾವಿದ ಸಿ.ಎನ್. ಪಾಟೀಲರ ಬದುಕು ಮತ್ತು ಕಲಾಕೃತಿಗಳು, ಕ.ವಿ.ವಿ.ಹಂಪಿ, ೨೦೦೯

೧೦೨. ಭಾನುಮತಿ ಕೆ.ಎಲ್: ಚಿತ್ರಕಲಾವಿದ ಎಂ.ಜಿ. ವಾಚೇದಮಠ ಬದುಕು ಮತ್ತು ಕಲಾಕೃತಿಗಳು, ಕ.ವಿ.ವಿ.ಹಂಪಿ, ೨೦೧೦

೧೦೩. ದಿನೇಶ ಬಿ: ಚನ್ನಪಟ್ಟಣದ ಚಿತ್ತಾರ ಗೊಂಬೆಗಳು, ಕ.ವಿ.ವಿ.ಹಂಪಿ, ೨೦೧೦

೧೦೪. ವಾದಿರಾಜ ಎ: ಕಲಾವಿದ ಎಲ್. ಶಿವಲಿಂಗಪ್ಪನವರ ಜೀವನ ಕಲಾಕೃತಿಗಳು, ಕ.ವಿ.ವಿ.ಹಂಪಿ, ೨೦೧೦

೧೦೫. ಚಿಂತಾಮಣಿ: ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆ, ಕ.ವಿ.ವಿ.ಹಂಪಿ, ೨೦೧೦

**ಶಿವಲಿಂಗಪ್ಪನವರ ಜೀವನ ಕಲಾಕೃತಿಗಳು,**[೧೦೪] ಚಿಂತಾಮಣಿ ಅವರ **ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆ,**[೧೦೫] ೨೦೧೨ರಲ್ಲಿ, ಶ್ವೇತ ಡಿ.ಎಸ್. ಅವರ **ರಾಜ ರವಿವರ್ಮನ ಕಲಾಕೃತಿಗಳಲ್ಲಿನ ಸ್ತ್ರೀ ಚಿತ್ರಣ,**[೧೦೬] ಸುರೇಂದ್ರನಾಥ ಡಿ.ಆರ್. ಅವರ **ಕರಾವಳಿ ಕರ್ನಾಕಟದ ಕ್ರೈಸ್ತಚಿತ್ರಕಲೆ,**[೧೦೭] ಶಶಿಕಲಾ ಜಿ.ವಿ. ಅವರ **ಕರ್ನಾಟಕದ ವ್ಯಂಗ್ಯ ಚಿತ್ರಕಲೆ,**[೧೦೮] ವೈಶಾಲಿ ಕೆ. ಕಾಂಬಳೆ ಅವರ **ಬೀದರ ಜಿಲ್ಲೆಯ ಚಿತ್ರಕಲೆ,**[೧೦೯] ರಾಘವೇಂದ್ರ ಅವರ **ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ,**[೧೧೦] ಎನ್.ಜಿ. ಅಂಬರೀಶ್ ಅವರ **ಕರ್ನಾಟಕದ ಆಧುನಿಕ ಭಿತ್ತಿಚಿತ್ರ / ಶಿಲ್ಪಕಲೆ,**[೧೧೧] ಮಲ್ಲಿಕಾರ್ಜುನ ಕೆ.ಜಿ. ಅವರ **ಕೆ.ಕೆ.ಹೆಬ್ಬಾರರ ಕಲೆ ಮತ್ತು ಬದುಕು,**[೧೧೨] ಮಹಾದೇವಪ್ಪ ಸಣತಂಗಿಯವರ **ಕರ್ನಾಟಕದ ದೃಶ್ಯಕಲೆಯಲ್ಲಿ ಗಣೇಶ ಚಿತ್ರಣ,**[೧೧೩] ರಾಜೀವ.ಎಂ.ವೈ ಅವರ **ಕೆ. ವೆಂಕಟಪ್ಪನವರ ಜೀವನ ಮತ್ತು ಕಲಾಕೃತಿಗಳು,**[೧೧೪] ೨೦೧೩ರಲ್ಲಿ ದಯಾನಂದ ಕೋಳಿ ಅವರ **ಕೊಪ್ಪಳ ಜಿಲ್ಲೆಯ ಚಿತ್ರಕಲೆ,**[೧೧೫] ಸವಿತಾ ಬಡಿಗೇರ ಅವರ **ಧಾರವಾಡ ಜಿಲ್ಲೆಯ ಚಿತ್ರಕಲೆ,**[೧೧೬] ಹೇಮಂತಕುಮಾರ ಅವರ **ಮೈಸೂರು ಜಿಲ್ಲೆಯ ಚಿತ್ರಕಲೆ,**[೧೧೭] ಬಸವರಾಜ ಕಲೆಗಾರ ಅವರ **ಯಾದಗಿರಿ ಜಿಲ್ಲೆಯ ಚಿತ್ರಕಲೆ,**[೧೧೮] ಗಾಯಿತ್ರಿ ಮಂತ ಅವರ **ಕಲಾವಿದ ಪಿ.ಎಸ್.ಕಡೇಮನಿಯವರ ಕಲೆ ಮತ್ತು ಬದುಕು,**[೧೧೯] ವಿಶ್ವನಾಥ ಎಚ್.ಹಂಡೆ

---

೧೦೬. ಡಿ.ಎಸ್ ಶ್ವೇತ: ರಾಜ ರವಿವರ್ಮನ ಕಲಾಕೃತಿಗಳಲ್ಲಿನ ಸ್ತ್ರೀ ಚಿತ್ರಣ, ಕ.ವಿ.ವಿ.ಹಂಪಿ, ೨೦೧೨

೧೦೭. ಡಿ.ಆರ್ ಸುರೇಂದ್ರನಾಥ: ಕರಾವಳಿ ಕರ್ನಾಕಟದ ಕ್ರೈಸ್ತಚಿತ್ರಕಲೆ, ಕ.ವಿ.ವಿ.ಹಂಪಿ, ೨೦೧೨

೧೦೮. ಶಶಿಕಲಾ ಜಿ.ವಿ: ಕರ್ನಾಟಕದ ವ್ಯಂಗ್ಯ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೧೨

೧೦೯. ರಾಜೀವ.ಎಂ.ವೈ: ಕೆ. ವೆಂಕಟಪ್ಪನವರ ಜೀವನ ಮತ್ತು ಕಲಾಕೃತಿಗಳು, ಕ.ವಿ.ವಿ.ಹಂಪಿ, ೨೦೧೨

೧೧೦. ಮಲ್ಲಿಕಾರ್ಜುನ ಕೆ.ಜಿ:ಕೆ.ಕೆ.ಹೆಬ್ಬಾರರ ಕಲೆ ಮತ್ತು ಬದುಕು, ಕ.ವಿ.ವಿ.ಹಂಪಿ, ೨೦೧೨

೧೧೧. ಎನ್.ಜಿ. ಅಂಬರೀಶ್: ಕರ್ನಾಟಕದ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆ, ಕ.ವಿ.ವಿ.ಹಂಪಿ, ೨೦೧೨

೧೧೨. ರಾಘವೇಂದ್ರ: ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೧೨

೧೧೩. ಮಹಾದೇವಪ್ಪ ಸಣತಂಗಿ: ಕರ್ನಾಟಕದ ದೃಶ್ಯಕಲೆಯಲ್ಲಿ ಗಣೇಶ ಚಿತ್ರಣ, ಕ.ವಿ.ವಿ.ಹಂಪಿ, ೨೦೧೨

೧೧೪. ವೈಶಾಲಿ ಕಾಂಬಳೆ: ಬೀದರ ಜಿಲ್ಲೆಯ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೧೨

೧೧೫. ದಯಾನಂದ ಕೋಳಿ: ಕೊಪ್ಪಳ ಜಿಲ್ಲೆಯ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೧೩

೧೧೬. ಸವಿತಾ ಬಡಿಗೇರ: ಧಾರವಾಡ ಜಿಲ್ಲೆಯ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೧೩

೧೧೭. ಹೇಮಂತಕುಮಾರ: ಮೈಸೂರು ಜಿಲ್ಲೆಯ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೧೩

೧೧೮. ಬಸವರಾಜ ಕಲೆಗಾರ: ಯಾದಗಿರಿ ಜಿಲ್ಲೆಯ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೧೩

೧೧೯. ಗಾಯಿತ್ರಿ ಮಂತ: ಕಲಾವಿದ ಪಿ.ಎಸ್.ಕಡೇಮನಿಯವರ ಕಲೆ ಮತ್ತು ಬದುಕು, ಕವಿ.ವಿ.ಹಂಪಿ, ೨೦೧೪

೧೨೦. ವಿಶ್ವನಾಥ ಎಚ್.ಹಂಡೆ: ಸುಬ್ರಮಣ್ಯಂರವರ ದೃಶ್ಯಕಲಾ ಸಾಹಿತ್ಯ, ಕವಿ.ವಿ.ಹಂಪಿ, ೨೦೧೪

೧೨೧. ಖಾದರ ಸಾಬ್ ಇ.ಗುಳೇದಗುಡ್ಡ: ಬಹುಮುಖಿ ಕಲಾ ಸಾಧಕ ಪಿ.ಎಸ್.ಕಡೆಮನಿ, ಕವಿ.ವಿ.ಹಂಪಿ, ೨೦೧೪

ಅವರ **ಸುಬ್ರಮಣ್ಯಂರವರ ದೃಶ್ಯಕಲಾ ಸಾಹಿತ್ಯ,**[೧೨೦] ಖಾದರ ಸಾಬ್ ಇ.ಗುಳೇದಗುಡ್ಡ ಅವರ **ಬಹುಮುಖ ಕಲಾ ಸಾಧಕ ವಿ.ಜಿ.ಕಡೆಮನಿ,**[೧೨೧] ಮಾಯಾದೇವಿ ಅವರ **ಎ.ಎಸ್.ಪಾಟೀಲರವರ ಕಲೆ ಮತ್ತು ಬದುಕು,**[೧೨೨] ಮಂಜುಳಾಬಾಯಿ ಅವರ **ಕೆ.ಜ್ಞಾನೇಶ್ವರರವರ ಕಲೆ ಮತ್ತು ಬದುಕು,**[೧೨೩] ಕೀರ್ತಿವರ್ಮ ಅವರ **ಕೆ.ರಾಮಚಂದ್ರನ್ ರವರ ಕಲೆ ಮತ್ತು ಬದುಕು,**[೧೨೪] ರಾಜಪ್ಪ ಅವರ **ಬಾಗೂರು ಮಾರ್ಕಂಡೇಯ್ಯರವರ ಚಿತ್ರಕಲೆ ಮತ್ತು ಸಾಹಿತ್ಯ,**[೧೨೫] ೨೦೧೫ರಲ್ಲಿ ಅಶೋಕ ಸಿ.ನಡುವಿನಮನಿ ಅವರ **ಹೈದರಾಬಾದ್ ಕರ್ನಾಟಕದ ಭಾವಚಿತ್ರ ಕಲಾವಿದರು–ಒಂದು ಅಧ್ಯಯನ,**[೧೨೬] ವೆಂಕಟೇಶ ಕೆ. ಹೆಚ್ ಅವರ **ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ.**[೧೨೭] ಅಸಂಗಪ್ಪ ಗುಳೇದಗುಡ್ಡ ಅವರ **ದೃಶ್ಯಕಲಾ ಕ್ಷೇತ್ರಕ್ಕೆ ಅಕ್ಕಿ ಮನೆತನದ ಕೊಡುಗೆ,**[೧೨೮] ನಟರಾಜ ಎಂ.ಶಿಲ್ಪಿ ಅವರ **ಕನಗನಹಳ್ಳಿಯ ಸ್ತೂಪ ಶಿಲ್ಪಗಳು,**[೧೨೯] ಬಸವರಾಜ ರೊಳ್ಳಿ ಅವರ **ವಿಜಯಪುರ ಜಿಲ್ಲೆಯ ಸಮಕಾಲೀನ ಚಿತ್ರಕಲೆ,**[೧೩೦] ಸಂತೋಷ ಮಾ. ಬೇವಿನಮರದ ಅವರ **ಹಂಪಿ ಪರಿಸರದ ಹನುಮನ ಪ್ರತಿಮೆಗಳ ಅಧ್ಯಯನ (ದೃಶ್ಯಕಲೆಗಳನ್ನು ಆಧರಿಸಿ),**[೧೩೧] ಅಮೀನ್ ರೆಡ್ಡಿ ಅವರ **ವಿಜಯನಗರ ಕಾಲದ ಲೇಪಾಕ್ಷಿ ಭಿತ್ತಿ ಚಿತ್ರಕಲೆ,** ೨೦೧೬[೧೩೨], ನಿಜಲಿಂಗ ಅವರ **ನಿಸರ್ಗ ಚಿತ್ರಕಲಾವಿದರ: ಒಂದು ಅಧ್ಯಯನ(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)**[೧೩೩]**,** ಸಂಗಪ್ಪ ಕೊತ್ತಂಬರಿ ಅವರ **ಚಿಕ್ಕ ಮಕ್ಕಳ ಚಿತ್ರಕಲೆ,** ೨೦೧೬[೧೩೪], ವಿರೇಶ ರುದ್ರಸ್ವಾಮಿ ಅವರ **ಕರ್ನಾಟಕ ಭಾವ ಚಿತ್ರಕಲಾವಿದರ ಒಂದು ಅಧ್ಯಯನ,** ೨೦೧೬[೧೩೫],

---

೧೨೨: ಮಾಯಾದೇವಿ: ಎ.ಎಸ್.ಪಾಟೀಲರವರ ಕಲೆ ಮತ್ತು ಬದುಕು, ಕ.ವಿ.ವಿ.ಹಂಪಿ, ೨೦೧೪

೧೨೩. ಮಂಜುಳಾಬಾಯಿ: ಕೆ.ಜ್ಞಾನೇಶ್ವರರವರ ಕಲೆ ಮತ್ತು ಬದುಕು, ಕ.ವಿ.ವಿ.ಹಂಪಿ, ೨೦೧೪

೧೨೪. ಕೀರ್ತಿವರ್ಮ: ಕೆ.ರಾಮಚಂದ್ರನ್ ರವರ ಕಲೆ ಮತ್ತು ಬದುಕು, ಕ.ವಿ.ವಿ.ಹಂಪಿ, ೨೦೧೪

೧೨೫. ರಾಜಪ್ಪ: ಬಾಗೂರು ಮಾರ್ಕಂಡೇಯ್ಯರವರ ಚಿತ್ರಕಲೆ ಮತ್ತು ಸಾಹಿತ್ಯ, ಕ.ವಿ.ವಿ.ಹಂಪಿ, ೨೦೧೪

೧೨೬. ಅಶೋಕ ಸಿ.ನಡುವಿನಮನಿ : ಹೈದರಾಬಾದ್ ಕರ್ನಾಟಕದ ಭಾವಚಿತ್ರ ಕಲಾವಿದರು–ಒಂದು ಅಧ್ಯಯನ, ಕ.ವಿ.ವಿ.ಹಂಪಿ, ೨೦೧೫

೧೨೭. ವೆಂಕಟೇಶ ಕೆ. ಹೆಚ್ : ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ, ಕ.ವಿ.ವಿ.ಹಂಪಿ, ೨೦೧೫

೧೨೮. ಅಸಂಗಪ್ಪ ಗುಳೇದಗುಡ್ಡ : ದೃಶ್ಯಕಲಾ ಕ್ಷೇತ್ರಕ್ಕೆ ಅಕ್ಕಿ ಮನೆತನದ ಕೊಡುಗೆ, ಕ.ವಿ.ವಿ.ಹಂಪಿ, ೨೦೧೫

೧೨೯. ನಟರಾಜ ಎಂ.ಶಿಲ್ಪಿ : ಕನಗನಹಳ್ಳಿಯ ಸ್ತೂಪ ಶಿಲ್ಪಗಳು, ಕ.ವಿ.ವಿ.ಹಂಪಿ, ೨೦೧೫

೧೩೦. ಬಸವರಾಜ ರೊಳ್ಳಿ : ವಿಜಯಪುರ ಜಿಲ್ಲೆಯ ಸಮಕಾಲೀನ ಚಿತ್ರಕಲೆ, ಕ.ವಿ.ವಿ.ಹಂಪಿ, ೨೦೧೫

೧೩೧. ಸಂತೋಷ ಮಾ. ಬೇವಿನಮರದ: ಹಂಪಿ ಪರಿಸರದ ಹನುಮನ ಪ್ರತಿಮೆಗಳ ಅಧ್ಯಯನ(ದೃಶ್ಯಕಲೆಗಳನ್ನು ಆಧರಿಸಿ), ಕ.ವಿ.ವಿ.ಹಂಪಿ, ೨೦೧೫

೧೩೨. ಅಮೀನ್ ರೆಡ್ಡಿ: ವಿಜಯನಗರ ಕಾಲದ ಲೇಪಾಕ್ಷಿ ಭಿತ್ತಿ ಚಿತ್ರಕಲೆ, ಕ.ವಿ.ವಿ., ೨೦೧೫

೧೩೩. ನಿಜಲಿಂಗ: ನಿಸರ್ಗ ಚಿತ್ರಕಲಾವಿದರ: ಒಂದು ಅಧ್ಯಯನ, ಕ.ವಿ.ವಿ., ೨೦೧೫

೧೩೪. ಸಂಗಪ್ಪ ಕೊತ್ತಂಬರಿ: ಚಿಕ್ಕ ಮಕ್ಕಳ ಚಿತ್ರಕಲೆ, ಕ.ವಿ.ವಿ., ೨೦೧೫

೧೩೫. ವಿರೇಶ್ ರುದ್ರಮುನಿ: ಕರ್ನಾಟಕ ಭಾವ ಚಿತ್ರಕಲಾವಿದರ: ಒಂದು ಅಧ್ಯಯನ, ಕ.ವಿ.ವಿ.೨೦೧೫

ಸಂಗಮ ದೊಡ್ಡಮನಿ ಅವರ **ಡಿ.ವಿ.ಹಾಲಭಾವಿ ಸ್ಕೂಲ್ ಆಫ್ ಆರ್ಟ್ ಕಲಾಶಾಲೆ: ಒಂದು ಅಧ್ಯಯನ,** ೨೦೧೬[೧೩೬], ಬಸವರಾಜ್ ಅವರ **ಕರ್ನಾಟಕ ಸಂಯೋಜನೆ ಚಿತ್ರಕಲೆ(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ),** ೨೦೧೬[೧೩೭]. ಈ ಎಲ್ಲಾ ಪಿಎಚ್.ಡಿ, ಡಿ.ಲಿಟ್ ಮತ್ತು ಎಂ.ಫಿಲ್ ಪ್ರಬಂಧಗಳು ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಸಂಶೋಧನಾ ಅಧ್ಯಯನಗಳಾಗಿವೆ.

ಗುಲ್ಬರ್ಗಾ ವಿ.ವಿ, ಬೆಂಗಳೂರು ವಿ.ವಿ, ಕರ್ನಾಟಕ ವಿ.ವಿ., ಮೈಸೂರು ವಿ.ವಿ., ಬೆಂಗಳೂರಿನ ಜೈನ ಡೀಮ್ಡ್ ವಿ.ವಿ. ಮತ್ತು ಕನ್ನಡ ವಿ.ವಿ.ಗಳಲ್ಲಿ ಪಿಹೆಚ್.ಡಿ. ಪದವಿಗಾಗಿ ಅನೇಕ ಸಂಶೋಧನಾ ವಿದ್ಯಾರ್ಥಿಗಳು ಅಧ್ಯಯನದಲ್ಲಿ ನಿರತರಾಗಿದ್ದಾರೆ. ಇದಲ್ಲದೇ ವಿಶ್ವವಿದ್ಯಾಲಯಗಳ ಬಿ.ಎಫ್.ಎ. (ಬ್ಯಾಚ್ಯುಲರ್ ಆಫ್ ಫೈನ್ ಆರ್ಟ್ಸ್–ಡಿಗ್ರಿ), ಬಿ.ವಿ.ಎ. (ಬ್ಯಾಚ್ಯುಲರ್ ಆಫ್ ವಿಜ್ಯುವಲ್ ಆರ್ಟ್ಸ್–ಡಿಗ್ರಿ) ಐದು ವರ್ಷಗಳ ದೃಶ್ಯಕಲೆಯಲ್ಲಿ ಡಿಪ್ಲೊಮಾ, ಪದವಿ ಹಾಗೂ ಸ್ನಾತಕೋತ್ತರ ಹಂತದಲ್ಲಿ ಸುಮಾರು ೧೦೦೦ಕ್ಕೂ ಅಧಿಕ ಲಘುಶೋಧ ಪ್ರಬಂಧಗಳು ರಚನೆಗೊಂಡಿವೆ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಈ ಸಂಶೋಧನಾ ಪ್ರಕಾರವು ದೃಶ್ಯಕಲಾ ಕ್ಷೇತ್ರದಲ್ಲಿ ಅನಿವಾರ್ಯ ಅಧ್ಯಯನವಾಗಿ ಬೆಳೆಯುತ್ತಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆಗಳು ತೀವ್ರವಾಗಿ ಮುನ್ನಡೆಯುತ್ತಲಿದ್ದು, ಭವಿಷ್ಯತ್ತಿನಲ್ಲಿ ಕಲಾಕ್ಷೇತ್ರವು ಸಂಶೋಧನಾತ್ಮಕ ವಾಗಿ, ಸದೃಢವಾಗಿ ಮುನ್ನಡೆಯುತ್ತಲಿರುವುದು ದೃಶ್ಯಕಲಾ ಕ್ಷೇತ್ರದಲ್ಲಾದ ಬಹುದೊಡ್ಡ ಬದಲಾವಣೆ ಎಂದರೆ ತಪ್ಪಾಗಲಾರದು. ಈ ಮೇಲಿನ ಎಲ್ಲಾ ಅಧ್ಯಯನಗಳು ತನ್ನದೇ ಆದ ಇತಿ–ಮಿತಿಗಳಲ್ಲಿ ನಡೆದಿವೆ.

## ಪ್ರಸ್ತುತ ಚಿ.ಸು.ಕೃಷ್ಣಯ್ಯಸೆಟ್ಟಿ ಅವರ ಕುರಿತು ಬಂದ ಸಾಹಿತ್ಯ ಸಮೀಕ್ಷೆ

೧೯೯೦ರಲ್ಲಿ ಬಿ.ವಿ.ಕೆ.ಶಾಸ್ತ್ರಿ ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಸಂಪಾದಕರಾಗಿ ರಚಿಸಿದ ದೃಶ್ಯಕಲಾ ಸೃಜನಶೀಲರು ಎಂಬ ಪುಸ್ತಕದಲ್ಲಿ ಜಿ.ಎಸ್.ಮೋಹನ್‌ರವರು ಚಿ.ಸು.ಕೃಷ್ಣಸೆಟ್ಟಿಯವರ ಕುರಿತು ಮಾಹಿತಿ ಒಳಗೊಂಡ ಲೇಖನವನ್ನು ರಚಿಸಿರುತ್ತಾರೆ. ೨೦೧೧ರಲ್ಲಿ ಕನ್ನಡ ವಿಶ್ವವಿದ್ಯಾಲಯ ದಿಂದ ಕಲಾವಿದ, ವಿಮರ್ಶಕ ಮತ್ತು ಲೇಖಕ ಚಿ.ಸು.ಕೃಷ್ಣಶೆಟ್ಟಿ ಎಂಬ ಕಿರು ಪ್ರಬಂಧವನ್ನು ಮಲ್ಲಪ್ಪ ಹಳ್ಳಿಯವರು ರಚಿಸಿರುತ್ತಾರೆ. ಇದರಲ್ಲಿ ಕೃಷ್ಣಶೆಟ್ಟಿಯವರ ಸಾಹಿತ್ಯ ಮತ್ತು ಕಲಾಕೃತಿಗಳನ್ನೊಳಗೊಂಡಂತೆ ಕಲಾಬದುಕಿನ ಪ್ರಯಣವನ್ನು ಗುರುತಿಸಿರುತ್ತಾರೆ. ಪ್ರಜಾವಾಣಿಯ ಸಾಪ್ತಾಹಿಕ ಪುರವಣಿ ೧೬ ಸೆಪ್ಟೆಂಬರ್ ೨೦೧೨ರ ನಂದನ ವನದಲ್ಲಿ ಪ್ರಕಟಗೊಂಡ "ಅಡ್ವಾಣಿ

---

೧೩೬. ಸಂಗಮ ದೊಡ್ಡಮನಿ: ಡಿ.ವಿ.ಹಾಲಭಾವಿ ಸ್ಕೂಲ್ ಆಫ್ ಆರ್ಟ್ ಕಲಾಶಾಲೆ: ಒಂದು ಅಧ್ಯಯನ, ಕ.ವಿ.ವಿ., ೨೦೧೫

೧೩೭. ಬಸವರಾಜ್: ಕರ್ನಾಟಕ ಸಂಯೋಜನೆ ಚಿತ್ರಕಲೆ(ಉತ್ತರ ಕರ್ನಾಟಕ ಅನುಲಕ್ಷಿಸಿ), ೨೦೧೫

ಅವರಿಗೆ ಪಾಠ ಹೇಳಿದ್ದೆ" ಎಂಬ ಲೇಖನವನ್ನು ದೇವು ಪತ್ತಾರರವರು ಬರೆದಿರುತ್ತಾರೆ. ಇದರಲ್ಲಿ ಮುಖ್ಯವಾಗಿ ಕಲಾವಿದ, ಕಲಾವಿಮರ್ಶಕ ಚಿ.ಸು.ಕೃಷ್ಣಸೆಟ್ಟಿಯವರನ್ನು ಸಂದರ್ಶಿಸಿ ಅದರ ಯಥಾವತ್ತನ್ನು ಲೇಖನದಲ್ಲಿ ಹಾಕಲಾಗಿರುತ್ತದೆ. ಇದೇ ಸಂದರ್ಭದಲ್ಲಿ ಚಿತ್ರಕಲಾ ಪರಿಷತ್, ಬೆಂಗಳೂರು ಇಲ್ಲಿ ಚಿತ್ರಪ್ರದರ್ಶನವನ್ನು ಸಹ ಆಯೋಜಿಸಿರುತ್ತಾರೆ. ಅಷ್ಟೇ ಅಲ್ಲದೆ ಕಲೆಗೆ ಸಂಬಂಧಿಸಿದ ಅನೇಕ ವಿಚಾರ ಸಂಕಿರಣ, ಕಲಾಶಿಬಿರ, ಕಾರ್ಯಾಗಾರ ಎಂಬಂತಹ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಗುರುತರರಾಗಿರುತ್ತಾರೆ.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವು ಕಲಾವಿದ, ಕಲಾವಿಮರ್ಶಕ ಮತ್ತು ಲೇಖಕ ಚಿ.ಸು. ಕೃಷ್ಣಸೆಟ್ಟಿಯವರ ಜೀವನ ಮತ್ತು ಸಾಧನೆಗಳಿಗೆ ಸಂಬಂಧಿಸಿದೆ. ಅಧ್ಯಯನದ ಅನುಕೂಲಕ್ಕಾಗಿ ಈ ಪ್ರಬಂಧವನ್ನು ಒಟ್ಟು ಏಳು ಅಧ್ಯಾಯಗಳಲ್ಲಿ ವಿಷಯವನ್ನು ವಿಭಾಗಿಸಿಕೊಂಡು ನಿರೂಪಿಸಲಾಗಿದೆ.

* ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನಗಳನ್ನು ವಿವರಿಸಲಾಗಿದೆ.
* ಅಧ್ಯಾಯ ಎರಡರಲ್ಲಿ ಚಿ.ಸು.ಕೃಷ್ಣಸೆಟ್ಟಿಯವರ ಬಾಲ್ಯ, ಪರಿಸರ, ವಿದ್ಯಾಭ್ಯಾಸ, ಮತ್ತು ವೃತ್ತಿ ಜೀವನದ ವಿವರಗಳನ್ನು ಚರ್ಚಿಸಲಾಗಿದೆ.
* ಅಧ್ಯಾಯ ಮೂರರಲ್ಲಿ ಚಿ.ಸು.ಕೃಷ್ಣಸೆಟ್ಟಿಯವರ ಕಲಾ ಸಾಹಿತ್ಯ ಮತ್ತು ಕಲಾವಿಮರ್ಶೆ ಕುರಿತು ವಿವರಿಸಲಾಗಿದೆ.
* ಅಧ್ಯಾಯ ನಾಲ್ಕರಲ್ಲಿ ಚಿ.ಸು.ಕೃಷ್ಣಸೆಟ್ಟಿಯವರ ಕಲಾಕೃತಿಗಳ ಮಹತ್ವ ಕುರಿತು ವಿಶ್ಲೇಷಿಸಲಾಗಿದೆ.
* ಅಧ್ಯಾಯ ಐದರಲ್ಲಿ ಚಿ.ಸು.ಕೃಷ್ಣಸೆಟ್ಟಿಯವರ ಕಲಾ ಚಟುವಟಿಕೆಗಳು ಅಂದರೆ ಅವರು ಪಡೆದ ಪ್ರಶಸ್ತಿಗಳು, ಆಯೋಜಿಸಿದ ಪ್ರದರ್ಶನಗಳ ಕುರಿತ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ.
* ಅಧ್ಯಾಯ ಆರರಲ್ಲಿ ಚಿ.ಸು.ಕೃ. ಕಲಾಕೃತಿ ಮತ್ತು ಕಲಾಸಾಹಿತ್ಯದ ಮೇಲಾದ ಪ್ರಭಾವ, ಪ್ರೇರಣೆ ಮತ್ತು ಶೈಲಿಯ ಕುರಿತು ವಿವರಿಸಲಾಗಿದೆ.
* ಅಧ್ಯಾಯ ಏಳು ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಚರ್ಚಿಸಲಾಗಿದೆ.

## ಅಧ್ಯಯನದ ವ್ಯಾಪ್ತಿ

ಈ ಅಧ್ಯಯನವು ಚಿತ್ರಕಲಾವಿದ, ವಿಮರ್ಶಕ, ಕಲಾಸಾಹಿತಿಯೆಂದು ಗುರುತಿಸಿಕೊಂಡಿರುವ ಚಿ.ಸು.ಕೃಷ್ಣಸೆಟ್ಟಿ ಯವರ ಜೀವನ ಸಾಧನೆ ಕುರಿತ ಅಧ್ಯಯನವಾಗಿರುವುದರಿಂದ ಬಾಲ್ಯ ಪರಿಸರ,

ಬಾಲ್ಯಶಿಕ್ಷಣ, ಶೈಕ್ಷಣಿಕ ಶಿಕ್ಷಣ, ಕಲಾಶಿಕ್ಷಣ, ವೃತ್ತಿ ಬದುಕು, ಸಾಧನೆ, ಪ್ರಶಸ್ತಿ, ಸನ್ಮಾನಗಳು ಮತ್ತು ಇತರೆ ಹವ್ಯಾಸಗಳನ್ನು ವಿವೇಚಿಸುವುದರ ಜೊತೆಗೆ ಕಲಾವಿದರ ಕಲಾಕೃತಿಗಳು, ಬರಹಗಳು, ವಿಮರ್ಶೆಗಳ ಸುತ್ತ ಸಂಶೋಧಿಸುವ ವ್ಯಾಪ್ತಿಯನ್ನು ಮಾತ್ರ ಈ ಅಧ್ಯಯನವು ಹೊಂದಿದೆ.

## ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಎರಡು ರೀತಿಯ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ. ವ್ಯಕ್ತಿ ಅಧ್ಯಯನದ ವಿಧಾನದಲ್ಲಿ ಕಲಾವಿದ. ಕಲಾ ವಿಮರ್ಶಕ ಚಿ.ಸು. ಕೃಷ್ಣಸೆಟ್ಟಿ ಅವರ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

೧. ಮೂಲ ಆಕರ ಸಾಮಗ್ರಿ

೨. ಆನುಷಂಗಿಕ ಆಕರ ಸಾಮಗ್ರಿ

## ೧. ಮೂಲ ಆಕರ ಸಾಮಾಗ್ರಿ

ಸಂಶೋಧನೆಯಲ್ಲಿ ಕ್ಷೇತ್ರಕಾರ್ಯವು ತುಂಬಾ ಮುಖ್ಯವಾದದ್ದು, ಈ ಆಕರ ಸಾಮಾಗ್ರಿಯಿಂದ ವಿಷಯ ಸಂಗ್ರಹಣೆ ಮಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಕಲಾವಿದರನ್ನು ಪರಿಚಯಿಸಿಕೊಂಡು ಅವರಿದ್ದಲ್ಲಿಗೆ ಹೋಗಿ ಸಂದರ್ಶನ ಮಾಡುವುದು. ಕಲಾಕೃತಿಗಳ ಛಾಯಾಚಿತ್ರ ಮಾಡುವುದು, ಲೇಖನ, ಬರಹಗಳ ಕೃತಿ, ವಿಮರ್ಶೆಯ ಸ್ವರೂಪದ ಕುರಿತು ಸಮಗ್ರ ಚರ್ಚೆ ಹಾಗೂ ಶೋಧನೆಯ ಜೊತೆ ಅವರ ಜೀವನದ ಪ್ರಮುಖ ಘಟ್ಟಗಳ ಕುರಿತು ವಿವರವನ್ನು ಪಡೆಯುವುದು ಕಲಾವಿದರ ವೃತ್ತಿಯಲ್ಲಿನ ಕಲಾನಿಷ್ಠೆ ಹಾಗೂ ಅವರ ಕಲಾಕೃತಿಗಳ ಕುರಿತು ತಂತ್ರ, ಶೈಲಿ, ರಚನಾ ವಿಧಾನ, ವಸ್ತು ವಿಷಯಾಂಶಗಳು ಮುಂತಾದವುಗಳನ್ನು ತಿಳಿಯುವಲ್ಲಿ ವಿವಿಧ ಸಂದರ್ಶನಗಳನ್ನು ನಡೆಸಿ ವಿಷಯ ಪಡೆದುಕೊಳ್ಳುವ ನಿಟ್ಟಿನಲ್ಲಿ ಪ್ರಶ್ನಾವಳಿಗಳನ್ನು ತಯಾರಿಸಿಕೊಂಡು ಸಂದರ್ಶನದ ಮೂಲಕ ಪಡೆದ ಅಂಶಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗುವುದು.

## ೨. ಆನುಷಂಗಿಕ ಆಕರ ಸಾಮಗ್ರಿ

ಇದರಲ್ಲಿ ಈವರೆಗೆ ಕಲೆಗೆ ಸಂಬಂಧಿಸಿ ಲೇಖನಗಳು, ಬರಹಗಳು, ಸಂಶೋಧನ ಮಹಾಪ್ರಬಂಧಗಳು, ಪ್ರಕಟಿತ ಹಾಗೂ ಅಪ್ರಕಟಿತ ಕಲಾವಿದರ ಕುರಿತಾದ ಕಲಾ ಸಾಹಿತ್ಯ ಕೃತಿಗಳು, ನಿಘಂಟುಗಳು, ವಿಶ್ವಕೋಶಗಳು, ಕಲಾವಿದರ ಕುರಿತು ಬಂದ ಪತ್ರಿಕಾ ಪ್ರಕಟಣೆಗಳು ಮತ್ತು ಅಭಿಪ್ರಾಯ ಲೇಖನಗಳ ಹಾಗೂ ಸಂಶೋಧನಾ ಲೇಖನಗಳನ್ನು ಇದರಲ್ಲಿ ಬಳಸಿಕೊಳ್ಳುವುದು. ವಿವಿಧ ಮೂಲಗಳಿಂದ ಸಂಗ್ರಹಿಸಲಾದ ಮಾಹಿತಿಯನ್ನು ಒಂದೆಡೆ ಕಲೆಹಾಕಿ, ವಿದ್ವಾಂಸರ

ಅಭಿಪ್ರಾಯಗಳನ್ನು ಪಡೆದು ತಾತ್ವಿಕವಾಗಿ ಚಿಂತಿಸಿ ಈ ಪ್ರಬಂಧವನ್ನು ರಚಿಸಲಾಗಿದೆ. ಈ ಪ್ರಬಂಧದ ವಿವಿಧ ಅಧ್ಯಾಯಗಳಲ್ಲಿ ಅಡಕವಾಗಿರುವ ಸಂಕ್ಷಿಪ್ತ ಮಾಹಿತಿ ಈ ಮುಂದಿನಂತಿದೆ.

ಅಧ್ಯಾಯ ಒಂದು

**ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ**

ಪ್ರಸ್ತಾವನೆಯ ಸ್ವರೂಪದಲ್ಲಿರುವ ಈ ಅಧ್ಯಾಯದಲ್ಲಿ ಅಧ್ಯಯನದ ಅವಶ್ಯಕತೆ, ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ ಮೊದಲಾದ ಅಂಶಗಳನ್ನು ವಿವರಿಸಲಾಗಿದೆ.

ಅಧ್ಯಾಯ ಎರಡು

**ಚಿ.ಸು. ಕೃಷ್ಣಸೆಟ್ಟಿ ಬಾಲ್ಯ ಪರಿಸರ, ವಿದ್ಯಾಭ್ಯಾಸ ಮತ್ತು ವೃತ್ತಿ ಜೀವನ**

ಕಲಾವಿಮರ್ಶಕ ಚಿ.ಸು. ಕೃಷ್ಣಸೆಟ್ಟಿಯವರು ಬಾಲ್ಯ ಪರಿಸರವನ್ನು ತೀರ್ಥಹಳ್ಳಿಯಲ್ಲಿ ಕಳೆದರು. ಮಾಧ್ಯಮಿಕ ಶಿಕ್ಷಣವು ಕೂಡ ಇಲ್ಲಿಯೇ ಮುಗಿಸುತ್ತಾರೆ. ಪ್ರೌಢಶಿಕ್ಷಣವನ್ನು ಚಿತ್ರದುರ್ಗ ಜಿಲ್ಲೆ ಮಲ್ಲಾಡಿಹಳ್ಳಿ ವಸತಿಯುತ ಶಾಲೆಯಲ್ಲಿ ಮುಗಿಸುವರು. ದಾವಣಗೆರೆಯ ಚಿತ್ರಕಲಾ ಶಾಲೆಯಲ್ಲಿ ಚಿತ್ರಕಲಾ ಪದವಿಯನ್ನು ಮುಗಿಸಿರುವ ಚಿ.ಸು. ಕೃಷ್ಣಸೆಟ್ಟಿಯವರು, ಇಲ್ಲಿಯೇ ಉಪನ್ಯಾಸಕರಾಗಿ ವೃತ್ತಿ ಆರಂಭಿಸಿದರು. ನಂತರ ಪತ್ರಿಕಾ ಸಂಬಂಧದಿಂದ ಚಿತ್ರಕಲಾವಿದರ ಕಲಾಕೃತಿಗಳ ವಿಮರ್ಶೆಗಳನ್ನು ಮಾಡುವುದರ ಜೊತೆಗೆ ಕಲೆಗೆ ಸಂಬಂಧಿಸಿದ ಲೇಖನಗಳನ್ನು ಬರೆದು ಯಶಸ್ವಿಯಾಗಿದ್ದಾರೆ ಇತ್ಯಾದಿ ವಿವರಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಅಧ್ಯಾಯ ಮೂರು

**ಚಿ.ಸು. ಕೃಷ್ಣಸೆಟ್ಟಿ ಕಲಾ ಸಾಹಿತ್ಯ ಮತ್ತು ಕಲಾವಿಮರ್ಶೆ**

ಚಿ.ಸು.ಕೃಷ್ಣಸೆಟ್ಟಿಯವರು ಕರ್ನಾಟಕದ ಹೆಸರಾಂತ ಕಲಾ ಸಾಹಿತಿ ಹಾಗೂ ಕಲಾವಿಮರ್ಶಕರಲ್ಲಿ ಒಬ್ಬರು. ಹಾಗೆಯೇ ಅನೇಕ ಲೇಖನಗಳನ್ನು ಕಲೆಗೆ ಸಂಬಂಧಿಸಿದಂತೆ ರಚಿಸಿರುತ್ತಾರೆ ಹಾಗೂ ಕಲಾವಿಮರ್ಶ ಬರಹಗಾರರಾಗಿ ಇಪ್ಪತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿರುತ್ತಾರೆ. ಅವರ ಸಾಹಿತ್ಯ ಮತ್ತು ವಿಮರ್ಶೆಗಳ ಬರಹಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕು

**ಚಿ.ಸು. ಕೃಷ್ಣಸೆಟ್ಟಿಯವರ ಕಲಾಕೃತಿಗಳು**

ಚಿತ್ರಕಲಾವಿದರಾಗಿರುವ ಚಿ.ಸು.ಕೃಷ್ಣಸೆಟ್ಟಿಯವರು ವಿವಿಧ ಮಾಧ್ಯಮಗಳಲ್ಲಿ ಚಿತ್ರಗಳನ್ನು ರಚನೆ ಮಾಡಿದ್ದಾರೆ. ಸುಮಾರು ಇನ್ನೂರಕ್ಕೂ ಹೆಚ್ಚು ಕಲಾಕೃತಿಗಳು ಪ್ರದರ್ಶನ ಗೊಂಡಿದ್ದು

ಅವರದೇ ಆದ ಭಿನ್ನತೆಗೆ ಪ್ರಮುಖ ಕಾರಣಗಳಾಗಿವೆ. ಅಂತಹ ವಿಶೇಷವುಳ್ಳಂತಹ ಚಿತ್ರ ಕೃತಿಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಐದು

**ಚಿ.ಸು. ಕೃಷ್ಣಸೆಟ್ಟಿಯವರ ಕಲಾ ಚಟುವಟಿಕೆಗಳು**

ಕಲಾವಿದ, ಕಲಾವಿಮರ್ಶಕ ಚಿ.ಸು. ಕೃಷ್ಣಸೆಟ್ಟಿಯವರು. ಕರ್ನಾಟಕ ಲಲಿತಕಲಾ ಅಕಾಡೆಮಿಯಲ್ಲಿ ಸುಮಾರು ಇಪ್ಪತ್ತು ವರ್ಷಗಳ ಕಾಲ ಸದಸ್ಯತ್ವವನ್ನು ಹೊಂದಿ ವಿವಿಧ ಹೊಸ ಕಾರ್ಯಕ್ರಮಗಳನ್ನು ಆಯೋಜಿಸಿದವರು. ಕರ್ನಾಟಕದ ಕಲೆಯ ಕುರಿತು ಅನೇಕ ವಿಚಾರ ಸಂಕಿರಣ ನಡೆಸಿದವರು. ಹಾಗೆಯೇ ಕಲಾ ಶಿಬಿರ, ಪ್ರದರ್ಶನಗಳಲ್ಲಿ ಭಾಗವಹಿಸಿದವರು. ಇಂತಹ ಅನೇಕ ಪ್ರಮುಖ ಚಟುವಟಿಕೆಗಳ ಕುರಿತು ವಿವರಣಾತ್ಮಕವಾಗಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಆಧ್ಯಾಯ ಆರು

**ಕಲಾಕೃತಿ ಮತ್ತು ಕಲಾ ಸಾಹಿತ್ಯದ ಮೇಲಾದ ಪ್ರಭಾವ,**
**ಪ್ರೇರಣೆ, ಶೈಲಿ ಮತ್ತು ಪ್ರಮುಖ ವೈಲಕ್ಷಣಗಳು**

ಕಲಾವಿದ ಚಿ.ಸು. ಕೃಷ್ಣಸೆಟ್ಟಿ ಅವರ ಕಲಾಕೃತಿ ಹಾಗೂ ಕಲಾ ಸಾಹಿತ್ಯದ ಮೇಲಾದ ಪ್ರಭಾವ, ಪ್ರೇರಣೆ, ಶೈಲಿ ಮತ್ತು ಪ್ರಮುಖ ವೈಲಕ್ಷಣಗಳ ಕುರಿತು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಅಧ್ಯಾಯ ಏಳು

**ಸಮಾರೋಪ**

ಪ್ರಸ್ತುತ ಅಧ್ಯಾಯವು ಸಮಾರೋಪವಾಗಿದ್ದು, ಎಲ್ಲಾ ಅಧ್ಯಾಯಗಳ ಕುರಿತು ಸವಿಸ್ತಾರವಾದ ವಿಷಯವನ್ನು ಚರ್ಚೆಗೆ ಒಳಪಡಿಸುವುದರ ಜೊತೆ ವಿಶ್ಲೇಷಣೆಯನ್ನು ಹೇಳುವುದರ ಮೂಲಕ ಈ ಅಧ್ಯಯನದಿಂದ ಕಂಡುಕೊಂಡ ಮಹತ್ತರವಾದ ಅಂಶಗಳನ್ನು ಫಲಿತಗಳ ರೂಪದಲ್ಲಿ ವಿವರಿಸಲಾಗುವುದು.

ಪ್ರಬಂಧದ ಅಂತ್ಯದಲ್ಲಿ ಈ ಅಧ್ಯಯನಕ್ಕೆ ಪೂರಕವಾದ ಗ್ರಂಥಋಣ, ಅನುಬಂಧ ಮತ್ತು ಚಿ.ಸು.ಕೃ.ಸೆ.ಯವರ ಮತ್ತು ಅವರ ಕಲಾಕೃತಿಗಳ ಛಾಯಚಿತ್ರಗಳನ್ನು ನೀಡಲಾಗಿದೆ. ಇವುಗಳು ಮುಂದಿನ ಸಂಶೋಧನಾಧ್ಯಯನಗಳಿಗೆ ಸಹಾಯಕವಾಗಿವೆ.

# ಅಧ್ಯಾಯ: ಎರಡು

# ಚಿ.ಸು.ಕೃಷ್ಣಸೆಟ್ಟಿ ಬಾಲ್ಯಪರಿಸರ, ವಿದ್ಯಾಭ್ಯಾಸ ಮತ್ತು ವೃತ್ತಿ ಜೀವನ



ಅಧ್ಯಾಯ: ಎರಡು

# ಚಿ.ಸು.ಕೃಷ್ಣಸೆಟ್ಟಿ ಬಾಲ್ಯಪರಿಸರ, ವಿದ್ಯಾಭ್ಯಾಸ ಮತ್ತು ವೃತ್ತಿ ಜೀವನ

ಪ್ರತಿಯೊಬ್ಬ ಸಾಧಕನ ಬೆನ್ನ ಹಿಂದೆ ಅವನು ಬೆಳೆದ ಪರಿಸರ ಮತ್ತು ಅವನ ಕುಟುಂಬದ ಪ್ರಭಾವ ಸಾಕಷ್ಟು ಇರುತ್ತದೆ. ಮಾನವ ಪ್ರಕೃತಿಯ ಶಿಶುವಾಗಿರುವುದರಿಂದ ಅವನು ಸದಾ ಪ್ರಕ್ರತಿ ಅಥವಾ ಪರಿಸರವನ್ನು ಅವಲಂಬಿಸಿಕೊಂಡೇ ತನ್ನ ಬದುಕನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ನಮ್ಮ ನೆರೆಹೊರೆ ಹೇಗಿರುತ್ತದೆಯೊ ಹಾಗೆಯೇ ನಮ್ಮ ಪ್ರವೃತ್ತಿ, ನಡೆ ನುಡಿಗಳು ಸಹಜವಾಗಿಯೇ ರೂಪುಗೊಳ್ಳುತ್ತವೆ. ಒಟ್ಟಾರೆ ಒಬ್ಬ ಯಶಸ್ವಿ ಮನುಷ್ಯನ ಹಿಂದೆ ಪರಿಸರ ತನ್ನದೇ ಆದ ಕೊಡುಗೆಯನ್ನು ನೀಡಿರುತ್ತದೆ ಎಂಬುದನ್ನು ನಾವು ಗುರುತಿಸಬಹುದು. ಇದೇ ರೀತಿಯ ಪರಿಸರದ ಪ್ರಭಾವ ಚಿ.ಸು.ಕೃಷ್ಣಸೆಟ್ಟಿಯವರ ಮೇಲಾಗಿರುವುದನ್ನು ನಾವು ಗುರುತಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಅವರ ಜೀವನಕ್ಕೆ ಸಂಬಂಧಿಸಿದ ವಿವರಗಳನ್ನು ಈ ಮುಂದೆ ವಿವರಿಸಲಾಗಿದೆ.

## ಚಿ.ಸು.ಕೃಷ್ಣಸೆಟ್ಟಿಯವರ ಕುಟುಂಬದ ಹಿನ್ನೆಲೆ

ತುಮಕೂರು ಜಿಲ್ಲೆಯ ಚಿಕ್ಕನಾಯ್ಕನಹಳ್ಳಿಯಲ್ಲಿ "ಪೈಡಾಲ್" ಎಂಬ ದೊಡ್ಡ ಕೃಷಿಕ ಮನೆತನವಿತ್ತು. ಈ ಕುಟುಂಬ ಅವಿಭಕ್ತ ಕುಟುಂಬವಾಗಿದ್ದು, ಅದರಲ್ಲಿ ಇವರ ತಂದೆ, ಅಜ್ಜಂದಿರು ತಮ್ಮ ಸಹೋದರ ಮತ್ತು ಸಹೋದರಿಯರೊಂದಿಗೆ ವಾಸಿಸುತ್ತಿದ್ದರು. ಈ ದೊಡ್ಡ ಕುಟುಂಬದಲ್ಲಿ ಅಂದು ಜೀವಿಸಿದ್ದವರಲ್ಲಿ ಇವರ ತಂದೆ ಸುಬ್ಬಯ್ಯಸೆಟ್ಟಿಯವರು ಸಹಾ ಒಬ್ಬರಾಗಿದ್ದರು. ಇವರದು ಕೂಡು ಕುಟುಂಬವಾಗಿದ್ದರಿಂದ ಸುಬ್ಬಯ್ಯಸೆಟ್ಟಿ ತಮ್ಮ ಚಿಕ್ಕ ವಯಸ್ಸಿನಲ್ಲಿರುವಾಗಲೇ ಅನಿವಾರ್ಯವಾಗಿ ದುಡಿಮೆಯ ಕಡೆಗೆ ಒಲವು ತೋರಿದರು. ಇವರಿಗೆ ಡ್ರೈವಿಂಗ್ ಎಂದರೆ ಬಲುಪ್ರೀತಿ, ಆದ್ದರಿಂದ ಆ ಕಾಯಕಕ್ಕೆ ಅವರು ತುಂಬಾ ಗೌರವ ನೀಡುತ್ತಿದ್ದರು. ಸುಬ್ಬಯ್ಯನವರು ಆ ಕಾರಣಕ್ಕಾಗಿ

ಅಂದು ಡ್ರೈವಿಂಗ್‌ನ್ನು ವೃತ್ತಿಯನ್ನಾಗಿ ಆಯ್ಕೆ ಮಾಡಿಕೊಂಡು ಅದರಲ್ಲಿ ತುಂಬಾ ಪ್ರಾಮಾಣಿಕವಾಗಿ ದುಡಿಯುತ್ತಾ ಸ್ಥಳೀಯವಾಗಿ ಗುರುತಿಸಿಕೊಂಡಿದ್ದರು. ಒಮ್ಮೆ ಶಿವಮೊಗ್ಗ ಪಟ್ಟಣದ ಶ್ರೀ ಗಣೇಶ ರೈಸ್ ಮಿಲ್/ಫ್ಯಾಕ್ಟರಿಯೊಂದರಿಂದ ಲಾರಿ ಚಾಲಕನ ಕೆಲಸ ಖಾಲಿಯಿದೆ, ತಾವು ಇಚ್ಛಿಸಿದಲ್ಲಿ ಈ ಕೆಲಸಕ್ಕೆ ಬಂದು ಸೇರಿಕೊಳ್ಳಬಹುದೆಂಬ ಆಹ್ವಾನ ಸುಬ್ಬಯ್ಯನವರಿಗೆ ಬರುತ್ತದೆ. ಇದರಿಂದ ಆಶ್ಚರ್ಯ ಚಕಿತರಾದ ಸುಬ್ಬಯ್ಯನವರು ಏನೂ ತೋಚದಂತಾಗಿ ತನ್ನ ತಂದೆಯ ಸಲಹೆಯನ್ನು ಕೇಳಿದರು. ಆ ಸಂದರ್ಭದಲ್ಲಿ ಅವರ ತಂದೆಯವರು "ನೀನು ಬೇರೆಡೆ ಹೋಗಿ ಕೆಲಸ ಮಾಡುವುದರಲ್ಲಿ ನನ್ನ ತಕಾರಾರೇನೂ ಇಲ್ಲ. ಇಷ್ಟವಿದ್ದರೆ ಖಂಡಿತಾ ಬಿಡಬೇಡ, ಅರಸಿಬಂದ ಭಾಗ್ಯ ಅದರಲ್ಲೂ ನಿನಗೆ ಡ್ರೈವರ್ ಕೆಲಸ ತುಂಬಾ ಇಷ್ಟವೂ ಕೂಡ, ತಡಮಾಡದೇ ಕೆಲಸಕ್ಕೆ ಸೇರಿಕೊ" ಎಂದು ಸಲಹೆ ನೀಡಿದರು. ಆಗ ತಕ್ಷಣವೇ ಸುಬ್ಬಯ್ಯನವರು ಹಿರಿಯರ ಆಶೀರ್ವಾದ ಪಡೆದು ೧೯೪೭೦ರ ಮೇ ತಿಂಗಳಲ್ಲಿ ಶಿವಮೊಗ್ಗಕ್ಕೆ ಬಂದು ಶ್ರೀ ಗಣೇಶ ರೈಸ್ ಮಿಲ್‌ನಲ್ಲಿ ಲಾರಿ ಚಾಲಕರಾಗಿ ಸೇರ್ಪಡೆಯಾಗಿ ತಮ್ಮ ವೈಯಕ್ತಿಕ ಬದುಕನ್ನು ರೂಪಿಸಿಕೊಂಡರು.

ಸುಬ್ಬಯ್ಯನವರು ಇಲ್ಲಿ ಉತ್ತಮವಾದ ಕಾಯಕವನ್ನು ಮಾಡುವುದರ ಜೊತೆ ಉತ್ತಮ ಸ್ನೇಹಿತರ ಗುಂಪಲ್ಲಿ ಒಬ್ಬ ಸದಸ್ಯರಾಗಿ ಸೇರ್ಪಡೆಗೊಂಡು ವಿವಿಧ ಊರುಗಳಿಗೆ ಭೇಟಿ ನೀಡುವುದರ ಮೂಲಕ ತನ್ನ ನಿಷ್ಠೆಯನ್ನು ತೋರ್ಪಡಿಸಿದರು. ಸುಬ್ಬಯ್ಯನವರ ಗುಣವೇನೆಂದರೆ ಎಂತಹವರ ಮನಸ್ಸಿಗೂ ಬಹುಬೇಗನೇ ಹತ್ತಿರವಾಗುವುದು. ಇದರಿಂದಲೊ ಏನೋ ಅಸಂಖ್ಯಾತ ಸ್ನೇಹ ಬಳಗ ಅಂದು ಸುಬ್ಬಯ್ಯನವರದಾಗಿತ್ತು. ಸಾಮಾನ್ಯ ಲಾರಿ ಡ್ರೈವರ್‌ನಾದವನಿಗೆ ಇಷ್ಟೊಂದು ಜನರ ಪರಿಚಯವೇ ಎಂದು ಶಿವಮೊಗ್ಗದ ರೈಸ್‌ಮಿಲ್ ಮಾಲೀಕ ತಮ್ಮ ಮೂಗಿನ ಮೇಲೆ ಬೆರಳನ್ನಿರಿಸಿಕೊಂಡಿದ್ದರು. ಹಾಗೇ ಸರಾಗವಾಗಿ ಸಾಗಲಾರಂಭಿಸಿದ ಇವರ ಜೀವನದ ದಾರಿಯಲ್ಲಿ ಸಾಕಷ್ಟು ಕಲ್ಲು, ಮುಳ್ಳುಗಳಿದ್ದವು. ಸುಬ್ಬಯ್ಯನವರಿಗೆ ಕಲ್ಲುಮುಳ್ಳುಗಳಿಗಿಂತ ಹೂವಿನ ರಹದಾರಿಯೇ ಹಾಸಿತ್ತು. ಹಂತ ಹಂತವಾಗಿ ಕೆಲಸದಲ್ಲಿ ನಿಷ್ಠೆ, ಪ್ರಾಮಾಣಿಕತೆಯಿಂದ ದುಡಿದು ಅನುಭವ ಪಡೆಯಬೇಕೆಂಬ ಹಂಬಲವನ್ನು ಹೊಂದಿದ್ದ ಸುಬ್ಬಯ್ಯ ಹಗಲು-ರಾತ್ರಿಯೆನ್ನದೆ ದುಡಿಯಲು ಶುರುಮಾಡಿದರು. ಇದನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸುತ್ತಿದ್ದ ತೀರ್ಥಹಳ್ಳಿಯ ರೈಸ್‌ಮಿಲ್ ಮಾಲಿಕ ರಮಣಶಾಸ್ತ್ರಿ, ತಮ್ಮ ಫ್ಯಾಕ್ಟರಿಗೆ ಆಹ್ವಾನವಿತ್ತರು. ಇದರಿಂದ ಸಂತೋಷಗೊಂಡ ಸುಬ್ಬಯ್ಯ ೧೯೫೧ರಲ್ಲಿ ಶಿವಮೊಗ್ಗ ಜಿಲ್ಲೆಯ ಮಲೆನಾಡ ಸಿರಿ ಎಂತಲೇ ಬಿಂಬಿತವಾಗಿರುವ ಜ್ಞಾನಪೀಠ ಪ್ರಶಸ್ತಿ ವಿಜೇತ, ನಾಡಿನ ಸುಪ್ರಸಿದ್ದ ಕವಿ ಕುಪ್ಪಳ್ಳಿ, ವೆಂಕಟಪ್ಪ, ಪುಟ್ಟಪ್ಪ(ಕುವೆಂಪು)ನ ಜನ್ಮ ಸ್ಥಳವಾದ 'ತೀರ್ಥಹಳ್ಳಿ'ಗೆ ಸಂತೋಷದಿಂದಲೇ ಕಾಲಿಟ್ಟರು. ಶಿವಮೊಗ್ಗಕ್ಕೆ ಹೊಸದಾಗಿ ಬಂದ ಆರು ತಿಂಗಳಿಗೆ ಚಿಕ್ಕನಾಯಕನ ಹಳ್ಳಿಯ ಕು.ಸರೋಜಮ್ಮ ಎಂಬುವವರ ಜೊತೆ ಸುಬ್ಬಯ್ಯನವರ ಮದುವೆಯಾಯಿತು. ನಂತರ

ತೀರ್ಥಹಳ್ಳಿಯ ಪ್ಯಾಕ್ಟರಿಯಲ್ಲಿ ನಾಲ್ಕು ವರ್ಷ ಉತ್ತಮ ಸೇವೆ ಸಲ್ಲಿಸಿದ ಮೇಲೆ ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಂಡರು. ನಂತರ ಅಲ್ಲಿನ ರಥಬೀದಿಯಲ್ಲಿ ಪ್ರತ್ಯೇಕ ಬಾಡಿಗೆ ಮನೆಯೊಂದನ್ನು ಮಾಡಿ ಅಲ್ಲಿಗೆ ತನ್ನ ಕುಟುಂಬವನ್ನೆಲ್ಲಾ ಕರೆಸಿಕೊಂಡರು. ಆಗ ಇವರ ಪತ್ನಿ ಸರೋಜಮ್ಮ ಮೂರನೆ ಮಗುವಿಗೆ ಗರ್ಭವತಿಯಾಗಿದ್ದು, ತನ್ನ ಉಳಿದ ಎರಡು ಮಕ್ಕಳೊಂದಿಗೆ ಇಲ್ಲಿಗೆ ಸಂತೋಷದಿಂದ ಆಗಮಿಸಿ 'ಚಿಕ್ಕ ಸಂಸಾರ ಚೊಕ್ಕಸಂಸಾರದಂತೆ' ತಮ್ಮ ಜೀವನವನ್ನು ಯಶಸ್ವಿಯಾಗಿ ನಿರ್ವಹಿಸಿದರು.

ಕಾಲಕ್ರಮೇಣ ಡ್ರೈವಿಂಗ್ ಕೆಲಸವನ್ನು ಮಾಡುತ್ತಲೇ ತಮ್ಮ ವ್ಯವಹಾರ ಜ್ಞಾನವನ್ನು ವಿಸ್ತರಿಸಿಕೊಂಡ ಮೇಲೆ ತಾನೇ ಸ್ವತಃ ಒಂದು "ರೈಸ್‌ಮಿಲ್" ಮತ್ತು "ಕಾಫಿವರ್ಕ್ ಶೋರೂಂ'ಗಳನ್ನು ತೆರೆದರೆ ಜೀವನ ಸುಖಮಯವಾಗಬಹುದೆಂಬ ಅಲೋಚನೆ ಇವರಲ್ಲಿ ಬಂತು. ಈ ಆಕಾಂಕ್ಷೆ ಮತ್ತು ಆಲೋಚನೆಗೆ ತಮ್ಮ ಮನೆಯವರ ಬೆಂಬಲ ದೊರೆಯಿತು. ಇದರಿಂದ ಪ್ರೇರೇಪಣೆಗೊಂಡ ಇವರು ಅಲ್ಪ ದಿನಗಳಲ್ಲಿಯೇ "ರೈಸ್‌ಮಿಲ್" ಮತ್ತು "ಕಾಫಿವರ್ಕ್ ಶೋರೂಂ'ಗಳನ್ನು ತೆರೆದು ಅದರಿಂದ ಬರುವ ಲಾಭದಿಂದ ಜೀವನ ಮಾಡಲು ಶುರುಮಾಡಿದರು. ಆದರೆ ವ್ಯವಹಾರದಲ್ಲಿ ಸ್ವಲ್ಪ ನಷ್ಟವುಂಟಾಗಿದ್ದರಿಂದ ಸುಬ್ಬಯ್ಯ ಸೆಟ್ಟಿಯವರು ತಾತ್ಕಾಲಿಕವಾಗಿ ಕಷ್ಟದ ಜೀವನ ಸಾಗಿಸಿದರು.

## ಚಿ.ಸು.ಕೃಷ್ಣಸೆಟ್ಟಿಯವರ ಜನನ ಮತ್ತು ಬಾಲ್ಯ

ಸುಬ್ಬಯ್ಯಸೆಟ್ಟಿ ಮತ್ತು ಸರೋಜಮ್ಮ ದಂಪತಿಗೆ ಮೂರನೇ ಮಗನಾಗಿ ೧೭ ಆಗಸ್ಟ್ ೧೯೫೨ರಲ್ಲಿ ಜನಿಸಿದವರೇ ಚಿಕ್ಕನಾಯಕನಹಳ್ಳಿ ಕೃಷ್ಣಮೂರ್ತಿ ಆಲಿಯಾಸ್ ಚಿ.ಸು.ಕೃಷ್ಣಸೆಟ್ಟಿ. ತದನಂತರ ಒಬ್ಬಳು ತಂಗಿ, ಮತ್ತಿಬ್ಬರು ತಮ್ಮಂದಿರು ಜನಿಸಿದರು. ಈ ದಂಪತಿಗೆ ಒಟ್ಟು ಆರು ಜನ ಮಕ್ಕಳಿದ್ದು, ಮೂರನೆಯವರು ಕೃಷ್ಣಮೂರ್ತಿ, ನಾಲ್ಕನೆಯವಳು ಶಾರದ, ಐದನೆಯವನು ವಿಶ್ವನಾಥ ಮತ್ತು ಕೊನೆಯವನು ಮಂಜುನಾಥ ಎಂಬುವವರು.

ತಮ್ಮ ಬಾಲ್ಯವನ್ನು ಕೃ.ಸೆ.ಯವರು ತೀರ್ಥಹಳ್ಳಿ ಪರಿಸರದಲ್ಲಿ ಕಳೆದರೆಂಬುದೊಂದು ವಿಶೇಷ. ನಿಸರ್ಗದ ಸೊಬಗನ್ನು ತನ್ನ ಒಡಲಲ್ಲಿ ಕಟ್ಟಿಕೊಂಡು ಸಮೃದ್ಧಿಯನ್ನು ಸೂಸುತ್ತಿರುವ ಮಲೆನಾಡಿನ ಊರದು. ಈ ಊರಲ್ಲಿ ರಥ ಬೀದಿಯೊಂದಿತ್ತು. ಅದರ ತುದಿಯಲ್ಲಿ ತುಂಗಭದ್ರ ನದಿ, ಅದು ಬಂಡೆಗಳ ನಡುವೆ ಸದ್ದುಗದ್ದಲದಿಂದ ಮೈತುಂಬಿ ಹರಿಯುತ್ತಿತ್ತು. ನದಿಯ ದಡದ ಮೇಲಿನ ಮರಳು, ಅಲ್ಲಿನ ಸುಯ್‌ಗುಟ್ಟುತ್ತಾ ತಂಪೆರೆಯುವ ಗಾಳಿಯೊಂದುಕಡೆಯಾದರೆ, ದಡದ ಮೇಲಿಂದ ಎತ್ತ ನೋಡಿದರತ್ತ ಸುತ್ತಲೂ ಬೃಹತ್ತಾದ ಗಿಡ, ಮರ, ಬೆಟ್ಟ-ಗುಡ್ಡಗಳೇ. ಅದೊಂದು ರಮ್ಯನೋಟ. ಇಂತಹ ಸುಂದರ ದೃಶ್ಯಗಳನ್ನು ತನ್ನ ತೆಕ್ಕೆಯಲ್ಲಿ ಬಾಚಿಕೊಂಡಿದ್ದ ನಿಸರ್ಗ ಸೌಂದರ್ಯಕ್ಕೆ

ಎಂತಹವರೂ ತಲೆಬಾಗಲೇ ಬೇಕು ಅಂತಹ ಸ್ಥಳದಲ್ಲಿ ಹುಟ್ಟಿ ಬೆಳದ ಹೆಗ್ಗಳಿಕೆ ಚಿ.ಸು.ಕೃಷ್ಣಸೆಟ್ಟಿಯವರಿಗೆ ಸಲ್ಲುತ್ತದೆ.

ಚಿ.ಸು.ಕೃಷ್ಣಸೆಟ್ಟಿಯವರು ಹುಟ್ಟಿದ ಬೀದಿಯಲ್ಲಿ ಹೆಚ್ಚಾಗಿ ಗೌಡ ಸಾರಸ್ವತ ಬ್ರಾಹ್ಮಣರೇ ವಾಸಿಸುತ್ತಿದ್ದರು. ಅವರ ಹಿಂದೆ ಅಲ್ಪ ಕೊಂಕಣಿ ಕುಟುಂಬಗಳಿದ್ದವು. ಇವರೊಂದಿಗೆ ಆರ್ಯವೈಶ್ಯ ಸಮುದಾಯಕ್ಕೆ ಸೇರಿದ ಕೇವಲ ಒಂದು ಕುಟುಂಬ ಮಾತ್ರವಿತ್ತು. ಅದುವೇ ಚಿ.ಸು.ಕೃಷ್ಣಸೆಟ್ಟಿಯವರ ದಾಗಿತ್ತು. ತೀರ್ಥಹಳ್ಳಿ ದೊಡ್ಡ ಪಟ್ಟಣವಾಗಿದ್ದು, ಇಂತಹ ದೊಡ್ಡ ಪ್ರದೇಶದ ಸುತ್ತಲು ಹುಡುಕಿದರೂ ಒಂದು ಅಥವಾ ಎರಡು ಮನೆಗಳು ಮಾತ್ರ ಆರ್ಯವೈಶ್ಯರವು ಎನ್ನುವಷ್ಟರಮಟ್ಟಿಗೆ ಇದ್ದವು. ಈ ರೀತಿ ಅನ್ಯ ಸಮುದಾಯಗಳ ಮಧ್ಯೆಯೇ ಬೆಳೆದಿದ್ದು, ಇಲ್ಲಿನ ಪರಿಸರ ಇವರಿಗೆ ವರದಾನ ವಾಗಿದ್ದು. ಬದುಕಿನುದ್ದಕ್ಕೂ ತಾವು ಕ್ರಿಯಾಶೀಲರಾಗಲೂ ಕಾರಣವಾಯಿತು ಎಂಬುದು ಒಂದು ವಿಶಿಷ್ಟವೇ ಸರಿ.

ಆರ್ಯವೈಶ್ಯರಲ್ಲಿ ಶೆಟ್ಟಿಗೆ ಮತ್ತೊಂದು ಹೆಸರು ಶ್ರೇಷ್ಠಿ ಅನ್ನೋದು, ಇದು ಪರಂಪರೆಯಿಂದ ಬಂದ ಪದವಾಗಿದೆ. ಆಂಗ್ಲ ಭಾಷೆಯಲ್ಲಿ ಈ ಸಮುದಾಯವನ್ನು ಮರ್ಚೆಂಟ್ ಕ್ಲಾಸ್ ಎನ್ನಲಾಗುತ್ತದೆ. ಅವರನ್ನು ಶೆಟ್ಟಿ ಎಂದು ಗುರುತಿಸಲಾಗುತ್ತದೆ. ಇದನ್ನು ಕನ್ನಡದಲ್ಲಿ **ಸೆಟ್ಟಿ** ಎಂದು ಉಚ್ಚರಿಸಲಾಯಿತು[೧] ಎನ್ನುವ ಕೃಷ್ಣಸೆಟ್ಟಿಯವರು ದಕ್ಷಿಣ ಕನ್ನಡ ಭಾಗದಲ್ಲಿರುವ ಆರ್ಯವೈಶ್ಯರಿಗೆ ಮುಖ್ಯವಾಗಿ ಸೆಟ್ಟಿ ಅಂತಲೇ ಕರೀತಾರೆ. ಆದರೆ ತೀರ್ಥಹಳ್ಳಿ ಮತ್ತು ಶಿವಮೊಗ್ಗದ ಸುತ್ತಮುತ್ತಲಿನ ಪರಿಸರದಲ್ಲಿ ವಾಸಿಸುವ ಆರ್ಯ ವೈಶ್ಯರಿಗೆ ಸೆಟ್ಟಿ ಎಂಬ ಅಂಶದಿಂದ ಗುರುತಿಸಲಾಗುತ್ತದೆ. ೧೯೫೩ರ ಸುಮಾರಿಗೆ ಎರಡರಿಂದ ಮೂರು ಕುಟುಂಬಗಳು ಇದೇ ಪರಿಸರದಲ್ಲಿ ನೆಲೆ ಕಂಡುಕೊಂಡವು.

## ಬಾಲ್ಯದ ನೆನಪು

ತಿರ್ಥಹಳ್ಳಿಯಲ್ಲಿ ಕೃಷ್ಣಮೂರ್ತಿ ಅವರ ಮನೆಯ ಆವರಣವಾಗಿದ್ದ ರಥಬೀದಿಯಲ್ಲಿ ಇವರು ಆಟವಾಡುತ್ತಿದ್ದರು. ನಡೆದಾಡದ ದಾರಿಯಿಲ್ಲ. ಹಾಗೆಯೇ ಇವನ ಜೊತೆ ಯಾವಾಗಲೂ ಮೂರ್‍ನಾಲ್ಕು ಗೆಳೆಯರು ಇರುತ್ತಿದ್ದರು. ಅವರೆಲ್ಲಾ ಬ್ರಾಹ್ಮಣ ಸಮುದಾಯದವರು. ಇದು ಆ ಸಮಯದಲ್ಲಿ ಕೃ.ಸೆ.ಚುರುಕಾಗಲು ಕಾರಣವಾಯಿತಂತೆ.[೨] ಇವರು ಚಿಕ್ಕವನಿರುವಾಗಲೇ ದೇವರ ಮೇಲಿನ ಭಕ್ತಿ, ವಿದ್ಯಾಭ್ಯಾಸದಲ್ಲಿ ಆಸಕ್ತಿ ಮಿತಿಮೀರಿತ್ತು.

---

೧. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೨.೦೩.೨೦೧೫

೨. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೬.೦೩.೨೦೧೫

ಆಗಿನ ಸಂದರ್ಭದಲ್ಲಿ ವಯಸ್ಸಿಗಿಂತ ಮಿಗಲಾಗಿ ಎತ್ತರ, ದಪ್ಪ, ದಢೂತಿಯಾಗಿದ್ದರೆ ಸಾಕು ದೊಡ್ಡವನಾಗಿದ್ದಾನೆ ಎಂದು ಭಾವಿಸಿ ಶಾಲೆಗೆ ಸೇರಿಸಬಹುದೆಂದು ಅಂದಾಜಿಸಿ ಪೋಷಕರು ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸುತ್ತಿದ್ದರು. ಅದೇ ವಾಡಿಕೆಯಂತೆ ಕೃ.ಸೆ.ಯವರಿಗೆ ೧೯೫೮ರಲ್ಲಿ ಆರು ತುಂಬಿ ಏಳನೇ ವರ್ಷಕ್ಕೆ ಕಾಲಿಡುತ್ತಿರುವ ಸಂದರ್ಭದಲ್ಲಿ ಅವರ ತಂದೆ ಸುಬ್ಬಯ್ಯನವರು ತನ್ನ ಹಿರಿಯ ಮಕ್ಕಳಂತೆ ಕೃಷ್ಣನು ಕೂಡ ವಿದ್ಯಾಭ್ಯಾಸ ಮಾಡಲಿ ಎಂದು ತಮ್ಮ ಮನೆಯ ಸಮೀಪವಿರುವ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗೆ ಸೇರಿಸಿದರು. ನೋಡಲು ತುಂಬ ಚಿಕ್ಕವನಂತೆ ಕಾಣುತ್ತಿದ್ದ ಕೃ.ಸೆ. ಮೊದಲ ದಿನ ಬಹು ಅಂಜಿಕೆಯಿಂದಲೇ ಶಾಲೆಯನ್ನು ಪ್ರವೇಶಿಸಿದರು. ಶಾಲೆಯಲ್ಲಿ ಅಂದು ಹಾಜರಾತಿ ಹಾಕುವ ಸಂದರ್ಭದಲ್ಲಿ ಶಿಕ್ಷಕರು ಕೃಷ್ಣಮೂರ್ತಿ ಎನ್ನುವ ಬದಲು ಕೃಷ್ಣಸೆಟ್ಟಿ ಎಂದು ಕರೆದಾಗ ಕೃ.ಸೆ.ಯವರಿಗೆ ಆಶ್ಚರ್ಯಪಟ್ಟು, ಅದು ನಾನಲ್ಲ ಅಂದುಕೊಂಡು ತನ್ನ ಪಾಡಿಗೆ ತಾನು ಕುಳಿತಿದ್ದರು. ಆಗ ಶಿಕ್ಷಕರು ನೀನೇ ಕಣೋ ಕೃಷ್ಣಸೆಟ್ಟಿ ಎಂದರಂತೆ. ಆಗ ಅದನ್ನು ಪ್ರಶ್ನೆ ಮಾಡುವ ವಯಸ್ಸು ಕೂಡ ಅದಲ್ಲವಾದ್ದರಿಂದ ತಲೆಯಾಡಿಸಿದರಷ್ಟೆ. ಶಿಕ್ಷಕರು ಸೆಟ್ಟಿ ಎಂಬುದನ್ನು ಇಲ್ಲಿ ಸೇರಿಸಲು ಒಂದು ಸ್ಪಷ್ಟ ಕಾರಣವಿದೆ. ಅಂದು ಹೆಸರಿನ ಮುಂದೆ ತಂದೆಯ ಹೆಸರು, ಇಲ್ಲವೇ ಅಜ್ಜನ ಹೆಸರನ್ನು ಬಿಟ್ಟರೆ, ಸಮುದಾಯದ ಹೆಸರು ಸೇರಿಸುವುದು ಆಗಿನ ವಾಡಿಕೆಯಾಗಿತ್ತು. ಅದರಂತೆ ಆರ್ಯವೈಶ್ಯ ಕೃಷ್ಣಮೂರ್ತಿ ಎಂಬುದನ್ನು ಅರಿತಿದ್ದ ಶಾಲೆಯ ಶಿಕ್ಷಕ ಮೂರ್ತಿಯ ಬದಲು ಸೆಟ್ಟಿ ಎಂದು ಸೇರಿಸಿದರು ಎನ್ನುತ್ತಾರೆ ಚಿ.ಸು.ಕೃಷ್ಣಸೆಟ್ಟಿ.[೩]

ರಾಜ್ಯದ ಇತರೆಡೆಗೆ ಹೋಲಿಸಿದರೆ ತೀರ್ಥಹಳ್ಳಿಯಲ್ಲಿ ಬುದ್ಧಿವಂತರು, ವಿದ್ಯಾವಂತರು ಹೆಚ್ಚು; ಅದರಂತೆ ಇಲ್ಲಿ ಸಮಾಜವಾದಿ ಚಳುವಳಿಯ ಪ್ರಭಾವವೂ ಹೆಚ್ಚು. ಜೊತೆಗೆ ಇಲ್ಲಿ CPI(M) ಸೋಷಿಯಲಿಸ್ಟ್ ಕೂಡ ತುಂಬ ಗಟ್ಟಿ. ಸಂಘಟನೆಗಳ ದೃಷ್ಟಿಯಿಂದ ತೀರ್ಥಹಳ್ಳಿಯಲ್ಲಿ ಈ ಸಂಘಗಳು ನೆಲೆ ಕಂಡುಕೊಂಡಂತಹವು. ೧೯೬೦ರ ಸಂದರ್ಭದಲ್ಲಿಯೇ ಸಿ.ಪಿ.ಐ(ಎಂ) ನಾಯಕರಾದ ಎ.ಕೆ.ಗೋಪಾಲನ್ ನೇತೃತ್ವದಲ್ಲಿ CPI(M) (ಕೇರಳದವರು) ಸಾವಿರಾರು ಜನ ಕೆಂಪು ವಸ್ತ್ರವನ್ನು ಧರಿಸಿ ತೀರ್ಥಹಳ್ಳಿಯ ಮೂಲೆ ಮೂಲೆಗೆ ಸಂಚರಿಸಿ ಪೆರೇಡ್ ಮಾಡುವ ಮೂಲಕ ರ್‍ಯಾಲಿ ನಡೆಸುತ್ತಿದ್ದುದನ್ನು ಕೃಷ್ಣಸೆಟ್ಟಿಯವರು ತಮ್ಮ ಸ್ನೇಹಿತರೊಂದಿಗೆ ಬಾಲ್ಯದಲ್ಲೇ ತುಂಬಾ ಗಂಭೀರವಾಗಿ ಈ ಎಲ್ಲಾ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಸ್ವಾತಂತ್ರ್ಯ ಪೂರ್ವದಲ್ಲಿ ಶಾಂತವೇರಿ ಗೋಪಾಲಗೌಡರ ನೇತೃತ್ವದಲ್ಲಿ ಇಲ್ಲಿ ಸಮಾಜವಾದಿ ಚಳುವಳಿ ಸುದೀರ್ಘವಾಗಿ ನಡೆಯಿತು. ಇದು ಕಾಗೋಡು ಹೋರಾಟದ ಕೇಂದ್ರವು ಕೂಡ ಆಗಿತ್ತು. ಸಮಾಜವಾದಿಗಳು ಅಂತ ಯಾರನ್ನು ಕರೆಯುತ್ತಾರೋ ಅಂತಹವರು ಬಹಳಷ್ಟು ಜನ ಈ

---

೩. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೦೫.೦೪.೨೦೧೫

ಪ್ರದೇಶದಲ್ಲಿದ್ದರಂತೆ. ಈ ಪ್ರದೇಶವು ಸಾಹಿತ್ಯಿಕವಾಗಿ, ರಾಜಕೀಯವಾಗಿ ತುಂಬಾ ಪ್ರಬಲವಾಗಿತ್ತು. ಇದೇ ಸಂದರ್ಭದಲ್ಲಿ ಈ ಭಾಗದವರೇ ಅದ ಕಡಿದಾಳು ಮಂಜಪ್ಪನವರು ಮುಖ್ಯಮಂತ್ರಿಯಾಗಿದ್ದರು. ಇದೇ ಸಂದರ್ಭದಲ್ಲಿ ಗೋಪಾಲಗೌಡರು ವಿರೋಧಪಕ್ಷದ ನಾಯಕರಾಗಿದ್ದರು. ಇವರು ಕೂಡ ತುಂಬಾ ಗಟ್ಟಿ ಮನುಷ್ಯ. ಇಂತಹ ಒಂದು ರಾಜಕೀಯ ಮತ್ತು ಸಾಹಿತ್ಯ ವಲಯದ ಸ್ಥಳದಲ್ಲಿ ಚಿ.ಸು.ಕೃಷ್ಣಸೆಟ್ಟಿಯವರು ಹುಟ್ಟಿ ಬೆಳೆದಿದ್ದು ತಿಳಿದುಬರುತ್ತದೆ.

ಐದನೇ ತರಗತಿಯಲ್ಲಿ ಅಭ್ಯಾಸಮಾಡುತ್ತಿರುವಾಗಲೇ ಕೃಷ್ಣಶೆಟ್ಟಿ ಕಥೆ, ಕವನ(ಪ್ಯಾಂಟಸಿ)ಗಳನ್ನು ಬರೆದು ಶಿಕ್ಷಕರಿಂದ ಬೆನ್ನು ತಟ್ಟಿಸಿಕೊಳ್ಳುತ್ತಿದ್ದರು. ಆ ಕಥೆ, ಕವನಗಳನ್ನು ತನ್ನ ಸ್ನೇಹಿತರ ಮುಂದೆ ಓದುತ್ತಿದ್ದ, ಇದರಿಂದ ಆತನ ಸ್ನೇಹಿತರ ಸಂಖ್ಯೆಯು ಹೆಚ್ಚಾಯಿತು. ಆ ವಯಸ್ಸಿನಲ್ಲಿಯೇ ತೀರ್ಥಹಳ್ಳಿಯಲ್ಲಿ ಕೃಷ್ಣಸೆಟ್ಟಿಯ ಕಿರು ಕಥೆಗಳು ಲಭ್ಯವಿರುತ್ತಿದ್ದವು ಅಂದರೆ ಅಷ್ಟರಮಟ್ಟಿಗೆ ಅವರು ಅಂದು ಪ್ರಸಿದ್ಧಿಯನ್ನು ಪಡೆದಿದ್ದರು. ಶಾಲಾ ರಜಾ ದಿನಗಳು ಬಂದರೆ ಒಂದು ಕಡೆ ಸಂತಸ, ಮತ್ತೊಂದು ಕಡೆ ದುಃಖವೂ ಕೂಡ, ಕಾರಣ ಓದುವುದರ ಮೇಲಿನ ಪ್ರೀತಿ ಅಷ್ಟರಮಟ್ಟಿಗಿತ್ತು. ಆದರೂ ಅವರು ಆ ದಿನಗಳಲ್ಲಿ ಕಾಲವ್ಯಯ ಮಾಡದೇ ಹೆಚ್ಚು ಅಭ್ಯಾಸದಲ್ಲಿಯೇ ತೊಡಗಿರುತ್ತಿದ್ದರು. ಇವರ ಪ್ರಿಯವಾದ ಪತ್ರಿಕೆಯೆಂದರೆ "ಚಂದಮಾಮ" ಇದರಲ್ಲಿ ಬರುತ್ತಿದ್ದ ಪತ್ತೇದಾರಿ ಕಾದಂಬರಿಗಳನ್ನು ತುಂಬಾ ಕುತೂಹಲದಿಂದ ಓದುತ್ತಿದ್ದರು. ಬೇಸಿಗೆ ರಜಾ ದಿನಗಳು ಪಾಠ ಮತ್ತು ಆಟಗಳಲ್ಲಿ ಯಾವುದರಲ್ಲಿ ಹೆಚ್ಚು ಎಂದು ಕೇಳಿದರೆ ಮೊದಲು ಬರುವುದೇ ಅಭ್ಯಾಸ ಎನ್ನುತ್ತಾರೆ. ಇದರೊಂದಿಗೆ ಈಜುವುದು, ಬೆಟ್ಟ-ಗುಡ್ಡಗಳನ್ನು ಸುತ್ತಿ ಸುಸ್ತಾಗುವುದು, ಸಣ್ಣ ಪುಟ್ಟ ಆಟಗಳಲ್ಲಿಯೂ ಕೂಡ ಸೈಎನಿಸಿಕೊಂಡಿರುತ್ತಿದ್ದ. ಇವರು ಒಂದು ರೀತಿಯ ಪುಂಡ-ಪೋಕರಿಗಳ ಮಧ್ಯೆಯೇ ಬೆರೆತರೆಂದರೆ ತಪ್ಪಾಗಲಾರದು. ಇವರು ರಜಾ ದಿನಗಳಲ್ಲಿ ಸ್ನೇಹಿತರ ಜೊತೆ ಸೇರಿ ಉತ್ತಮ ಪುಸ್ತಕಗಳನ್ನು ಓದಿ ಚರ್ಚೆ ಮಾಡುವುದನ್ನು ರೂಢಿ ಮಾಡಿಕೊಂಡಿದ್ದರು. ಇದು ಒಂದು ರೀತಿ ಅವರಿಗೆ ಮನರಂಜನೆಯಾಗಿತ್ತು. ೧೯೬೩ರ ಸಂದರ್ಭದಲ್ಲಿ ಟಿ.ವಿ ಮತ್ತು ರೇಡಿಯೋ ಲಭ್ಯವಾದರೂ ಅವು ಆ ಕಾಲಕ್ಕೆ ಮಧ್ಯಮ ವರ್ಗಕ್ಕೆ ಇನ್ನೂ ಸೇರ್ಪಡೆಯಾಗಿರಲಿಲ್ಲ. ಇದರ ಪರಿಣಾಮ ಇವರ ಕುಟುಂಬದಲ್ಲಿ ಎಪ್ಪತ್ತರ ದಶಕದಲ್ಲಿಯೂ ಟಿ.ವಿ, ರೇಡಿಯೋ ಯಾವುದೂ ಲಭ್ಯ ಇರಲಿಲ್ಲ. ಇದರಿಂದ ಇವರಿಗೆ ಮನೋರಂಜನೆ ತೀರಾ ಆಲಭ್ಯವಾಗಿತ್ತು. ಕೇವಲ ಆಗ ತೀರ್ಥಹಳ್ಳಿಯಲ್ಲಿ ಮನರಂಜನೆಗೆ ಇದ್ದ ಒಂದೇ ಅವಕಾಶ ಎಂದರೆ ಅಲ್ಲಿದ್ದ ಸಿನಿಮಾ ಟೆಂಟ್ (ಸಿನಿಮಾ ಥಿಯೇಟರ್) ಮತ್ತು ಆಗಿದಾಂಗ್ಗೆ ನಡೆಯುತ್ತಿದ್ದ ಯಕ್ಷಗಾನ ಆಟಗಳು. ಗೆಳೆಯರೊಂದಿಗೆ ಸೇರಿ ಕದ್ದು ಮುಚ್ಚಿ ಸಿನಿಮಾ ನೋಡಲು ಇವರಿಗೆ ಅವಕಾಶ ಇರಲಿಲ್ಲ. ಆದರೆ ಕುಟುಂಬದವರ ಜೊತೆ ಮಾತ್ರ ಅಪರೂಪಕ್ಕೆ ಸಿನಿಮಾ ನೋಡಲು ಅವಕಾಶವಿತ್ತು. ಅದು ತಿಂಗಳಿಗೂ ಇಲ್ಲವೇ ಎರಡು-ಮೂರು ತಿಂಗಳಿಗೆ ಒಂದು ಸಿನಿಮಾ ನೋಡುವ ಅವಕಾಶ ದೊರಕುತ್ತಿತ್ತು.

ಬಾಲ್ಯದಲ್ಲಿ ತುಂಬಾ ತುಂಟ ಹುಡುಗನಾಗಿದ್ದ ಕೃಷ್ಣಸೆಟ್ಟಿ ಗೆಳಯರೊಟ್ಟಿಗೆ ಹರಟೆ ಹೊಡೆಯುತ್ತಿದ್ದರು. ಇವರ ಮನೆಯ ಸಮೀಪವೇ ಶಾಲೆ ಇತ್ತು. ಇದರಿಂದ ಶಾಲೆಯ ಬೆಲ್ ಶಬ್ದ ಇವರ ಮನೆಗೆ ಸರಾಗವಾಗಿ ಕೇಳುತ್ತಿತ್ತು. ಇನ್ನೇನು ಬೆಲ್ ಆಯಿತು ಎನ್ನುವಾಗ ಹೊಟ್ಟೆಯಲ್ಲಿ ಒಂದು ನೋಟ್‌ಪುಸ್ತಕ ಇಟ್ಟುಕೊಂಡು ಕೃಷ್ಣಸೆಟ್ಟಿಯವರು ಶಾಲೆಗೆ ಹೋಗುತ್ತಿದ್ದರು. ಅಂದಿನ ಮಕ್ಕಳಿಗೆ ಪುಸ್ತಕದ ಹೊರೆ ಈಗಿನ ಶಾಲೆಯ ಮಕ್ಕಳಿಗಿಂತಲೂ ಕಡಿಮೆ ಇತ್ತು. ಅಂದು ಅವಶ್ಯಕತೆ ಇತ್ತೆಂದರೆ ಮಾತ್ರ ಹೆಚ್ಚುವರಿ ಪುಸ್ತಕಗಳನ್ನು ವಿಧ್ಯಾರ್ಥಿಗಳು ಶಾಲೆಗೆ ಕೊಂಡೊಯ್ಯುತ್ತಿದ್ದರು. ಅದರಂತೆ ಕೃಷ್ಣಸೆಟ್ಟಿ ಹೆಚ್ಚೆಂದರೆ ಒಂದು ಪುಸ್ತಕ ಮಾತ್ರ ಇವರ ಕೈಯಲ್ಲಿರುತ್ತಿತ್ತು. ಶಾಲೆಯಲ್ಲಿ ಶಿಕ್ಷಕರು ಮಾಡಿದ ಪಾಠವೇ ವಿನಃ ಮತ್ತೆ ಮನೆಯಲ್ಲಿ ಓದುವ ಅಭ್ಯಾಸವನ್ನು ಅವರು ಬೆಳೆಸಿಕೊಂಡಿರಲಿಲ್ಲ. ಒಂದೇ ಬಾರಿ ಅಭ್ಯಾಸ ಮಾಡಿದರೆ ಸಾಕು ಅದನ್ನೇ ಬಹು ಕಾಲ ನೆನಪಿನಲ್ಲಿಟ್ಟಿ ಕೊಳ್ಳುತ್ತಿದ್ದರು. ಪರೀಕ್ಷೆಗಳು ಇನ್ನೇನು ಬಂದೇಬಿಟ್ಟವು ಎನ್ನುವಾಗ ಹಗಲಿರಳು ಪುಸ್ತಕಗಳನ್ನೇ ಅಭ್ಯಾಸ ಮಾಡುತ್ತಿದ್ದರು. ಅಷ್ಟರಮಟ್ಟಿಗೆ ಚಿ.ಸು.ಕೃ.ರವರು ಪುಸ್ತಕಗಳನ್ನು ಅವಲಂಬಿಸಿರುತ್ತಿದ್ದರು. ಇದರಿಂದ ಅವರು ತಮ್ಮ ಎಲ್ಲಾ ಪರೀಕ್ಷೆಗಳಲ್ಲಿ ಉತ್ತಮ ದರ್ಜೆಯ ಫಲಿತಾಂಶವನ್ನು ಪಡೆದರು. ಅಲ್ಲದೇ ಏಳನೇ ತರಗತಿಯವರೆಗಿನ ತಮ್ಮ ಪ್ರಾಥಮಿಕ ಶಿಕ್ಷಣವನ್ನು ತೀರ್ಥಹಳ್ಳಿಯಲ್ಲಿಯೇ ಮುಗಿಸಿದರು. ಕ್ರೀಡೆಗಳು ಮಕ್ಕಳ ಮನಸ್ಸನ್ನು ವಿಕಾಸಗೊಳಿಸಲು ನೆರವಾಗುತ್ತವೆ. ಹಾಗಾಗಿ ಬಹುತೇಕ ಮಕ್ಕಳು ತಮ್ಮ ಸಮಯವನ್ನು ಕ್ರೀಡೆಗಳಲ್ಲಿ ಕಳೆಯುತ್ತಾರೆ. ಇದು ಅವರ ಮಾನಸಿಕ ಮತ್ತು ಬೌದ್ಧಿಕ ವಿಕಾಸಕ್ಕೆ ದಾರಿಯನ್ನು ಮಾಡಿಕೊಡುತ್ತದೆ. ಈ ಮಾತನ್ನು ಕೃಷ್ಣಸೆಟ್ಟಿಯವರು ಪ್ರಾಯಶಃ ಅಳವಡಿಸಿಕೊಂಡಂತೆ ಕಾಣುತ್ತದೆ. ತಮ್ಮ ಮಾಧ್ಯಮಿಕ ಶಾಲೆಯ ಅಭ್ಯಾಸದ ವೇಳೆ ಇವರು ಓದುವುದರ ಜೊತೆಗೆ ಆಟಗಳಲ್ಲೂ ಸಾಕಷ್ಟು ಮುಂದಿದ್ದರು. ಅದಕ್ಕೆ ಸಾಕ್ಷಿ ಎಂಬಂತೆ ಕಬಡ್ಡಿ, ವಾಲಿಬಾಲ್, ಪುಟ್‌ಬಾಲ್ ಆಟಗಳು ಇವರಿಗೆ ಬಹು ಪ್ರಿಯವಾದ ಆಟಗಳಾಗಿದ್ದವು. ಅನೇಕ ವೇಳೆ ಈ ಕ್ರೀಡೆಗಳಲ್ಲಿ ಇವರು ಭಾಗವಹಿಸಿ ಸೈ ಎನಿಸಿಕೊಂಡಿದ್ದರು. ಅಲ್ಲದೆ ಅನೇಕ ಕಡೆ ಸ್ಪರ್ಧೆಗಳಲ್ಲಿ ಭಾಗವಹಿಸಿ ಅದರಲ್ಲೂ ವಿಶೇಷವಾಗಿ ಕಬಡ್ಡಿಯಲ್ಲಿ ಅನೇಕ ಬಹುಮಾನಗಳನ್ನು ತಮ್ಮದಾಗಿಸಿಕೊಂಡಿದ್ದರು.

**ಪ್ರೌಢ ಶಿಕ್ಷಣ**

ಚಿತ್ರದುರ್ಗದ ಹೊಳಲ್ಕೆರೆಯ ಸಮೀಪವಿರುವ ಮಲ್ಲಾಡಿಹಳ್ಳಿಯಲ್ಲಿ ಅನಾಥ ಸೇವಾಶ್ರಮವಿದೆ. ಅಲ್ಲಿ ಹುಡುಗರು ತುಂಬಾ ಚೆನ್ನಾಗಿ ಓದಿ ಬುದ್ಧಿವಂತರಾಗುತ್ತಾರಂತೆ ಎಂದು ಸುಬ್ಬಯ್ಯನವರ ಸ್ನೇಹಿತರಲ್ಲೊಬ್ಬರಾದ ಬಟ್ಟೆ ವ್ಯಾಪಾರಿ ಪಿ.ಎಲ್.ನಾರಾಯಣರಾವ್ ಹೇಳಿದ ಮಾತಿಗೆ ಆಲೋಚನೆ ಮಾಡಿ ಕೃಷ್ಣಸೆಟ್ಟಿಯನ್ನು ಅಲ್ಲಿಯೇ ಸೇರಿಸಿ ವಿದ್ಯಾಭ್ಯಾಸ ಕೊಡಿಸಬೇಕೆಂಬ ತೀರ್ಮಾನವನ್ನು

ತೆಗೆದುಕೊಂಡರು. ಕೆಲ ದಿನಗಳಲ್ಲೇ ಮಗನನ್ನು ಕರೆದುಕೊಂಡು ಹೋಗಿ ಅಲ್ಲಿಗೆ ಸೇರಿಸಿದರು. ಅಂದು ಪ್ರೌಢಶಾಲೆಯಲ್ಲಿ ಪ್ರಥಮ ವರ್ಷ ಮತ್ತು ದ್ವಿತೀಯ ವರ್ಷ ಎಂಬುದಾಗಿತ್ತು. ಈಗಿನ ಹಾಗೆ ೮ ಮತ್ತು ೯ ಇರಲಿಲ್ಲ. ಅದು ಅನಾಥ ಸೇವಾಶ್ರಮವಾಗಿದ್ದುದ್ದರಿಂದ ಸಾಮಾನ್ಯವಾಗಿ ಬಡವರ ಮಕ್ಕಳೇ ಹೆಚ್ಚು. ಇಲ್ಲಿ ಶ್ರೀಮಂತರಿಗೆ ಒಂದು ಶುಲ್ಕ, ಬಡವರಿಗೆ ಒಂದು ಶುಲ್ಕ, ಮಧ್ಯಮ ವರ್ಗದವರಿಗೆ ಮತ್ತೊಂದು ರೀತಿಯ ಶುಲ್ಕವನ್ನು ವಿಧಿಸಲಾಗುತ್ತಿತ್ತು. ಈ ಆಶ್ರಮ ಸೇರಬಯಸುವ ವ್ಯಕ್ತಿ ಇಲ್ಲಿರುವ ನಿಯಮಗಳನ್ನು ಖಡ್ಡಾಯವಾಗಿ ಪಾಲಿಸಬೇಕಿತ್ತು. ಇದನ್ನೆಲ್ಲಾ ಅರಿತುಕೊಂಡ ಸುಬ್ಬಯ್ಯಸೆಟ್ಟಿ ತನ್ನ ಮಗನ ಮೇಲೆ ವಿಶ್ವಾಸವಿಟ್ಟು ಪ್ರವೇಶ ಕೊಡಿಸಿದರು. ಇದರ ಉಸ್ತುವಾರಿಯನ್ನು ಶ್ರೀರಾಘವೇಂದ್ರ ಶ್ರೀಗಳು ವಹಿಸಿಕೊಂಡಿದ್ದರು. ಇವರು ದೊಡ್ಡ ವಿದ್ವಾಂಸರು, ಪಂಡಿತರು, ಖ್ಯಾತ ಸಾಹಿತಿಗಳು ಆಗಿದ್ದರು. ಇವರ ದಾರಿಯಲ್ಲಿಯೇ ಸಾಗಬೇಕು ಎಂಬ ಹಂಬಲವನ್ನು ಹೊಂದಿದ ಚಿ.ಸು.ಕೃಷ್ಣಸೆಟ್ಟಿಯವರು ೧೯೬೪ ರಿಂದ ೧೯೬೬ ರವರೆಗೆ ಪ್ರಥಮ ಮತ್ತು ದ್ವಿತೀಯ ತರಗತಿಗಳನ್ನು ಮುಗಿಸಿದರು. ಈ ಪ್ರೌಢಶಾಲೆಯಲ್ಲಿ ಎರಡು ವರ್ಷದ ವಿದ್ಯಾಭ್ಯಾಸ ಮುಗಿಯುವುದರೊಳಗೆ ಸಾಮಾನ್ಯ ಜ್ಞಾನದ ಹರಿವು ಆಗಿದ್ದು ಅಷ್ಟಿಷ್ಟಲ್ಲ. 'ವರ್ಣಮಾತ್ರಂ ಕಲಿಸಿದಾತ ಗುರು' ಎನ್ನುವಂತೆ ಇವರು ತಮ್ಮ ಶಿಕ್ಷಕರಿಂದ ಕೇವಲ ಅಕ್ಷರವಷ್ಟೇ ಕಲಿಯಲಿಲ್ಲ. ಬದಲಾಗಿ ಬಂದ ಕಷ್ಟವನ್ನೆಲ್ಲಾ ಧೈರ್ಯದಿಂದ ಎದುರಿಸುವುದನ್ನು, ಅದನ್ನು ನಿಭಾಯಿಸಿ ಬದುಕುವುದನ್ನು ಗುರುಗಳಿಂದ ವಿಶೇಷವಾಗಿ ಕಲಿತರು.

## ಮಲ್ಲಾಡಿಹಳ್ಳಿ ಪರಿಸರ

ಮಲ್ಲಾಡಿಹಳ್ಳಿಯ ತಮ್ಮ ಹೈಸ್ಕೂಲ್ ಶಿಕ್ಷಣದ ವೇಳೆ ಇವರ ವಿದ್ಯಾರ್ಥಿ ನಿಲಯದಲ್ಲಿ ಹಲವಾರು ಕಟ್ಟುಪಾಡುಗಳಿದ್ದವು. ಅವುಗಳಲ್ಲಿ ಬೆಳಿಗ್ಗೆ ಆಕ್ಕೆ ಏಳುವುದು ಒಂದಾಗಿತ್ತು. ಆ ಸಮಯ ತುಂಬಾ ಚಳಿ ಇರುತ್ತಿತ್ತು, ಆದರೆ ಇದಕ್ಕೆ ಅಜುವಂತಿರಲಿಲ್ಲ. ಏಕೆಂದರೆ ಆಗ ಯೋಗ ತರಬೇತಿ ಪ್ರಾರಂಭವಾಗುತ್ತಿತ್ತು. ಅದಕ್ಕೂ ಮುನ್ನ ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ಯೋಗದ ಸ್ಥಳಕ್ಕೆ ಆಗಮಿಸಬೇಕಿತ್ತು. ಕಾಲಹರಣ ಮಾಡಿದವರನ್ನು ಶಿಕ್ಷೆಗೆ ಗುರಿಪಡಿಸಲಾಗುತ್ತಿತ್ತು ಇಲ್ಲವೇ ಒಂದ್ಹೊತ್ತು ಊಟ ನೀಡುತ್ತಿರಲಿಲ್ಲ. ಆದಕಾರಣ ಅಂದು ಯಾರು ಸಹಾ ತಪ್ಪು ಮಾಡಲು ಹೋಗುತ್ತಿರಲಿಲ್ಲ. ಸೂರ್ಯ ನಮಸ್ಕಾರ ಮಾಡುವ ಮುನ್ನ ಅರೆಬೆತ್ತಲೆಯಲ್ಲಿಯೇ ಯೋಗವನ್ನು ಮಾಡುತ್ತಾ ಮುಂದುವರಿಯಬೇಕು. ನಂತರ ಆಶ್ರಮದಲ್ಲಿ ಒಬ್ಬೊಬ್ಬರಿಗೆ ಒಂದೊಂದು ಕೆಲಸವನ್ನು ನೀಡುತ್ತಿದ್ದರು ಅದನ್ನೂ ಇವರು ತಪ್ಪದೇ ಮಾಡಬೇಕಿತ್ತು. ಇಲ್ಲಿ ಆಯುರ್ವೇದ ಆಸ್ಪತ್ರೆ ಇತ್ತು. ಇದಕ್ಕೆ ಸಂಬಂಧಿಸಿದ ಔಷಧಿಗಳನ್ನು ತಯಾರಿಸುತ್ತಿದ್ದರು. ಅಂತಹ ಕೆಲಸದಲ್ಲಿ ಚಿ.ಸು.ಕೃಷ್ಣಸೆಟ್ಟಿಯು ಕೂಡ ಭಾಗವಹಿಸಿ

ಅನೇಕ ವಿಚಾರಗಳನ್ನು ಅಂದು ತಿಳಿದುಕೊಳ್ಳುತ್ತಿದ್ದರು. ಎಂದಿಗೂ ಕೂಡ ಇದು ಮಠದ ಕೆಲಸವೆನ್ನದೇ ಮನೆಯ ಕೆಲಸವೆಂದುಕೊಂಡು ಅದನ್ನೆಲ್ಲಾ ಮಾಡುತ್ತಾ ಶ್ರಮವಹಿಸಿ ಬೆಳೆದರು.

ಆದರೂ ಅಲ್ಲಿನ ಪರಿಸ್ಥಿತಿ ಹೇಗಿತ್ತು ಎಂದರೆ ಒಂದು ರೀತಿಯ ಜೈಲಿನ ಪರಿಸ್ಥಿತಿ. ಊಟ ಸರಿಯಾಗಿರುತ್ತಿರಲಿಲ್ಲ. ಇದರಿಂದ ಅಲ್ಪ ಬೇಸರವೂ ಆಗುತ್ತಿತ್ತು. ಇಷ್ಟೆಲ್ಲಾ ಕಠಿಣ ವಾತಾವರಣ ಇಲ್ಲಿದ್ದರೂ, ಅದನ್ನು ಮನೆಯಲ್ಲಿ ಹೇಳುತ್ತಿರಲಿಲ್ಲ. ಇವರು ತೀರ್ಥಹಳ್ಳಿಗೆ ಬಂದ ಸಂದರ್ಭದಲ್ಲಿ ತಮ್ಮ ಹಳೆ ಗೆಳೆಯರೊಟ್ಟಿಗೆ ತುಂಬಾ ಲವಲವಿಕೆಯಿಂದ ಓಡಾಡಿಕೊಂಡಿರುತ್ತಿದ್ದರು. ಇದನ್ನು ನೋಡಿ ಅವರ ತಂದೆಯವರು ಖುಷಿಪಡುತ್ತಿದ್ದರಂತೆ. ಕೃಷ್ಣಸೆಟ್ಟಿಯವರ ತಂದೆ ಇವರ ಜೊತೆಯಲ್ಲಿಯೇ ತನ್ನ ಮತ್ತೊಬ್ಬ ಮಗನನ್ನು ಮಲ್ಲಾಡಿಹಳ್ಳಿಯಲ್ಲಿ ಶಿಕ್ಷಣಕ್ಕಾಗಿ ಸೇರಿಸಿದರು. ಆದರೆ ಅಲ್ಲಿನ ಕಠಿಣ ವಾತಾವರಣಕ್ಕೆ ಹೊಂದಿಕೊಳ್ಳಲಾರದೇ ಇವರ ಸಹೋದರ ಅಲ್ಪ ದಿನಗಳಲ್ಲೇ ಮನೆಗೆ ವಾಪಸ್ಸಾಗಿದ್ದನ್ನು[೪] ಇಂದಿಗೂ ಕೃ.ಸೆ.ನೆನೆಯುತ್ತಾರೆ. ಚಿ.ಸು.ಕೃಷ್ಣಸೆಟ್ಟಿಯವರು ಅದಾಗಲೇ ಮಲ್ಲಾಡಿಹಳ್ಳಿ ಪರಿಸರಕ್ಕೆ ಹೊಂದಿಕೊಂಡಿದ್ದರಿಂದ ಎಷ್ಟು ವರ್ಷ ಬೇಕಾದರು ಇಲ್ಲಿ ನಾನು ಕಳೆಯುವೆನು ಎಂಬ ಛಲ ಹೊಂದಿದ್ದರು. ಅಂತಹ ಸಂದರ್ಭದಲ್ಲಿ ತಂದೆಗೆ ಯಾಕೋ ಆ ಪರಿಸರ ಇಷ್ಟವಾಗದ ಕಾರಣ ಇವರನ್ನು ಕೂಡ ತೀರ್ಥಹಳ್ಳಿಗೆ ವಾಪಸ್ಸು ಕರೆಸಿಕೊಂಡು ಶಿಕ್ಷಣಕ್ಕೆ ವ್ಯವಸ್ಥೆ ಮಾಡಿದರು. ಇವರು ಮಲ್ಲಾಡಿಹಳ್ಳಿಯಲ್ಲಿದ್ದ ವೇಳೆ ಎನ್‌ಸಿಸಿಯಲ್ಲಿ ತೇರ್ಗಡೆ ಹೊಂದಿದ್ದರು. ಅದರಲ್ಲೂ ಬ್ಯಾಂಡ್‌ಸೆಟ್‌ನಲ್ಲಿ ಸೇರಿ ವಿಶೇಷವಾಗಿ ವಾದ್ಯಗಳನ್ನು ನುಡಿಸುತ್ತಿದ್ದರು. ಯಾವುದೇ ಕೆಲಸ ವಹಿಸಿದರೂ ಅದನ್ನು ನಿರ್ಭಯವಾಗಿ ಸಫಲಗೊಳಿಸುವ ಜಾಣ್ಮೆ ಇವರಲ್ಲಿದ್ದ ಕಾರಣಕ್ಕೆ ವಿದ್ಯಾರ್ಥಿಗಳ ಮುಖಂಡನಾಗಿ ನೇಮಕಗೊಂಡು ಹತ್ತಾರು ಉತ್ತಮ ಕಾರ್ಯಗಳನ್ನು ಮಾಡಿ ತನ್ನ ಗುರುವೃಂದದಿಂದ ಬೆನ್ನುತಟ್ಟಿಸಿಕೊಂಡರು. ಇಲ್ಲಿಂದಲೇ ಪ್ರಾರಂಭವಾದ ಮುಖಂಡ ಸ್ಥಾನ ಅವರ ಜೀವನದುದ್ದಕ್ಕೂ ಮುಂದುವರಿದು ಅದು ಎಲ್ಲಾ ಕಡೆಯು ಮುಂದುವರೆದು, ಅದೇ ಸ್ಥಾನದಲ್ಲಿ ನಿಂತು ಕೆಲಸ ಮಾಡಲು ಪ್ರೇರೇಪಣೆಯಾಯಿತು.

ತಂದೆಯ ಇಷ್ಟದಂತೆ ಮಲ್ಲಾಡಿಹಳ್ಳಿಯಿಂದ ೧೯೬೦ರಲ್ಲಿ ತೀರ್ಥಹಳ್ಳಿಗೆ ವಾಪಸ್ಸು ಬಂದ ಇವರು ಸ್ಥಳೀಯ ಸರ್ಕಾರಿ ಮಲ್ಟಿ ಪರ್ಪಸ್ ಸ್ಕೂಲ್ (ಪ್ರೌಢಶಾಲೆ)ಗೆ ಸೇರ್ಪಡೆಗೊಂಡರು. (ಈಗ ಕರ್ನಾಟಕದಲ್ಲಿ ಅತಿ ವಿರಳ) ಆಗ ಇವರು ತೆಗೆದುಕೊಂಡ ವಿಷಯ ಪಿ.ಎಸ್.ಎಮ್.ಟೆಕ್ (PSM Tech). ಕೃಷ್ಣಸೆಟ್ಟಿ ತೀರ್ಥಹಳ್ಳಿಗೆ ಬರುವುದರೊಳಗೆ ಇವರ ತಂದೆ ಶೋರೂಂಗಳ ಜೊತೆ ಎರಡು ಪ್ರಾವಿಜನ್ ಸ್ಟೋರ್‌ಗಳನ್ನು ಕೂಡ ತೆರೆದಿದ್ದರು. ಮುಖ್ಯವಾಗಿ ತಂದೆಯ ಉದ್ದೇಶ ಒಂದೇ ನನ್ನ ಮಕ್ಕಳಿಗೆ ಲೆಕ್ಕಪತ್ರ ವ್ಯವಹಾರದ ಬಗ್ಗೆ ಜ್ಞಾನ ಬಂದರೆ ಸಾಕು. ಅಲ್ಲಿಯವರೆಗೆ

೪. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೦೫.೦೪.೨೦೧೫

ಮಕ್ಕಳು ಓದಲಿ ಎಂಬುದು ಅವರ ಮನಸ್ಸಿನ ಅಂತರಾಳದ ಒತ್ತಾಸೆಯಾಗಿತ್ತು. ಚಿ.ಸು.ಕೃಷ್ಣಸೆಟ್ಟಿ ಶಾಲೆಯ ಸಮಯ ಹೊರತುಪಡಿಸಿ ತಮ್ಮ ಬಿಡುವಿನ ವೇಳೆಯನ್ನು ಅಂಗಡಿ ವ್ಯಾಪಾರ ಮಾಡುವುದಕ್ಕೆ ಮೀಸಲಿಟ್ಟಿದ್ದರು. ತಂದೆ ಸುಬ್ಬಯ್ಯನವರಿಗೆ ಬೆಳಿಗ್ಗೆ ಕೃಷ್ಣ ಅಂಗಡಿ ಬಾಗಿಲು ತೆರೆಯೋ ಎಂದಾಗ ಎದ್ದು ಮಾಡಬೇಕಾದ ಕೆಲಸವೇ ಅದಾಗಿತ್ತು. ಸುಮಾರು ಮೂರು ನಾಲ್ಕು ತಾಸುಗಟ್ಟಲೇ ವ್ಯಾಪಾರ ಮಾಡುತ್ತಿದ್ದ ಈ ಹುಡುಗ ಇನ್ನೇನು ಶಾಲೆ ಘಂಟೆ ಆಗುತ್ತದೆ ಎನ್ನುವಾಗ ಇವರ ಅಣ್ಣನೋ ಇಲ್ಲಾ ಅಪ್ಪನೋ ಬಂದು ಕಳುಹಿಸಿಕೊಡುತ್ತಿದ್ದರು. ಅಲ್ಲಿಂದ ಎದ್ದು ಬಿದ್ದು ಮನೆಗೆ ಓಡಿ ಹೋಗಿ ಮುಖ ತೊಳೆದುಕೊಂಡು ಸಿಕ್ಕ ಉಪಾಹಾರವನ್ನು ಮಾಡಿ ಕೈಯಲ್ಲೊಂದು ನೋಟ್ ಪುಸ್ತಕ ಹಿಡಿದು ಓಟದ ಆಟ ನಿಲ್ಲುತ್ತಿದ್ದದ್ದು ಶಾಲೆಯ ಆವರಣ ಸೇರಿದಾಗಲೇ. ಇಂತಹ ದಿನಗಳು ಆಗೊಮ್ಮೆ ಈಗೊಮ್ಮೆ ಅನ್ನುವ ಹಾಗಿರಲಿಲ್ಲ. ಪ್ರತಿನಿತ್ಯ ಇದು ಮುಂದುವರಿದಿತ್ತು. ಕೆಲವು ದಿನಗಳು ತುಂಬಾ ತಡವಾಗಿ ಶಾಲೆಗೆ ಹೋಗುತ್ತಿದ್ದ ಚಿ.ಸು.ಕೃಷ್ಣಸೆಟ್ಟಿ, ಶಾಲೆಗೆ ತಡವಾಗಿ ಹೋಗುತ್ತಿದ್ದ ಕಾರಣಕ್ಕೆ ಇವರ ಶಿಕ್ಷಕರು ಇವರಿಗೆ ತರಗತಿಯ ಹೊರಗೆ ನಿಲ್ಲುವ ಶಿಕ್ಷೆ ವಿಧಿಸುತ್ತಿದ್ದರು.[೫] ಈ ರೀತಿ ಅದೆಷ್ಟೋ ದಿನಗಳನ್ನು ಹೊರಗಡೆ ನಿಂತು ಕಳೆದಿರುವುದಾಗಿ ಹೇಳಿಕೊಳ್ಳುತ್ತಾರೆ.

ಇದೇ ಸಂದರ್ಭದಲ್ಲಿ ತಂದೆಗೂ ಕೂಡ ಫ್ಲೋರ್‌ಮಿಲ್, ಕಾಫಿ ವರ್ಕ್ಸ್ ಒಂದು ಕಡೆ, ಕಿರಾಣಿ ಅಂಗಡಿಗಳು ಇನ್ನೊಂದು ಕಡೆ ತುಂಬಾ ಒತ್ತಡ ಅದಾಗಲೇ ಹಿರಿಯ ಮಗನಿಗೆ ಜ್ಞಾನದ ಅರಿವು ಮೂಡಿತ್ತು. ಇದನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸಿದ ಸುಬ್ಬಯ್ಯಸೆಟ್ಟಿ ಎರಡರಲ್ಲಿ ಒಂದು ಕಿರಾಣಿ ಅಂಗಡಿಯನ್ನು ಮಾರಾಟ ಮಾಡಿದರು. ಇದ್ದದ್ದೊಂದು ಅಂಗಡಿಯನ್ನು ಇಬ್ಬರು ನೋಡಿಕೊಳ್ಳುತ್ತಾ ಬಂದರು. ತಂದೆ ಸುಬ್ಬಯ್ಯನವರಿಗೆ ತನ್ನ ಮಕ್ಕಳು ಪದವಿ, ಸ್ನಾತಕೋತ್ತರ ಪದವಿ ಪಡೆಯಲಿ ಎಂಬ ಆಲೋಚನೆ ಎಂದಿಗೂ ಬಂದಿರಲಿಲ್ಲ. ಇದಕ್ಕೆ ಬದಲಾಗಿ ಮಕ್ಕಳಿಗೆ ವ್ಯಾಪಾರ ಮಾಡಲು, ಲೆಕ್ಕಪತ್ರ ವ್ಯವಹಾರ ತಿಳಿದರೆ ಸಾಕು ಎಂದು ಭಾವಿಸಿದ್ದರು. ಆದರೆ ಇದಕ್ಕೆ ತಿರುಗು ಬಾಣದಂತಿದ್ದ ಚಿ.ಸು.ಕೃಷ್ಣಸೆಟ್ಟಿಯವರಿಗೆ ಗಣಿತವೆಂದರೆ ಅಷ್ಟಕಷ್ಟೆ. ಆದ್ದರಿಂದಲೇ ಎಸ್‌ಎಸ್‌ಎಲ್‌ಸಿ ಯಲ್ಲಿ ಅನುತ್ತೀರ್ಣರಾದರು. ಚಿ.ಸು.ಕೃಷ್ಣಸೆಟ್ಟಿ ಫೇಲಾಗಿದ್ದು ಮನೆಯಲ್ಲಿ ಅಂತಹ ಪರಿಣಾಮವೇನೂ ಬೀರಲಿಲ್ಲ. ಅಂಗಡಿ ನೋಡಿಕೊಳ್ಳುವ ಜವಾಬ್ದಾರಿ ಹೆಚ್ಚಾಯಿತಾದರೂ ಎಸ್‌ಎಸ್‌ಎಲ್‌ಸಿ ಪಾಸು ಮಾಡುವ ಯೋಚನೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಅಭ್ಯಾಸ ಮಾಡಿ ಮುಂದಿನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಈ ಒಂದು ವರ್ಷದಲ್ಲಿ ಅಂಗಡಿಯಲ್ಲಿ ಪೊಟ್ಟಣ ಕಟ್ಟೋದು, ಅಕ್ಕಿ, ಬೇಳೆ ತರುವ ಮೊದಲಾದ ಕಿರಾಣಿ ಅಂಗಡಿಯಲ್ಲಿ ಮಾಡುವ ಎಲ್ಲಾ ಕೆಲಸವನ್ನು ನಿರ್ವಹಿಸಿದರು.

---

೫. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೨.೦೯.೨೦೧೫

ಇವರು ಅಂದು ಒಬ್ಬ ಪ್ರಸಿದ್ಧ ಕಥೆಗಾರರಾಗಿದ್ದರು. ಎಪ್ಪತ್ತರ ದಶಕದಲ್ಲಿಯೇ ಇವರ ಕಥೆಗಳು ದಿನಪತ್ರಿಕೆ ಮತ್ತು ವಾರಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತಿದ್ದವು. ಇದೇ ಸಮಯದಲ್ಲಿ ಅಂದರೆ ೧೯೬೮ರಲ್ಲಿ ಇವರಿಗೆ ಬಲಪಂಥೀಯ ಸಂಘಟನೆಯೊಂದರ ಪರಿಚಯವಾಯಿತು. ಈ ಸಂಘಟನೆಯ ನಂಟು ಕೃಷ್ಣಸೆಟ್ಟಿಯವರಿಗೆ ಕಾಫಿವರ್ಕ್ಸ್‌ನ ಜವಳಿ ರಾಜರಾವ್ ಅವರಿಂದ ಬೆಳೆದಿತ್ತು. ಎಸ್.ಎಸ್.ಎಲ್.ಸಿಯಲ್ಲಿ ಅನುತ್ತೀರ್ಣನಾಗಿದ್ದ ಕೃಷ್ಣಸೆಟ್ಟಿ, ಪೋಲಿ ಹುಡುಗರ ಗುಂಪಲ್ಲಿರುವುದನ್ನು ನೋಡಿದ ರಾಜರಾವ್ ಅವರು ಖುದ್ದಾಗಿ ಅವರಿರುವ ಸ್ಥಳಕ್ಕೆ ತೆರಳಿ ಅವನನ್ನು ಕರೆದುಕೊಂಡು ಬಂದು ಬುದ್ಧಿವಾದ ಹೇಳಿದರು. ಅಲ್ಲದೇ ನೀನು ಸಂಘಟಕನಾಗುವ ಎಲ್ಲಾ ಲಕ್ಷಣಗಳು ನಿನ್ನಲ್ಲಿವೆ. ಅದಕ್ಕೆ ನೀನು ಸಂಘಟನೆಗೆ ಬಂದು ಸೇರು ಎಂದರು. ಅವರ ಮಾತಿಗೆ ಸಮ್ಮತಿಸಿದ ಕೃ.ಸೆ.ಯವರು ಸಂಘಟನೆಯಲ್ಲಿ ಸೇರ್ಪಡೆಯಾಗಿ ಅದರಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು. ಅಲ್ಲದೇ ಮೇಧಾವಿ ಸಂಘಟಕರೆನಿಸಿಕೊಂಡರು. ಈ ಸಂಘಟನೆಯ ಅನೇಕ ಹಿರಿಯ ಸದಸ್ಯರೊಟ್ಟಿಗೆ ಉತ್ತಮ ಸಂಪರ್ಕವಿಟ್ಟುಕೊಂಡ ಕೃಷ್ಣಸೆಟ್ಟಿಯವರು ಹತ್ತಾರು ಉತ್ತಮ ಕಾರ್ಯಕ್ರಮಗಳನ್ನು ಇದೇ ಸಂಘಟನೆ ವತಿಯಿಂದ ಏರ್ಪಡಿಸಿದರು. ಕೃಷ್ಣಸೆಟ್ಟಿ (೧೯೬೮) ದೈಹಿಕವಾಗಿ ತುಂಬಾ ಗಟ್ಟಿಯಾಗಿದ್ದರು. ಅಲ್ಲಿ ನಾಟಕಗಳಲ್ಲಿ ಭಾಗವಹಿಸಿ, ಸಭೆ ಸಮಾರಂಭಗಳಲ್ಲಿ ಮುಂಚೂಣಿಯಾಗಿ ನಿಂತು ಕೆಲಸ ಮಾಡಿ ತಮ್ಮನ್ನು ಗುರುತಿಸಿಕೊಂಡರು. ಪ್ರಸಕ್ತ ಸಂಘಟನೆಯಿಂದ ವರ್ಷಕ್ಕೊಂದು ಸಲ ನಡೆಯುವ ತರಬೇತಿ ಶಿಬಿರಗಳಲ್ಲಿ ಇವರು ಅನೇಕ ಸಾರಿ ಭಾಗವಹಿಸುತ್ತಿದ್ದರು. ಅದೇ ರೀತಿ ೧೯೭೪ರಲ್ಲಿ ನಾಗಪುರದಲ್ಲಿ ಆಯೋಜಿಸಲಾಗಿದ್ದ ರಾಷ್ಟ್ರೀಯ ಮಟ್ಟದ ಶಿಬಿರದಲ್ಲಿಯೂ ಭಾಗವಹಿಸಿ ಅಲ್ಲಿ ಸ್ವಯಂ ಸೇವಕರಾಗಿ ಯಶಸ್ವಿಯಾಗಿ ಕರ್ತವ್ಯನಿರ್ವಹಿಸಿರುತ್ತಾರೆ. ನಂತರ ಸ್ಥಳೀಯವಾಗಿ ಈ ಸಂಘಟನೆಯ ಮುಖಂಡನಾಗಿ ಗುರುತಿಕೊಂಡ[೬] ಚಿ.ಸು.ಕೃಷ್ಣಸೆಟ್ಟಿ ಕಿರಾಣಿ ಅಂಗಡಿ ನೋಡಿಕೊಳ್ಳುವುದರ ಜೊತೆ ಈ ಸಂಘಟನೆಯನ್ನು ಪ್ರಬಲವಾಗಿ ಕಟ್ಟಲಾರಂಭಿಸಿದರು.

ಇದೇ ವೇಳೆ ಎಸ್‌ಎಸ್‌ಎಲ್‌ಸಿ ಉತ್ತೀರ್ಣರಾಗಿ, ಸ್ಥಳೀಯ ತುಂಗಾ ಕಾಲೇಜಿನಲ್ಲಿ ಪಿಯುಸಿಗೆ ಸೇರಿಕೊಂಡರು. ಇದುವರೆಗೂ ಕನ್ನಡ ಮೀಡಿಯಂನಲ್ಲಿದ್ದ ಹಳ್ಳಿ ಹುಡುಗ ಏನಾದರೂ ವಿಶೇಷವಾಗಿ ಸಾಧಿಸಬೇಕೆಂಬ ಅಪೇಕ್ಷೆಯಿಂದ ವಿಜ್ಞಾನ ವಿಷಯದಲ್ಲಿ 'ಪಿಸಿಎಮ್‌ಬಿ' ವಿಷಯಗಳನ್ನು ಐಚ್ಛಿಕವಾಗಿ ತೆಗೆದುಕೊಂಡು ಅಭ್ಯಾಸಕ್ಕೆ ಹೊಂದಿಕೊಂಡರು. ನಿರಂತರವಾಗಿ ಸಂಘಟನೆ ಒಂದು ಕಡೆ, ಅಭ್ಯಸಿಸುವುದು ಮತ್ತೊಂದು ಕಡೆ. ಜೊತೆಗೆ ಕಿರಾಣಿ ಅಂಗಡಿಯ ಜವಾಬ್ದಾರಿ ಹೀಗೆ ಒಟ್ಟಿಗೆ ಮೂರು ಕೆಲಸವನ್ನು ನಿಭಾಯಿಸುತ್ತಿರುವ ಸಂದರ್ಭದಲ್ಲಿ ಅಭ್ಯಾಸದಲ್ಲಿ ಅಲ್ಪ ಹಿನ್ನಡೆಯಾಯಿತು. ಮಕ್ಕಳು ವ್ಯವಹಾರಕ್ಕೆ ಅವಶ್ಯವಾದ ಲೆಕ್ಕವನ್ನು ಪರಿಪೂರ್ಣವಾಗಿ ಕಲಿಯಬೇಕೆಂಬ ಆಶಯ

---

೬. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೬.೯.೨೦೧೫

ಇವರ ತಂದೆಯದಾಗಿತ್ತು. ಅದಕ್ಕಾದರೂ ಅಭ್ಯಾಸ ಮಾಡಲೇಬೇಕು, ಪದವಿ ಪಡೆಯಬೇಕೆಂಬ ಬಯಕೆ ಇವರ ತಂದೆಯವರಿಗಿತ್ತಾದರೂ ಅದರ ವಿರುದ್ಧ ಕೃಷ್ಣಸೆಟ್ಟಿ ನಿಂತರು ಎಂದರೆ ತಪ್ಪಾಗಲಾರದು. ಏಕೆಂದರೆ ಕೃ.ಸೆ.ಯವರು ತಮ್ಮ ದಿನ ನಿತ್ಯದ ಅಂಗಡಿ ಕೆಲಸಕ್ಕೆ ಮತ್ತು ಸಂಘಟನೆಗೆ ಹೆಚ್ಚು ಒತ್ತು ಕೊಟ್ಟ ಪರಿಣಾಮ ಎರಡು ವರ್ಷದ ಪಿಯುಸಿಯಲ್ಲಿ ಇವರು ಮೊದಲ ವರ್ಷ ಪಾಸಾಗಿ ಎರಡನೇ ವರ್ಷದಲ್ಲಿ ಫೇಲಾದರು. ಇದು ತಂದೆ ಸುಬ್ಬಯ್ಯಗೆ ತುಂಬಾ ನೋವು ತಂದಿತು. ಅದು ಅವರಿಗೆ ಇಷ್ಟವಾದ ಗಣಿತ ವಿಷಯದಲ್ಲೇ ಹಿಂದೆ ಬಿದ್ದಿದ್ದು ವಿಶೇಷವಾಗಿತ್ತು. ಕೃಷ್ಣಸೆಟ್ಟಿಯವರು ಈ ಹಿನ್ನಡೆಗೆ ಎದೆಗುಂದಲಿಲ್ಲ. ಬದಲಾಗಿ ಯಾವುದೇ ಭಯವಿಲ್ಲದೇ ತನ್ನ ನಿತ್ಯದ ಕಾಯಕವನ್ನು ಮುಂದುವರಿಸುತ್ತಾ ತಮ್ಮ ಆಸಕ್ತಿಯುತ ಬರವಣಿಗೆಯನ್ನು ಮುಂದುವರಿಸಿದರು.

ಕೃಷ್ಣಸೆಟ್ಟಿಯವರ ಅಣ್ಣ ಪದ್ಮನಾಭನ್ ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದ. ರಜೆಯ ನಿಮಿತ್ತ ತೀರ್ಥಹಳ್ಳಿಗೆ ಬಂದ ಸಂದರ್ಭದಲ್ಲಿ ಗಣಿತ ವಿಷಯದಲ್ಲಿ ತಮ್ಮ ಅನುತ್ತೀರ್ಣನಾಗಿದ್ದಾನೆ ಎಂಬುದನ್ನು ತಿಳಿದ ಇವರು ತಮ್ಮ ತಂದೆಗೆ ಒಂದು ಮಾತನ್ನು ಹೇಳಿದರು. "ಅಪ್ಪ ಕೃಷ್ಣ ಫೇಲಾಗಿದ್ದಾನಲ್ಲ. ಆ ವಿಷಯದ ಕುರಿತು ನಮ್ಮ ಕಾಲೇಜಿನಲ್ಲಿ ತರಬೇತಿ ನೀಡುತ್ತಿದ್ದಾರೆ" ನೀವ್ಯಾಕೆ ಅಲ್ಲಿಗೆ ಕಳುಹಿಸಬಾರದು ಎಂದಾಗ ಮಗನ ಮಾತಿಗೆ ಸಮ್ಮತಿ ಸೂಚಿಸಿ ನೀನು ಹೋಗುವಾಗ ಅವನನ್ನು ಕರೆದುಕೊಂಡು ಹೋಗು ಮಗ ಎಂದರಷ್ಟೆ. ನಂತರ ಅಣ್ಣನ ಜೊತೆ ಬೆಂಗಳೂರಿಗೆ ಬಂದು ನ್ಯಾಷನಲ್ ಕಾಲೇಜಿನಲ್ಲಿ ಎನ್.ನರಸಿಂಹಯ್ಯನವರ ನೇತೃತ್ವದಲ್ಲಿ ನಡೆಯುತ್ತಿದ್ದ ತರಬೇತಿಗೆ ಹಾಜರಾದರು. ಇಲ್ಲಿ ಪ್ರತಿಯೊಂದು ತರಗತಿಗೂ ತಪ್ಪದೇ ಹಾಜರಾಗಿ ಕಲಿತರಾದರೂ ಮತ್ತೆ ಪರೀಕ್ಷೆಯಲ್ಲಿ ಪಾಸಾಗಲಿಲ್ಲ. ನಿರಾಸೆಯಿಂದ ಕೃ.ಸೆ.ಯವರು ತಮ್ಮ ತವರೂರಿಗೆ ವಾಪಸ್ಸಾದರು.

ಅದು ೧೯೭೦ರ ಆಸುಪಾಸು ಚುನಾವಣೆ ಹತ್ತಿರ ಬಂದಿತ್ತು. ಆಗ "ಭಾರತೀಯ ಜನಸಂಘ" ಎಂಬ ಪಕ್ಷವಿದ್ದು, ಈ ಪಕ್ಷಕ್ಕೆ ಆರ್.ಎಸ್.ಎಸ್. ಬೆಂಬಲ ನೀಡುತ್ತಿತ್ತು. ಚಿ.ಸು.ಕೃಷ್ಣಸೆಟ್ಟಿ ಬಿಡುವಿನ ವೇಳೆಯಲ್ಲಿ ಖಾಲಿಯಾಗಿ ಕುಳಿತುಕೊಳ್ಳದೆ ಪತ್ರ ಬರೆಯುವುದು ಮತ್ತು ಚಿತ್ರಕಲೆ ಮಾಡುತ್ತಿದ್ದರು. ಇದನ್ನು ಆರ್.ಎಸ್.ಎಸ್.ನ ಸಹಚರರು ಗಮನಿಸುತ್ತಿದ್ದರು. ಚುನಾವಣೆಯ ಪ್ರಚಾರಕ್ಕೆ ಇಂಥಹವರ ಅವಶ್ಯಕತೆ ಬೇಕಾಗಿದ್ದುದರಿಂದ ತುಂಬಾ ಚೆನ್ನಾಗಿ ಅಕ್ಷರ ಜೋಡಣೆ ಮತ್ತು ಚಿತ್ರಗಳನ್ನು ರಚಿಸುವ ಕೃಷ್ಣಸೆಟ್ಟಿಯವರನ್ನು ನಾವೇಕೆ ಬಳಸಿಕೊಳ್ಳಬಾರದು ಎಂದು ನಿರ್ಧರಿಸಿ ಕರೆದು ಇರುವ ಸ್ಥಿತಿಯನ್ನು ಮನನ ಮಾಡಿಸಿದರು. ಶಿವಮೊಗ್ಗ ಮತ್ತು ತೀರ್ಥಹಳ್ಳಿಯ ನಾನಾ ಭಾಗಗಳಿಗೆ ತೆರಳಿ ಕಛೇರಿಯ ಗೋಡೆಯ ಮೇಲೆ, ಕಾಂಪೌಂಡ್ ಮೇಲೆ ಬರೆಯಲು ಶುರುಮಾಡಿದರು. ಅದು ದೊಡ್ಡದಾಗಿ "ಭಾರತೀಯ ಜನಸಂಘಕ್ಕೆ ಓಟು ಕೊಡಿ" ಎಂದು ಬರೆದು ಮುಂದೆ ಪಕ್ಷದ ಚಿತ್ರ "ದೀಪ"ವನ್ನು ವಿಜೃಂಭಿಸುತ್ತಿದ್ದರು. ಇಲ್ಲಿಂದಲೇ ಕೃಷ್ಣಸೆಟ್ಟಿಯವರ ಬಣ್ಣದ ಬದುಕು ಪ್ರಾರಂಭವಾಗಿದ್ದು. ಆಗ ಅಕ್ಷರ ಮತ್ತು ಚಿತ್ರವನ್ನು ರಚನೆ ಮಾಡಲು ಸುಣ್ಣ ಮತ್ತು ಹುರುಮಂಜು (ಕೆಮ್ಮಣ್ಣು) ಗಳನ್ನು

ಬಳಸಲಾಗುತ್ತಿತ್ತು.

**ಕಲಾಯಾನ**

ಗೋಡೆಯ ಮೇಲಿನ ಚಿತ್ರಕ್ಕೆ ಉತ್ತಮ ಪ್ರತಿಕ್ರಿಯೆಗಳು ಬಂದವು. ಇವರ ಕುರಿತು ಅಂದು ಆರ್.ಎಸ್.ಎಸ್.ನಲ್ಲಿ ಬಿಸಿಬಿಸಿ ಚರ್ಚೆಯೂ ಕೂಡ ಆಯಿತು. ಇದೇ ಸಮಯದಲ್ಲಿ ಆರ್.ಎಸ್.ಎಸ್.ನ ಜಿಲ್ಲಾ ಸಂಚಾಲಕರಾದ ಕೇಶವಮೂರ್ತಿ ಕೃಷ್ಣಸೆಟ್ಟಿಯವರ ತಂದೆ ಸುಬ್ಬಯ್ಯನವರನ್ನು ಕಂಡು ನಿಮ್ಮ ಮಗ ಉತ್ತಮ ಕಲಾವಿದನಾಗಿದ್ದಾನೆ. ಅವನು ಬಿಡಿಸುವ ಚಿತ್ರಕ್ಕೆ ಮತ್ತು ಅಕ್ಷರಕ್ಕೆ ಒಳ್ಳೆಯ ಪ್ರತಿಕ್ರಿಯೆ ಬಂದಿವೆ. ಅವನ ಆಸಕ್ತಿಯ ಕ್ಷೇತ್ರವೂ ಕೂಡ ಅದಾಗಿದೆ ಅನ್ನಿಸುತ್ತಿದೆ. ದಯವಿಟ್ಟು ನೀವು ಚಿತ್ರಕಲೆಯಲ್ಲಿ ಅವನಿಗೆ ಶಿಕ್ಷಣ ಯಾಕೆ ಕೊಡಿಸಬಾರದು ಸುಬ್ಬಯ್ಯನವರೇ ಎಂದಾಗ ತಂದೆಗೆ ಆಶ್ಚರ್ಯ. ಚಿತ್ರಕಲೆ ಕಲಿಸುವ ಶಾಲೆಗಳು ಉಂಟೆ! ಇನ್ನೊಂದು ಕಡೆ ಅನುಮಾನವೂ ಕೂಡ. ಅದಕ್ಕೆ ಉತ್ತರ ಕಂಡುಕೊಳ್ಳ ಬೇಕೆಂದು ಇವರ ಮೇಲಿನ ಮನೆಯಲ್ಲಿ ಬಾಡಿಗೆ ಇದ್ದವರು ಹೆಚ್.ಎನ್.ಕೃಷ್ಣಮೂರ್ತಿ. ಈ ವ್ಯಕ್ತಿ ಕುವೆಂಪುರವರ ಸಂಪರ್ಕದಲ್ಲಿದ್ದವರು. ತುಂಬಾ ಉತ್ತಮ ಕಲಾವಿದ, ಉತ್ತಮೋತ್ತಮ ಚಿತ್ರಕೃತಿಗಳನ್ನು ಚಿತ್ರಿಸಿದ ಸಂದರ್ಭದಲ್ಲಿ ಕುವೆಂಪುರವರು ವೀಕ್ಷಿಸಿ ಉನ್ನತ ಶಿಕ್ಷಣ ಕಲಿಯಲು ಶಾಂತಿನಿಕೇತನಕ್ಕೆ ಕಳುಹಿಸಿದ್ದರು. ಅಂತಹ ವ್ಯಕ್ತಿ ನಮ್ಮ ಮನೆಯಲ್ಲಿ ಬಾಡಿಗೆ ಇದ್ದಾರೆ. ಅವರನ್ನು ಈ ಕ್ಷೇತ್ರದ ಬಗ್ಗೆ ಕೇಳಿದರೆ ಹೆಚ್ಚಿನ ಮಾಹಿತಿ ಲಭ್ಯವಾಗಬಹುದೆಂದು ತೀರ್ಮಾನಿಸಿ ಮೇಲೆ ಬಂದು ಕೇಳಿದಾಗ ಚಿತ್ರಕಲೆ ಇತಿಹಾಸ ಕಂಡು ಸ್ವತಃ ಕೃಷ್ಣಸೆಟ್ಟಿಯವರ ತಂದೆಯೇ ನಿಬ್ಬೆರಗಾಗಿದ್ದುಂಟು. ಆಟವಾಡುವ ಸಮಯದಲ್ಲಿ ಹೆಚ್.ಎನ್.ಕೃಷ್ಣಮೂರ್ತಿಯವರ ಬಳಿ ಬಂದು ಚಿತ್ರ ರಚಿಸಿರುವುದನ್ನು ತುಂಬಾ ಗಂಭೀರವಾಗಿ ಆಲಿಸುತ್ತಿದ್ದ ಕೃಷ್ಣಸೆಟ್ಟಿ ಸುಮ್ಮನೆ ಕೂರಲಾರದೆ ಬಳಪದಿಂದ ಸ್ಲೇಟಿನಲ್ಲಿ ರೇಖೆಗಳನ್ನು ಮೂಡಿಸಿ ಕಲಾವಿದರಿಗೆ ತೋರಿಸಿ ಸೈಎನಿಸಿಕೊಂಡಿದ್ದನು. ಇದಾದ ಸ್ವಲ್ಪ ದಿನಗಳ ನಂತರ ಆರ್.ಎಸ್.ಎಸ್.ನ ಸದಸ್ಯರಲ್ಲೊಬ್ಬರಾದ ಪಟವರ್ಧನ್ ಪ್ರಜಾವಾಣಿಯಲ್ಲಿನ ಜಾಹಿರಾತನ್ನು ನೋಡಿ ಸುಬ್ಬಯ್ಯರವರಿಗೆ ತಿಳಿಸುತ್ತಾನೆ. ಅದು ದಾವಣಗೆರೆಯಲ್ಲೊಂದು ಚಿತ್ರಕಲಾ ಮಹಾವಿದ್ಯಾಲಯವಿದ್ದು, ಚಿತ್ರಕಲಾ ಶಿಕ್ಷಣಕ್ಕೆ ಅರ್ಜಿ ಆಹ್ವಾನಿಸಲಾಗಿದೆ. ಕಲಿಯಲು ಎಸ್.ಎಸ್.ಎಲ್.ಸಿ ಪಾಸಾಗಿದ್ದರೆ ಸಾಕು ಎಂಬ ಅಂಶವನ್ನು ಹೇಳಿದರು. ಇದನ್ನೆಲ್ಲಾ ಕೇಳಿಸಿಕೊಂಡ ಕೃಷ್ಣಸೆಟ್ಟಿಗೆ ಆಸಕ್ತಿ ಮತ್ತಷ್ಟು ಗರಿಗೆದರಿತು. ಹೋಗಲು ತುದಿಗಾಲಲ್ಲಿ ನಿಂತಿದ್ದರಿಂದ ತಕ್ಷಣಕ್ಕೆ ಪ್ರಜಾವಾಣಿ ಪತ್ರಿಕೆ ಹುಡುಕಿ ಅದರಲ್ಲಿರುವ ಜಾಹಿರಾತನ್ನು ಗಮನಿಸಿದಾಗ ಪ್ರವೇಶ ಪಡೆಯಲು ನಾಳೆಯೇ ಕೊನೆಯ ದಿನ ಎಂಬುದು ಗೊತ್ತಾಯಿತು. ಹೇಗಾದರು ಮಾಡಿ ಪ್ರವೇಶ ಪಡೆಯಲೇಬೇಕು ಅಂದುಕೊಂಡು ತಂದೆಯನ್ನು ಒಪ್ಪಿಸಿ ದಾವಣಗೆರೆ ಕಡೆ ಮುಖಮಾಡಿದರು. ಕಾಲೇಜು ಆವರಣಕ್ಕೆ ಬಂದು ನೋಡಿದರೆ ಕಲ್ಪನೆಗೂ

ಮೀರಿದ ದೃಶ್ಯಗಳು, ವಿಶಾಲವಾದ ಕಾಲೇಜು ಕಟ್ಟಡ (೧೯೭೨), ವಿವಿಧ ವಿಷಯಗಳು ಇದ್ದವು. ಅವುಗಳಲ್ಲೊಂದು ಚಿತ್ರಕಲೆ ಕೃಷ್ಣಸೆಟ್ಟಿಗೆ ಆಸಕ್ತಿ ಕ್ಷೇತ್ರವಾಗಿದ್ದರಿಂದ ಚಿತ್ರಕಲೆಯಲ್ಲಿಯೇ ಪ್ರವೇಶ ಪಡೆದರು. ಅದು ೧೯೭೨ರಲ್ಲಿ. ಆಗಲೇ ಗೊತ್ತಾಗಿದ್ದು ಚಿತ್ರಕಲೆಯಲ್ಲಿಯೂ ಕೂಡ ವಿವಿಧ ಆಯಾಮದ ವಿಷಯಗಳನ್ನು ಒಳಗೊಂಡಿದೆ ಅಂತ. ಆಗ ಚಿ.ಸು.ಕೃಷ್ಣಸೆಟ್ಟಿ ದಾವಣಗೆರೆ ಹೊಸದು ಅಲ್ಲಿರುವ ಜನ ಕೂಡ ಪರಿಚಯವಿರಲಿಲ್ಲ. ಇದಕ್ಕೂ ಮುಂಚೆ ದಾವಣಗೆರೆ ಪ್ರವೇಶ ಮಾಡಿದ್ದ. ಕೃಷ್ಣಸೆಟ್ಟಿ ಅದು ಇಲ್ಲಿಯೇ ಎಂಬ ಅರಿವು ಅವರಿಗಿರಲಿಲ್ಲ ಅಂತಹ ಸಂದರ್ಭವದು.

ಕೃಷ್ಣಸೆಟ್ಟಿ ಪೋಲಿ ಹುಡುಗರ ಮತ್ತು ಸಂಘ ಪರಿವಾರದ ಸದಸ್ಯನಿದ್ದುದ್ದರಿಂದ ಆಗಾಗ ಅಪ್ತ ಗೆಳಯರೊಂದಿಗೆ ಸೇರಿ ಹರಟೆ ಹೊಡೆಯುವುದು, ಸಿನಿಮಾ ನೋಡುವುದನ್ನು ರೂಢಿಸಿಕೊಂಡಿದ್ದರು. ಆದರೆ ಕಾಲಕ್ರಮೇಣ ನಾನು ಇತರರ ಹಾಗೇ ಏನಾದರೊಂದು ಕೆಲಸಮಾಡಿ ಸಂಪಾದನೆ ಮಾಡಬೇಕೆಂದು ಅಲೋಚಿಸಿ ತನಗೆ ಪರಿಚಯ ಇರುವವರೆನ್ನಲ್ಲಾ ಈ ಕುರಿತಂತೆ ವಿಚಾರಿಸುತ್ತಿದ್ದ. ಇದಕ್ಕೆ ಆಸರೆಯಾಗಿದ್ದು ಮಲ್ಲಾಡಿಹಳ್ಳಿಯಲ್ಲಿ ತನ್ನೊಂದಿಗೆ ಕಲಿತಿದ್ದ ಹಳೆಯ ಗೆಳೆಯನೊರ್ವ. ಈತ ದಾವಣಗೆರೆಯಲ್ಲಿ ಕೆಲಸದ ನಿಮಿತ್ತ ವಾಸ್ತವ್ಯ ಹೂಡಿದ್ದ. ಬೇಜಾರಾದಾಗಲೆಲ್ಲಾ ಕೃಷ್ಣಸೆಟ್ಟಿ ಇವನಲ್ಲಿಗೆ ಬರುವ ಅಭ್ಯಾಸವನ್ನು ಇಟ್ಟುಕೊಂಡಿದ್ದ. ನನ್ನ ಜೀವನ ನಿರ್ವಹಣೆಗೆ ಏನಾದರೊಂದು ಕೆಲಸ ಕೊಡಿಸು ಎಂದು ಆತ ತನ್ನ ಗೆಳೆಯನಲ್ಲಿ ಯಾವಾಗಲೂ ಅಂಗಲಾಚಿಸುತ್ತಿದ್ದ. ಅದರಂತೆ ಕೆಲಸ ಯಾವುದಾದರೂ ಸರಿ ಎಂದು ಇಬ್ಬರೂ ಕೂಡ ಕೆಲಸ ಹುಡುಕಲು ಶುರುಮಾಡಿದರು. ತೀವ್ರ ಹುಡುಕಾಟದ ನಂತರ ಇಲ್ಲಿನ ಹದಡಿ ರಸ್ತೆಯಲ್ಲಿದ್ದ ವಿದ್ಯಾರ್ಥಿ ಭವನ ಹೋಟೆಲ್‌ನಲ್ಲಿ ಸಪ್ಲೆಯರ್ ಆಗಿ ಕೃ.ಸೆ.ನೇಮಕಗೊಂಡರು. ಆದರೆ ಹೆಚ್ಚು ದಿನ ಅಲ್ಲಿ ಕೆಲಸ ಮಾಡಲಾಗಲಿಲ್ಲ. ಕೇವಲ ಎರಡೇ ದಿನಗಳ ಕಾಲ ಕೆಲಸ ಮಾಡಿದ ಕೃಷ್ಣಸೆಟ್ಟಿಗೆ ಮೂರನೇ ದಿನ ಹೋಟೆಲ್ ಮ್ಯಾನೇಜರ್ ನಿನಗೆ ಸಪ್ಲೆಯರ್ ಕೆಲಸ ಬರುವುದಿಲ್ಲ. ಇದರ ಬದಲು ಕ್ಲೀನಿಂಗ್ ಮಾಡು ಎಂದಾಗ ಇಲ್ಲ ಆಗುವುದಿಲ್ಲ[೭] ಎನ್ನುತ್ತಾ ಮ್ಯಾನೇಜರ್ ಬಳಿ ಕೃಷ್ಣಸೆಟ್ಟಿ ವಾಗ್ವಾದಕ್ಕಿಳಿದರು. ಈ ಸಂಭಾಷಣೆಯನ್ನು ಬಹು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಕೆಲ ಸಂಘಟನೆಯ ಅನುಯಾಯಿಗಳು ತಾವು ತಿಂಡಿ ತಿನ್ನುವುದನ್ನು ನಿಲ್ಲಿಸಿ ಈ ವ್ಯಕ್ತಿಯನ್ನು ನಾವೆಲ್ಲೋ ನೋಡಿದ್ದೇವಲ್ಲ! ಎನ್ನುವ ಅನುಮಾನದೊಂದಿಗೆ ಎದ್ದು ಬಂದು ಕೃಷ್ಣಸೆಟ್ಟಿಯನ್ನು ಗುರುತಿಸಿದರು. "ಏ ನೀನಾ ನಿಮ್ಮ ಕುಟುಂಬ ಎಂತಹದ್ದು. ಎಂತಹ ಗೌರವವನ್ನು ಸಂಪಾದಿಸಿಕೊಂಡು ಬಂದಿರುವ ಸುಸಂಸ್ಕೃತರ ಕುಟುಂಬ ನಿಮ್ಮದು. ನಿನಗೇನಾಗಿದೆ. ಈ ಕೆಲಸ ಮಾಡುವುದಕ್ಕೆ" ಎಂದೆಲ್ಲಾ ಬುದ್ಧಿ ಹೇಳಿ, ನೀನು ಇಲ್ಲಿ ಕೆಲಸ ಮಾಡುವುದು ಉಚಿತವಲ್ಲ ಎನ್ನುವ ಒಳ್ಳೆಯ ಮಾತುಗಳನ್ನು ಹೇಳುತ್ತಾ ಸ್ವಲ್ಪ

೭. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೩.೧೦.೨೦೧೫

ಹಣಕೊಟ್ಟು ಕೃ.ಸೆ.ಯವರನ್ನು ತೀರ್ಥಹಳ್ಳಿಯ ಬಸ್ ಹತ್ತಿಸಿದರು. ಈ ರೀತಿ ಇವರ ಜೀವನದಲ್ಲಿ ಕೆಲವು ಸಾರಿ ಆಗಿದೆಯೆಂಬುದನ್ನು ಕೃ.ಸೆ.ಆಗಾಗ್ಗೆ ನೆನಪಿಸಿಕೊಳ್ಳುತ್ತಾರೆ.

**ಸಂಘಟನೆ**

ಬದುಕಿನಲ್ಲಿ ಏನಾದರೊಂದನ್ನು ಸಾಧಿಸಲೇಬೇಕು ಎನ್ನುವ ಛಲವನ್ನು ಕೃ.ಸೆ.ಯವರಿಗೆ ಪರಿಸ್ಥಿತಿ ಕಲಿಸಿಕೊಟ್ಟಿತ್ತು. ಹಾಗಾಗಿ ಏನಾದರೂ ಆಗಲಿ ಜೀವನದ ಮುಖ್ಯಘಟ್ಟವನ್ನು ನಾನು ಕಂಡುಕೊಳ್ಳಲೇಬೇಕೆಂಬ ಉದ್ದೇಶದಿಂದ ಪುನಃ ಮೂರನೇ ಬಾರಿಗೆ ಕೃ.ಸೆ. ದಾವಣಗೆರೆಗೆ ಬಂದರು. ಈ ರೀತಿ ಯಾವುದೇ ಪೂರ್ವ ತಯಾರಿ ಇಲ್ಲದೇ ದಾವಣಗೆರೆಯಲ್ಲಿದ್ದ ಮಗನ ನೋಡಿ ಕುಶಲೋಪರಿಯನ್ನು ವಿಚಾರಿಸಲು ಅವರ ತಂದೆ ದಾವಣಗೆರೆಗೆ ಬಂದರು. ನನ್ನ ಮಗ ಈ ಕಾಣದ ಊರಿನಲ್ಲಿ ಎಲ್ಲಿ ಉಳಿದಿದ್ದಾನೋ ಏನು ಎಂದು ಆತಂಕಗೊಂಡು ನಿನ್ನ ವಾಸ್ತವ್ಯ ಎಲ್ಲಿ? ಎಂದಾಗ, ನನ್ನ ಸ್ನೇಹಿತರ ರೂಂ ನಲ್ಲಿಯೇ ನಾನು ಉಳಿದುಕೊಂಡಿರುವೆನು ಎಂದರು. ಕೃ.ಸೆ.ಯ ಈ ಮಾತನ್ನು ಕೇಳಿದ ಅವರ ತಂದೆ ಸಮಾಧಾನಗೊಂಡು ತಮ್ಮ ಸ್ವಸ್ಥಾನಕ್ಕೆ ಮರಳಿದರು.

ನಂತರ ಚಿ.ಸು.ಕೃಷ್ಣಸೆಟ್ಟಿ ಪಿ.ಬಿ.ರಸ್ತೆಯಲ್ಲಿದ್ದ ತಮ್ಮ ಸಂಘಟನೆಯ ಕಛೇರಿಗೆ ಹೋಗಿ ಅಲ್ಲಿನ ಸದಸ್ಯರಾದ ಸೋಮಶೇಖರಪ್ಪನವರ ಬಳಿ ತನ್ನ ಪರಿಸ್ಥಿತಿಯನ್ನು ವಿವರಿಸಿದರು. ಆಗ ಅವರು ಕೃಷ್ಣಸೆಟ್ಟಿಯ ವಾಸ್ತವ್ಯಕ್ಕೆ ಆರ್ಯವೈಶ್ಯ ಹಾಸ್ಟೆಲ್‌ನಲ್ಲಿ ಅವಕಾಶಮಾಡಿಕೊಟ್ಟರು. ಇಲ್ಲಿಂದ ಇವರ ಚಿತ್ರಕಲಾ ಶಿಕ್ಷಣಯಾನ ಪ್ರಾರಂಭವಾಯಿತು, ಅಲ್ಲದೇ ಹಲವು ಏಳು ಬೀಳುಗಳನ್ನು ಕಂಡರು.

ಚಿ.ಸು.ಕೃಷ್ಣಸೆಟ್ಟಿ ಸಂಘಟನೆಯಿಂದಾನೇ ತುಂಬಾ ಕಲಿತರು. ತುಂಬಾ ಚುರುಕಿನ ವ್ಯಕ್ತಿ ಎನಿಸಿಕೊಂಡಿದ್ದ ಪರಿಣಾಮ ಸಂಘಟನೆಯ ಪದಾಧಿಕಾರಿಗಳ ಒತ್ತಾಯದ ಮೇರೆಗೆ ಎಬಿವಿಪಿಯಲ್ಲೂ ಕೆಲಸ ಮಾಡಬೇಕು ಎಂದಾಗ ವಿಧಿಯಿಲ್ಲದೇ ಒಪ್ಪಿಕೊಂಡ ಕೃಷ್ಣಸೆಟ್ಟಿ ದಾವಣಗೆರೆ ನಗರ ಎಬಿವಿಪಿ ಸಂಘಟನೆಯ ಕಾರ್ಯದರ್ಶಿಯಾಗಿ ಆಯ್ಕೆಯಾದರು. ತನ್ನ ಕಾಲೇಜಿನ ಸಮಯವನ್ನು ಅಭ್ಯಾಸಕ್ಕೆ ಬಳಸಿಕೊಂಡು ನಂತರದ ಸಮಯವನ್ನು ಎಬಿವಿಪಿ ಸಂಘಟನೆಗೆ ಮೀಸಲಿಟ್ಟರು. ಇದರಲ್ಲಿ ತುಂಬಾ ತಲ್ಲೀನನಾಗಿ ಕೆಲಸ ಮಾಡಬೇಕಾದಾಗ ಸ್ನೇಹಿತರ ಜೊತೆಗೂಡಿ ಅನೇಕ ಕಾರ್ಯಕ್ರಮಗಳನ್ನು ರೂಪಿಸಿ ಯಶಸ್ವಿಯಾಗಿ ಕಾರ್ಯರೂಪಗೊಳಿಸುತ್ತಿದ್ದರು.

ಅದು ೧೯೭೪ರ ಸಮಯ. ಇಡೀ ದೇಶದಾದ್ಯಂತ ದೊಡ್ಡಮಟ್ಟದ ಜೆ.ಪಿ.ನಾರಾಯಣ ಚಳುವಳಿಯಾಯಿತು. ಅದಕ್ಕೆ ನವನಿರ್ಮಾಣ ಕ್ರಾಂತಿ ಎಂತಲೂ ಕರೆಯುತ್ತಾರೆ. ಇದೇ ಸಂದರ್ಭದಲ್ಲಿ ವಿದ್ಯಾರ್ಥಿ ಸಂಘದ ಪ್ರೆಸಿಡೆಂಟ್ ಆದ ಚಿ.ಸು.ಕೃಷ್ಣಸೆಟ್ಟಿ ಮುಂದೆ ದಾವಣಗೆರೆಯಲ್ಲಿರುವ ಸುಮಾರು ೧೫ಕ್ಕೂ ಹೆಚ್ಚು ಕಾಲೇಜುಗಳನ್ನೊಳಗೊಂಡ ಒಂದು ಕಮಿಟಿಗೆ ಅಂದರೆ ೧೫ ಸಾವಿರಕ್ಕೂ ಹೆಚ್ಚು

ವಿದ್ಯಾರ್ಥಿಗಳನ್ನೊಳಗೊಂಡ ಒಂದು ಗುಂಪಿಗೆ ಅಧ್ಯಕ್ಷರಾಗಿ ಆಯ್ಕೆಯಾದರು(ಇದರಲ್ಲಿ ಮೆಡಿಕಲ್ ಕಾಲೇಜು, ಇಂಜಿನಿಯರಿಂಗ್ ಕಾಲೇಜು, ಪಾಲಿಟೆಕ್ನಿಕ್, ಡಿ.ಆರ್.ಎಂ. ಮುಂತಾದವುಗಳು). ಆಗಿನ ಕಾಲವೇ ಬೇರೆ ಅದು. ಯಾವ ರೀತಿ ಎಂದರೆ "ಒಗ್ಗಟ್ಟಿನಲ್ಲಿ ಬಲವಿದೆ" ಎಂಬುದನ್ನು ವಿದ್ಯಾರ್ಥಿಗಳನ್ನು ನೋಡಿ ಕಲಿಯುವಂತಹ ದಿನಗಳವು. ವಿದ್ಯಾರ್ಥಿಗಳು, ಸ್ನೇಹಿತರು ಯಾವುದೇ ವಿದ್ಯಾರ್ಥಿಗೆ ಸಮಸ್ಯೆ ಎದುರಾಯಿತೆಂದರೆ ಬಗೆಹರಿಯುವವರೆಗೂ ಬಿಡುತ್ತಿರಲಿಲ್ಲ. ಸಂಘಟನೆಯ ಮೂಲಕ ಯಶಸ್ವಿಯಾಗುತ್ತಿದ್ದರು. ಇದಕ್ಕೆಲ್ಲಾ ಬೆಂಬಲ ನೀಡುತ್ತಿದ್ದವರೆಂದರೆ[೮] ಚಿ.ಸು.ಕೃಷ್ಣಸೆಟ್ಟಿ.

ವರ್ಷದ ಕೊನೆಯ ಘಟ್ಟ ಸೆಪ್ಟೆಂಬರ್ ಬಂತೆಂದರೆ ಯಾವುದಾದರೂ ಸರಿ ಆ ವಿಷಯದ ಮೇಲೆ ಪ್ರತಿಭಟನೆ ಮಾಡಲೇಬೇಕಾದ ಅನಿವಾರ್ಯತೆ ಒದಗಿಬರುತ್ತಿತ್ತು. ಅಂತಹದ್ದಕ್ಕೆ ಸಾಕ್ಷಿಯಾಗಿದ್ದು, ಹೋಟೆಲ್‌ನಲ್ಲಿಯ ತಿಂಡಿ ತಿನಿಸುಗಳ ಬೆಲೆ ಗಗನಕ್ಕೇರಿದ್ದು, ಈ ವಿಷಯವನ್ನು ಮುಖ್ಯವಾಗಿಟ್ಟು ಕೊಂಡು ಜಿಲ್ಲೆಯಾದ್ಯಂತ ಪ್ರತಿಭಟನೆ ಶುರುವಾಯಿತು. ಸಾವಿರಾರು ವಿದ್ಯಾರ್ಥಿಗಳು ಭಾಗಿಯಾಗಿದ್ದರು. ಇದೇ ಸಂದರ್ಭದಲ್ಲಿ ಬಿಸಿರಕ್ತ, ಯುವಪೀಳಿಗೆಯ ಪ್ರತಿಭಟನೆಯ ಖದರೇ ಬೇರೆ ಅಲ್ವ, ಅದೇ ರೀತಿ ಪ್ರತಿಭಟನೆ ತಾರಕಕ್ಕೇರಿ ಹೋಟೆಲ್‌ಗಳ ಮೇಲೆ ಕಲ್ಲು ತೂರಾಟ ನಡೆಸಿ ಹೆಚ್ಚಿನ ದಾಂಧಲೆ ಯಾಗುವಂತೆ ನೋಡಿ ಕೊಂಡರು. ಅದು ಬೇರೆ ಯಾರು ಅಲ್ಲ ಕಿಡಿಗೇಡಿಗಳು, ಪುಂಡ ಪೋಕರಿಗಳು, ಎಬಿವಿಪಿ ವಿದ್ಯಾರ್ಥಿ ಮಿತ್ರರು ಸೌಮ್ಯದಿಂದಲೇ ಪ್ರತಿಭಟನೆ ಕೈಗೊಂಡಿದ್ದರು. ಆದರೆ ಅದಕ್ಕೆ ಈ ಕಿಡಿಗೇಡಿಗಳು ಉರಿಯುವ ಬೆಂಕಿಗೆ ತುಪ್ಪ ಸುರಿದಂತೆ ದಾಂಧಲೆ ಮಾಡಿ ಸಾವಿರಾರು ಜನರನ್ನು ಚದುರುವಂತೆ ಮಾಡಿದರು. ಈ ಸಂದರ್ಭದಲ್ಲಿ ಪದಾಧಿಕಾರಿಗಳನ್ನು ಕರೆಯಲು ಹೋದ ಚಿ.ಸು.ಕೃಷ್ಣಸೆಟ್ಟಿ ಬರುವಷ್ಟರಲ್ಲಿ ದೊಡ್ಡ ಜಂಜಾಟವೇ ನಡೆದುಹೋಯಿತು. ಪೊಲೀಸ್ ಮತ್ತು ವಿದ್ಯಾರ್ಥಿಗಳ ನಡುವೆ ನೇರ ಕಾದಾಟ ಶುರುವಾಗಿದೆ. ಮೈಕ್ ಹಿಡಿದು ಗಟ್ಟಿ ದನಿ ಎತ್ತಿ ಮಾತನಾಡಿದ ಚಿ.ಸು.ಕೃಷ್ಣಸೆಟ್ಟಿ ಸ್ನೇಹಿತರೇ ಇದು ಮೌನ ಪ್ರತಿಭಟನೆಯಾಗಬೇಕೆ ವಿನಃ ರಣರಂಗವಾಗಬಾರದು. ನಾವು ಮತ್ತೊಬ್ಬರಿಗೆ ಮಾದರಿಯಾಗಬೇಕೆ ವಿನಃ ಪುಡಾರಿಗಳೆನಿಸಿಕೊಳ್ಳಬಾರದು. ನಾವು ವಿದ್ಯಾವಂತರು, ಬುದ್ಧಿವಂತರು, ಸರಸ್ವತಿಯ ಆರಾಧಕರು ಇಲ್ಲಿ ಏನೇ ನಡೆದರೂ ನಮ್ಮ ರಕ್ಷಣೆಗೆ ಪೊಲೀಸ್ ಸರ್ಪ ಕಾವಲಿದೆ. ಅಂತಹ ಘಟನೆ ಸಂಭವಿಸುವುದಕ್ಕೆ ಬಿಡುವುದಿಲ್ಲ. ದಯವಿಟ್ಟು ಸೌಮ್ಯದಿಂದ ವರ್ತಿಸಿ ಎಂದು ಮಾತನಾಡುತ್ತಿರುವಾಗಲೇ ಅವರಿಗೂ ಒಂದು ಕಲ್ಲು ಮುಖಕ್ಕೆ ಬೀಳುತ್ತದೆ. ತುಂಬಾ ರಕ್ತ ಹರಿದು ಗಾಯ ವಾಸಿಯಾದರೂ ಕಲೆ ಹಾಗೆಯೇ ಉಳಿದಿರುತ್ತದೆ. ಅದು ಈ ಪ್ರತಿಭಟನೆಯ ಪರಿಣಾಮವೆಂದರೆ ತಪ್ಪಾಗಲಾರದು. ತಕ್ಷಣಕ್ಕೆ ಆಸ್ಪತ್ರೆಗೆ ಕೊಂಡೊಯ್ದು ಬ್ಯಾಂಡೇಜ್ ಎಲ್ಲಾ ಮಾಡಿಸಿಕೊಂಡು ತಕ್ಷಣಕ್ಕೆ ಹಿಂದಿರುಗಿದ ಕೃಷ್ಣಸೆಟ್ಟಿ ವಿದ್ಯಾರ್ಥಿಗಳನ್ನು ಸರಿಪಡಿಸಲು ಎಷ್ಟೇ ಪ್ರಯತ್ನಪಟ್ಟರೂ ಅದು ಸಾಧ್ಯವಾಗಲಿಲ್ಲ. ಇದರಿಂದ ತೀವ್ರಗೊಂಡ ಪ್ರತಿಭಟನೆ ನಿಲ್ಲಿಸಲು

೮. ಪದ್ಮಾನಾಭನ್ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೩.೧೦.೨೦೧೫

ಸೆಕ್ಷನ್ ೧೪೪ ಜಾರಿಗೊಳಿಸಿದರು. ತದನಂತರ ಸ್ವತಃ ಜಿಲ್ಲಾಧಿಕಾರಿ ಸ್ಥಳಕ್ಕೆ ಬಂದು ಸಂಧಾನ ಮಾಡಿದ್ದು ಫಲನೀಡಿತು. ಅದಕ್ಕೂ ಮುಂಚೆ ಮುನ್ಸಿಪಲ್ ಅಧ್ಯಕ್ಷರನ್ನೊಳಗೊಂಡ ಕಮಿಟಿ ಜೊತೆ ಕೃಷ್ಣಸೆಟ್ಟಿ ಮತ್ತು ಸ್ನೇಹಿತರು ಹೋಟೆಲ್‌ನ ಬೆಲೆ ದುಬಾರಿಯಾಗಿದೆ. ನೀವಿದನ್ನು ಕಡಿಮೆ ಮಾಡಲೇಬೇಕು ಎಂಬ ಬೇಡಿಕೆಯಿಟ್ಟಾಗ ಸಾರಾಸಗಟಾಗಿ ತಿರಸ್ಕರಿಸಿದ ಮುನ್ಸಿಪಲ್ ಅಧ್ಯಕ್ಷರ ವರ್ತನೆಗೆ ಬೇಸರಗೊಂಡ ಪ್ರತಿಭಟನಕಾರರು ಜಿಲ್ಲಾಧಿಕಾರಿಗಳು ಮಧ್ಯಸ್ತಿಕೆಯನ್ನು ವಹಿಸಿಕೊಂಡು ಈ ಸಮಸ್ಯೆಯನ್ನು ಬಗೆಹರಿಸಬೇಕೆಂದು ಹಠ ಹಿಡಿದಿದ್ದರಿಂದ ಖುದ್ದು ಜಿಲ್ಲಾಧಿಕಾರಿಗಳು ಪ್ರತಿಭಟನಾ ಸ್ಥಳಕ್ಕೆ ಆಗಮಿಸಿದರು.

ಯಾವ ಕಾರಣಕ್ಕೆ ಬೆಲೆ ಏರಿಸಲಾಗಿದೆ ಎಂಬ ಜಿಲ್ಲಾಧಿಕಾರಿಗಳ ಪ್ರಶ್ನೆಗೆ ಈಗಿನ ದವಸ ಧಾನ್ಯಗಳ ಬೆಲೆಯು ಗಗನಕ್ಕೇರಿದೆ ಅದರ ನಿಮಿತ್ತ ತಿಂಡಿ-ತಿನಿಸುಗಳ ಬೆಲೆಯನ್ನು ಏರಿಸಲಾಗಿದೆ ಎಂದಾಗ ಅಧ್ಯಕ್ಷರಾದ ಚಿ.ಸು.ಕೃಷ್ಣಸೆಟ್ಟಿ ಪ್ರಯೋಗ ಮಾಡಲು ಮುಂದಾದರು. ಅದೇನೆಂದರೆ ಯಾವ ತಿಂಡಿಗೆ ಎಷ್ಟು ಖರ್ಚಾಗುತ್ತದೆ ಎಂಬುದನ್ನು ಅರಿವು ಮೂಡಿಸಿದ ಸಂದರ್ಭಕ್ಕೆ ಜಿಲ್ಲಾಧಿಕಾರಿಗಳೇ ಶಹಬ್ಬಾಸ್‌ಗಿರಿ ಹೇಳಿ ಹೋಟೆಲ್‌ನ ಮಾಲಿಕರಿಗೆ ಈಗ ಏನೇಳ್ತೀರಾ ಹೇಳಿ ಎಂದಾಗ ಮೌನ ವಹಿಸಿದ್ದನ್ನು ಕಂಡ ಮುನ್ಸಿಪಲ್ ಅಧ್ಯಕ್ಷ ಮತ್ತು ಜಿಲ್ಲಾಧಿಕಾರಿ ಒಂದು ತೀರ್ಮಾನಕ್ಕೆ ಬಂದರು. ಅದೇನೆಂದರೆ ಈಗಿರುವ ತಿಂಡಿಗಳ ಬೆಲೆಯಲ್ಲಿನ ಶೇ. ೩೦ರಷ್ಟು ಕಡಿಮೆ ಮಾಡಲೇಬೇಕು ಎಂದಾಗ ಹೋಟೇಲ್ ಮಾಲೀಕರು ಸ್ಥಳದಲ್ಲಿಯೇ ಪ್ರತಿಭಟಿಸಿದರು.

ಇದೇ ಸಂದರ್ಭದಲ್ಲಿ ವಿದ್ಯಾರ್ಥಿ ಮಿತ್ರರೆಲ್ಲಾ ಸೇರಿ ರಾಜ್ಯದ ಯಾವ ಮೂಲೆಯಲ್ಲೂ ಇರದ "ಕೆಫಿಟೇರಿಯಾ" ಹೋಟೆಲ್‌ನ್ನು ಈಗಿರುವ ಮುನ್ಸಿಪಲ್ ಕಛೇರಿ ಹಿಂಭಾಗದಲ್ಲಿ ತೆರೆದು ಕಡಿಮೆ ದರದಲ್ಲಿ ತಿಂಡಿಗಳನ್ನು ವಿತರಿಸಲು ಆರಂಭಮಾಡಿದರು. ಇದು ರಾಜ್ಯ, ರಾಷ್ಟ್ರ ಮಟ್ಟದಲ್ಲಿ ಯಶಸ್ಸನ್ನು ಕಂಡಿತು. ಇದಾದ ನಂತರ ಎಬಿವಿಪಿ ರಾಜ್ಯ ಕಾರ್ಯದರ್ಶಿ ಯನ್ನಾಗಿ ನೇಮಿಸಲಾಯಿತು. ತದನಂತರ ಜೆ.ಪಿ.ಚಳುವಳಿ ಬಂದಿತು. ಜಯಪ್ರಕಾಶ್ ನಾರಾಯಣ್ ಎಲ್ಲಾ ಕಡೆ ತಿರುಗಾಡಿ ಭಾಷಣವನ್ನು ಮಾಡಿದ ಸಂದರ್ಭ. ಈ ಸಮಯದಲ್ಲಿ ದಾವಣಗೆರೆಯಲ್ಲಿಯೂ ಜೆ.ಪಿ.ಯವರ ಸ್ವಾಗತ ಸಮಿತಿಯಾಯಿತು. ಅದರ ಅಧ್ಯಕ್ಷತೆಯನ್ನು ಎಸ್.ನಿಜಲಿಂಗಪ್ಪನವರು ವಹಿಸಿಕೊಂಡಿದ್ದರು. ಇವರ ಜೊತೆ ಕಾರ್ಯದರ್ಶಿಗಳಾಗಿ ಕೆ.ಜಿ.ಮಹೇಶ್ವರಪ್ಪ ನಂತರವರ ಜೊತೆ ಚಿ.ಸು.ಕೃಷ್ಣಸೆಟ್ಟಿಯೂ ಒಬ್ಬರು. ಸುಮಾರು ಎಪ್ಪತ್ತೈದು ಸಾವಿರ ಜನಸಂಖ್ಯೆಯ ಬೃಹತ್ ಸಮಾವೇಶ ಯಶಸ್ವಿಯಾಗುವುದಕ್ಕೆ ಪರೋಕ್ಷವಾಗಿ[೯] ಕೃಷ್ಣಸೆಟ್ಟಿಯವರು ಕಾರಣವಾಗಿದ್ದರು.

೧೯೭೪ರಲ್ಲಿ ಜಯಪ್ರಕಾಶ್ ನಾರಾಯಣ್‌ರವರು ಸಂಪೂರ್ಣ ಕ್ರಾಂತಿಯ ಭಾಗವಾಗಿ ರಾಜ್ಯದ ಜ್ವಲಂತ ಸಮಸ್ಯಗಳಿಗೆ ಪರಿಹಾರಗಳನ್ನು ಕಂಡು ಕೊಳ್ಳಲು ಮತ್ತು ಅವುಗಳ ವಿರುದ್ಧದ

೯. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೨೭.೧೨.೨೦೧೫

ಸಮಗ್ರ ಹೋರಾಟಕ್ಕಾಗಿ ಒಂದು ರಾಜ್ಯ ಮಟ್ಟದ ವಿದ್ಯಾರ್ಥಿಗಳ ಕಮಿಟಿಯನ್ನು ರಚಿಸಿದರು. ಅದರಲ್ಲಿ ಚಿ.ಸು.ಕೃಷ್ಣಸೆಟ್ಟಿಯ ಹೆಸರು ಇತ್ತು. ಅದು ಅವರು ಸದಸ್ಯರಾಗಿ ನೇಮಕಗೊಂಡಿದ್ದರು. ಆ ಸಂಘಕ್ಕೆ 'ವಿದ್ಯಾರ್ಥಿ ಯುವಜನ ಸಂಘರ್ಷ ಸಮಿತಿ' ಅಂತ ಹೆಸರಿಟ್ಟಿದ್ದರು. ಈ ಸಂಘಟನೆಯನ್ನು ಬೆಳೆಸಲು ಕೃ.ಸೆ.ದಾವಣಗೆರೆಯಿಂದ ಬೆಂಗಳೂರಿಗೆ ಬಂದು ಇಲ್ಲಿ ಸಂಪರ್ಕ ಸಾಧಿಸಿದರು. ಅಲ್ಲದೇ ಆ ಸಂಘಟನೆಯನ್ನು ಉತ್ತಮವಾಗಿ ಕಟ್ಟಿದರು.

೧೯೭೫ ಜೂನ್ ೨೬ರಲ್ಲಿ ಇಂದಿರಾಗಾಂಧಿ ತುರ್ತುಪರಿಸ್ಥಿತಿ ಘೋಷಣೆ ಮಾಡಿದ್ದರು. ಇದೇ ತಿಂಗಳ ೨೮ಕ್ಕೆ ವಿದ್ಯಾರ್ಥಿಗಳ ಸಭೆ ನಿಗದಿಪಡಿಸಿದ್ದಾಯಿತ್ತು. ದೊಡ್ಡ ದೊಡ್ಡ ಮುಖಂಡರುಗಳನ್ನು ಜೈಲಿಗೆ ಹಾಕಿದ ಸಂದರ್ಭವದು. ಆದರೆ ದಾವಣಗೆರೆ ಪೊಲೀಸರಿಗೆ ಒಂದು ರೀತಿ ಗೊಂದಲ ಸೃಷ್ಟಿಗೊಂಡಿತ್ತು. ತುರ್ತುಪರಿಸ್ಥಿತಿ ಏನೋ ಘೋಷಣೆ ಆಗಿದೆ. ಆದರೆ ಸಂಘದ ಮುಖ್ಯಸ್ಥರನ್ನು ಬಂಧಿ ಮಾಡಬೇಕೆ, ಬೇಡವೇ ಅನ್ನುವ ಗೊಂದಲದಲ್ಲಿದ್ದರು. ಈ ಎರಡು-ಮೂರು ದಿನ ತಡೆ ನಿಂತರು. ಈ ಸಂದರ್ಭದಲ್ಲಿ ನಮಗೂ ಕೂಡ ಬಂಧನ ಮಾಡಬಹುದು ಎನ್ನುವ ಭಯ ಒಂದು ಕಡೆ ಎನ್ನುವ ಕೃಷ್ಣಸೆಟ್ಟಿ ಆ ಸಂದರ್ಭದಲ್ಲಿ ತಪ್ಪಿಸಿಕೊಂಡು ಶಿವಮೊಗ್ಗಕ್ಕೆ ಹೋಗಿ ಅಲ್ಲಿಂದ ತೀರ್ಥಹಳ್ಳಿಗೆ ತಲುಪಿದರಂತೆ. ನಂತರ ಶಿವಮೊಗ್ಗದಲ್ಲಿರುವ ಆರ್.ಎಸ್.ಎಸ್. ಮುಖಂಡ ರನ್ನು ಕಾಣಲು ತೆರಳಿದಾಗ ಆ ವ್ಯಕ್ತಿ ಸಿಗಲಿಲ್ಲ. ಮರುದಿನ ಬನ್ನಿ ಎಂದರು. ಏನು ಮಾಡುವುದು ಅಂದುಕೊಂಡು ಮರುದಿನ ಆ ಸ್ಥಳಕ್ಕೆ ಹೋದರೆ ಆಶ್ಚರ್ಯ ಆಯಿತು. ಅದೇನೆಂದರೆ ಆರ್.ಎಸ್.ಎಸ್ ಮುಖಂಡನನ್ನು ಬಂಧನ ಮಾಡಿದ್ದಾರೆ ಎಂಬುದು. ಅದನ್ನು ಕೇಳಿದ ತಕ್ಷಣಕ್ಕೆ ಯಾರಿಗೂ ಕಾಣದ ರೀತಿಯಲ್ಲಿ ಕಣ್ಮರೆಯಾದರು. ತೀರ್ಥಹಳ್ಳಿಗೆ ಹೋಗೋಣ ಎಂದರೆ ಅಲ್ಲಿಗೂ ಪೊಲೀಸರು ಬರಬಹುದೇನೋ ಎಂದುಕೊಂಡು ಶಿವಮೊಗ್ಗದಲ್ಲೇ ಅಲೆದಾಡಿ ಮತ್ತೆ ದಾವಣಗೆರೆ ಕಡೆ ಮುಖ ಮಾಡಿದರು. ೨೮, ೨೯ಕ್ಕೆ ಕಾನ್ಫರೆನ್ಸ್ ನಿಗದಿ ಆಗಿತ್ತು. ಪೊಲೀಸರಿಗೂ ತಿಳಿಸದ ಹಾಗೆ ಒಂದು ಶೆಡ್‌ನಲ್ಲಿ ನಡೆಸುತ್ತಾರೆ. ಅದು ೧೯೭೫ ಜೂನ್ ತಿಂಗಳಲ್ಲಿ ಪ್ರಾರಂಭವಾದ ತುರ್ತುಪರಿಸ್ಥಿತಿ ಸುಮಾರು ೧೮ ತಿಂಗಳು ನಿರಂತರವಾಗಿ ನಡೆದಿತ್ತು. ಈ ಅವಧಿಯಲ್ಲಿ ಮೊದಲನೇ ಸಲ ಚಿ.ಸು.ಕೃಷ್ಣಸೆಟ್ಟಿಯವರನ್ನು ಬಂಧಿಸಲಾಯಿತು. ಮೊದಲು ಸುಮಾರು ೨೫ ದಿನಗಳ ಕಾಲ ದಾವಣಗೆರೆ ಜೈಲಲ್ಲಿ ಕೂಡಿಹಾಕಲಾಯಿತು. ಅಲ್ಪ ದಿನಗಳ ನಂತರ ಬಿಡುಗಡೆಗೊಳಿಸಿದರು.

ಪದೇ ಪದೇ ಪೊಲೀಸ್‌ನವರು ಹೋರಾಟ ಮಾಡುವ ಮುಖ್ಯಸ್ಥರನ್ನು ಹುಡುಕುವುದು, ಸಿಕ್ಕರೆ ಜೈಲಿಗೆ ಹಾಕುವಂತಹ ಪರಿಸ್ಥಿತಿ ನಿರ್ಮಾಣವಾಗಿತ್ತು. ಈ ಹಂತದಲ್ಲಿ ಕೃಷ್ಣಸೆಟ್ಟಿ ಇದ್ದ ಆರ್ಯವೈಶ್ಯ ಹಾಸ್ಟೆಲ್‌ನಿಂದ ತಪ್ಪಿಸಿಕೊಂಡು ತಿರುಗಾಡುತ್ತಿದ್ದರು. ಆ ಸಂದರ್ಭದಲ್ಲಿ ಇವರ ಸ್ನೇಹಿತರು ಹಾಗೂ ವಿದ್ಯಾರ್ಥಿಗಳು ತುಂಬಾ ಬೆಂಬಲ ಕೊಡುತ್ತಿದ್ದರಂತೆ. ಹಾಸ್ಟೆಲ್‌ನಲ್ಲಿದ್ದು

ಪೊಲೀಸರಿಗೆ ಚಳ್ಳೆಹಣ್ಣು ತಿನ್ನಿಸುತ್ತಿದ್ದರು. ಇವರ ವಿದ್ಯಾರ್ಥಿ ಸಂಘದಲ್ಲಿ ಒಬ್ಬ ಸೆಕ್ರೆಟರಿ ಇದ್ದ ಅವನೇ ಸಿರಾಜ್ ಅಹಮ್ಮದ್. ಅವನಿಗೆ ಪೊಲೀಸ್ ಹೇಳಿದ್ದು ಹೀಗೆ "ನೀವು ಹೇಗಾದರೂ ಮಾಡಿ ಚಿ.ಸು.ಕೃಷ್ಣಸೆಟ್ಟಿಯನ್ನು ನಮ್ಮ ಕಸ್ಟಡಿಗೆ ಒಪ್ಪಿಸಿ ಇಲ್ಲವೆಂದರೆ ನಿಮ್ಮೆಲ್ಲರ ಮೇಲೆ ಕ್ರಮ ತೆಗೆದುಕೊಳ್ಳಬೇಕಾಗುತ್ತದೆ" ಅಂದಾಗ ಮರುದಿನವೇ ಸಿರಾಜ್ ಶೆಖ್, ಕೃಷ್ಣಸೆಟ್ಟಿಗೆ ಕರೆ ಮಾಡಿ ದಾವಣಗೆರೆಯ ಪಾರ್ಕ್‌ಗೆ ಬರಲು ಹೇಳಿದ. ಸಂಘಪರಿವಾರದಲ್ಲಿ ಏನೋ ಮುಖ್ಯ ಕೆಲಸವಿರಬೇಕು ಅಂದುಕೊಂಡು ಹೇಳಿದ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಕೃ.ಸೆ.ಹೋಗುತ್ತಾರೆ. ಈ ಘಟನೆಯನ್ನು ಕೃ.ಸೆ. ಈ ರೀತಿ ವಿವರಿಸುತ್ತಾರೆ. 'ಆದಾಗಲೇ ಇನ್ಸ್‌ಪೆಕ್ಟರ್ ಶಿವಣ್ಣ ಎಂಬ ವ್ಯಕ್ತಿ ಬಂದು ಏನ್ರಿ ಶೆಟ್ರೆ ಅಂತ ಅಂದಿದ್ದೇ ತಡ ನಮಗೆ ಗೊತ್ತಾಯ್ತು ಅರೆಸ್ಟ್ ಮಾಡುತ್ತಾರೆಂದು. ಆಗ ಇನ್ನೇನೂ ಮಾಡಲಾಗದೆ ಸ್ಥಿತಿ ನನ್ನದಾಗಿತ್ತು. ಬೇರೆ ದಾರಿ ಕಾಣದೇ ಅವರ ಜೊತೆ ನೇರವಾಗಿ ಪೊಲೀಸ್ ಸ್ಟೇಷನ್‌ಗೆ ಹೋದೆ. ಮರುದಿನ ನನ್ನನ್ನು ದಾವಣಗರೆಯಿಂದ ಬಳ್ಳಾರಿಗೆ ಸ್ಥಳಾಂತರಿಸಿದರು. ನನ್ನ ಮೇಲೆ DIR ಮತ್ತು MISA ಮೊಕದ್ದಮೆಗಳನ್ನು ಹಾಕಿದರು.(DIR ಅಂದ್ರೆ Difince of India Rules ಮತ್ತು MISA ಅಂದರೆ Maintence of Internal Security Act) ತುಂಬಾ ದೊಡ್ಡವರಿಗೆ ಮಾತ್ರ ಇಂತಹ ಮೊಕದ್ದಮೆ ಹಾಕಲು ಸಾಧ್ಯ'. ಅಂತಹ ದೊಡ್ಡ ಮೊಕದ್ದಮೆಗಳನ್ನು ವಿಧ್ಯಾರ್ಥಿ ಮುಖಂಡರಾಗಿದ್ದ ಚಿ.ಸು.ಕೃಷ್ಣಸೆಟ್ಟಿಯವರ ಮೇಲೆ ಹಾಕಲಾಯಿತು. ಇದೇ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲಾಧಿಕಾರಿ ಇವರನ್ನು ಗಡಿಪಾರು ಮಾಡಿದರು. ಇವರು ಒಟ್ಟು ೧೪ ತಿಂಗಳು ಬಳ್ಳಾರಿ ಜೈಲಿನಲ್ಲಿದ್ದರು. ಆ ಸಮಯದಲ್ಲಿ ಒಂದೊಂದು ಬಾರಿ ಇವರನ್ನು ಬೆಂಗಳೂರಿಗೆ ಕರೆದುಕೊಂಡು ಹೋಗಿ ಬರೋರು. ಕಾರಣ ಎಬಿಎಸ್ ಎನ್ನುವ ಮತ್ತೊಂದು ಕೇಸನ್ನು ಇವರ ಮೇಲೆ ಹಾಕಿದ್ದರು. ಏಕೆಂದರೆ ಬಂಧನ ಮಾಡಿರುವುದರ ವಿರುದ್ಧ ಇವರು ಹೋರಾಡುತ್ತಿದ್ದ ಕಾರಣಕ್ಕೆ ನಮ್ಮನ್ನು ಬೆಂಗಳೂರಿನ ಕೋರ್ಟ್‌ಗೆ ಕರೆದುಕೊಂಡು ಬರೋರು. ಇಂತಹ ಸಮಯದಲ್ಲಿ ಬೆಂಗಳೂರು ಜೈಲಿನಲ್ಲಿಯೂ ಇವರನ್ನು ಕೆಲ ತಿಂಗಳು ಇಡಲಾಯಿತು. ಇವರಿಗೆ ಅಲ್ಲಿ ಕೆಲವು ಮುಖಂಡರ ಪರಿಚಯವಾಯಿತು. ಅವರೆಂದರೆ ಲಾಲ್‌ಕೃಷ್ಣ ಅಡ್ವಾಣಿ, ಎಸ್.ಎನ್.ಮಿಶ್ರ, ಮಧು ದಂಡವತೆ, ಎಸ್.ವೆಂಕಟರಾಮ್ ಪ್ರಮುಖರಾಗಿದ್ದರು. ಲೆಫ್ಟಿಸ್ಟ್‌ಗಳ ತುರ್ತುಪರಿಸ್ಥಿತಿ ವಿರುದ್ಧ ಯಾವ ಪಕ್ಷದವರಿದ್ದಾರೋ ಅವರನ್ನೆ ಒಂದು ಕಡೆ ಸೇರಿಸಲಾಗಿತ್ತು. ಲಾಲ್‌ಕೃಷ್ಣ ಅಡ್ವಾಣಿಯವರು ಚಿ.ಸು.ಕೃಷ್ಣಸೆಟ್ಟಿಯವರನ್ನು ನೋಡಿ ತುಂಬಾ ಖುಷಿಪಟ್ಟರು. ಕಾರಣ ಒಬ್ಬ ಕಲಾವಿದ ಅಂತ(ಈ ಹೋರಾಟದ ಸಂದರ್ಭದಲ್ಲಿ ಕಾರ್ಯಕ್ರಮ ಒಂದಕ್ಕೆ ಅತಿಥಿಯಾಗಿ ಬಂದು ಮಾತನಾಡುವಾಗ ಬಂಧನ ಮಾಡಿದ್ದರ ಸಂಬಂಧ ಜೈಲಿನಲ್ಲಿದ್ದರು) ಇವರು ನನಗೆ ಚಿತ್ರಕಲೆಯನ್ನು ಕಲಿಸಬೇಕು ಎಂದಾಗ ತುಂಬಾ ಆಶ್ಚರ್ಯಚಕಿತರಾದ ಚಿ.ಸು.ಕೃಷ್ಣಸೆಟ್ಟಿರವರು[೧೦] ಪ್ರೀತಿಯಿಂದ ಅಪ್ಪಿಕೊಂಡು ಇಂತಹ ಒಬ್ಬ ವ್ಯಕ್ತಿ ನನ್ನ ಶಿಷ್ಯನಾಗೋದ ಅಂತ ಮನಸ್ಸಿನಲ್ಲೇ ಅಂದುಕೊಂಡರು. ಕೃಷ್ಣಸೆಟ್ಟಿ

ಪ್ರತಿದಿನ ಬೆಳಿಗ್ಗೆ ೧೦:೩೦ ರಿಂದ ೧೧:೩೦ ರವರೆಗೆ ಸಮಯ ನಿಗದಿಮಾಡಿ ಅಡ್ವಾನಿಯವರಿಗೆ ಚಿತ್ರಕಲೆಯನ್ನು ಹೇಳಿಕೊಟ್ಟು ಅವರ ಸಹನೆ, ಪ್ರೀತಿ, ಕಾಳಜಿಗೆ ಮಾರುಹೋದರು. ಸುಮಾರು ೨ ತಿಂಗಳು ಪಾಠ ಮಾಡಿದ ಚಿ.ಸು.ಕೃಷ್ಣಸೆಟ್ಟಿಗೆ ಇವರ ನಡುವಿನ ಸಂಬಂಧ ದೊಡ್ಡದಾಗಿ ಬೆಳೆಯಿತು.[೧೧]

ಜೈಲಿನಲ್ಲಿ ಹೋರಾಟದಿಂದ ಬಂದಂತಹ ಗಣ್ಯರಿಗೆ ಹಾಗೂ ಚಿ.ಸು.ಕೃಷ್ಣಸೆಟ್ಟಿ ಅಂತಹವರಿಗೆ ಏನೂ ಕೆಲಸವಿರುತ್ತಿರಲಿಲ್ಲ. ಬದಲಾಗಿ ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ಹೊರಗಡೆ ಬರುತ್ತಿದ್ದರು. ಅಲ್ಲಿ ಅನೇಕ ಚರ್ಚೆಗಳು ನಡೆಯುತ್ತಿದ್ದವು. ಅಲ್ಲಿಯು ಕೂಡ ಅನೇಕ ವಿಷಯಗಳನ್ನು ತಿಳಿದು ಕೊಳ್ಳಲಾಯಿತು. ನಾಗಪ್ಪ ಆಳ್ವ, ಜೀವರಾಜ್ ಆಳ್ವ ತುಂಬ ದೊಡ್ಡವರೆಲ್ಲಾ ಈ ಜೈಲಿನಲ್ಲಿದ್ದಾಗ ನಾನು ಕೂಡ ಕಲಿತದ್ದು ತುಂಬಾನೆ ಎನ್ನುತ್ತಾರೆ ಚಿ.ಸು.ಕೃಷ್ಣಸೆಟ್ಟಿಯವರು(ಜೈಲಲ್ಲಿ ನಾಟಕ ಮಾಡುವುದು, ಸಾಂಸ್ಕೃತಿಕ ಚಟುವಟಿಕೆಯನ್ನು ಹೆಚ್ಚು ನಡೆಸಿಕೊಡುತ್ತಿದ್ದರು).

ಜೈಲಿನಲ್ಲಿ ಎರಡು ವಿಭಾಗ ಇತ್ತು. ದೊಡ್ಡ ದೊಡ್ಡ ಮುಖಂಡರನ್ನೆಲ್ಲಾ ಒಂದು ಕಡೆ ಇಟ್ಟಿದ್ದರೆ, ಸಾಮಾನ್ಯ ವ್ಯಕ್ತಿಗಳನ್ನು ಒಂದು ಕಡೆ ಇಡಲಾಗಿತ್ತು. ಆ ಸಂದರ್ಭದಲ್ಲಿ ಎಲ್.ಕೆ.ಅಡ್ವಾಣಿಯವರ ಪರಿಚಯವಾದ ಮೇಲೆ ಅವರಿದ್ದಲ್ಲಿಗೆ ಹೋಗಿ ಚಿತ್ರಕಲೆಗಳು ಕುರಿತು ಪಾಠ ಮಾಡಿ ಬರುತ್ತಿದ್ದರು. ಆ ಸಂದರ್ಭದಲ್ಲಿಯೇ ಅನೇಕ ಮುಖಂಡರುಗಳ ಸಂಪರ್ಕ ಸಿಕ್ಕಿತು. ಜೈಲು ಅಂದರೆ ಹೊರಗಿನ ಜನ ತಿಳಿದುಕೊಂಡಿರುವ ಆಗಿರುವುದಿಲ್ಲ ತುಂಬಾ ಬದಲಾಗಿರುತ್ತದೆ. ಅಲ್ಲಿ ಒಂದು ಕಡೆ ನಿಂತಿರುವುದಕ್ಕೆ ಬಿಡುವುದಿಲ್ಲ. ಬದಲಾಗಿ ದುಡಿಯ ಬೇಕಾಗಿರುತ್ತದೆ. ಅವರವರ ಆಸಕ್ತಿಗೆ ಅನುಗುಣವಾಗಿ ಕೆಲಸ ಕೊಡುತ್ತಾರೆ. ಅದನ್ನು ಪ್ರೀತಿಯಿಂದ ಮಾಡುತ್ತಿದ್ದೆ ಎನ್ನುವ ಚಿ.ಸು.ಕೃಷ್ಣಸೆಟ್ಟಿ, ನಾವೇನು ಖೈದಿಗಳಲ್ಲ ಆದ್ದರಿಂದ ನಮಗೆ ಯಾರು ಕೂಡ ತೊಂದರೆ ಕೊಡುತ್ತಿರಲಿಲ್ಲ. ಬೆಳಿಗ್ಗೆ ಹೊರಗಡೆ ಬಿಟ್ಟರೆ ಸಾಯಂಕಾಲ ಒಳಗಡೆ ಬರುತ್ತಿದ್ದೆವು. ಅಷ್ಟು ಹಾಯಾಗಿ ಇರುತ್ತಿತ್ತು ಜೈಲು. ಅದೇ ಸಂದರ್ಭದಲ್ಲಿ ಎಸ್.ನಾಗಪ್ಪ ಆಳ್ವ ಇದ್ದರು. ಇಂತಹ ವ್ಯಕ್ತಿಗಳ ಜೊತೆ ಚರ್ಚೆ ನಡೆಯುತ್ತಿತ್ತು. ಪ್ರತಿದಿನ ಸಾಯಂಕಾಲ ಒಂದು ಕಡೆ ಸೇರಿ ಉಪನ್ಯಾಸ ಮಾಡುವುದು, ನಾಟಕ ಮಾಡುವುದು ಈ ರೀತಿ ಸಾಂಸ್ಕೃತಿಕ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ೧೯೭೫ ರಿಂದ ಸುಮಾರು ೧೮ ತಿಂಗಳು ತುರ್ತುಪರಿಸ್ಥಿತಿ ಇದ್ದುದರಿಂದ ಆ ಕೊನೆಯ ತಿಂಗಳು ಎಲ್ಲರನ್ನು ಬಿಡಲು ಶುರುಮಾಡಿದರು. ಅದಕ್ಕೊಂದು ಕಾರಣವುಂಟು. ಅದುವೇ ಚುನಾವಣೆ ಹತ್ತಿರ ಬಂದಿದ್ದರಿಂದ ರಾಜಕೀಯ ಮುಖಂಡರೆಲ್ಲಾ

---

೧೦. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೨೭.೦೨.೨೦೧೫

೧೧. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೨.೦೫.೨೦೧೬

ಖಾಲಿಯಾದರು. ಆದರೆ ಚಿ.ಸು.ಕೃಷ್ಣಸೆಟ್ಟಿಯವರ ಬಳಗವನ್ನು ಮಾತ್ರ ಬಿಡಲಿಲ್ಲ. ಒಟ್ಟು ೧೮ ತಿಂಗಳಲ್ಲಿ ೧೪ ತಿಂಗಳುಗಳ ಕಾಲ ಜೈಲು ವಾಸವನ್ನು ಅನುಭವಿಸಿದ ಚಿ.ಸು.ಕೃಷ್ಣಸೆಟ್ಟಿ ಕೊನೆಗೆ ಬಿಡುಗಡೆ ಸಿಕ್ಕಿತು. ತಕ್ಷಣವೇ ಮನೆಗೆ ಹೋಗದೇ ಚುನಾವಣೆ ಪ್ರಚಾರಕ್ಕೆ ತಯಾರಾಗಿ ಅನೇಕ ಕಡೆ ಭಾಷಣಕಾರರಾಗಿ ಗುರುತಿಸಿಕೊಂಡರು. ಕೊನೆಗೂ ಚುನಾವಣೆ ಮುಗಿದು ಇಂದಿರಾಗಾಂಧಿ ಸೋತು, ಮೊರಾರ್ಜಿ ದೇಸಾಯಿ ಸರ್ಕಾರ ರಚನೆ ಮಾಡಿದ ನಂತರವೇ ಖುಷಿಯಿಂದ ತಮ್ಮ ಮನೆಗೆ ಮರಳಿದರು.

ಚಿ.ಸು.ಕೃಷ್ಣಸೆಟ್ಟಿ ಓದುತ್ತಿರುವ ಸಂದರ್ಭದಲ್ಲಿ ವೈಶ್ಯ ಹಾಸ್ಟೆಲ್‌ನಲ್ಲಿ ವಾಸ್ತವ್ಯ ಹೂಡಿದ್ದರಿಂದ ಅಲ್ಲಿ ಸಾಂಸ್ಕೃತಿಕ ಚಟುವಟಿಕೆಗಳಿಗೆ ಅವಕಾಶವಿತ್ತು. ಅದು ಇಂಟರ್ ಹಾಸ್ಟೆಲ್, ಅಂದರೆ ಅದರ ಗತ್ತೇ ಬೇರೆ. ಬೇರೆ ಬೇರೆ ಜಿಲ್ಲೆಗಳಿಗೆ ಹೋಗಿ ಸ್ಪರ್ಧೆಯಲ್ಲಿ ಭಾಗವಹಿಸಿ ಪ್ರಶಸ್ತಿ(State Level Dibet)ಯನ್ನು ಪಡೆಯುತ್ತಿದ್ದರು. ಇದರಿಂದಲೂ ತುಂಬಾ ಉತ್ತೇಜನಗೊಂಡು ಅನೇಕ ಪುಸ್ತಕಗಳನ್ನು ಅಭ್ಯಾಸ ಮಾಡಲು ಶುರುಮಾಡಿದ ಕೃಷ್ಣಸೆಟ್ಟಿ, ದಾವಣಗೆರೆ ಚಿತ್ರಕಲಾ ಮಹಾವಿದ್ಯಾಲಯದ ಗ್ರಂಥಾಲಯವನ್ನು ಸಂಪೂರ್ಣವಾಗಿ ಬಳಸಿಕೊಳ್ಳುತ್ತಿದ್ದರು. ಇದಕ್ಕೆ ಸಾಕ್ಷಿ ಎಂಬಂತೆ ಇಲ್ಲಿದ್ದ ಲೈಬ್ರರಿಯನ್ ಗುರುಶಾಂತಪ್ಪ ತುಂಬಾ ಆಶ್ಚರ್ಯದಿಂದ ವೀಕ್ಷಿಸಿ ಸಂತಸಪಟ್ಟು ಬೆನ್ನು ತಟ್ಟುತ್ತಿದ್ದರು. ಉತ್ತಮ ಪುಸ್ತಕಗಳನ್ನು ಹೊಂದಿದ್ದ ಗ್ರಂಥಾಲಯಕ್ಕೆ ಓದುಗರ ಸಂಖ್ಯೆ ತುಂಬಾ ವಿರಳ. ಚಿತ್ರಕಲೆಯ ವಿದ್ಯಾರ್ಥಿಗಳು ಹೆಚ್ಚೆಚ್ಚು ತಮ್ಮ ಮಾಧ್ಯಮದಲ್ಲಿ ಆಳವಾಗಿ ಚಿಂತಿಸಿ ಉತ್ತಮ ಕೃತಿ ರಚಿಸುವರು. ಆದರೆ ಪುಸ್ತಕಗಳ ಕಡೆ ಹೆಚ್ಚು ಒಲವನ್ನು ತೋರಿಸುತ್ತಿರಲಿಲ್ಲ. ಆ ಸಂದರ್ಭದಲ್ಲಿ ಹಗಲು-ರಾತ್ರಿ ಎನ್ನದೇ ಕೈಗೆ ಸಿಕ್ಕ ಪುಸ್ತಕಗಳನ್ನೆಲ್ಲಾ ಕೃಷ್ಣಸೆಟ್ಟಿ ಓದುವುದರ ಜೊತೆಗೆ ಸಣ್ಣಪುಟ್ಟ ಕಥೆ ಕಾದಂಬರಿಗಳನ್ನು ಬರೆಯಲು ಶುರುಮಾಡುತ್ತಾರೆ. ಒಂದೇ ಕ್ಷೇತ್ರಕ್ಕೆ ಸೀಮಿತರಾಗದ ಇವರು ಚಿತ್ರಕಲೆ, ಸಾಹಿತ್ಯ ಮತ್ತು ಸಂಘಟನೆಗೆ ಸಮಯವನ್ನು ಸಮನಾಗಿ ಮೀಸಲಿಟ್ಟಿದ್ದರು.

ಈ ಆರ್.ಎಸ್.ಎಸ್.ನಲ್ಲಿ ಮೊದಲ ವರ್ಷ, ಎರಡನೇ ವರ್ಷ ಓಟಿಸಿ ನಡೆಯುತ್ತದೆ. ಅದು ಇಲ್ಲಿಯೇ ನಡೆಯುತ್ತದೆ. ಮೂರನೆ ವರ್ಷ ಮಾತ್ರ ನಾಗ್ಪುರದಲ್ಲಿ ನಡೆಯುತ್ತದೆ. ಅದೇ ಅಂತಿಮ. ೧೯೭೪ರಲ್ಲಿ ಅಲ್ಲಿಗೆ ಹೋಗುತ್ತಾರೆ. ಅದು ಸುಮಾರು ಒಂದು ತಿಂಗಳ ಕಾಲ ನಡೆಯುವ ಕಾರ್ಯಕ್ರಮ ಅಲ್ಲಿ ದೈಹಿಕ ಚಟುವಟಿಕೆಯಲ್ಲಿ ಉತ್ತಮ ಯಾರು ಅಂತ ನೋಡುತ್ತಾರೆ. ಥಿಯರಿಯಲ್ಲಿ ಉತ್ತಮ ಯಾರು ಅಂತ ನೋಡುತ್ತಾರೆ. ತರಬೇತಿ ಮುಗಿದ ಕೊನೆಯಲ್ಲಿ ಪರೀಕ್ಷೆ ನಡೆಸಿ ಫಲಿತಾಂಶವನ್ನು ಕೂಡ ಪ್ರಕಟ ಮಾಡುತ್ತಾರೆ. ಪ್ರಸ್ತುತ ದಿನಮಾನಗಳಲ್ಲೂ ನಡೆಯುವ ಕಾರ್ಯಕ್ರಮ ಇದಾಗಿದೆ. ದೇಶದ ನಾನಾ ಮೂಲೆಯಿಂದ ಬಂದಿರುವ ಸಂಘಟಕರಲ್ಲಿ ಇವರೂ ಒಬ್ಬರು. ಆ

ಸಂದರ್ಭದಲ್ಲಿ ಆರ್‌ಎಸ್‌ಎಸ್‌ನ ಮುಖ್ಯಸ್ಥ ಸರಸಂಗ ಚಾಲಕ್, ತರಬೇತಿ ಮುಗಿದ ನಂತರ ದೈಹಿಕ ಪರೀಕ್ಷೆಯಲ್ಲಿ ಇಡೀ ಭಾರತಕ್ಕೆ ೨ನೇ ರ್‍ಯಾಂಕ್ ಬರುತ್ತಾರೆ. ನಂತರ ಥಿಯರಿ ಪರೀಕ್ಷೆಯಲ್ಲೂ ಕೂಡ ಅದೇ ಅಂಕ ಬಂದಿತು. ಇದರಿಂದ ರಾಷ್ಟ್ರೀಯಮಟ್ಟದಲ್ಲಿ ಆರ್.ಎಸ್.ಎಸ್.ನಲ್ಲಿ ಗುರುತಿಸಿಕೊಂಡವರಾದರು. ಇಲ್ಲಿಂದ ಮರಳಿದ ನಂತರ ರಾಜ್ಯದ ಎಬಿವಿಪಿ ರಾಜ್ಯಕಾರ್ಯದರ್ಶಿಯಾಗಿ ಆಯ್ಕೆಯಾದರು. ಇದೆಲ್ಲಾ ನಡೆದದ್ದು ೧೯೭೫ರಲ್ಲಿ.[೧೨] ಈ ಸಂದರ್ಭದಲ್ಲಿಯೇ ಚಿತ್ರಗಳನ್ನು ಬರೆದು ಮೈಸೂರು ದಸರಾ ಚಿತ್ರ ಪ್ರದರ್ಶನ ಸ್ಪರ್ಧೆಗೆ ಕಳುಹಿಸಿದ್ದರು. ಅದು ಬಿಟ್ಟರೆ ಚಿತ್ರಕಲೆಯಲ್ಲಿ ಅಭ್ಯಾಸ ಮಾಡುವಾಗ ಎರಡನೇ ವರ್ಷದಲ್ಲಿರುವಾಗಲೇ ಶಿವಮೊಗ್ಗದಲ್ಲಿ ಪ್ರದರ್ಶನವನ್ನು ಆಯೋಜಿಸುವರು. ನಂತರ ಸಂಘಪರಿವಾರದಿಂದ ದಾವಣಗೆರೆಯ ನಾನಾ ಮೂಲೆಗಳಲ್ಲಿ ಹಾಗೂ ಪಾರ್ಕ್‌ಗಳಲ್ಲಿ ಚಿತ್ರಕಲಾ ಪ್ರದರ್ಶನವನ್ನು ಆಯೋಜಿಸಿ ಯಶಸ್ಸನ್ನು ಪಡೆದರು.

### ರಾಷ್ಟ್ರ ರಾಜಕೀಯ ಮುತ್ಸದ್ದಿ ಲಾಲ್‌ಕೃಷ್ಣ ಅಡ್ವಾಣಿಯೊಂದಿಗೆ...

ಜೈಲಲ್ಲಿ ಇದ್ದ ಸಂದರ್ಭದಲ್ಲಿ ಕೃಷ್ಣಸೆಟ್ಟಿಯವರಲ್ಲಿನ ಆಸಕ್ತಿಯನ್ನು ಗಮನಿಸಿ ಚಿತ್ರಕಲೆಯ ಕುರಿತು ಮಾಹಿತಿ ಬೇಕು ಎಂದಾಗ ಪ್ರತಿದಿನ ಅವರ ಬಳಿ ಹೋಗಿ ಚಿತ್ರಕಲೆಯ ಕುರಿತು ಪಾಠವನ್ನು ಮಾಡುತ್ತಿದ್ದರು. ಅದೇ ಸಮಯದಲ್ಲಿ ಜೈಲಲ್ಲಿ ಯಾವುದೇ ಕ್ಯಾಮರಾ ಪ್ರವೇಶವಿರಲಿಲ್ಲ. ಛಾಯಾಚಿತ್ರ ತೆಗೆಯುವ ಹಾಗಿರಲಿಲ್ಲ. ಆದ್ದರಿಂದ ಅಡ್ವಾಣಿಯವರಿಗೆ ಜೈಲಿನ ಅನೇಕ ದೃಶ್ಯಗಳು ಅದ್ಭುತವಾಗಿದ್ದು, ಅವುಗಳನ್ನು ಸಂಗ್ರಹಿಸಬೇಕೆಂಬ ಆಸೆ ಉಂಟಾಯಿತು. ಆಗ ಕೃ.ಸೆಯವರನ್ನು ಕರೆದು ನನಗೆ ಜೈಲಿನ ದೃಶ್ಯಗಳು ಬೇಕು, ಅವುಗಳನ್ನು ನೀನು ಬಿಡಿಸಿಕೊಡುವೆಯಾ ಎಂದು ಕೇಳಿದರು. ಆಗ ಪ್ರೀತಿಯಿಂದಲೇ ಅವರ ಮನವಿಯನ್ನು ಸ್ವೀಕರಿಸಿ ಯಾರಿಗೂ ಗೊತ್ತಿಲ್ಲದ ಹಾಗೇ ಅನೇಕ ಚಿತ್ರಗಳನ್ನು ಕೃ.ಸೆ.ರಚಿಸಿಕೊಟ್ಟರು.

ಮುಖ್ಯವಾಗಿ ಜೈಲಲ್ಲಿ ಅಲ್ಲಿರುವ ಸಿಬ್ಬಂದಿಗಳು ಇವರನ್ನು ಎಂದೂ ಖೈದಿಗಳಾಗಿ ನೋಡಲಿಲ್ಲ. ಬದಲಾಗಿ ಪ್ರೀತಿ ವಿಶ್ವಾಸದಿಂದ ಕಂಡರು. ಅವರಿಗೆ ಸರಿಯಾಗಿ ಸ್ಪಂದಿಸದ ಈ ಯುವ ಸಮೂಹ, ಅಲ್ಲಿರುವ ಆಟದ ಮೈದಾನ, ಕ್ಲಬ್, ಜಿಮ್‌ಗಳನ್ನು ಸರಿಯಾಗಿ ಬಳಸಿಕೊಳ್ಳುತ್ತಿದ್ದರು. ಇದೇ ಸಂದರ್ಭದಲ್ಲಿ ಲಾಲ್‌ಕೃಷ್ಣ ಅಡ್ವಾಣಿಯವರ ಜೊತೆ ಟೇಬಲ್ ಟೆನಿಸ್, ಷಟಲ್ ಕಾಕ್ ಆಟಗಳನ್ನು ನಿತ್ಯವು ಆಡುವುದರ ಮೂಲಕ ವಿಶ್ವಾಸವನ್ನು ಗಳಿಸಿಕೊಂಡವರು ಚಿ.ಸು.ಕೃಷ್ಣಸೆಟ್ಟಿ, ಇದೇ ಸಂದರ್ಭದಲ್ಲಿ ಒಳ್ಳೆಯ ಕ್ರೀಡಾಪಟು ಆಗಿದ್ದ ಕೃಷ್ಣಸೆಟ್ಟಿ ಎಲ್.ಕೆ.ಅಡ್ವಾಣಿಯವರ ಮುಂದೆ ಮಂಕಾಗಿದ್ರು, ಏಕೆಂದರೆ ಅವರ ಆಟದ ವೈಖರಿ ಆಗಿತ್ತು. ಒಂದು ಬಾರಿಯೂ ಗೆಲ್ಲಲು ಆಗಲಿಲ್ಲ ಎನ್ನುವ ಕೃಷ್ಣಸೆಟ್ಟಿ ತುಂಬಾ ಆತ್ಮವಿಶ್ವಾಸವಿರುವ ವ್ಯಕ್ತಿ ಎಲ್.ಕೆ.ಅಡ್ವಾಣಿಯಂತೆ. ಮತ್ತೊಂದು ಸಂದರ್ಭ ನೆನೆಯುತ್ತಾರೆ.

---

೧೨. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೬.೦೫.೨೦೧೬

ಅದು ಜೈಲಿನಲ್ಲಿಯೇ ಪ್ರತಿಭಟನೆ ಕಾರಣ ಅಲ್ಲಿ ಏನಾದರೂ ಲೋಪದೋಷಗಳು ಕಂಡುಬಂದರೆ, ಯಾವುದರಲ್ಲಾದರೂ ಕೊರತೆ ಕಂಡುಬಂದರೆ ತಕ್ಷಣಕ್ಕೆ ಪ್ರತಿಭಟನೆಗೆ ನಿಂತುಕೊಳ್ಳುತ್ತಿದ್ದರು. ಅದರ ನೇತೃತ್ವ ಎಲ್.ಕೆ.ಅಡ್ವಾಣಿಯವರು ಅಲ್ಲಿ ಕೂಡ ಪೋಸ್ಟರ್ಸ್‌ನ್ನೆಲ್ಲಾ ಹಂಚುತ್ತಿದ್ದರು. ಅವುಗಳನ್ನೆಲ್ಲಾ ಬರೆಯುತ್ತಿದ್ದುದು ಇದೇ ಕಲಾವಿದ ಕೃಷ್ಣಸೆಟ್ಟಿ. ಅದು ಯಾರಿಗೂ ಗೊತ್ತಾಗುತ್ತಿರಲಿಲ್ಲ.

ಇವರು ಬಳ್ಳಾರಿ ಜೈಲಲ್ಲಿ ಇರಬೇಕಾದಾಗ "Hands Return" ಎಂಬ ಪತ್ರಿಕೆಯನ್ನು ಹುಟ್ಟುಹಾಕುತ್ತಾರೆ. ಅದರಲ್ಲಿ ಅನೇಕ ಚಿತ್ರಗಳು ರಾರಾಜಿಸುತ್ತಿದ್ದವು. ಜೈಲಲ್ಲಿರುವಾಗ ಪ್ರತಿದಿನ ಸೂಚನಾ ಫಲಕದಲ್ಲಿ ಕಾರ್ಟೂನ್ ಚಿತ್ರಗಳು ಲಭ್ಯವಿರುತ್ತಿದ್ದವು. ಅವು ಯಾರವು ಎಂದರೆ ಕಲಾವಿದ ಚಿ.ಸು.ಕೃಷ್ಣಸೆಟ್ಟಿಯವರವು. ಟಿಕೊಸ್ಕೊಪ್ ಎಂಬ ಕಾರ್ಟೂನ್ ತುಂಬಾ ಯಶಸ್ವಿಯೂ ಕೂಡ ಆಯಿತು. ಈ ಸಮಯದಲ್ಲಿ ಖೈದಿಗಳ ಸಾಲಲ್ಲಿ ನಾವೆಂದೂ ನಿಲ್ಲಲಿಲ್ಲ. ಬದಲಾಗಿ ಒಂದು ಹಾಸ್ಟೆಲ್ ವಾತಾವರಣ ಅಲ್ಲಿತ್ತು. ಗ್ರಂಥಾಲಯ ಇತ್ತು. ಅಲ್ಲಿ "ಸುಭಾಷಿತ"ವನ್ನು ಬರೆದು ಹಾಕುತ್ತಿದ್ದರು. ಊಟಕ್ಕೆ ಇಂತಹದ್ದೇ ಬೇಕು ಎಂದು ಹಠಮಾಡಿ ತರಿಸಿಕೊಂಡು ತಿನ್ನುತ್ತಿದ್ದರು. ಸರ್ಕಾರದ ಪಾಲಿಸಿಗಳಿಗನುಗುಣವಾಗಿ ನಮಗೆ ಸಿಗುವಸೌಲಭ್ಯಗಳನ್ನು ಅಚ್ಚುಕಟ್ಟಾಗಿ ಬಳಸಿಕೊಂಡ ಕೃಷ್ಣಸೆಟ್ಟಿಯವರು ಮೊದಲ ಬಾರಿಗೆ ಮೀನು ಸಾಂಬಾರನ್ನು ಮಾಡಿಸಿಕೊಂಡು ಜೈಲಲ್ಲಿ ತಿಂದವರು. ಸಂಜೀವಗಟ್ಟಿ ಎಂಬ ಪೈಲ್ವಾನ್ ಈ ಜೈಲಲ್ಲಿ ಇದ್ದ, ಅವರ ಪರಿಚಯವು ಆಯಿತು. ಅವರು ಕೃಷ್ಣಸೆಟ್ಟಿಗೆ ಕುಸ್ತಿ ಹೇಳಿಕೊಡ್ತಿನಿ ಬನ್ನಿ ಎಂದಾಗ ತುಂಬಾ ಖುಷಿಯಿಂದ ಹೋಗಿ ಅವರ ಸಂಗಡ ಕುಸ್ತಿಯ ಮಜಲುಗಳ ಸವಿಯುಂಡರು. ಇದೇ ಸಂದರ್ಭದಲ್ಲಿ ಇಂಗ್ಲಿಷ್ ಕಲಿತುಕೊಂಡೆ ಎನ್ನುವ ಚಿ.ಸು.ಕೃಷ್ಣಸೆಟ್ಟಿ ಮಾತನಾಡುವ ಶೈಲಿಯಲ್ಲಿ ಬದಲಾವಣೆ ಕಂಡುಕೊಂಡರು. ಮೊದಲ ಭಾರಿಗೆ ಮೀನೂಟ ಮಾಡಿದ್ದು ಕೂಡ ಇದೇ ಜೈಲಿನಲ್ಲಿ. ಬೇರೆ ಬೇರೆ ಚಟುವಟಿಕೆಗಳು ನಡೆಯುತ್ತಿದ್ದವು, ಅದರಲ್ಲಿ ಇಂಗ್ಲಿಷ್ ಕಲಿಸುವುದು ಕೂಡ ಒಂದು, ಭಜನೆ ಮಾಡಿಸುವುದು, ನೃತ್ಯ ಮಾಡಿಸುವುದು ಒಟ್ಟು ಎಲ್ಲಾ ರೀತಿಯ ಚಟುವಟಿಕೆಗಳು ನಡೆಯುತ್ತಿದ್ದು, ಇದು ಒಂದು ರೀತಿಯಲ್ಲಿ ತರಬೇತಿ ಕೇಂದ್ರದಂತಿತ್ತು, ಜೈಲ್ ಎಂದರೆ ಭಯಪಡುವವರೆ ಹೆಚ್ಚು. ನಮ್ಮನ್ನು ಸೇರಿಸಿಕೊಂಡು ಆದರೆ ಅಲ್ಲಿನ ಪರಿಸ್ಥಿತಿ ತುಂಬಾ ಮೃದುದೋರಣೆಯಿಂದ ಕೂಡಿರುತ್ತದೆ. ಆತ್ಮೀಯತೆಯಿಂದ ಕೂಡಿರುತ್ತದೆ. ಕೆಲವರಿಗೆ ತಾನು ಮಾಡಿದ ಕೆಲಸ ಎಂತಹದ್ದೆಂದು ಯೋಚಿಸುವ ಸಮಯ ಅಲ್ಲಿ ಸಿಗುವುದರಿಂದ ಸಾಕಷ್ಟು ಜನ ಜೀವನದಲ್ಲಿ ಮಾಡಿದ ತಪ್ಪಿನ ಅರಿವಾಗಿ ಪರಿವರ್ತನೆಗೊಂಡು ಬದುಕುವಂತಹ ವಾತಾವರಣ ವನ್ನು ಸೃಷ್ಟಿಸುವ ಜಾಗವೂ ಹೌದು. ವಿಶೇಷವಾಗಿ ಸಂಜೆಯಾಗುತ್ತಿದ್ದಂತೆ ವಿಚಾರ ವಂತರು, ರಾಜಕೀಯ ಮುಖಂಡರುಗಳಿದ್ದವರು ಒಂದು ಕಡೆ ಸೇರಿ ಭಾಷಣಗಳನ್ನು ಮಾಡುತ್ತಿದ್ದರು. ಆ ಎಲ್ಲಾ ವಿಷಯಗಳ ಕುರಿತ ಭಾಷಣಗಳೂ ನಮ್ಮ ಮೇಲೆ ತುಂಬಾ ಪ್ರಭಾವ ಬೀರಿದವುಗಳಾಗಿವೆ.

ಮುಖ್ಯವಾಗಿ ಚಿ.ಸು.ಕೃಷ್ಣಸೆಟ್ಟಿಯವರನ್ನು ಮೂರು ಜೈಲಿನಲ್ಲಿಟ್ಟಿರುತ್ತಾರೆ. ದಾವಣಗೆರೆ, ಬೆಂಗಳೂರು ಮತ್ತೊಂದು ಬಳ್ಳಾರಿ. ಒಟ್ಟು ಹದಿನಾಲ್ಕು ತಿಂಗಳುಗಳಲ್ಲಿ ಸುಮಾರು ಹತ್ತು ವರ್ಷದ ಅನುಭವಕ್ಕೆ(ತಿಳುವಳಿಕೆ)ಬಂದಿದ್ದಾಯ್ತು..! ಕೊನೆಗೆ ಎಮೆರ್ಜೆನ್ಸಿ ಮುಗಿದ ನಂತರ ಜೈಲಿನಿಂದ ಹೊರಬಂದು ಎಬಿವಿಪಿ ರಾಜ್ಯ ಕಾರ್ಯದರ್ಶಿಯಾಗಿ ಸ್ವಲ್ಪದಿನಗಳವರೆಗೆ[೧೩] ಕೆಲಸವನ್ನು ಮಾಡಿ ನಿಲ್ಲಿಸಿದರು.

ದಾವಣಗೆರೆಯ ಕಲಾಶಾಲೆಯಲ್ಲಿ ಅಭ್ಯಾಸ ನಿರತನಾಗಿದ್ದ ಸಂದರ್ಭದಲ್ಲಿಯೇ ಚಿ.ಸು.ಕೃಷ್ಣಸೆಟ್ಟಿ ಜೈಲಿಗೆ ಹೋಗಿದ್ದ ಪರಿಣಾಮ ಎರಡು ವರ್ಷ ತರಗತಿಗೆ ಹಾಜರಾಗಿರಲಿಲ್ಲ. ಅಂದೇ ನಾಲ್ಕನೇ ವರ್ಷ ಮತ್ತು ಐದನೇ ವರ್ಷ, ನಾಲ್ಕನೇ ವರ್ಷದ ಡಿಪ್ಲೊಮ ಪಡೆಯುತ್ತಿರುವಾಗ ಹೇಬಿಯಸ್ ಕಾರ್ಪಸ್ ಹಾಕಿದ್ದ ಸಂದರ್ಭ ಡಿ.ಎಮ್.ಚಂದ್ರಶೇಖರ್ ಎಂಬುವವರು ಹೈಕೋರ್ಟ್ ನ್ಯಾಯಾಧೀಶ ರಾಗಿದ್ದರು. ಈ ವಿದ್ಯಾರ್ಥಿಗಳಿಗೆಲ್ಲಾ ತುಂಬಾ ಅನ್ಯಾಯ ಆಗುತ್ತಿದೆ. ವಿಶೇಷವಾಗಿ ಈ ವಿದ್ಯಾರ್ಥಿಗಳಿಗೆ ಪರೀಕ್ಷೆ ಕೊಡಿ ಎಂದು ಅವರು ಹೇಳಿದರು. ನಾಲ್ಕನೇ ವರ್ಷದಲ್ಲಿ ಅಭ್ಯಾಸ ನಿರತನಾಗಿರು ವಾಗ ಜೈಲಿಗೆ ಹೋದಾಗಲು ತುರ್ತುಪರಿಸ್ಥಿತಿ ಇರುವಾಗಲೇ ಪರೀಕ್ಷೆ ಬರೆಯುತ್ತಾರೆ ಚಿ.ಸು.ಕೃಷ್ಣಸೆಟ್ಟಿ. ಅದು ಹೇಗೆಂದರೆ ವಿಶೇಷವಾದ ಪರೀಕ್ಷೆ ನಡೆಸಿದ್ದು ಕೂಡ ಒಂದು ಕುತೂಹಲವೇ ಆಗಿತ್ತು. ಕಾರಣ ಬೆಂಗಳೂರು ಜೈಲಿನಲ್ಲಿ ಇದ್ದ ಇವರನ್ನು ದಾವಣಗೆರೆ ಜೈಲಿಗೆ ಕರೆದುಕೊಂಡು ಹೋದರು. ಪರೀಕ್ಷೆ ಶುರುವಾದ ದಿನದಿಂದಲೂ ಪ್ರತಿದಿನ ಪೊಲೀಸ್ ವಾಹನದಲ್ಲಿ ಪೊಲೀಸರ ಸಂಗಡ ಹೋಗಿ ಪರೀಕ್ಷೆ ಬರೆದು ಬರುತ್ತಿದ್ದರು. ಪೊಲೀಸ್ ಸರ್ಪಗಾವಲಿನಲ್ಲಿ ಬರೆದ ಪರೀಕ್ಷೆಯಲ್ಲಿ ಚಿ.ಸು.ಕೃಷ್ಣಸೆಟ್ಟಿ ಉತ್ತೀರ್ಣರಾದರು. ಇದಕ್ಕೆಲ್ಲಾ ಕಾರಣಕರ್ತರು ಹೈಕೋರ್ಟ್ ನ್ಯಾಯಾಧೀಶರಾದ ಡಿ.ಎಮ್.ಚಂದ್ರಶೇಖರ್‌ರವರೇ. ಆದರೆ ಐದನೇ ವರ್ಷದ ಚಿತ್ರಕಲೆಯ ಪರೀಕ್ಷೆಗೆ ಹಾಜರಾಗಲಿಲ್ಲ. ಕಾರಣ ರಾಜ್ಯ ಸರ್ಕಾರ ಒಂದು ಆದೇಶವನ್ನು ಹೊರಡಿಸಿತ್ತು. ಅದು ಜೈಲಲ್ಲಿರುವ ವಿದ್ಯಾರ್ಥಿಗಳಿಗೆ ನೇರವಾಗಿ ಪರೀಕ್ಷೆಗೆ ಕೂಡಿಸುವುದು ಸೂಕ್ತವಲ್ಲ. ಅದರಲ್ಲೂ ಕಲೆಗಳ ಗುಣವನ್ನೆತ್ತ ಕಲಾವಿದರಿಗಂತೂ ಇದು ಅಸಾಧ್ಯ. ಅವರಿಗೆ ಪೂರ್ಣ ಪ್ರಮಾಣದ ತರಬೇತಿ ಅತ್ಯಗತ್ಯ ಎಂಬುದನ್ನು ಮನಗಂಡು ಈ ವಿದ್ಯಾರ್ಥಿಗಳಿಗೆ ಒಂದು ತಿಂಗಳ ಕಾಲ ತರಬೇತಿ ನೀಡಿ ಆಮೇಲೆ ಪರೀಕ್ಷೆ ನೀಡಬಹುದು ಎಂದು ಸಂದೇಶ ಬಂದಿತು. ಇದರಿಂದ ಸಂತೋಷಗೊಂಡ ಚಿ.ಸು.ಕೃಷ್ಣಸೆಟ್ಟಿ ಈ ಅವಕಾಶವನ್ನು ಉತ್ತಮವಾಗಿ ಬಳಸಿಕೊಂಡರು. ಇದರ ಪರಿಣಾಮ ಉತ್ತಮ ಶ್ರೇಣಿಯಲ್ಲಿ ಪಾಸಾದರು. ಇದೆಲ್ಲಾ ನಡೆದದ್ದು ೧೯೭೭ರಲ್ಲಿ,[೧೪] ಇಲ್ಲಿಗೆ ಚಿತ್ರಕಲಾ ಡಿಪ್ಲೊಮ ಮುಕ್ತಾಯವಾಯಿತು.

---

೧೩. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೬.೦೭.೨೦೧೬

೧೪. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೦೭.೧೧.೨೦೧೬

## ದಾಂಪತ್ಯ ಜೀವನ



ಚಿ.ಸು.ಕೃಷ್ಣಸೆಟ್ಟಿಯವರು ಶಿವಮೊಗ್ಗದ ನೃತ್ಯಕಲಾವಿದೆ ಶ್ರೀಅಂಜಲಿಯವರನ್ನು ೧೯೮೧ ಜೂನ್ ೨೧ ರಂದು ವಿವಾಹವಾಗುವರು. ಇಬ್ಬರೂ ಕಲಾವಿದರೆಂಬುದನ್ನು ಮನಸ್ಸಿನಲ್ಲಿಟ್ಟುಕೊಂಡೆ ನವಜೀವನಕ್ಕೆ ಕಾಲಿಟ್ಟು ಇಂದಿಗೆ ಸುಮಾರು ಮೂವತ್ತೆಂಟು ತುಂಬಿದೆಯಾದರೂ ಇಬ್ಬರಲ್ಲಿರುವ ಪ್ರೀತಿ, ಅನ್ಯೋನ್ಯತೆ ಮಾತ್ರ ಕಡಿಮೆಯಾಗಿಲ್ಲ. ಯಾವುದೇ ಕಾರ್ಯದಲ್ಲಿ ತೊಡಗುವ ಮುನ್ನ ಒಬ್ಬರಿಗೊಬ್ಬರು ಚರ್ಚಿಸಿ ತಿರ್ಮಾನ ಕೈಗೊಳ್ಳುವರು. ಇವರಲ್ಲಿ ಒಂದು ವಿಶೇಷತೆಯೆಂದರೆ ಶ್ರೀಅಂಜಲಿಸೆಟ್ಟಿಯವರ ಕುಟುಂಬ ಮಾಂಸಹಾರಿಗಳಾದರೆ, ಸೆಟ್ಟರ ಕುಟುಂಬ ಸಸ್ಯಾಹಾರಿ. ಗೌಡರ ಕುಟುಂಬದಿಂದ ಬಂದ ಶ್ರೀ ಅಂಜಲಿಯವರು ವಿದ್ಯಾವಂತರು, ನೃತ್ಯದಲ್ಲಿ ಪದವಿ ಪಡೆದವರು. ಅದರ ಆಧಾರದ ಮೇಲೆ ಟ್ಯೂಷನ್ ನಡೆಸಿಕೊಂಡು ಹೋಗುತ್ತಿದ್ದ ಸಮಯ, ಅಲ್ಲಿಲ್ಲಿ ನೃತ್ಯದಲ್ಲವರಿಗೆ ಅವಕಾಶ ಸಿಕ್ಕಲ್ಲಿ ಉತ್ತಮವಾಗಿ ಬಳಸಿಕೊಳ್ಳುತ್ತಿದ್ದರು. ಹೀಗೆ ಮುಂದುವರೆದ ಈ ದಂಪತಿಯ ಜೀವನಕ್ಕೆ ತಿರುವು ನೀಡಿದ ಮಹತ್ವದ ದಿನಗಳೂ ಕೂಡ ಒದಗಿಬಂತು. ಕೃಷ್ಣಸೆಟ್ಟಿಗೆ ೧೯೮೧ರಲ್ಲಿ ಮದುವೆಯಾದ ಹೊಸದರಲ್ಲಿ ದೆಹಲಿಯ ಗಡಿಸ್ಟುಡಿಯೋದಲ್ಲಿ ಗ್ರಾಫಿಕ್ ಕಲೆಯನ್ನು ಆಸ್ವಾದಿಸಲು ಅವಕಾಶ ಸಿಕ್ಕಿದ್ದು, ಆರ್ಥಿಕ ಪರಿಸ್ಥಿತಿ ಕಾಡುತ್ತಿತ್ತಾದರೂ ಅದರಿಂದ ಹೊರಬರಲೇಬೇಕು ಎಂಬ ಹಠ ಮತ್ತು ಕಲೆಯಲ್ಲಿನ ಆಸಕ್ತಿ ದೆಹಲಿಯತ್ತ ಮುಖಮಾಡುವಲ್ಲಿ ಯಶಸ್ವಿಯಾಯಿತು. ಕೇಂದ್ರ ಲಲಿತಕಲಾ ಅಕಾಡೆಮಿ ನೆರವು ನೀಡುತ್ತದಾದರೂ ಅದು ಸಾಲದು. ವೈಯಕ್ತಿಕ ಖರ್ಚಿಗೆ ಹಣ ಬೇಕಲ್ಲಾ, ಅದನ್ನ ಪೂರೈಸಿದವರು ಶ್ರೀಮತಿಯವರು. ಸರ್ಕಾರಿ ಕಛೇರಿಯಲ್ಲಿ ಅರೆಕಾಲಿಕ ದ್ವಿತಿಯ ದರ್ಜೆ ಸಹಾಯಕಳಾಗಿ ಕೆಲಸಮಾಡುತ್ತಾ ಅದರಿಂದ ಬರುವ ಸಂಬಳವನ್ನು ಎಂ.ಓ ಮಾಡುತ್ತಿದ್ದಿದ್ದನ್ನು ನೆನೆಯುತ್ತಾರೆ[೧೫] ಅಂಜಲಿ ಸೆಟ್ಟಿಯವರು.



ದೆಹಲಿಯಿಂದ ಕೃಷ್ಣಸೆಟಿಯವರು ವಾಪಸ್ಸು ಬಂದ ನಂತರ ಕುಟುಂಬ ಸಮೇತ ಬೆಂಗಳೂರಿಗೆ ಬಂದು ನೆಲೆನಿಂತರು. ಈ ಸಮಯದಲ್ಲಿ ದಂಪತಿಗೆ ೧೯೮೫ರಲ್ಲಿ ಗಂಡು ಮಗುವಾಗುತ್ತೇ, ವಿನ್ಯಾಸ ಎಂದು ನಾಮಕರಣ ಮಾಡುವುದರೊಂದಿಗೆ ಕೃಷ್ಣಸೆಟ್ಟಿಯವರು ಬೆಂಗಳೂರಿನಲ್ಲಿ 'ವಿನ್ಯಾಸ ಜಾಹಿರಾತು ಸಂಸ್ಥೆ'ಯನ್ನು ಹುಟ್ಟಿಹಾಕುತ್ತಾರೆ. ಅದರ ನಿರ್ದೇಶಕರಾಗಿ ಕೆಲವೇ ಕೆಲವು ದಿನಗಳ ಕಾಲ ಕೆಲಸಮಾಡಿ ಕೆಲವು ತಾಂತ್ರಿಕ ಕಾರಣಗಳಿಂದಾಗಿ ಅದರಿಂದ ಹಿಂದೆ ಸರಿದು ಬಂಗಾಳದ ಹೆಸರಾಂತ 'ಕ್ಲಾರಿಯನ್ ಜಾಹೀರಾತು ಸಂಸ್ಥೆ'ಯಲ್ಲಿ ಕಲಾನಿರ್ದೇಶಕನಾಗಿ ಸೇರಿಕೊಳ್ಳುವರು. ಇತ್ತ ಕೃಷ್ಣಸೆಟ್ಟಿಯವರು ಜಾಹೀರಾತು ಸಂಸ್ಥೆಯಲ್ಲಿ ಕೆಲಸ ಶುರುವಿಟ್ಟುಕೊಂಡರೆ ಅವರ ಮಡದಿ ಶ್ರೀಮತಿ ಅಂಜಲಿಸೆಟ್ಟಿಯೂ ಕೂಡ ನಾಟಕ, ನೃತ್ಯ ಮತ್ತು ಧಾರಾವಾಹಿಗಳಲ್ಲಿ ಭಾಗವಹಿಸಿ

೧೫. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೨.೦೫.೨೦೧೬

ಗುರುತಿಸಿಕೊಂಡರು. ಹೀಗೆ ಕಲಾವಿದರ ಕುಟುಂಬವಾಗಿ ಬೆಳೆಯಲು ಅನೇಕ ದಾರಿಗಳು ಸಿಕ್ಕ ಪರಿಣಾಮ ಈ ದಂಪತಿಗಳು ತಮ್ಮದೇ ಶೈಲಿಯಲ್ಲಿ ಜೀವನವನ್ನು ಕಟ್ಟಿಕೊಂಡರು. ಈ ನಡುವೆ ಚಿ.ಸು.ಕೃಷ್ಣಸೆಟ್ಟಿ ೧೯೮೬ರಿಂದ ಬಿಡುವಿನ ಸಮಯವನ್ನು ಸದುಪಯೋಗಪಡಿಸಿಕೊಂಡು ನಿರಂತರ ವಾಗಿ ದೃಶ್ಯಕಲೆಯ ಕುರಿತು ವಿಮರ್ಶಾ ಲೇಖನವನ್ನು ಬರೆದು ರಾಜ್ಯದ ಕಲಾವಿದರ ಬಳಗದಲ್ಲಿ ಗುರುತಿಸಿಕೊಂಡರು.

೧೯೮೯ರಿಂದ ಪ್ರಾರಂಭವಾದ **'ಮಂಟೇಸ್ವಾಮಿ ಕಥಾಪ್ರಸಂಗ'** ನಾಟಕದಲ್ಲಿ ಮುಖ್ಯಪಾತ್ರಧಾರಿ ಯಾಗಿರುವ ಶ್ರೀಮತಿ ಅಂಜಲಿಸೆಟ್ಟಿಯವರು ಸರಿಸುಮಾರು ೨೫೦ ಕಾರ್ಯಕ್ರಮಗಳಲ್ಲಿ ಭಾಗಿಯಾಗಿರುತ್ತಾರೆ. ಅಷ್ಟೇ ಅಲ್ಲ ಬೀದಿ ನಾಟಕ, ಜಾನಪದ ನೃತ್ಯ, ದೂರದರ್ಶನದಲ್ಲಿ ಬರುತ್ತಿದ್ದ ಕಾವೇರಿ, ಅರ್ಧಸತ್ಯ, ಸರೋಜಿನಿ ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ. ಅಷ್ಟೆ ಅಲ್ಲ ಕೆ.ಎಚ್.ವಿಶ್ವನಾಥ್ ಅವರ 'ಅತಿಮಧುರ ಅನುರಾಗ', ಶ್ರೀಗಂಧ, ನಂಬಿಕೆಗಳು ಮತ್ತು ಧನ್ವಂತರ ಸಿನಿಮಾದಲ್ಲೂ ಶ್ರೀಮತಿ ಅಂಜಲಿಸೆಟ್ಟಿಯವರ ಅಭಿನಯವನ್ನು ನೋಡಬಹುದು. ಒಂದೆಜ್ಜೆ ಮುಂದೆ ಹೋಗಿರುವ ಈ ದಂಪತಿಗಳು ಜೀವನಚಕ್ರ ಎಂಬ ಧಾರಾವಾಹಿಯನ್ನು ನಿರ್ಮಿಸಿರುತ್ತಾರೆ. ಸಿನಿಮಾ ಕ್ಷೇತ್ರದಲ್ಲಿ ದುಡಿಯುತ್ತಿರುವುದರಿಂದ ತಮ್ಮ ಮನೆಯನ್ನು ರಾಜರಾಜೇಶ್ವರಿ ನಗರದಲ್ಲಿ ಆಕರ್ಷಿಣಿಯವಾಗಿ ಕಟ್ಟಿಸಿ ಸಿನಿಮಾ ಮತ್ತು ಧಾರಾವಾಹಿಗಳಿಗೆ ಬಳಸಿಕೊಳ್ಳಲು ಅವಕಾಶ ಕಲ್ಪಿಸಿದ್ದಾರೆ. ಇಲ್ಲಿಯವರೆಗೂ ನೂರಾರು ಧಾರಾವಾಹಿಗಳನ್ನು ಈ ಮನೆಯಲ್ಲಿ ಚಿತ್ರೀಕರಿಸಲಾಗಿದೆ. ಅದರಲ್ಲಿ ಪ್ರಮುಖವಾಗಿ 'ಅಂಡ್‌ಮನ್' ಸಿನಿಮಾ ಮತ್ತು 'ಕಾವ್ಯಾಂಜಲಿ' ಧಾರಾವಾಹಿಯನ್ನು ಗುರುತಿಸ ಬಹುದು.

ಹೀಗೆ ತಮ್ಮಲ್ಲಿರುವ ಕಲಾಚಟುವಟಿಕೆಯಿಂದ ಗುರುತರವಾಗಿರುವ ಈ ದಂಪತಿಗಳಿಬ್ಬರೂ ಕಲೆಯಂಗಳದಲ್ಲಿರುವುದರಿಂದ ಮಗ ವಿನ್ಯಾಸ್ ಕೂಡ ಪ್ರಸ್ತುತ ಸಿನಿಮಾಟೋಗ್ರಫಿಯಲ್ಲಿ ಪದವಿ ಪಡೆದು ಅದೇ ಕ್ಷೇತ್ರದಲ್ಲಿ ದುಡಿಯುತ್ತಿದ್ದಾನೆ. ತಂದೆ-ತಾಯಿಯಂತೆ ರಾಜ್ಯದಲ್ಲಿ ಗುರುತಿಸಿಕೊಳ್ಳುವ ಹಂಬಲವಿದೆ ಎಂಬುದನ್ನು ಶ್ರೀಮತಿ ಅಂಜಲಿಸೆಟ್ಟಿಯವರು ಹೇಳುತ್ತಾರೆ. ಈ ಕುಟುಂಬ ವರ್ಗ ಸಧ್ಯ ಬೆಂಗಳೂರಿನ ರಾಜರಾಜೇಶ್ವರಿ ನಗರದಲ್ಲಿ ನೆಲೆಸಿರುತ್ತಾರೆ.

## ಕಲಾ ವೃತ್ತಿ

೧೯೭೨ ಆರ್.ಬಿ.ಕುಂಬಾರ್ ಎಂಬುವವರು ದಾವಣಗೆರೆ ಚಿತ್ರಕಲಾ ಮಹಾವಿದ್ಯಾಲಯಕ್ಕೆ ಪ್ರಾಚಾರ್ಯರಾಗಿದ್ದರು. ನಂತರ ೧೯೭೪ರಲ್ಲಿ ವಿ.ಬಿ.ಹಿರೇಗೌಡರು ಆಯ್ಕೆಯಾದರು. ಆಗ ಅಪ್ಲೈಡ್ ಆರ್ಟ್ ಮುಖ್ಯಸ್ಥರಾಗಿ ಶಂಕರ್ ಪಾಟೀಲ್, ಶಿಲ್ಪಕಲೆಗೆ ಗಣೇಶಗುಡಿ, ಪೇಂಟಿಂಗ್‌ನಲ್ಲಿ ಸೂಗೂರ್,

ಗ್ರಾಫಿಕ್‌ಗೆ ಕಾಶಿದಾಸ್ ಪತ್ತಾರ್, ಅಪ್ಲೈಡ್ ಆರ್ಟ್‌ಗೆ ಜೆ.ಮಲ್ಲಿಕಾರ್ಜುನ, ಹನುಮಂತಾಚಾರ್, ಕೊರ್ತಿ, ಸೋಮಶೇಖರಪ್ಪ ಲಿಥೊಗ್ರಾಪಿ ಇಷ್ಟು ಜನ ಆ ಸಮಯದಲ್ಲಿ ಉಪನ್ಯಾಸಕ ವೃತ್ತಿಯಲ್ಲಿದ್ದರು.

ಐದು ವರ್ಷದ ಡಿಪ್ಲೊಮ(National Diploma) ಪದವಿ ಸರಿಸಮಾನ ಎಂದು ಅಂದು ಕೊಡುತ್ತಿದ್ದರು. ೧೯೭೭ರಲ್ಲಿ ಇವರ ಡಿಪ್ಲೊಮ ಮುಗಿಯಿತು. ತಕ್ಷಣಕ್ಕೆ ಅಲ್ಲಿ ಡಿಪ್ಲೊಮ ಮುಗಿಸಿದ ಪ್ರತಿಭಾನ್ವಿತರನ್ನು ತಾತ್ಕಾಲಿಕ ಶಿಕ್ಷಕರ ಆಯ್ಕೆಗೆ ಪ್ರಕಟಣೆ ಹೊರಡಿಸಲಾಗಿತ್ತು. ಅದು ಕೃಷ್ಣಸೆಟ್ಟಿಯವರಿಗೆ ತಿಳಿಯಿತು. ಇವರ ಜೊತೆ ಕೆ.ಆರ್.ಸುಬ್ಬಣ್ಣ ಎಂಬುವವರು ಅರ್ಜಿಯನ್ನು ಹಾಕಿದರು. ಇಬ್ಬರು ಕೂಡ ಆಯ್ಕೆಯಾದರು. ೧೯೭೭ರಿಂದ ೧೯೮೦ರವರೆಗೆ ಕೆಲಸ ಮಾಡಿದ ಇವರಿಗೆ ಕೈಗೆ ಸಿಗುತ್ತಿದ್ದ ಸಂಭಾವನೆ ರೂ.೪೦೦/- ಅದು ವರ್ಷದಿಂದ ವರ್ಷಕ್ಕೆ ರೂ.೨೦೦/- ಗಳು ಜಾಸ್ತಿಯಾಗಿ ರೂ.೬೦೦/- ಕ್ಕೆ ಬಂದು ನಿಂತಿತ್ತು. ಶಿಕ್ಷಕನಾಗಿದ್ದ ಸಂದರ್ಭದಲ್ಲಿ ಯಾವುದೇ ವಿಷಯ ಕೊಟ್ಟರೂ ಅಚ್ಚುಕಟ್ಟಾಗಿ ನಿಭಾಯಿಸುತ್ತಿದ್ದ ಕೃಷ್ಣಸೆಟ್ಟಿ ಅವರಿಗೆ ಭಾವಚಿತ್ರ, ಕಾಂಪೋಜಿಸಿಯನ್, ಪ್ರಕೃತಿ ಚಿತ್ರಣ, ರೇಖಾಚಿತ್ರ ಮತ್ತು ಕಲಾಇತಿಹಾಸ ಅಚ್ಚುಮೆಚ್ಚಿನ ವಿಷಯಗಳಾಗಿದ್ದವು. ಈ ಕಾಲೇಜಿನಲ್ಲಿದ್ದ ಮೂರು ವರ್ಷದ ವೃತ್ತಿಯಲ್ಲಿ ತುಂಬಾ ಲವಲವಿಕೆಯಿಂದ ಕೂಡಿರುವಂತೆ ನೋಡಿಕೊಳ್ಳುತ್ತಿದ್ದರು. ಎಂದಿಗೂ ಕಾಲವನ್ನು ವ್ಯರ್ಥ ಮಾಡುತ್ತಿರಲಿಲ್ಲ. ವಿದ್ಯಾರ್ಥಿಗಳಿಗೆ ವಿವಿಧ ಚಟುವಟಿಕೆಗಳಲ್ಲಿ ಭಾಗವಹಿಸಿ ಯಶಸ್ವಿಯಾಗುವ ಪರಿಯನ್ನು ಹೇಳುವುದು ಹಾಗೂ ಚಿತ್ರರಚನೆ ಮಾಡಿ ಪ್ರದರ್ಶನ ಮಾಡುವ ಯೋಜನೆಯ ರೂಪುರೇಷೆಗಳನ್ನು ಹಾಕಿಕೊಡುವುದು. ದಾವಣಗೆರೆಯ ಅನೇಕ ಕಡೆ ಚಿತ್ರಕಲಾ ಪ್ರದರ್ಶನವನ್ನು ಆಯೋಜಿಸುವುದು ಮತ್ತು ವಿದ್ಯಾರ್ಥಿಗಳಿಗೆ ಉತ್ತೇಜನ ನೀಡುವ ಪ್ರಮುಖ ಉದ್ದೇಶ ಕಲಾ ಶಿಕ್ಷಕರದ್ದಾಗಿರುತ್ತಿತ್ತು. ಅದೇ ರೀತಿ ಕೆಲಸ ಮಾಡಲು ಶುರುಮಾಡಿದ್ದ ಕೃಷ್ಣಸೆಟ್ಟಿಯನ್ನು ಜಿಲ್ಲೆಯ ಯಾವುದೇ ಪ್ರಮುಖ ಕಾರ್ಯಕ್ರಮ ನಡೆದರೂ ಅಲ್ಲಿ ಮುಖ್ಯ ಅತಿಥಿಯಾಗಿ ಕರೆಯುತ್ತಿದ್ದರು. ಇಲ್ಲವೇ ಭಾಷಣಕಾರರಾಗಿ ಆಯ್ಕೆ ಮಾಡಿರುತ್ತಿದ್ದರು.

ಈ ಸಂದರ್ಭದಲ್ಲಿ ಗೆಳೆಯ ಜೆ.ಮಲ್ಲಿಕಾರ್ಜುನ ಒಂದು ಮಾತನ್ನು ಹೇಳುತ್ತಾರೆ. ಕೃಷ್ಣ ನಿನ್ನ ಕೆಲಸ ನಿನಗೆ ತೃಪ್ತಿಕೊಟ್ಟಿದೆ. ಆದರೆ ಜೊತೆಗೆ ಕೆಲಸ ಮಾಡುವವರ ಹೊಟ್ಟೆ ಉರಿಯುತ್ತಿದೆ. ನಿನ್ನ ಕೆಲಸಕ್ಕೆ ಈ ಸ್ಥಳ ಯೋಗ್ಯವಾದುದಲ್ಲ. ತಡಮಾಡದೇ ಬೆಂಗಳೂರು ಕಡೆ ಹೊರಟುಬಿಡು ಎಂದರಂತೆ. ತನ್ನ ಸ್ನೇಹಿತನ ಮಾತಿಗೆ ಮರು ಮಾತನಾಡದೆ ಮರುದಿನವೇ ರಾಜೀನಾಮೆ ಪತ್ರವನ್ನು ಪ್ರಾಚಾರ್ಯರಾಗಿದ್ದ ವಿ.ಬಿ.ಹಿರೇಗೌಡರಿಗೆ ಕೊಟ್ಟು ಬೆಂಗಳೂರು ಬಸ್ಸಿಗೆ ಹತ್ತಿದರು. ಬೆಂಗಳೂರಿಗೆ ಬಂದಿಳಿದವರೇ ನೇರವಾಗಿ ಎಬಿವಿಪಿ ಕಛೇರಿಗೆ ಹೋಗುತ್ತಾರೆ. ಅಲ್ಲಿಯೇ ವಾಸ್ತವ್ಯ ಮಾಡಿ ಮರುದಿನ ಬೆಳಿಗ್ಗೆಯಿಂದಲೇ ಕೆಲಸಕ್ಕೆ ಅಲೆದಾಟ ಶುರುವಾಗುತ್ತದೆ. ದೊಡ್ಡದಾದ ಏಜೆನ್ಸಿಗಳಿಗೆ ಭೇಟಿ ನೀಡಿ ಇರುವ ವಿದ್ಯಾಭ್ಯಾಸದ ಸರ್ಟಿಫಿಕೇಟ್‌ನ್ನು ತೋರಿಸಿ ಕೆಲಸವನ್ನು ಕೇಳಿದರೂ ನಿರಾಸೆಯೇ ಹೆಚ್ಚು. ಆದರೂ ಕೆಲ ದಿನಗಳ ನಂತರ ಕೆಲ ಏಜೆನ್ಸಿಗಳಲ್ಲಿ ಹೋಗಿ ತನ್ನಲ್ಲಿರುವ

ಕಲೆಯನ್ನು ತೋರಿಸಿದಾಗ ಪ್ರಾಕ್ಟಿಕಲ್ ಆಗಿ ಕೆಲಸ ಮಾಡಿಸಿ ನಂತರ ಅರ್ಹತೆಯ ಬಗ್ಗೆ ತಿಳಿಸುತ್ತಿದ್ದರು. ಹೀಗೆ ಮೂರ್‍ನಾಲ್ಕು ಕಡೆ ಹೋದರು. ಕೊನೆಗೆ 'ಕ್ಲಾರಿಯನ್' ಏಜೆನ್ಸಿ (ಜಾಹಿರಾತು ಸಂಸ್ಥೆ) ಅದು ಭಾರತದ ನಂ.೧ ಜಾಹಿರಾತು ಸಂಸ್ಥೆಯಾಗಿತ್ತು. ಇಲ್ಲಿ ಸತ್ಯಜಿತ್‌ರೈ ಅವರು ನಿರ್ದೇಶಕರಾಗಿದ್ದರು. ಅದು ಕಲ್ಕತ್ತಾದಲ್ಲಿ ಮುಖ್ಯ ಕಛೇರಿ ಇತ್ತು. ಬೆಂಗಳೂರಿನಲ್ಲಿದ್ದ ಏಜೆನ್ಸಿಯಲ್ಲಿ ಶೇಷಾದ್ರಿ ಎಂಬ ಆಫೀಸರನ್ನು ಭೇಟಿ ಮಾಡಿದ ಕೃಷ್ಣಸೆಟ್ಟಿ ತನ್ನ ಕೆಲಸನ್ನೆಲ್ಲಾ ತೋರಿಸಿದರೂ ಆದರೂ ಒಂದರಲ್ಲಿ ವ್ಯತ್ಯಾಸವಿತ್ತು. ಅದುವೇ ಭಾಷೆ, ಇವರಿಗೆ ಇಂಗ್ಲಿಷ್ ಅಲ್ಪಸ್ವಲ್ಪ. ಆದರೆ ಈ ಏಜೆನ್ಸಿಯಲ್ಲಿ ಕೆಲಸ ಮಾಡುವವರೆಲ್ಲಾ ಹಿಂದಿ, ಇಂಗ್ಲಿಷ್ ಬಲ್ಲವರೇ ಹೆಚ್ಚು. ದಾವಣಗೆರೆಯಲ್ಲಿ ಕೃಷ್ಣಸೆಟ್ಟಿಯ ಲವಲವಿಕೆಯ ಚಟುವಟಿಕೆ ಇಲ್ಲಿ ಗೌಣವಾಯಿತು. ಏಕೆಂದರೆ ಆ ಸ್ಥಳದ ವಿರುದ್ಧವಾದ ವಾತಾವರಣ ಇಲ್ಲಿತ್ತು. ಅಷ್ಟು ದೊಡ್ಡ ಏಜೆನ್ಸಿಯಲ್ಲಿ ಮೂವರು ಮಾತ್ರ ಕನ್ನಡ ಮಾತನಾಡುತ್ತಿದ್ದರು. ಇನ್ನಿದ್ದವರೆಲ್ಲಾ ಬಂಗಾಳಿ, ತಮಿಳು, ಮಲೆಯಾಳಿ, ಮರಾಠಿ, ಹಿಂದಿ ಮತ್ತು ಇಂಗ್ಲಿಷ್ ಬಲ್ಲವರೇ. ಮೂರ್ತಿ ಎಂಬುವವರು ಕರ್ನಾಟಕದವರಾಗಿದ್ದರು. ಅಲ್ಲಿ ಕನ್ನಡ ಮಾತನಾಡುತ್ತಿರಲಿಲ್ಲ. ಕಾರಣವೂ ಇದೆ. ಅದು ಹೊರದೇಶದಲ್ಲಿ ಅಭ್ಯಾಸ ಮತ್ತು ಉದ್ಯೋಗ ಮಾಡಿ ಕೆಲ ವರ್ಷಗಳ ಕಾಲ ಅಲ್ಲಿಯೆ ವಾಸಮಾಡಿ ಬಂದಿದ್ದರು. ಅದರ ಪರಿಣಾಮವು ಇರಬಹುದು. ಆದರೆ ಆಫೀಸಿನಲ್ಲಿ ಮಾತ್ರ ಕನ್ನಡ ಮಾತನಾಡುತ್ತಿರಲಿಲ್ಲ. ಈ ಕ್ಲಾರಿಯನ್ ನನಗೆ ತುಂಬಾ ಪಾಠ ಕಲಿಸಿತು. ಆದರೂ ಬಂದ ಕಷ್ಟವನ್ನೆಲ್ಲಾ ಸ್ವೀಕರಿಸಿ ಕೆಲಸದ ಕಡೆ ಗಮನವಿರಿಸಿ ಈ ಸಂಸ್ಥೆಯಲ್ಲಿ ನಿಷ್ಠಾವಂತರಾಗಿ ಸುಮಾರು ೫ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಈ ಸಂದರ್ಭದಲ್ಲಿ ವೆಸ್ಲಿವಿಲ್ಕಿನ್ಸ್‌ರ ಅಪ್ಪ ವಿಲ್ಕಿನ್ಸ್ ಅಂತ ತುಂಬಾ ಪ್ರಸಿದ್ಧಿ ಪಡೆದ ಚಿತ್ರ ಕಲಾವಿದ. ಅವರ ಮಗ ವೇಸ್ಲಿವಿಲ್ಕಿನ್ ಅಪ್ಲೈಡ್ ಆರ್ಟ್‌ನಲ್ಲಿ ನಿಪುಣನಾಗಿದ್ದ. ಅವರು ನನಗೆ ಕಲೆಯಲ್ಲಿನ ಪ್ರಮುಖ ಅಂಶಗಳನ್ನು ಧಾರೆಯೆರೆದರು. ಆರ್ಟ್ ಡೈರೆಕ್ಟರ್ ಕೆಳಗೆ ಕೆಲಸ ಮಾಡುತ್ತಾ ಇರಬೇಕಾದಾಗ ಹೆಚ್ಚು ಅವರಲ್ಲಿ ಮಾತಾಡುತ್ತಿರಲಿಲ್ಲ. ಬದಲಿಗೆ ಕೆಲಸಕ್ಕೆ ಹೆಚ್ಚು ಆಸಕ್ತಿ ಬಂದು ಕೆಲಸ ಕಲಿತವರಂತೆ ಬೆಂಗಳೂರಿಗೆ ಬಂದ ನಂತರವೇ ಇಂಗ್ಲಿಷ್ ಸ್ಪಷ್ಟವಾಗಿ ಮಾತನಾಡಲು ಬಂದಿದ್ದು ಕ್ಲಾರಿಯನ್‌ನಲ್ಲಿ. ಕೆಲಸ ಮಾಡುವಾಗ ಎಲ್ಲಾದರಲ್ಲೂ ಅನುಭವ ಹೆಚ್ಚಾಯಿತಂತೆ. ಅಂದ್ರೆ ಇಲ್ಲಿರುವ ವ್ಯಕ್ತಿಗಳ ಭಿನ್ನರೂಪಕ್ಕೆ ಪರ್ಯಾಯ ಮಾರ್ಗಗಳನ್ನು ಕಂಡುಕೊಂಡು ಚಿ.ಸು.ರವರು ಅವರ ಸ್ನೇಹವನ್ನು ಸಂಪಾದಿಸಿ ಹತ್ತಿರವಾದ ಅನುಭವ ದೊಡ್ಡದು ಎನ್ನುತ್ತಾರೆ. ಅಲ್ಲಿರುವ ಇಂಗ್ಲೀಷ್ ಪರಿಣಿತರ ಬಳಿ ಮಾತನಾಡುತ್ತಲೇ ಇಂಗ್ಲಿಷ್ ಭಾಷೆಗೆ ಹತ್ತಿರವಾದರಂತೆ.[೧೭] ಇಷ್ಟೆ ಅಲ್ಲದೇ ಅನೇಕ ಇಂಗ್ಲಿಷ್ ಪುಸ್ತಕವನ್ನು ಓದಲು ಆರಂಭಿಸಿದರು. ಐದು ವರ್ಷದ ಅನುಭವ ಚಿ.ಸು.ರವರನ್ನು ಬದಲಾಯಿಸಿದ್ದನ್ನು ಇಂದಿಗೂ ನೆನೆಯುತ್ತಾರೆ. ಇದೇ ಸಂದರ್ಭದಲ್ಲಿ ಅನೇಕ ಚಿತ್ರಗಳನ್ನು ರಚಿಸಿರುತ್ತಾರೆ. ಮುಖ್ಯವಾಗಿ ಜಾಹಿರಾತಿನಲ್ಲಿ ರೇಖೆಗಳನ್ನು

೧೬. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೬.೦೩.೨೦೧೭

೧೭. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೯.೦೩.೨೦೧೭

ರಚಿಸಬೇಕಾಗಿರುವುದರಿಂದ ಅಭ್ಯಾಸ ತುಂಬಾನೇ ಬೇಕಾಗಿತ್ತು. ಆದ್ದರಿಂದ ಮನೆಯಂಗಳದಲ್ಲಿ ಪೇನ್ಸಾ ಪೆನ್ಸಿಲ್‌ನಿಂದ ಆಡಿದ ಆಟವೇ ಮುಂದೆ ಉತ್ತಮ ರೇಖಾಚಿತ್ರಗಳು ಮೂಡಿಬಂದವು. ಸೆಟ್‌ಸೈರ್‌ನ ಹಿಡಿದುಕೊಳ್ಳೋದು ಗೊತ್ತಿರಲಿಲ್ಲ. ಇಲ್ಲಿಯೇ ಅದರ ಅನುಭವವಾಗಿದ್ದು ೧೯೭೭ರಲ್ಲಿ. ಬರೋಡ ಇಲ್ಲವೇ ಕಲ್ಕತ್ತಾಗೆ ಚಿತ್ರಕಲಾ ಅಭ್ಯಾಸ ಮಾಡಲು ಹೋಗಬೇಕೆಂಬ ಆಸೆ ಇತ್ತು. ಅದೇ ರೀತಿ ಬರೋಡಾಕ್ಕೆ ಹೋದರು. ಅಲ್ಲಿ ಮೊದಲು ಸಂದರ್ಶನ ನಡೆಸುತ್ತಾರೆ. ಈ ಸಂದರ್ಭದಲ್ಲಿ ಚಿ.ಸು.ಸೆಟ್ಟಿಯವರು ಆಸಕ್ತಿ ಯಾವುದರಲ್ಲಿ ಇದೆ ಎನ್ನುವುದಕ್ಕೆ ಒಂದು ಕಿರು ಪರೀಕ್ಷೆಯನ್ನು ಏರ್ಪಡಿಸಿದ ಸಂದರ್ಭದಲ್ಲಿ ಗ್ರಾಫಿಕನ್ ರೂಪವನ್ನು ತೋರಿಸಿರುವುದನ್ನು ಗಮನಿಸಿದ ಅಲ್ಲಿನ ಆಡಳಿತ ಮಂಡಳಿ ಗ್ರಾಫಿಕ್‌ನಲ್ಲಿ ಆಯ್ಕೆ ಮಾಡಿರುತ್ತಾರೆ. ೧೯೮೦ರ ದಶಕದಲ್ಲಿಯೇ ಮೊದಲು ಗ್ರಾಫಿಕ್ ಪ್ರಾರಂಭವಾಗಿದ್ದು. ಇಲ್ಲೂ ಸೈಷನ್, ಲೈನ್ ಡ್ರಾಯಿಂಗ್ ಎಲ್ಲವನ್ನು ಗಮನಿಸಿಯೇ ಇದರಲ್ಲಿ ಕಲಿಯಲು ಆಯ್ಕೆ ಮಾಡಿದರಂತೆ[೧೮] ಆದರೆ ಚಿ.ಸು.ಕೃಷ್ಣಸೆಟ್ಟಿಗೆ ಇಷ್ಟವಿಲ್ಲದ ಗ್ರಾಫಿಕ್‌ಗಿಂತ ಪೇಂಟಿಂಗ್ ಕೊಡಿ ಎಂದು ಕೇಳಿದರಂತೆ. ಅದಕ್ಕೆ ಒಪ್ಪಲಿಲ್ಲ ಅದರ ನಿಮಿತ್ತ ತಮ್ಮೂರಿಗೆ ವಾಪಸ್ಸಾದರು. ನಂತರ ೧೯೮೧ರಲ್ಲಿ ಮತ್ತೆ ಬರೋಡಕ್ಕೆ ಕಲಿಯಲು ಹೋದ ಸಂದರ್ಭದಲ್ಲೂ ಕೂಡ ಹಿಂದೆ ಆದ ಅನುಭವವೇ ಆಯಿತು. ಗ್ರಾಫಿಕ್ ಎಂದರೆ ಲೈನ್ ಡ್ರಾಯಿಂಗ್, ಇವನ್ನು ಕಲಿಯೋದಕ್ಕೆ ಯಾಕೆ ಅಷ್ಟು ದೂರದಿಂದ ಬರಬೇಕು ಅಂದುಕೊಂಡು ಚಿ.ಸು.ಕೃಷ್ಣಸೆಟ್ಟಿರವರು ಮತ್ತೆ ವಾಪಸ್ಸಾದರು.

ಇದೇ ಸಂದರ್ಭದಲ್ಲಿ ಕ್ಲಾರಿಯನ್ ಸಂಸ್ಥೆಯಲ್ಲಿರುವಾಗಲೇ ಗಡಿ ಸ್ಟುಡಿಯೋ ಬಗ್ಗೆ ತಿಳಿದುಕೊಂಡಿದ್ದ ಚಿ.ಸು.ಕೃಷ್ಣಸೆಟ್ಟಿ ೧೯೮೦ರಲ್ಲಿ ಅರ್ಜಿಯನ್ನು ಹಾಕುತ್ತಾರೆ. ಗಡಿ ಸ್ಟುಡಿಯೋ ದೆಹಲಿಯಲ್ಲಿದ್ದು ಇಲ್ಲಿ ಆಯ್ಕೆಯಾಗಿದ್ದು ಕೂಡ ಗ್ರಾಫಿಕ್‌ನಲ್ಲಿಯೇ. ಇದರಿಂದ ತುಂಬ ಅಸಮಾಧಾನಗೊಂಡ ಚಿ.ಸು.ಕೃ.ರವರು ಬೇರೆ ದಾರಿಯಿಲ್ಲದೆ ಈ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡು ಸೇರ್ಪಡೆಗೊಂಡರು. ಈ ಸಂದರ್ಭದಲ್ಲಿ ಗೊತ್ತಾಗಿದ್ದಂತೆ ಗ್ರಾಫಿಕ್‌ನಲ್ಲಿನ ಪ್ರಮುಖಾಂಶಗಳು ಅವು ಪ್ಲೇಟ್ ಮೇಲೆ ಕಲರ್ ಹೇಗೆ ಬಳಸಲಾಗುತ್ತದೆ. ಎಚ್ಚಿಂಗ್ ಅಂದರೆ ಏನು? ಲಿಥೋಗ್ರಫಿ ಹೇಗಿದೆ. ಅದರಲ್ಲಿ ಇರುವ ಸೂಕ್ಷ್ಮಗಳೇನು ಎಂಬುದು ಗೊತ್ತಾಗಿದೆ. ಈ ಸ್ಟುಡಿಯೋದಲ್ಲಿ ಕಲಿಯುವ ಹಂತದಲ್ಲಿರುವಾಗಲೇ ತುಂಬಾ ಆಶ್ಚರ್ಯವು ಕೂಡ ಆಯಿತು. ಮುಂಚಿತವಾಗಿಯೇ ಈ ವಿಷಯವು ಗೊತ್ತಾಗಿದ್ದರೆ ಬರೋಡದಲ್ಲಿಯೇ ಸೇರ್ಪಡೆಗೊಂಡಿರುತ್ತಿದ್ದೆ ಎಂದುಕೊಂಡರು. ಒಟ್ಟಾರೆ ಗ್ರಾಫಿಕ್‌ನಲ್ಲಿ ಬರುವ ಪ್ರಮುಖ ಅಂಶಗಳನ್ನೆಲ್ಲಾ ಮೈಗೂಡಿಸಿಕೊಂಡ ಚಿ.ಸು.ಕೃಷ್ಣಸೆಟ್ಟಿಯವರು ಗಡಿ ಸ್ಟುಡಿಯೋದಿಂದ ಹೊರಬರುತ್ತಲೇ ಗ್ರಾಫಿಕ್‌ನ್ನು ಆರಾಧಿಸುತ್ತಾ, ಪ್ರೀತಿಯಿಂದ ಸ್ವೀಕರಿಸಿದರು. ಒಂದು ವರ್ಷ ದೆಹಲಿಯಲ್ಲಿ ಇದ್ದುಕೊಂಡು ಕಲಿತದ್ದು ಅನುಭವ ಹೆಚ್ಚಿಸಿತು. ಕಾರಣ ಹಣದ ಅಭಾವ ಒಂದು ಕಡೆ ಇನ್ನೊಂದು ಕಡೆ ಆಗತಾನೆ ಮದುವೆಯಾಗಿ (೧೯೮೧) ಆರು ತಿಂಗಳಾಗಿತ್ತು.

---

೧೮. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೬.೦೫.೨೦೧೭

ಇವರ ಶ್ರೀಮತಿ ಅಂಜಲಿಸೆಟ್ಟಿ, ಸರ್ಕಾರಿ ಕೆಲಸದಲ್ಲಿದ್ದರು. ಇವರು ಕೂಡ ಪ್ರತಿ ತಿಂಗಳು ಸ್ವಲ್ಪ ಹಣವನ್ನು ಕಳುಹಿಸಿಕೊಡುತ್ತಿದ್ದರು. ಜೊತೆಗೆ ತಮ್ಮ ಮನೆಯಿಂದಲೂ ಮನಿ ಆರ್ಡರ್‌ನಿಂದ ಹಣ ತಲುಪುತ್ತಿತ್ತು ಹಾಗೂ ಹೀಗೂ ಒಂದು ವರ್ಷ ಹೇಗೆ ಕಳೆದು ಹೋಯಿತು. ಮುಗಿಸಿಕೊಂಡು ಬೆಂಗಳೂರಿಗೆ ಬಂದ ಹೊಸದರಲ್ಲೇ ತಾನು ರಚಿಸಿರುವ ಗ್ರಾಫಿಕ್ ಕೃತಿಗಳನ್ನು ಪ್ರದರ್ಶನ ಮಾಡಿದರು. ಇವೇ ಕಲಾಕೃತಿಗಳಲ್ಲಿನ ಆಯ್ದ ಕೆಲವನ್ನು ಕಳುಹಿಸಿದರು. ದೆಹಲಿಯಲ್ಲಿರಬೇಕಾದರೆ ಡಾಕೂಜಿ ದೇವರಾಜ್ ಹೈದರಾಬಾದ್‌ನವರು ರಾಷ್ಟ್ರೀಯ ಮಟ್ಟದ ಗ್ರಾಫಿಕ್ ಕಲಾವಿದರು. ತುಂಬಾ ಪ್ರಸಿದ್ಧಿಯನ್ನು ಪಡೆದಿದ್ದರು. ಇದರ ಜೊತೆ ಕರ್ನಾಟಕದ ಕಲಾವಿದ ಸುಬ್ಬಣ್ಣನವರ ಪರಿಚಯವು ಕೂಡ ಇದೇ ಸಂದರ್ಭದಲ್ಲಾಯಿತು. ಇದರ ಜೊತೆಗೆ ಅನೇಕ ಕಲಾಕೃತಿಗಳನ್ನು ರಚಿಸುವುದನ್ನು ಕಲಿತು ಇವರು ಕೂಡ ಅನೇಕ ಕಲಾಕೃತಿಗಳನ್ನು ಸ್ವಂತವಾಗಿ ರಚಿಸಿಕೊಂಡು ಬೆಂಗಳೂರಿಗೆ ಹಿಂದಿರುಗಿದ ನಂತರ ೧೯೮೪ರ ಸಂದರ್ಭದಲ್ಲಿ ಮೊಟ್ಟ ಮೊದಲಿಗೆ ಇವರು ಕರ್ನಾಟಕ ಲಲಿತಕಲಾ ಅಕಾಡೆಮಿ ಸದಸ್ಯನಾಗಿ[೧೯] ನನ್ನದೇ ಶೈಲಿಯಲ್ಲಿ ಸಮಾಜಕ್ಕೆ ಪೂರ್ವಕವಾಗಿ ಕೆಲಸ ಮಾಡಿರುತ್ತೇನೆ ಎನ್ನುತ್ತಾರೆ.

ಐದು ವರ್ಷದ ಅನುಭವ ಜಾಹಿರಾತಿನ ಬಗ್ಗೆ ಇದ್ದುದ್ದರಿಂದ ಅನೇಕ ಸ್ನೇಹಿತರು ತಾವೇ ಯಾಕೆ ಜಾಹಿರಾತು ಏಜೆನ್ಸಿಯನ್ನು ಮಾಡಬಾರದು ಎಂಬ ಸಲಹೆಯನ್ನಿತ್ತರು. ಆಗ ೧೯೮೫ರಲ್ಲಿ 'ವಿನ್ಯಾಸ' ಜಾಹಿರಾತು ಸಂಸ್ಥೆ ಎಂಬುದನ್ನು ಮಿತ್ರರ ಸಹಯೋಗದೊಂದಿಗೆ ಪ್ರಾರಂಭಿಸಿದರು. ಅದು ಪ್ರಸ್ತುತವಾಗಿ ನಡೆಯುತ್ತಿದೆ. ಹಣವಂತರ ಜೊತೆ ಕೈಜೋಡಿಸಿ ಮಾಡಿದ ಏಜೆನ್ಸಿ ಇಲ್ಲಿ ಮ್ಯಾನೇಜಿಂಗ್ ಡೈರೆಕ್ಟರ್ ಹುದ್ದೆಯನ್ನು ಅಲಂಕರಿಸಿದ ಚಿ.ಸು.ಕೃಷ್ಣಸೆಟ್ಟಿ ಸುಮಾರು ಒಂದು ವರ್ಷ ಇದರ ಉಸ್ತುವಾರಿಯನ್ನು ನೋಡಿಕೊಂಡವರದರೂ. ತುಂಬಾ ಕಷ್ಟವಾಯಿತು. ಆದಕಾರಣ ಇದು ಸಾಧ್ಯವಿಲ್ಲದ ಕೆಲಸ ಎಂದುಕೊಂಡು ಮತ್ತೆ ಹಿಂದಿರುಗಿ ಕ್ಲಾರಿಯನ್‌ಗೆ ಹೋದರು. ಅಲ್ಲಿ ಸ್ವಲ್ಪ ದಿನಗಳಕಾಲ ಕೆಲಸ ಮಾಡುತ್ತಿರುವ ಸಂದರ್ಭದಲ್ಲಿಯೇ ಬೆಂಗಳೂರಿನಲ್ಲಿದ್ದ BEML ಸಂಸ್ಥೆಯಲ್ಲಿ ಗ್ರಾಫಿಕ್‌ಗೆ ಸಂಬಂಧಿಸಿದ ಕೆಲಸ ಖಾಲಿ ಇದೆ ಎಂಬುದು ಗೊತ್ತಾಯಿತು. ಅಲ್ಲಿ ೧೯೮೬ರಲ್ಲಿ ಅರ್ಜಿ ಸಲ್ಲಿಸಿದ ಚಿ.ಸು.ಕೃಷ್ಣಸೆಟ್ಟಿ ಅವರಿಗೆ ಸರಾಗವಾಗಿಯೇ ಕೆಲಸ ಸಿಕ್ಕಿತು. ಕಾರಣ ಹುದ್ದೆಗೆ ಬೇಕಿದ್ದ ಎಲ್ಲಾ ದಾಖಲೆಗಳನ್ನು ಇವರು ಹೊಂದಿದ್ದರು.

ಇಲ್ಲಿ ಮೊದಲಿಗೆ ಕಲಾವಿದನಾಗಿ ಸೇರಿಕೊಂಡು ನಂತರ ಕಲಾನಿರ್ದೇಶಕನಾಗಿ ಬಡ್ತಿ ಪಡೆದು ಚಿ.ಸು.ರವರು ಸುಮಾರು ೨೬ ವರ್ಷಗಳ ಕಾಲ ಸೇವೆಯನ್ನು ಮಾಡಿರುತ್ತಾರೆ. ಕ್ರಮೇಣ ಪಬ್ಲಿಕ್ ರಿಲೇಷನ್ ಹುದ್ದೆ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದ ಇವರು, ೧೯೯೮ರ ಪೋಸ್ಟ್ ಗ್ರ್ಯಾಜುಯೇಟ್ ಕೋರ್ಸನ್ನು ಮೈಸೂರು ವಿಶ್ವವಿದ್ಯಾಲಯದಲ್ಲಿ ಪಡೆದು ೧೯೯೫ರಲ್ಲಿ ಪಬ್ಲಿಕ್ ರಿಲೇಷನ್ ಡಿಪ್ಲೋಮವನ್ನು ಭಾರತೀಯ ವಿದ್ಯಾಭವನದಿಂದ ಪಡೆದರು. ಇದೇ ಕೆಲಸದಲ್ಲಿಯೇ

೧೯. ಚಿ.ಸು.ಕೃಷ್ಣಸೆಟ್ಟಿ : ಸಂದರ್ಶನ, ಅವರ ಮನೆ ಬೆಂಗಳೂರು, ದಿ.೧೬.೦೫.೨೦೧೭

ಮುಂದುವರಿದ ಪರಿಣಾಮ ಆರ್ಟ್‌ನ ಕೆಲಸ ಅಲ್ಪಕಾಲ ಸ್ಥಗಿತವಾಯಿತು ಎಂತಲೇ ಹೇಳಬಹುದು. ಪರಿಪೂರ್ಣವಾಗಿ ಪಬ್ಲಿಕ್ ರಿಲೇಷನ್ ಕೆಲಸಕ್ಕೆ ಹೊಂದಿಕೊಂಡ ಚಿ.ಸು. ಗ್ರೇಡ್‌ರಿಂದ ಹಿಡಿದು ಮ್ಯಾನೇಜ್‌ಮೆಂಟ್‌ವರೆಗೂ ವಿವಿಧ ಆಯಾಮದ ಹುದ್ದೆಗಳನ್ನು ಸ್ವೀಕರಿಸಿ ದಿಟ್ಟತನದಿಂದ ಹೋರಾಡಿ ಕೆಲಸ ಕಾರ್ಯಗಳಲ್ಲಿ ಯಶಸ್ಸನ್ನು ಕಂಡವರು ಅಷ್ಟೇ ಅಲ್ಲದೇ ನಾಲ್ಕು ಭಾರಿ ಕರ್ನಾಟಕ ಲಲಿತಕಲಾ ಅಕಾಡೆಮಿ ಸದಸ್ಯರಾಗಿ ಉತ್ತಮ ಕೆಲಸವನ್ನು ಮಾಡಿರುತ್ತಾರೆ. ಅಲ್ಲದೆ ಒಂದು ವರ್ಷ ಮೂರು ತಿಂಗಳು ಅದರ ಅಧ್ಯಕ್ಷರಾಗಿ ಉತ್ತಮ ಕೆಲಸಕಾರ್ಯ ಮಾಡಿರುತ್ತಾರೆ ಅದರ ಸ್ವವಿವರ ಅಧ್ಯಾಯ ಐದರ ಕಲಾಚಟುವಟಿಕೆಯಲ್ಲಿ ತಿಳಿಸಲಾಗಿದೆ. ಪ್ರಸ್ತುತ ಕೇಂದ್ರ ಲಲಿತಕಲಾ ಅಕಾಡೆಮಿಯ ಆಡಳಿತಾಧಿಕಾರಿಯಾಗಿ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಕೃಷ್ಣಸೆಟ್ಟಿ ಒಬ್ಬ ಯಶಸ್ವಿ ಕಲಾವಿದರಾಗಿ, ಹಲವಾರು ಕಲಾಕೃತಿಗಳನ್ನು ಸ್ವತಃ ರಚಿಸಿ ಜನಮನ್ನಣೆ ಗಳಿಸಿದ್ದಾರೆ. ಅಲ್ಲದೇ ಅವರು ಕಲಾ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಈವರೆಗೆ ೭ ಕೃತಿಗಳನ್ನು ಹಾಗೂ ನೂರಾರು ಸಂಶೋಧನಾ ಲೇಖನಗಳನ್ನು ಮತ್ತು ವಿಮರ್ಶಾ ಲೇಖನಗಳನ್ನು ಅವರು ರಾಜ್ಯದ ಜನಪ್ರಿಯ ಪತ್ರಿಕೆಗಳಲ್ಲಿ ಪ್ರಕಟಿಸುವುದರ ಮೂಲಕ ಅವರೊಬ್ಬ ಕಲಾಸಾಹಿತಿ, ಕಲಾ ವಿಮರ್ಶಕರೆಂದು ವಿಶೇಷವಾಗಿ ನಾಡಿನ ಜನತೆಯಿಂದ ಗುರುತಿಸಲ್ಪಟ್ಟಿದ್ದಾರೆ. ಅವರ ಕಲಾಕೃತಿಗಳು ಮತ್ತು ಕಲಾ ಸಾಹಿತ್ಯದ ಸೇವೆಯ ವಿವರಗಳನ್ನು ಮುಂದಿನ ಅಧ್ಯಾಯಗಳಲ್ಲಿ ವಿಶೇಷವಾಗಿ ವಿವರಿಸಲಾಗಿದೆ.

## ಅಧ್ಯಾಯ: ಮೂರು

# ಚಿ.ಸು.ಕೃಷ್ಣಸೆಟ್ಟಿಯವರ ಕಲಾ ಸಾಹಿತ್ಯ ಮತ್ತು ವಿಮರ್ಶೆ

ನಾವು ಯಾವುದಾದರೂ ಒಂದು ಕಲಾಕೃತಿಯನ್ನು ನೋಡಿ ಅದು ನಮ್ಮ ಮನಸ್ಸಿನ ಮೇಲೆ ಉಂಟು ಮಾಡಬಹುದಾದ ಪರಿಣಾಮವನ್ನು ದೃಶ್ಯಕಲೆಯೆಂದು ಸಂಕ್ಷಿಪ್ತವಾಗಿ ಹೇಳಬಹುದು. ಇದರಲ್ಲಿ ಶಿಲ್ಪ, ಚಿತ್ರಕಲೆಗಳು ಮುಖ್ಯವಾಗಿರುತ್ತವೆ. ಆದರೆ ಇದರಲ್ಲಿ ಪ್ರದರ್ಶನಗೊಳಪಡುವ ಚಿತ್ರ, ಶಿಲ್ಪ, ನೃತ್ಯ, ನಾಟಕ, ಚಲನಚಿತ್ರ ಮೊದಲಾದವುಗಳು ಸಹಾ ಇದರಡಿಯಲ್ಲಿ ಸೇರಿಕೊಳ್ಳುತ್ತವೆ. ಕನ್ನಡದ ಕಲಾವಿದರು ಕೇವಲ ಭಾವಜೀವಿಗಳಲ್ಲ; ಅವರು ರಸಿಕರೂ ಸಹಾ, ಅವರು ಜೀವನದಲ್ಲಿ ಸೌಂದರ್ಯದ ನಾನಾ ಮುಖಗಳನ್ನು ಕಂಡವರು, ಅರಿತವರು, ಆಸ್ವಾದಿಸಿದವರು. ಅವರಲ್ಲಿ ಕೆಲವರು ಕೇವಲ ಕಲಾವಿದರಾಗಿ ಉಳಿಯದೇ ಕಲಾಸಾಹಿತಿಗಳೆಂದು ಜನಪ್ರಿಯತೆ ಗಳಿಸಿದ್ದಾರೆ. ಏಕೆಂದರೆ ಕಲೆ ಮತ್ತು ಸಾಹಿತ್ಯಗಳು ಸಂಸ್ಕೃತಿಯೊಂದರ ವಿವಿಧ ಮುಖಗಳಾಗಿದ್ದು, ಅವುಗಳಿಂದಲೇ ಸಂಸ್ಕೃತಿಯ ಅಭಿವೃದ್ಧಿಯನ್ನು ಗುರುತಿಸಲಾಗುತ್ತದೆ. ಹಾಗಾಗಿಯೇ ಸಾಹಿತ್ಯಕ್ಕೂ ಮತ್ತು ಕಲೆಗಳಿಗೂ ನಿಕಟ ಬಾಂಧವ್ಯವಿದೆ. ಸಾಹಿತ್ಯ ಮತ್ತು ಕಲೆಗಳಿಗೆ ಪ್ರಾಯಶಃ ಸಂವೇದನೆಯೇ ಮೂಲವಾಗಿದೆ. ಅಂತೆಯೇ ಎಲ್ಲಾ ಕಲೆಗಳ ಮೂಲ ಉದ್ದೇಶ ಸಂವಹನವೇ ಆಗಿದೆ. ಆದರೆ ಇತ್ತೀಚೆಗೆ ಚಿತ್ರಕಲಾ ಕ್ಷೇತ್ರದಲ್ಲಿ ನಡೆಯುತ್ತಿರುವ ಹೊಸ ಪ್ರಯೋಗಗಳು ಹೆಚ್ಚು ಜನರಿಗೆ ತಲುಪುತ್ತಿಲ್ಲ. ಸಾಹಿತ್ಯ ಹೇಗೆ ಜನಸಮೂಹಕ್ಕೆ ಹತ್ತಿರವಾಗಿದೆಯೋ ಅದೇ ಪ್ರಮಾಣದಲ್ಲಿ ಚಿತ್ರಕಲೆ ಹತ್ತಿರವಾಗಿಲ್ಲ ಎನ್ನುವ ಅಭಿಪ್ರಾಯ ಅನೇಕರಿಗಿದೆ. ಚಿತ್ರಕಲೆ ಜನರಿಂದ ಸಾಕಷ್ಟು ದೂರ ಇರುವುದಕ್ಕೆ ಅದರ ಅಭಿವ್ಯಕ್ತಿ ಮಾಧ್ಯಮದ ನೆಲೆಯಲ್ಲಿರುವ ಮಿತಿಗಳೂ ಕೂಡ ಕಾರಣವಿರಬಹುದು.

ಸಾಮಾನ್ಯವಾಗಿ ಮಾನವನ ಮಾನಸಿಕ ಕಾರ್ಯಪ್ರವೃತ್ತಿಗಳನ್ನು ಮೂರು ಭಾಗಗಳಾಗಿ ಗುರುತಿಸಬಹುದು.

೧. ಬುದ್ಧಿ ಅಥವಾ ವಿಚಾರಕ್ಕೆ ಸಂಬಂಧಿಸಿದ್ದು

೨. ಇಚ್ಚೆಗೆ ಸಂಬಂಧಿಸಿದ್ದು

೩. ಭಾವನೆಗೆ ಸಂಬಂಧಿಸಿದ್ದು

ಕಲೆಯು ವಿಶೇಷವಾಗಿ ಭಾವನೆಗೆ ಸಂಬಂಧಿಸಿದೆ. ಇದು ಜೀವನದಲ್ಲಿನ ಆಗುಹೋಗುಗಳಿಗೆ, ಸನ್ನಿವೇಶಗಳಿಗೆ ಪ್ರತಿಕ್ರಿಯಾತ್ಮಕ ರೂಪದಲ್ಲಿ ಅಭಿವ್ಯಕ್ತವಾಗುತ್ತದೆ. ಹೀಗಾಗಿ ಸಾಹಿತ್ಯಕ್ಷೇತ್ರದ ಕಾವ್ಯ, ಚಿತ್ರಕಲೆಗೆ ಹತ್ತಿರವಾಗಿರುವಷ್ಟು ಅದರ ಉಳಿದ ಯಾವ ಅಂಗಗಳೂ ಹತ್ತಿರವಾಗಿಲ್ಲ. ನಮ್ಮ ಸುತ್ತಮುತ್ತಲೂ ನಡೆಯುವ ಘಟನೆಗಳನ್ನು ಬದಲಾವಣೆಗಳನ್ನು ನೋಡಿದಾಗ ಪ್ರತಿಯೊಬ್ಬನಲ್ಲೂ ಸಂವೇದನೆಯುಂಟಾಗುತ್ತದೆ. ತನ್ನ ಅನಿಸಿಕೆಗಳನ್ನು ಹೇಗಾದರೂ ಅಭಿವ್ಯಕ್ತಿಸಬೇಕು, ಹೇಳಬೇಕು, ಉದ್ವೇಗದಿಂದ ಬಿಡುಗಡೆ ಹೊಂದಬೇಕೆನ್ನುವ ಆಕಾಂಕ್ಷೆ ಎಲ್ಲರಲ್ಲೂ ಸಹಜವಾಗಿ ಇರುತ್ತವೆ. ಆದ್ದರಿಂದ ಮನುಷ್ಯ ತನ್ನ ಸಂವಹನ ಸಾಧ್ಯತೆಗಳಿಗಾಗಿ ಅನೇಕ ಪ್ರಕಾರಗಳನ್ನು ಕಂಡುಕೊಂಡನು, ವಿಶೇಷವಾದ ಮಾಧ್ಯಮಗಳ ಮೂಲಕ ತನ್ನ ಅನುಭವಗಳನ್ನು ಅಭಿವ್ಯಕ್ತಪಡಿಸುವವರು ಮತ್ತು ಶಬ್ದಗಳ ಮೂಲಕ ಅಭಿವ್ಯಕ್ತಿಸುವವರು ಕಲಾವಿದರಾದರೆ, ರೇಖೆಗಳ ಮೂಲಕ ಹೊರಹಾಕುವವನು ಚಿತ್ರಕಲಾವಿದನಾಗುತ್ತಾನೆ. ಹೀಗೆ ಮಾಧ್ಯಮಗಳು ಬದಲಾದರೂ ಅದರ ಹಿಂದೆ ಇರುವ ಮೂಲಸೆಲೆ ಒಂದೇ. ಆದರೂ ಉಳಿದ ಕಲಾ ಪ್ರಕಾರಗಳಿಗೂ, ಸಾಹಿತ್ಯಕ್ಕೂ ಅಭಿವ್ಯಕ್ತಿ ಮಾಧ್ಯಮದ ನೆಲೆಯಲ್ಲಿ ಮೂಲಭೂತ ವ್ಯತ್ಯಾಸವಿದೆ. ಕೆಲವು ಮಾಧ್ಯಮಗಳಿಗೆ ಜನಗಳ ಹೃದಯವನ್ನು ಸುಲಭವಾಗಿ ತಟ್ಟಬಲ್ಲ ಶಕ್ತಿ ಸಹಜವಾಗಿಯೇ ಇದೆ. ಈ ದೃಷ್ಟಿಯಿಂದ ಸಾಹಿತ್ಯ ಮತ್ತು ಚಿತ್ರಕಲೆಗಳನ್ನು ಹೋಲಿಸಿದರೆ ಅದರಲ್ಲಿ ಸಾಹಿತ್ಯ ಶಕ್ತಿಯುತವಾಗುತ್ತದೆಯಾದರೂ ಚಿತ್ರಕಲೆಗೂ ಕೂಡ ಅಷ್ಟೇ ಮಹತ್ವವಿರುತ್ತದೆ.

ಮಾನವನು ಆದಿಯಿಂದಲೂ ತನ್ನ ಸುತ್ತಲಿನ ಪ್ರಕೃತಿಯನ್ನು ನೋಡಿ ಉಂಟಾದ ಆನಂದವನ್ನು ವಿವಿಧ ಕಲೆಗಳಲ್ಲಿ ವ್ಯಕ್ತಪಡಿಸುತ್ತಾ ಬಂದಿರುತ್ತಾನೆ. ನಾಟ್ಯ, ಸಂಗೀತ, ಶಿಲ್ಪ ಮುಂತಾದ ಕಲೆಗಳೆಲ್ಲವೂ ಈ ಆನಂದದ ಪ್ರತಿಬಿಂಬಗಳು ಭೂಮಿಯ ಮೇಲೆ ಮನುಷ್ಯನ ಜನನವಾಗಿ ಸುಮಾರು ಎರಡುವರೆಲಕ್ಷ ಮಿಲಿಯನ್ ವರ್ಷಗಳಾಗಿವೆಯೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಇದರಲ್ಲಿ ಮನುಷ್ಯನು ನಾಗರಿಕತೆಯ ಹಂತವನ್ನು ತಲುಪಿದ್ದು, ಇಂದಿಗೆ ಸುಮಾರು ಐದು ಅಥವಾ ಆರು ಸಾವಿರ ವರ್ಷಗಳ ಹಿಂದೆ ಮಾನವ ನಾಗರಿಕತೆಗೆ ಕಾಲಿಟ್ಟಿದ್ದಾನೆ. ಈ ಸುದೀರ್ಘವಾದ ಮಾನವನ ಇತಿಹಾಸದಲ್ಲಿ 'ಕಲೆ' ಎಂದರೇನೆಂಬುದನ್ನು ಇನ್ನೂ ಸ್ಪಷ್ಟವಾಗಿ ಹೇಳಲಾಗುತ್ತಿಲ್ಲ. ಕಲೆಯು ಮನುಷ್ಯನ ಸೌಂದರ್ಯಾನುಭವದ ಪ್ರತಿಬಿಂಬ. ಈ ಆನಂದವನ್ನು ಕವಿಯು ಅಕ್ಷರಗಳಲ್ಲಿ, ಸಂಗೀತಗಾರನು ಇಂಪಾದ ಗೀತದಲ್ಲಿ, ಶಿಲ್ಪಿಯು ಉತ್ತಮವಾದ ಶಿಲ್ಪದಲ್ಲಿ, ಚಿತ್ರಗಾರನು ರಮ್ಯವಾದ ಚಿತ್ರದಲ್ಲಿ ಪ್ರತಿಬಿಂಬಿಸಿದ್ದಾರೆ. ಚಿತ್ರಕಲೆ ಮತ್ತು ಸಾಹಿತ್ಯಗಳು ಸಮಾಜಕ್ಕೆ ಅತ್ಯವಶ್ಯಕವಾಗಿರುತ್ತದೆ.

ಕಲೆ ಎಂದ ಕೂಡಲೇ ನಮ್ಮ ಮನಸ್ಸಿನಲ್ಲಿ ಮೂಡುವುದು ಚಿತ್ರಕಲೆಯೊಂದೇ, ಅದೇಕೋ ಏನೋ, ಕಲೆಗಳಲ್ಲೆಲ್ಲಾ ಚಿತ್ರಕಲೆಯೇ ಪ್ರಮುಖ ಸ್ಥಾನವನ್ನು ಪಡೆದುಕೊಂಡು ಕಲೆಯೆಂದರೆ ಅದೊಂದೇ ಎನ್ನುವ ಭಾವನೆ ಹುಟ್ಟಿರುವುದಂತೂ ಸತ್ಯ. ಉಳಿದ ಸಂಗೀತ, ಶಿಲ್ಪ, ನೃತ್ಯ ಇತ್ಯಾದಿಗಳನ್ನು 'ಶಿಲ್ಪಕಲೆ', 'ಸಂಗೀತಕಲೆ', 'ನೃತ್ಯಕಲೆ' ಎಂದು ಪ್ರತ್ಯೇಕವಾಗಿ ಹೆಸರುಗೊಂಡೇ ಸೂಚಿಸಬೇಕಾಗುತ್ತದೆ. ಈ ಲಲಿತಕಲೆಗಳ ಗುಂಪಿನಲ್ಲಿಯೇ ಸಾಹಿತ್ಯ-ಕಾವ್ಯಗಳು ಕೂಡ ಸೇರಿದ್ದರೂ ಅವನ್ನು 'ಸಾಹಿತ್ಯಕಲೆ', 'ಕಾವ್ಯಕಲೆ' ಎಂದು ಕರೆಯುವ ಪರಿಪಾಠವಿಲ್ಲ. ಹಾಗೇ ಕರೆದಾಗಲೂ ಕೂಡ ಅದಕ್ಕೆ ಕಲೆ ಎಂಬ ವಿಶಾಲ ಅರ್ಥಕ್ಕಿಂತ 'ಕಸಬು', 'ಕುಶಲತೆ' ಎಂಬ ಸೀಮಿತ ಅರ್ಥವೇ ಬರುವಂತಾಗಿದೆ. ಅದರಂತೆ ಲಲಿತಕಲೆಗಳಲ್ಲಿ ಪ್ರಮುಖವುಗಳಾದ ಚಿತ್ರಕಲೆ ಮತ್ತು ಸಾಹಿತ್ಯ ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡಲು ಪ್ರೇರಣೆ ನೀಡುವಂತಹ ವಸ್ತುಗಳಾಗಿವೆ. ಕವಿ ಮತ್ತು ಕಲಾವಿದ ಒಂದೆ ನಾಣ್ಯದ ಎರಡು ಮುಖಗಳಿದ್ದಂತೆ.

ದೃಶ್ಯಕಲಾ ಕ್ಷೇತ್ರದಲ್ಲಿ ಸಾಹಿತ್ಯ ಮತ್ತು ವಿಮರ್ಶೆಗಳೆರಡು ಅತ್ಯಂತ ಕಡಿಮೆ ಪ್ರಮಾಣದಲ್ಲಿ ಇಲ್ಲಿಯವರೆಗೆ ನಡೆದಿರುತ್ತವೆ. ಕನ್ನಡದಲ್ಲಿ ದೃಶ್ಯಕಲಾ ವಿಮರ್ಶೆಯ ಕ್ಷೇತ್ರದಲ್ಲಿ ಹಿರಿಯ ತಲೆಮಾರಿನ ಡಾ.ಕೆ.ಶಿವರಾಮಕಾರಂತ, ಪ್ರೊ.ಎಸ್.ಕೆ. ರಾಮಚಂದ್ರರಾವ್, ಬಿ.ವಿ.ಕೆ.ಶಾಸ್ತ್ರಿ, ಅ.ನ.ಕೃ., ಪಿ.ಆರ್. ತಿಪ್ಪೇಸ್ವಾಮಿ, ಎಲ್.ಶಿವಲಿಂಗಪ್ಪ, ಎಸ್.ಎನ್.ಚಂದ್ರಶೇಖರ್, ಎಂ.ವಿ.ಸೀತಾರಾಮಯ್ಯ, ಪ್ರೊ.ಎಂ. ಎಚ್.ಕೃಷ್ಣಯ್ಯ, ಡಾ.ಎಸ್.ಕೆ.ಅರುಣಿ, ಡಾ.ಎಸ್.ಸಿ.ಪಾಟೀಲ, ಆ.ಲ.ನರಸಿಂಹನ್, ಸಿ.ಚಂದ್ರಶೇಖರ್, ಕೆ.ವಿ.ಸುಬ್ರಮಣ್ಯಂ, ಮರಿಶಾಮಾಚಾರ್, ಎಚ್.ಎ.ಅನಿಲ್‌ಕುಮಾರ್, ಮುಂತಾದ ನೂರಾರು ಬರಹಗಾರರಾಗಿದ್ದಾರೆ. ಅವರ ಕುರಿತಾಗಿಯೇ ಪ್ರತ್ಯೇಕ ಅಧ್ಯಯನ ಮಾಡಬಹುದಾಗಿದೆ. ಈ ಪ್ರಮುಖರ ಸಾಲಿನಲ್ಲಿ ಕಲಾವಿದ, ಕಲಾವಿಮರ್ಶಕ ಚಿ.ಸು.ಕೃಷ್ಣಸೆಟ್ಟಿಯವರು ಒಬ್ಬರು. ಇವರು ಸ್ವತಃ ಕಲಾವಿದರೂ, ಕಲಾವಿಮರ್ಶಕರೂ ಅಗಿರುವ ಹಾಗೂ ಹಲವು ಕಲಾವಿದರ ಸಾಧನೆಗಳನ್ನು ನಿರಂತರವಾಗಿ ಬರೆಯುತ್ತಬಂದಿರುವ ಚಿ.ಸು.ಕೃಷ್ಣಸೆಟ್ಟಿಯವರ ಒಲವು ಚಿತ್ರಕಲಾ ಮಾಧ್ಯಮದ ಬರವಣಿಗೆಯತ್ತ ಹರಿದಿದೆ. ಅದರಲ್ಲೂ ವಿಶೇಷವಾಗಿ ಪರಿಚಯ, ಅಧ್ಯಯನ ಮತ್ತು ಕಲಾಸಾಹಿತ್ಯ ಮತ್ತು ವಿಮರ್ಶೆ ಅವರ ಬರವಣಿಗೆಯ ಧ್ಯೇಯ ಬಿಂದುವಾಗಿದೆ. ಇವರು ಸುಮಾರು ೮೦ರ ದಶಕದಿಂದಲೆ ದೃಶ್ಯಕಲಾಕೃತಿಗಳ ಕುರಿತು ಪತ್ರಿಕೆಗಳ ಮೂಲಕ ವಿಮರ್ಶೆ ಮಾಡುತ್ತಲೆ ಬಂದಿದ್ದಾರೆ. ಒಟ್ಟಾರೆ ಅವರ ಕಲಾಸಾಹಿತ್ಯವನ್ನು ಪ್ರಮುಖವಾಗಿ ನೆಲೆಗಳಲ್ಲಿ ಗುರುತಿಸಬಹುದು.

೧. ಯುಸಫ್ ಆರಕ್ಕಲ್

೨. ಚಿತ್ರ-ಚಿತ್ತ

೩. ಎಕ್ಸಪ್ರೆಶನಿಸಂ



**ಕಲಾಸಾಹಿತ್ಯ**

**ಕಲಾ ಗ್ರಂಥಗಳು**

೧. ಯುಸಫ್ ಆರಕ್ಕಲ್
೨. ಚಿತ್ರ–ಚಿತ್ತ
೩. ಎಕ್ಸ್‌ಪ್ರೇಶನಿಸಂ
೪. ವರ್ಣಾವರಣ
೫. ದೃಶ್ಯಕಲೆ ಎಂದರೇನು
೬.ಎಂ.ಟಿ.ವಿ. ಆಚಾರ್ಯ
೭. ಶಿಲ್ಪಕಲಾವಿದ ಎಲ್.ಪಿ.ಅಂಚನ್

**ಸಂಪಾದನಾ ಕಲಾಸಾಹಿತ್ಯ**

ಗ್ರಂಥಗಳು

ದೃಶ್ಯಕಲೆ ಗುಣ ಗ್ರಹಣ
ಸಾಂಪ್ರದಾಯಿಕ ಶಿಲ್ಪಕಲೆ
ಶಿಲ್ಪಕಲೆ
ಜನಪದ ಕಲೆ
ಪಾಪ್ ಕಲೆ

ಕಲಾಪತ್ರಿಕೆಗಳು

ಕಲಾವಾರ್ತೆ

**ಬಿಡಿ ಲೇಖನಗಳು**

೧. ಹತ್ತು ಮನಸ್ಸಿನ ವೈವಿಧ್ಯಮಯ ಅಭಿವ್ಯಕ್ತಿ(ವಿಜ್ಞಾನ, ಕಲೆ)
೨. ಉತ್ಕಟ ಕಾರ್ಮಿಕ ಅನುಭವದ ಚಿತ್ರಗಳು
೩. ಚಿಂತನಾಶೀಲ ವಿಶ್ಲೇಷಣೆ(ವಾಙ್ಮಯ ವಿಶೇಷ)
೪. ಸಮಕಾಲೀನ ಭಾರತ ದರ್ಶನ(ಚಿತ್ರ ಮತ್ತು ಶಿಲ್ಪ)
೫. ಫ್ರಾಯ್ಡ್ ನೆನಪು ತಂದ ಕಲಾಪ್ರದರ್ಶನ(ವಾಙ್ಮಯ ವಿಶೇಷ ಶಿಲ್ಪ)
೬. ಸೌಂದರ್ಯದ ಆರಾಧನೆಯ ಆಶಯ(ಶಿಲ್ಪ ಮತ್ತು ಚಿತ್ರ)
೭. ಆಧುನಿಕ ಕಣ್ಣುಗಳಲ್ಲಿ ಗಣೇಶ(ವಾಙ್ಮಯ ವಿಶೇಷ ಶಿಲ್ಪ)
೮. ವಿಶಿಷ್ಟ ರೇಖೆಗಳಲ್ಲಿ ರಾಜರುಗಳು(ಶಿಲ್ಪ ಮತ್ತು ಚಿತ್ರ)
೯. ಸಂಪ್ರದಾಯದ ನೆಲೆಯ ದರ್ಶನ
೧೦. ಅಮೂರ್ತ ಹಾಗೂ ಮಾನವೀಯ ಕಾಳಜಿ
೧೧. ನಂದಿಬೆಟ್ಟದಲ್ಲಿ ಕಲಾವಿದರ ಶಿಬಿರ
೧೨. ಸಮಕಾಲೀನತೆಗೆ ಸ್ಪಂದಿಸದ ಒರಿಸ್ಸಾ ಕೃತಿಗಳು
(ಈ ಅಧ್ಯಾಯದಲ್ಲಿ ಈ ಲೇಖನಗಳ ಕುರಿತು ವಿವರಿಸಲಾಗಿದೆ)

೪. ವರ್ಣಾವರಣ

೫. ದೃಶ್ಯಕಲೆ ಎಂದರೇನು

೬.ಎಂ.ಟಿ.ವಿ. ಆಚಾರ್ಯ

೭. ಶಿಲ್ಪಕಲಾವಿದ ಎಲ್.ಪಿ.ಅಂಚನ್

**ಗ್ರಂಥಗಳು**

**೧. ಯುಸಫ್ ಆರಕ್ಕಲ್**

ಬೆಂಗಳೂರಿನ ಲಲಿತಕಲಾ ಅಕಾಡೆಮಿಯಿಂದ ಪ್ರಕಟವಾಗಿರುವ ಈ ಕೃತಿಯನ್ನು ಕೃಷ್ಣಸೆಟ್ಟಿಯವರು ರಚಿಸಿದ್ದಾರೆ. ಸಮಕಾಲೀನ ಭಾರತೀಯ ಪ್ರಮುಖ ಚಿತ್ರಕಲಾವಿದರಲ್ಲಿ ಒಬ್ಬರಾಗಿರುವ ಯೂಸುಫ್ ಅರಕ್ಕಲ್ ಅವರು ತಮ್ಮ ಕುಂಚದಿಂದ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಖ್ಯಾತಿ ಗಳಿಸುವ ಮೂಲಕ ನಾಡಿಗೆ ಕೀರ್ತಿ ತಂದಿದ್ದಾರೆ. ವೈಯಕ್ತಿಕವಾಗಿ ಕಲಾವಿದರನ್ನು ಬಲ್ಲ ಲೇಖಕರು ಅವರ ಜೀವನ ಸಾಧನೆ ಮತ್ತು ಅವರ ಕಲಾಕೃತಿಗಳ ಮಹತ್ವ ಕುರಿತಂತೆ ಹಾಗೂ ಅವರ ಮಾನವ ಕೇಂದ್ರಿತ ಕಾಳಜಿಯ ಸುತ್ತಮುತ್ತ, ವೈಪರೀತ್ಯಗಳ ಬದುಕು, ಸಾಧನೆಗಳ ಸರಮಾಲೆ, ಸಾಮಾಜಿಕತೆಯ ಒಲವು, ನಿಲುವು ಇನ್ನೂ ಮೊದಲಾದ ವಿಷಯಗಳ ಕುರಿತು ಈ ಕೃತಿಯಲ್ಲಿ ಚರ್ಚಿಸಿದ್ದಾರೆ. ತಮ್ಮ ನಿಶ್ಚಿತ ಶೈಲಿ ಮತ್ತು ತಂತ್ರದ ಮೂಲಕ ಕಲಾರಂಗದಲ್ಲಿ ತಮ್ಮದೇ ಸ್ಥಾನವನ್ನು ಹೊಂದಿರುವ ಇವರು ನಿರಂತರ ಕ್ರಿಯಾಶೀಲರು. ಸಾಮಾನ್ಯ ಮಾನವನ ದಿನನಿತ್ಯ ಕಷ್ಟ ಕಾರ್ಪಣ್ಯಗಳು, ಏಕಾಂತತೆ, ಜೀವನ ಸಂಘರ್ಷ, ಇದೇ ಮೊದಲಾದ ಸಾಮಾಜಿಕ ಕಳಕಳಿಯ ವಸ್ತುಗಳು ಇವರ ಅನೇಕ ಸರಣಿ ಕಲಾ ಕೃತಿಗಳಲ್ಲಿ ಪ್ರತಿಬಿಂಬಿತಗೊಂಡು ದೇಶ ವಿದೇಶಗಳಲ್ಲಿ ಪ್ರದರ್ಶನಗೊಂಡು ಪ್ರಶಂಸಿಸಲ್ಪಟ್ಟಿವೆ. ಜನಾಂಗೀಯ ಹೋರಾಟ ಕೊಲ್ಲಿ ಯುದ್ಧ, ಇಂದಿನ ಜಗತ್ತನ್ನು ಕಾಡುತ್ತಿರುವ ಅನೇಕ ಜ್ವಲಂತ ಸಮಸ್ಯೆಗಳು ಮತ್ತು ಅವರ ಜೀವನದ ಕೆಲವು ಸನ್ನಿವೇಶಗಳು, ಚಿತ್ರಕಲೆಯಲ್ಲಿ ಆದ ಬದಲಾವಣೆಗಳು, ಮತ್ತಿತರ ಸನ್ನಿವೇಶಗಳನ್ನು ಹಾಗೂ ಕಲಾವಸ್ತುಗಳ ಕುರಿತು ಚಿ.ಸು.ಕೃಷ್ಣಸೆಟ್ಟಿಯವರು ತಮ್ಮದೇ ಆದ ಶೈಲಿಯಲ್ಲಿ ವಿಶ್ಲೇಷಿಸಿದ್ದಾರೆ.

ಯೂಸುಫ್‌ರವರು ಬೆಳೆದ ಪರಿಸರ, ಬಾಲ್ಯ, ಶಿಕ್ಷಣ, ಅವರ ಮೇಲೆ ಬೀರಿದ ಪ್ರಭಾವ ಮತ್ತು ಅವರ ಸೃಜನಶೀಲ ಕಲಾಸೃಷ್ಟಿ ಕಾವ್ಯ, ಕಲಾಲೇಖನ, ಸಂಘಟನೆ, ತಮ್ಮನ್ನು ತೊಡಗಿಸಿಕೊಂಡ ವಿವರಗಳನ್ನು ಕೃತಿಯ ಆರಂಭಿಕ ಭಾಗದಲ್ಲಿ ಚರ್ಚಿಸಿದ್ದಾರೆ. ಕೃತಿಯ ನಂತರದ ಭಾಗದಲ್ಲಿ ಕಲಾವಿದರು ಸುಮಾರು ೨೦ ವರ್ಷ ಸತತವಾಗಿ ಶಿಲ್ಪ, ಚಿತ್ರ, ಗ್ರಾಫಿಕ್, ಮ್ಯೂರಲ್ ಇತ್ಯಾದಿ ಮಾಧ್ಯಮಗಳ ಕಲೆಯ ಮರೆಯಲಾರದ ನೋವು ಅವರ ಕೃತಿಯಲ್ಲಿ ಹಲವು ಸರಣಿ ಚಿತ್ರಗಳಾಗಿ ಸೃಷ್ಟಿಸಿರುವ ಬಗ್ಗೆ ಸಂಪೂರ್ಣ ಮಾಹಿತಿಯೊಂದಿಗೆ ತಮ್ಮ ಜೀವನದ ನೋವು ನಲಿವುಗಳ

ಹಾಗೂ ಪ್ರಭಾವಗಳ ವಿವರಗಳಿವೆ. ಯೂಸುಫ್ ಅವರು ಸಾಕಷ್ಟು ದೊಡ್ಡ ಅಳತೆಯ(ಅಳತೆಯ) ಚಿತ್ರ ರಚಿಸುತ್ತಿದ್ದರಂತೆ, ಒಮ್ಮೆ ಅವರು ಎಂ.ಎಫ್.ಹುಸೇನ್ ಅವರ ಚಿತ್ರ ರಚನೆಯ ಶೈಲಿ ಕಂಡು ತಮ್ಮ ಕಲಾಕೃತಿಯಲ್ಲಿ ಸಾಕಷ್ಟು ಬದಲಾವಣೆಯಾದವು ಎಂದು ಹೇಳಿಕೊಂಡಿರುವ ಬಗ್ಗೆ ಕೃಷ್ಣಸೆಟ್ಟಿ ಯವರ ವಿವರ ನೀಡಿದ್ದಾರೆ. ಅಲ್ಲದೆ ಕಲಾವಿದರಿಗೆ ತೈಲವರ್ಣದ ಕಲಾಕೃತಿಗಳಲ್ಲಿ ಹೆಚ್ಚು ಆಸಕ್ತಿ ಇದ್ದು, ಅವರು ಬಳಿಸುತ್ತಿದ್ದ ಬಹುವರ್ಣ, ಶೈಲಿ, ತಂತ್ರ, ಕಾಗದ ಚೂರು, ಸ್ಪಂಜು ಮೊದಲಾದವುಗಳ ಮಾಹಿತಿ ಹಾಗೂ ಕಲಾಕೃತಿಯಲ್ಲಿ ಸರಣಿ ಚಿತ್ರಗಳ ವಿವರಣೆ, ನಗ್ನತೆಯಲ್ಲಿ 'ಗಂಗಾ' ಸರಣಿಗಳ ವಿಶ್ಲೇಷಣೆಗಳಿವೆ. ಅಂತಿಮವಾಗಿ ಲೇಖಕರು ಕಲಾವಿದರನ್ನು 'ಅಕಾಡೆಮಿಕ್ ನವ್ಯದಲ್ಲಿ ರೂಪುಗೊಂಡ ಸಾಂಸ್ಕೃತಿಕ ವ್ಯಕ್ತಿತ್ವ' ಎಂದಿದ್ದಾರೆ.

**೨. ಚಿತ್ರ–ಚಿತ್ತ**

ಚಿ.ಸು.ಕೃಷ್ಣಸೆಟ್ಟಿಯವರಿಂದ ರಚಿತವಾಗಿರುವ ಈ ಕೃತಿಯನ್ನು ಬೆಂಗಳೂರಿನ ಇಳಾ ಪ್ರಕಾಶನ ೨೦೦೦ ರಲ್ಲಿ ಪ್ರಕಟಿಸಿದೆ. ಈ ಪುಸ್ತಕವು ಸ್ವತಃ ಲೇಖಕರಿಂದ ರಚಿತವಾದ ೧೨ ಲೇಖನಗಳ ಸಂಕಲನವಾಗಿದೆ. ಪ್ರಜಾವಾಣಿ ದಿನಪತ್ರಿಕೆಯ ಕರ್ನಾಟಕ ದರ್ಶನದಲ್ಲಿ ಈಗಾಗಲೇ ಪ್ರಕಟವಾಗಿದ್ದ ಈ ಲೇಖನಗಳನ್ನು ಒಟ್ಟು ಸೇರಿಸಿ ಓದುಗರಿಗೆ ಒಂದೆಡೆ ದೊರೆಯಬೇಕೆಂಬ ಸದಾಶಯದಿಂದ ಈ ಕೃತಿಯನ್ನು ಹೊರತರಲಾಗಿದೆ. ಈ ಕೃತಿಯಲ್ಲಿ ಚಿತ್ರ, ಶಿಲ್ಪ, ಗ್ರಾಫಿಕ್‌ಕಲೆ, ನವ್ಯಕಲೆ, ಸಮಕಾಲೀನ ರೇಖಾಚಿತ್ರಗಳು, ಆಧುನಿಕ ಶಿಲ್ಪಕಲೆ ಮತ್ತು ಕಲಾವಿದರಿಗೆ ಸಂಬಂಧಿಸಿದ ಹಲವು ಮಹತ್ವದ ವಿಷಯಗಳ ಮೇಲೆ ಚರ್ಚಿಸಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ಕಲೆಯಲ್ಲಿ ನಗ್ನತೆ :ಭೂತ ವರ್ತಮಾನಗಳ ದ್ವಂದ್ವ, ನಮ್ಮ ಈಚಿನ ಸಮಕಾಲೀನ ಕಲೆಯಲ್ಲಿನ ಪ್ರವೃತ್ತಿಗಳು, ಶೈಶವಾವಸ್ಥೆಯಲ್ಲಿಯೇ ಬದುಕುತ್ತಿರುವ ಗ್ರಾಫಿಕ್ ಕಲೆ, ಪರಂಪರೆಯಲ್ಲಿನ ಪಲ್ಲಟ, ಯುದ್ದಗಳ ಮೇಲೆ ಯುದ್ದ ಸಾರಿದ ಗೆರ್ನಿಕಾ, ಕರ್ನಾಟಕದಲ್ಲಿ ಆಧುನಿಕ ಶಿಲ್ಪಕಲೆ, ನವ್ಯಕಲೆಯನ್ನು ಆಸ್ವಾದಿಸುವ ಕಲೆ, ಭಾರತದ ಸಮಕಾಲೀನ ರೇಖಾಚಿತ್ರಗಳು ಮುಖ್ಯವಾಗಿವೆ. ಇಲ್ಲಿನ ಪ್ರತಿ ಲೇಖನಗಳು ಓದುಗರಿಗೆ ದೃಶ್ಯಕಲೆಗಳ ಕುರಿತಂತೆ ಸಮಗ್ರ ಚಿತ್ರಣ ನೀಡುವಲ್ಲಿ ಯಶಸ್ವಿಯಾಗಿವೆ.

ಚಿತ್ರಕಲೆಯ ಇತಿಹಾಸದಲ್ಲಿ ಸಂಪ್ರದಾಯವಾದಿಗಳ ಹಾಗೂ ಕಲಾತ್ಮಕವಾದಿಗಳ ನಡುವೆ ನಗ್ನತೆಯನ್ನು ಕುರಿತಂತೆ ಘರ್ಷಣೆ ಈಗಲೂ ನಡೆಯುತ್ತಲೇ ಇದೆ ಎನ್ನುವುದನ್ನು ಲೇಖಕರು, ಕಲಾವಿದರಾದ ಎಂ.ಎಫ್.ಹುಸೇನ್ ಅವರ ವಿವಾದಕ್ಕೊಳಗಾದ 'ಸರಸ್ವತಿ'(೧೯೭೬) ರೇಖಾಚಿತ್ರವನ್ನು ಆಧರಿಸಿ ತಮ್ಮದೇ ದೃಷ್ಟಿಕೋನದಲ್ಲಿ ವಿಶ್ಲೇಷಿಸಿದ್ದಾರೆ. ಇದಕ್ಕೆ ಪೂರಕವಾಗಿ ಪಾಶ್ಚಾತ್ಯ ಸಂಪ್ರದಾಯಗಳಲ್ಲಿಯು ಕಲೆ ಹೇಗೆಲ್ಲಾ ದಾಟಿಕೊಂಡಿದೆ. ಅದರ ವಿಸ್ತೃತ ರೂಪವನ್ನು ಹೆಣೆಯುವುದರ ಜೊತೆ ೨೧ನೇ ಶತಮಾನಕ್ಕೆ ದಾಪುಗಾಲು ಹಾಕುತ್ತಿರುವ ಈ ಸಂದರ್ಭದಲ್ಲಿ ಕಲಾಭಿವ್ಯಕ್ತಿಯನ್ನು

ತೆರೆದ ಮನಸ್ಸಿನಿಂದ ಸ್ವೀಕರಿಸುವ ಅಗತ್ಯವಿದೆ ಎನ್ನುವುದನ್ನು **ಕಲೆಯಲ್ಲಿ ನಗ್ನತೆ :ಭೂತ ವರ್ತಮಾನಗಳ ದ್ವಂದ್ವ** ಎನ್ನುವ ಲೇಖನದಲ್ಲಿ **ಪ್ರತಿಪಾದಿಸುತ್ತಾರೆ**. ಇದರೊಂದಿಗೆ ಚಿ.ಸು.ಕೃಷ್ಣಸೆಟ್ಟಿ ತಮ್ಮದೇ ಭಿನ್ನ ಆಲೋಚನೆಗೆ ಪೂರಕವಾಗಿ ಕುವೆಂಪು, ಆನಂದ ಕುಮಾರಸ್ವಾಮಿ, ಬೆಂಜಮಿನ್ ರೂಲ್ಯಾಂಡ್, ಎ.ಕೆ.ರಾಮಾನುಜನ್, ಎಸ್.ಕೆ.ರಾಮಚಂದ್ರರಾವ್ ಮುಂತಾದವರ ಅಭಿಪ್ರಾಯಗಳನ್ನು ತಿಳಿಸುವುದರ ಜೊತೆಗೆ ಪೂರಕವಾದ ಮಾಹಿತಿಯನ್ನು ವಿಶೇಷವಾಗಿ ಒದಗಿಸಿದ್ದಾರೆ.

**ನಮ್ಮ ಈಚಿನ ಸಮಕಾಲೀನ ಕಲೆಯಲ್ಲಿನ ಪ್ರವೃತ್ತಿಗಳು ಎನ್ನುವ ಲೇಖನದಲ್ಲಿ** ಚಿತ್ರಕಲೆಯಲ್ಲಿ **ಕಲಾ** ಮೌಲ್ಯಗಳು ಕಾಲದಿಂದ ಕಾಲಕಾಲಕ್ಕೆ ವ್ಯತ್ಯಾಸವಾಗಿ ಬದಲಾವಣೆಯಾಗಿವೆ. ಬ್ರಿಟಿಷರು ನಮ್ಮ ಮೇಲೆ ಹೇರಿದ್ದ ಅಕಾಡೆಮಿಕ್ ಶೈಲಿ. ಸ್ವಾತಂತ್ರ್ಯಾ ನಂತರ ಹಲವಾರು ಬದಲಾವಣೆಗಳನ್ನು ತಂದವು ಎನ್ನುವ ಲೇಖಕರು ಇದೀಗ ನಮ್ಮ ಬೇರುಗಳಿಂದಲೇ ರೂಪಗಳನ್ನು ಪಡೆದುಕೊಳ್ಳುವ ದಿಸೆಯಲ್ಲಿ ಸಾಗುವಂತಹ ಪರಿಸ್ಥಿತಿ ಈ ನಮ್ಮ ಸಂದರ್ಭದಲ್ಲಿದೆ ಎನ್ನುತ್ತಾರೆ. ವಿಶ್ವದ ಕಲಾರಂಗದಲ್ಲಿ ಕಂಡುಬರುವ ವಿಭಿನ್ನ ಶೈಲಿ, ರೂಪ ಹಾಗೂ ಗೊಂದಲಗಳನ್ನು ಹಾಗೂ ಅದು ಬದಲಾದ ಸ್ವರೂಪವನ್ನು ಹೆಚ್ಚು ಕಡಿಮೆ ಸಮಕಾಲೀನ ಭಾರತದಲ್ಲಿಯೂ ಕಾಣಬಹುದಾಗಿದೆ. ಇಲ್ಲಿ ಕಂಡುಬರುವ ಕಲೆಯ ಎಲ್ಲ ರೂಪಗಳು ಕರ್ನಾಟಕದಲ್ಲಿ ಚಲಾವಣೆಯಲ್ಲಿವೆ ಎನ್ನುವುದನ್ನು ನಾಡಿನ ಆಯ್ದ ಕಲಾವಿದರಾದ ಪೀಟರ್ ಲೂಯಿಸ್, ಚಂದ್ರನಾಥ್ ಆಚಾರ್ಯ, ಎಸ್.ಜಿ.ವಾಸುದೇವ್, ಯೂಸುಫ್ ಅರಕ್ಕಲ್, ರಮೇಶ್‌ರಾವ್, ಜೆ.ಎಂ.ಎಸ್.ಮಣಿ, ರಾಮದಾಸ್ ಶಾಂತಮಣಿ, ಎಂ.ಎಸ್.ಅಮರನಾಥ್, ವಿ.ಜಿ.ಅಂದಾನಿ, ಬಿ.ಓ.ಶೈಲೇಶ್ ಇತ್ಯಾದಿಯವರನ್ನು ಉಲ್ಲೇಖಿಸಿ ಅವರ ಕಲಾ ಮೆರಗನ್ನು ಈ ಲೇಖನದಲ್ಲಿ ಉದಾಹರಣೆಗಳೊಂದಿಗೆ ವಿಶ್ಲೇಷಿಸಿದ್ದಾರೆ. ಇದರೊಂದಿಗೆ ರೊಮ್ಯಾಂಟಿಕ್, ನವೋದಯ, ನವ್ಯೋತ್ತರದ ಕಲೆಯ ಪ್ರವೃತ್ತಿಗಳನ್ನು ಮತ್ತು ಆ ಪರಂಪರೆಯ ಕಲಾವಿದರ ಕಲಾಕೃತಿಗಳ ವೈಶಿಷ್ಟ್ಯತೆ ಮತ್ತು ಮಹತ್ವ ಕುರಿತಂತೆ ಹಾಗೂ ಕಲೆ ಹೇಗೆ ಜನರಿಗೆ ಹತ್ತಿರವಾಗಬಹುದು ಎಂಬುದನ್ನು ಇದೇ ಲೇಖನದಲ್ಲಿ ಚರ್ಚಿಸಿದ್ದಾರೆ.

**ಶೈಶವಾವಸ್ಥೆಯಲ್ಲಿಯೇ ಬದುಕುತ್ತಿರುವ ಗ್ರಾಫಿಕ್ ಕಲೆ** ಎನ್ನುವ ಲೇಖನದಲ್ಲಿ ಕೃಷ್ಣಸೆಟ್ಟಿಯವರು ಗ್ರಾಫಿಕ್ ಕಲೆಯ ಮಹತ್ವ, ಆ ಮಾಧ್ಯಮ ಕಲಾವಿದರಿಂದ ದೂರ ಉಳಿದಿರುವ ಪರಿಯನ್ನು ವಿವರಿಸಿದ್ದಾರೆ. ಹಿಂದೆ ಎಚ್ಚಿಂಗ್ ಹಾಗೂ ಲಿಥೊ ಮುದ್ರಣದ ಯಂತ್ರಗಳು ಇಲ್ಲದೇ ಇದ್ದಿದ್ದರಿಂದ ಲಿನೋಕಟ್, ವುಡ್‌ಕಟ್ ತಂತ್ರಗಳೇ ಮೇಲುಗೈ ಪಡೆದ ವಿವರ ಹಾಗೂ ರಾಜ್ಯದ ಗಮನಾರ್ಹ ಕಲಾಶಾಲೆಗಳಾದ ರೆನ್, ಕರ್ನಾಟಕ ಚಿತ್ರಕಲಾ ಪರಿಷತ್ತು, ಕಲಾಮಂದಿರ, ಮೈಸೂರಿನ ಕಾವಾ, ಗುಲ್ಬರ್ಗದ ಐಡಿಯಲ್ ಫೈನ್ ಆರ್ಟ್ ಸೊಸೈಟಿ, ದಾವಣಗೆರೆಯ ಯೂನಿವರ್ಸಿಟಿ ಕಾಲೇಜ್

ಆಫ್ ಆರ್ಟ್, ಕರ್ನಾಟಕ ಲಲಿತಕಲಾ ಅಕಾಡೆಮಿಯ ವತಿಯಿಂದ ಗ್ರಾಫಿಕ್‌ನ ಶೈಲಿಯ ಬೆಳವಣಿಗೆಗಾಗಿ ಮಾಡಿದ ಪ್ರಯೋಗಗಳು, ಶಿಬಿರಗಳಿಂದಾಗಿ ಪ್ರಾಚುರ್ಯಕ್ಕೆ ಬಂದ ಮತ್ತು ರಾಷ್ಟ್ರಮಟ್ಟದಲ್ಲಿ ಗ್ರಾಫಿಕ್ ಕಲೆಯಲ್ಲಿ ಗುರುತಿಸಿಕೊಂಡ ಕಲಾವಿದರಾದ ಸಿ.ಚಂದ್ರಶೇಖರ್, ಎಂ.ಶ್ಯಾಮಸುಂದರ್, ವಿಜಯ ಬಾಗೋಡಿ, ಯೂಸುಫ್ ಅರಕ್ಕಲ್, ಹಡಪದ್, ಧನಲಕ್ಷ್ಮಿ, ರವಿಕುಮಾರ್ ಕಾಶಿ, ಅಂದಾನಿ, ಜೆ.ಎಂ.ಎಸ್.ಮಣಿ, ಶ್ರೀಧರಮೂರ್ತಿ, ಎಚ್.ಎಸ್.ವೇಣುಗೋಪಾಲ ಮುಂತಾದವರ ವಿವರಗಳನ್ನು ದಾಖಲಿಸಿದ್ದಾರೆ.

ಅನ್ಯ ಸಂಸ್ಕೃತಿಗಳ ಪ್ರಭಾವ ಮತ್ತು ಆಕರ್ಷಣೆಗೆ ಒಳಗಾಗಿ ನಮ್ಮ ಭಾರತದ ಮೂಲ ಸಂಸ್ಕೃತಿ ನಲುಗಿದೆ. ಇದರಿಂದ ಪರಕೀಯ ಸಂಸ್ಕೃತಿಗಳ ಯಜಮಾನಿಕೆಯಲ್ಲಿ ನಮ್ಮ ಮೂಲ ಸಂಸ್ಕೃತಿ ನಲುಗುತ್ತಿದೆ ಎಂದು **ಪರಂಪರೆಯಲ್ಲಿನ ಪಲ್ಲಟ** ಎನ್ನುವ ಲೇಖನದಲ್ಲಿ ಚರ್ಚಿಸಿದ್ದಾರೆ. ಅದೇ ರೀತಿ **ಯುದ್ಧಗಳ ಮೇಲೆ ಯುದ್ಧ ಸಾರಿದ ಗೆರ್ನಿಕಾ ಎನ್ನುವ ಲೇಖನದಲ್ಲಿ** ಸ್ಪೈನ್‌ನ ಉತ್ತರ ಭಾಗದಲ್ಲಿದ್ದ ಚಿಕ್ಕ ಪಟ್ಟಣವಾದ ಗೆರ್ನಿಕಾದ ಮೇಲೆ ಹಿಟ್ಲರ್ ಹಾಕಿದ ಬಾಂಬ್‌ನಿಂದ ಉಂಟಾದ ಅನಾಹುತಕ್ಕೆ ಭಾರೀ ವ್ಯತಿರಿಕ್ತ ಪ್ರತಿಕ್ರಿಯೆಗಳು ಬಂದವು. ಈ ಘಟನೆಯನ್ನಾಧರಿಸಿ ಹೆಸರಾಂತ ಕಲಾವಿದ ಪ್ಯಾಬ್ಲೋ ಪಿಕಾಸೋ ರಚಿಸಿದ ಚಿತ್ರಕೃತಿಯ ಕುರಿತು ಸ್ವವಿವರವಾಗಿ ಚಿ.ಸು.ಕೃಷ್ಣಸೆಟ್ಟಿಯವರು ಈ ಲೇಖನದಲ್ಲಿ ವಿವರಿಸಿದ್ದಾರೆ.

**ಕರ್ನಾಟಕದಲ್ಲಿ ಆಧುನಿಕ ಶಿಲ್ಪಕಲೆ ಎನ್ನುವ ಲೇಖನದಲ್ಲಿ** ಕರ್ನಾಟಕದಲ್ಲಿ ನವ್ಯಶಿಲ್ಪಕಲೆ ಗಮನಾರ್ಹವಾಗಿ ಬೆಳಕಿಗೆ ಬಂದದ್ದು ೨೦ನೇ ದಶಕದಲ್ಲಿ. ಶಿಲ್ಪಕಲೆಯ ಮಹತ್ವ, ಅದು ಇಲ್ಲಿ ಬೆಳದುಬಂದ ಬಗೆ ಹಾಗೂ ಗಮನಾರ್ಹವಾದ ಕೆಲವು ಆಧುನಿಕ ಶಿಲ್ಪಗಳ ಮಹತ್ವದ ಕುರಿತು ಚರ್ಚಿಸಿದ್ದಾರೆ. **ನವ್ಯಕಲೆಯನ್ನು ಆಸ್ವಾದಿಸುವ ಕಲೆ ಎನ್ನುವ ಮತ್ತೊಂದು** ಲೇಖನದಲ್ಲಿ ನವ್ಯಕಲೆಯ ಬಗ್ಗೆ ಸ್ಥೂಲವಾಗಿ ಚರ್ಚಿಸಲಾಗಿದೆ. 'ನವ್ಯಕಲೆ' ಎಂದರೇನು, ಅದರ ಭಾಷೆ ಏನನ್ನು ಸೂಚಿಸುತ್ತದೆ, ಎನ್ನುವ ಹಲವು ಪ್ರಶ್ನೆಗಳಿಗೆ 'ಯಾವುದು ಸುಲಭವಾಗಿ ಅರ್ಥವಾಗುವುದಿಲ್ಲವೋ ಅದೇ ನವ್ಯಕಲೆ ಎಂದು ಲೇಖಕರು ಸ್ಪಷ್ಟಪಡಿಸಿದ್ದಾರೆ. ಅಲ್ಲದೇ ನವ್ಯ ಕಲೆ ಜನಮನವನ್ನು ತಲುಪಲು ವಿಫಲವಾದ ಸಂಗತಿಯನ್ನು ಉದಾಹರಣೆಗಳೊಂದಿಗೆ ವಿವರಿಸಿದ್ದಾರೆ. **ಭಾರತದ ಸಮಕಾಲೀನ ರೇಖಾಚಿತ್ರಗಳು ಎನ್ನುವ ಮತ್ತೊಂದು ಲೇಖನದಲ್ಲಿ** ವ್ಯಕ್ತಿಯೊಬ್ಬನ ಕೈಬರವಣಿಗೆಯಂತೆಯೇ ರೇಖಾಚಿತ್ರವೊಂದು ಕಲಾವಿದನ ಆ ಸಂದರ್ಭದ ಚಿಂತನೆ ಮತ್ತು ಮನಸ್ಥಿತಿಗಳನ್ನು ಪ್ರತಿಬಿಂಬಿಸುತ್ತದೆ. ಕಲಾವಿದನೊಬ್ಬನನ್ನು ಅರ್ಥ ಮಾಡಿಕೊಳ್ಳಲು ಅವನ ರೇಖಾ ಚಿತ್ರಗಳನ್ನು ಅಭ್ಯಸಿಸಬೇಕು ಎಂಬಿತ್ಯಾದಿ ವಿವರಗಳನ್ನು ನೀಡಿದ್ದಾರೆ.

**೩. ಎಕ್ಸ್‌ಪ್ರೇಶನಿಸಂ**

ಚಿ.ಸು.ಕೃಷ್ಣಸೆಟ್ಟಿಯವರಿಂದ ರಚಿತವಾದ ಕೃತಿಗಳಲ್ಲಿ ಎಕ್ಸ್‌ಪ್ರೆಶನಿಸಂ ಎಂಬುದು ಮೂರನೆಯ ಕೃತಿಯಾಗಿದ್ದು, ಇದನ್ನು ಕರ್ನಾಟಕ ಲಲಿತಕಲಾ ಅಕಾಡೆಮಿಯು ಪ್ರಕಟಿಸಿದೆ. ವಿಶ್ವದಲ್ಲಿ ಜನಪ್ರಿಯವಾಗಿರುವ ಕಲಾ ಶೈಲಿಗಳಲ್ಲಿ ಎಕ್ಸ್‌ಪ್ರೆಶನಿಸಂ ಎನ್ನುವುದು ಒಂದು. ಅದು ಕಲಾವಿದನ ಮನಸ್ಸಿನ ಆಳದಿಂದ ಬರುವ ಗಾಢವಾದ ಭಾವಗಳ ಮೇಲೆ ಅವಲಂಬಿತವಾಗಿರುತ್ತದೆ. ಭಾವ ಪ್ರಧಾನವಾದ ಈ ಪಂಥದಲ್ಲಿ ವಸ್ತುವೂ ನಿಮಿತ್ತವಾಗಿದ್ದು, ಭಾವ ತರಂಗಗಳು ಪ್ರಧಾನವಾಗಿರುತ್ತವೆ. ನೋಡುವವರ ಮನಸ್ಸಿನ ಮೇಲೆ ನೇರ ಪರಿಣಾಮ ಉಂಟುಮಾಡುವ ಈ ಶೈಲಿ ಸರಳವಾಗಿದ್ದು, ಅದರಲ್ಲಿನ ವರ್ಣಲೇಪನ ಭಾವತರಂಗಗಳನ್ನು ಎತ್ತಿ ತೋರುತ್ತದೆ.

ಆರಂಭದಲ್ಲಿ ಈ ಪಂಥ ವಿಶೇಷವಾಗಿ ಉತ್ತರ ಯೂರೋಪ್‌ನಲ್ಲಿ ಜನಪ್ರಿಯವಾಗಿತ್ತು. ನಂತರ ಈ ಪಂಥವು ೧೯೦೫ ರಲ್ಲಿ ಜರ್ಮನಿಯಲ್ಲಿ ಸ್ಥಾಪಿತವಾಗಿ ಅದನ್ನು **ದಿ ಬ್ರಿಡ್ಸ್** ಎಂದು ಕರೆದರು. ಮುಂದೆ ಈ ಪಂಥವು ಕ್ರಮೇಣ ಅಮೆರಿಕಾ, ಬ್ರಿಟನ್‌ಗಳಿಗೂ ಹಬ್ಬಿತು. ಕ್ರಿ.ಶ.೧೯೦೫ ತರುವಾಯ ಪಾಶ್ಚಾತ್ಯ ಚಿತ್ರಕಲಾ ಕ್ಷೇತ್ರವೂ ಇಂಪ್ರೇಷನಿಷಂ ಶೈಲಿಗಿಂತ ಭಿನ್ನವಾದ ಆಶಯಗಳನ್ನು ಹೊಂದಿ ಮತ್ತೊಂದು ಕಲಾ ಪಂಥದ ಪ್ರಭಾವಕ್ಕೆ ಒಳಪಟ್ಟಿತು. ಜರ್ಮನಿಯಲ್ಲಿ ರೂಪುಗೊಂಡ ಈ ಕಲಾಶೈಲಿಯು ಕಲೆಯಲ್ಲಿ ಹೊಸದನ್ನು ಸೃಷ್ಟಿಸಬೇಕೆಂಬ ಕಲಾವಿದನ ಸಹಜವಾದ ಸೃಜನಶೀಲ ಮನೋಭಾವದ ಜೊತೆಗೆ ಮಾನವೀಯ ಶಾಸ್ತ್ರಗಳ ಹಿನ್ನೆಲೆಯಲ್ಲಿ ಇದನ್ನು ನೋಡಲಾಯಿತು. ಒಟ್ಟಿನಲ್ಲಿ ಈ ಕಲಾ ಶೈಲಿ ಕಾಲಾಂತರದಲ್ಲಿ ಹೇಗೆ ವಿಸ್ತೃತ ರೂಪಕ್ಕೆ ಒಳಗಾಯಿತು ಮತ್ತು ಈ ಪಂಥಕ್ಕೆ ಅಂಟಿಕೊಂಡ ಕಲಾವಿದರ ವೈಶಿಷ್ಟ್ಯತೆಗಳನ್ನು ಈ ಕೃತಿಯಲ್ಲಿ ಸರಳ ಮತ್ತು ಮನೋಜ್ಞವಾಗಿ ಲೇಖಕರು ವಿಶ್ಲೇಷಿಸಿದ್ದಾರೆ.

**೪. ದೃಶ್ಯಕಲೆ ಎಂದರೇನು?**

ಚಿ.ಸು.ಕೃಷ್ಣಸೆಟ್ಟಿಯವರ ಈ ಕಿರು ಕೃತಿಯನ್ನು ಕರ್ನಾಟಕ ಲಲಿತಕಲಾ ಅಕಾಡೆಮಿಯು ೧೯೯೫ರಲ್ಲಿ ಪ್ರಕಟಿಸಿದೆ. ಈ ಪ್ರಸಕ್ತ ಕೃತಿಯಲ್ಲಿ ಕಲೆ ಎಂದರೇನು? ಕಲಾವಿದನೊಬ್ಬನಲ್ಲಿ ಪ್ರಭಾವಬೀರುವ ಅಂಶಗಳೇನು? ಕಲಾವಿದನಲ್ಲಿರುವ ಆತನ ಸಂವೇದನೆಯು ಹೊರಗಿನ ಈ ಘಟನೆಗಳಿಗೆ ಹಾಗೂ ದೃಶ್ಯಗಳಿಗೆ ಉಳಿದವರಿಗಿಂತ ಭಿನ್ನವಾಗಿ, ಹೆಚ್ಚು ತೀವ್ರವಾಗಿ ಹೇಗೆ ಸ್ಪಂದಿಸುತ್ತದೆ. ಈ ಸ್ಪಂದನ ಹಾಗೂ ತುಡಿತಗಳು ಅವನ ಮಾಧ್ಯಮದ ಮೂಲಕ ಹೇಗೆ ಪ್ರಕಟವಾಗುತ್ತದೆ. ಅವನ ಕಲಾಕೃತಿಗಳಿಂದ ಯಾವ ರೀತಿಯ ಪರಿಣಾಮಗಳು ಉಂಟಾಗುತ್ತವೆ. ವಿವಿಧ ಕಲಾ ಪ್ರಕಾರಗಳು ಯಾವುವು ಮತ್ತು ಅವುಗಳ ಮಹತ್ವ ಏನು ಎಂಬುದನ್ನು ವಿಶ್ಲೇಷಿಸಿರುವ ಚಿ.ಸು.

ಕೃಷ್ಣಸೆಟ್ಟಿಯವರು ಎಲ್ಲಾ ನಿಜವಾದ ಕಲೆಗಳೂ ಮೂಲತಃ ಸೌಂದರ್ಯಾನುಭೂತಿಗೆ ಕಾರಣವಾಗುತ್ತವೆ ಎನ್ನುತ್ತಾರೆ. ಅಲ್ಲದೆ ಲಲಿತಕಲೆಗಳಲ್ಲೇ ಒಂದು ಪ್ರಕಾರವಾದ ಚಿತ್ರಕಲೆಯನ್ನು ಹಾಗೂ ದೃಶ್ಯಕಲೆಯನ್ನು ಸಹಾ ಉಪಯೋಗದ ದೃಷ್ಟಿಯಿಂದಲೇ ಹಿಂದಿನಿಂದಲೂ ಗಮನಿಸಲಾಗಿದೆ ಎಂಬುದನ್ನು ಇದೇ ಕೃತಿಯಲ್ಲಿಯ ಕೊನೆಯಲ್ಲಿ ವಿವರಿಸುತ್ತಾರೆ. ಕಲಾವಿದರಿಗೆ ಉಪಯುಕ್ತವಾದ ಹಲವು ಮಾರ್ಗ ದರ್ಶನಗಳನ್ನು ಇದೇ ಕೃತಿಯ ಕೊನೆಯ ಭಾಗದಲ್ಲಿ ನೀಡಿರುವುದು ಅತ್ಯಂತ ಉಪಯುಕ್ತವೆನಿಸಿದೆ.

**೫. ವರ್ಣಾವರಣ**

ಚಿ.ಸು.ಕೃಷ್ಣಸೆಟ್ಟಿಯವರ ಈ ಪ್ರಸಕ್ತ ಕೃತಿಯನ್ನು ಚಿತ್ತಾರ ಪ್ರಕಾಶನವು ೨೦೦೧ರಲ್ಲಿ ಪ್ರಕಟಿಸಿದೆ. ಇದರಲ್ಲಿ ವಿಚಾರ ಸಂಕಿರಣ, ಅಭಿನಂದನ ಗ್ರಂಥ, ವಾರಪತ್ರಿಕೆ, ಮಾಸಪತ್ರಿಕೆ ಮತ್ತು ದಿನಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟಗೊಂಡ ಆಯ್ದ ೫೩ ಕಲಾ ಲೇಖನಗಳ ಸಂಗ್ರಹ ಇದೆ. ಮುಖ್ಯವಾಗಿ ಸಹಸ್ರಮಾನದ ಹೊಸ್ತಿಲಲ್ಲಿ ಗ್ರಾಫಿಕ್ ಕೃತಿಗಳ ವೈಭವ, ವಿಲಕ್ಷವಾದ ಮನಸ್ಸಿಗೆ ತಂತ್ರದ ನೆರವು, ವಿಭಿನ್ನ ಕಥೆ ಹೇಳುವ ರೂಪಕಗಳ ಜಗತ್ತು, ರೇಖೆಗಳ ಸಾನಿಧ್ಯದಲ್ಲಿ ಆನುಭಾವಿಕ ಹುಡುಕಾಟ, ರಾಜರಲ್ಲಿ ಸಾಮಾನ್ಯ, ಸಾಮಾನ್ಯರದೂ ಅನನ್ಯ, ಸಾಂಪ್ರದಾಯಿಕ ನೆಲೆ ಪಡೆದುಕೊಳ್ಳುತ್ತಿರುವ ಜನಪದಕಲೆಗಳು, ಅರ್ಥದ ಭಾರ ಹೊತ್ತ ಅಪರೂಪದ ಅವತಾರಗಳು, ಅಭಿನಂದನೆಯಲ್ಲಿ ಸಾಕಾರ, ಕಲಾಕೃತಿಗಳಲ್ಲಿ ಮಹಾಪೂರ. ಆಶಯಗಳ ನಡುವೆಯೂ ಕಲಾತ್ಮಕ ಒತ್ತಾಸೆ, ಮಕ್ಕಳೊಳಗಿನ ಸೃಜನಶೀಲತೆ, ವಿಭಿನ್ನ ಪೌರ್ವಾತ್ಯ ರೂಪಗಳು ಕಸಿಗೊಂಡ ಹೊಸ ರೂಪ,ಹೊಸ ಹೆಜ್ಜೆಗೆ ವಿಶ್ವ ಶ್ರೇಷ್ಠರ ಕೃತಿಗಳ ಎರವಲು,ಬದುಕಿನ ಸಂಭ್ರಮಕ್ಕೆ ಸಂಭ್ರಮಾತ್ಮಕ ಪ್ರತಿಕ್ರಿಯೆ,ಮಾನವೀಯತೆಗೆ ಮಿಡಿದ ಕಲಾವಿದರು, ತೆರೆಯ ಮೂಲಕವೇ ತೆರೆದುಕೊಳ್ಳುವ ಮಹಿಳಾ ದನಿ,ಭಿತ್ತಿ ಪತ್ರಗಳ ಮೂಲಕ ಹೃದಯಸ್ಪರ್ಶಿ ಗೌರವಾರ್ಪಣೆ ಹೀಗೆ ಐವತ್ಮೂರು ಲೇಖನಗಳಲ್ಲಿಯೂ ಕಲೆ, ಕಲಾವಿದರ ಕುರಿತು ಚರ್ಚಿಸಿರುವುದು ಉತ್ತಮ ಬೆಳವಣಿಗೆಯಾದರೂ ಕಲಾವಿದರ ಪ್ರದರ್ಶನದಲ್ಲಿ ಆದ ಬದಲಾವಣೆ ಮತ್ತು ಆಗುತ್ತಿರುವ ನಷ್ಟಗಳಲ್ಲಿ ಕಲಾವಿದನು ಯಾವ ಪಡಿಪಾಡಲು ಪಡುತ್ತಿದ್ದಾನೆ ಎಂಬುದನ್ನು ಸೂಕ್ಷ್ಮವಾಗಿ ಹೇಳಿರುವುದು ಕೂಡ ವಿಮರ್ಶೆಗೆ ಗಟ್ಟಿ ನೆಲೆ ಒದಗಿಸುತ್ತದೆ.

**೬. ಲೋಹಫಲಕ ಮಾಂತ್ರಿಕ ಎಲ್.ಪಿ.ಅಂಚನ್**

ಕಲಾವಿದರಾದ **ಎಲ್.ಪಿ.ಅಂಚನ್** ಅವರ ಕುರಿತು ಚಿ.ಸು.ಕೃಷ್ಣಸೆಟ್ಟಿಯವರು ೧೯೯೦ರಲ್ಲಿ ಈ ಕೃತಿಯನ್ನು ರಚಿಸಿದ್ದಾರೆ. ಇದನ್ನು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಪ್ರಕಟಿಸಿದೆ. ಅರವತ್ತ ನಾಲ್ಕು ಕಲೆಗಳಲ್ಲಿ 'ಪತ್ರಭೇದ' ಎಂಬ ಒಂದು ಕಲಾ ಪ್ರಕಾರವುಂಟು. ಪತ್ರ ಅಥವಾ ಎಲೆಗಳನ್ನು ವಿವಿಧ ಆಕಾರಗಳಲ್ಲಿ ನಮೂನೆಗಳಲ್ಲಿ ಕತ್ತರಿಸುವುದು ಎಂದರ್ಥ. ಇದರಲ್ಲಿ ಎಲೆ ಮತ್ತು ಕಾಗದವನ್ನು

ಕತ್ತರಿಸಿ ವಿವಿಧ ನಮೂನೆಯಲ್ಲಿ ಅಂಟಿಸಿ ಇಲ್ಲವೇ ಹೊಂದಿಸಿ ಆಕಾರಗಳನ್ನು ರೂಪಿಸುವ ಪ್ರಕಾರಗಳಿವೆ. ಪೌರ್ವಾತ್ಯ ದೇಶಗಳಲ್ಲಿ ಈ ಕಲೆ ಜನಪ್ರಿಯವಾಗಿದೆ. ಇವೆರಡೂ ಕಲಾ ಪ್ರಕಾರಗಳು ಕರಾವಳಿಯ ಕಲಾವಿದ ಲಿಂಗಪ್ಪ ಪೂವಪ್ಪ ಅಂಚನ್‌ರ ಮೇಲೆ ವಿಶೇಷ ಪರಿಣಾಮ ಬೀರಿತಲ್ಲದೇ ಆ ಬಗೆಯ ಸಾವಿರಾರು ಪ್ರಯೋಗಗಳನ್ನು ಕೈಗೊಳ್ಳುವಂತೆ ಪ್ರೇರೇಪಿಸಿತು ಎಂಬಿತ್ಯಾದಿ ಮುಖ್ಯ ವಿಷಯವನ್ನು ಎತ್ತಿಕೊಂಡ ಕೃಷ್ಣಸೆಟ್ಟಿಯವರು ಕಲಾವಿದ ಪರಿಸರ ಮತ್ತು ಕಲಾ ಬದುಕನ್ನು ವಾಸ್ತವತೆಗೆ ಹತ್ತಿರವಾಗಿ ಕಟ್ಟಿಕೊಟ್ಟಿರುವುದು ಅವರ ಬರವಣಿಗೆಯ ಆಳ, ಅರಿವನ್ನು ಮೂಡಿಸಿದೆ. ಅಷ್ಟರ ಮಟ್ಟಿಗೆ ಕಲಾವಿದನ ಜೀವನ ಯಾತ್ರೆಯನ್ನು ವಿಸ್ತರಿಸಿದ್ದಾರೆ.

**೭. ಎಂ.ಟಿ.ವಿ.ಆಚಾರ್ಯ**

ಮೂಲತಃ ಉಡುಪಿಯ ಚಿತ್ರಕಲಾವಿದರಾದ **ಎಂ.ಟಿ.ವಿ.ಆಚಾರ್ಯ** ಅವರ ಕುರಿತಂತೆ ಚಿ.ಸು.ಕೃಷ್ಣಸೆಟ್ಟಿಯವರು ಈ ಕೃತಿಯನ್ನು ರಚಿಸಿದ್ದಾರೆ. ಇದನ್ನು ಕರ್ನಾಟಕ ಲಲಿತಕಲಾ ಅಕಾಡೆಮಿಯು ಪ್ರಕಟಿಸಿದೆ. ಈ ಕೃತಿಯಲ್ಲಿ ಆಚಾರ್ಯರವರ ಬಾಲ್ಯ, ಜೀವನ ಮತ್ತು ಸಾಧನೆಗಳ ಸಮಗ್ರ ಪರಿಚಯವನ್ನು ನೀಡಿದ್ದಾರೆ. ಜಯಚಾಮರಾಜೇಂದ್ರ ಚಿತ್ರಕಲಾ ಮಹಾವಿದ್ಯಾಲಯ, ಮೈಸೂರಿನಲ್ಲಿ ಚಿತ್ರಕಲೆ ಪದವಿಯನ್ನು ಪಡೆದ ಆಚಾರ್ಯರವರು. ವಿಶೇಷವಾಗಿ ರೇಖಾಚಿತ್ರಗಳಲ್ಲಿ ಪರಿಣಿತರಾಗಿದ್ದರು. ಅವರು ತಮ್ಮ ಜೀವಿತಾವಧಿಯಲ್ಲಿ ಅನೇಕ ಸಂಸ್ಥೆಗಳಲ್ಲಿ ಅಂದರೆ ಪತ್ರಿಕೆಗಳಿಗೆ, ಮುಖಪುಟಕ್ಕೆ ಚಿತ್ರ ಮತ್ತು ಒಳಪುಟಗಳಲ್ಲಿ ಕಥೆಗಳ ಸಾಂದರ್ಭಿಕ ದೃಶ್ಯಗಳಿಗೆ ಪೂರಕವಾಗಿ ಚಿತ್ರಗಳನ್ನು ರಚಿಸಿದ್ದಾರೆ. ಚಂದಮಾಮ ಮಾಸಪತ್ರಿಕೆಗೆ ಸುಮಾರು ೧೫ ವರ್ಷಗಳ ಕಾಲ ಚಿತ್ರ ರಚಿಸಿಕೊಟ್ಟಿರುತ್ತಾರೆ. ಆಗ ತಾನೆ ಹುಟ್ಟಿಕೊಂಡಿದ್ದ ಪ್ರಜಾವಾಣಿಗೆ ಚಿತ್ರಕಾರರಾಗಿ ಅಲ್ಪ ದಿನಗಳ ಕಾಲ ದುಡಿಯುತ್ತಾರಾದರೂ ಅಲ್ಲಿ ನೆಲೆ ಸಿಗದೇಯಿದ್ದ ಕಾರಣಕ್ಕೆ ತಾಯಿನಾಡು ಪತ್ರಿಕೆಗೆ ಸೇರಿಕೊಂಡು ದುಡಿಯುತ್ತಾರೆ. ಅಲ್ಲಿಯೂ ಕೂಡ ದುಡಿಮೆ ಅಷ್ಟಕ್ಕಷ್ಟೆ. ಇದರಿಂದ ಬೇಸತ್ತ ಕಲಾವಿದರು, ಮುಂದೆ ೧೯೬೭ರಲ್ಲಿ ಅಂಚೆ ಕಲಾಶಿಕ್ಷಣ ಎಂಬ ಮಹತ್ವದ ಶಿಕ್ಷಣ ಸಂಸ್ಥೆಯನ್ನು ಹುಟ್ಟು ಹಾಕುತ್ತಾರೆ. ಅದು ಸುಮಾರು ಹದಿನೈದು ವರ್ಷ ನಿರಂತರವಾಗಿ ಅಂಚೆ ಕಲಾಶಿಕ್ಷಣವನ್ನು ನೀಡಿತು. ಅಂಚೆ ಕಲಾಶಿಕ್ಷಣ ಕೊಟ್ಟಂತ ಏಕೈಕ ಕಲಾವಿದರೆಂದರೆ ಬಹುಶಃ ಎಂ.ಟಿ.ವಿ.ಆಚಾರ್ಯರೊಬ್ಬರೇ ಎಂದರೆ ತಪ್ಪಾಗಲಿಕ್ಕಿಲ್ಲ. ಹುಟ್ಟು ಹೋರಾಟಗಾರರಂತೆ ಚಿತ್ರಕಲೆಯಲ್ಲಿ ನಿರಂತರವಾಗಿ ದುಡಿದು ಕರ್ನಾಟಕದಲ್ಲಿ ಗುರುತಿಸಿಕೊಂಡಿರುವ ಮಾಹಿತಿಯನ್ನು ಈ ಪುಸ್ತಕದಲ್ಲಿ ಲೇಖಕರು ವಿವರಿಸಿರುತ್ತಾರೆ. ಅಲ್ಲದೇ ಇವರಿಂದ ರಚಿತಗೊಂಡ ಕಲಾಕೃತಿಗಳ ವೈಶಿಷ್ಟ್ಯತೆ, ವಿವಿಧ ಕಲಾಕೃತಿಗಳು ಮತ್ತು ಅವುಗಳ ಮಹತ್ವ ಕುರಿತಂತೆ ವಿವರವಾಗಿ ವಿಶ್ಲೇಷಿಸಿದ್ದಾರೆ, ಮುಖ್ಯವಾಗಿ ಕಲಾವಿದ ಮತ್ತು ಅವನ ಕಲಾಕೃತಿಗಳು ಸಮಾಜದ ಮೇಲೆ ಯಾವ ರೀತಿಯ ಪರಿಣಾಮವನ್ನು ಉಂಟುಮಾಡುತ್ತವೆ ಮತ್ತು ಯಾವ ಸಂಧರ್ಭದಲ್ಲಿ ಕಲಾವಿದ ಸಂಕಷ್ಟಕ್ಕೆ ಸಿಲುಕಿಕೊಳ್ಳುತ್ತಾನೆ, ಅದರಿಂದ ಅವನ

ಮೇಲೆ ಉಂಟಾದ ಪ್ರೇರೆಪಣೆ ಯಾವ ಬಗೆಯದು, ಇದು ಹೊಸ ಬಗೆಯ ಕಲಾಕೃತಿಗಳ ರಚನೆಗೆ ಯಾವ ಸಹಾಯಮಾಡುತ್ತದೆ ಎನ್ನುವ ಹತ್ತಾರು ವಿಷಯಗಳನ್ನು ಈ ಲೇಖಕರು ಕೃತಿಯಲ್ಲಿ ಚರ್ಚಿಸಿದ್ದಾರೆ.

**ಸಂಪದನಾ ಕಲಾಸಾಹಿತ್ಯ**

೧. ಗ್ರಂಥಗಳು

* ದೃಶ್ಯಕಲೆ ಗುಣ ಗ್ರಹಣ
* ಸಾಂಪ್ರದಾಯಿಕ ಶಿಲ್ಪಕಲೆ
* ಶಿಲ್ಪಕಲೆ
* ಜನಪದ ಕಲೆ
* ಪಾಪ್ ಕಲೆ

**೨. ಕಲಾಪತ್ರಿಕೆಗಳು**

* ಕಲಾವಾರ್ತೆ(ಕರ್ನಾಟಕ ಲಲಿತಕಲಾ ಅಕಾಡೆಮಿ)

ಈ ಮೇಲ್ಕಂಡ ಸಂಪಾದನಾ ಕಲಾಸಾಹಿತ್ಯದಲ್ಲಿ ಈ ಕಂಡುಬರುವ ಪುಸ್ತಕಗಳು ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಕಟಣೆಗೊಂಡಿರುತ್ತವೆ. ೯೦ರ ದಶಕದಲ್ಲಿ ಸಿ.ಚಂದ್ರಶೇಖರ್ ಅವರ ಅಧ್ಯಕ್ಷತೆಯಲ್ಲಿ ಬಂದಂತಹ ಜನಪ್ರಿಯ ಮಾಲೆಗಳಲ್ಲಿ ಈ ಪುಸ್ತಕಗಳು ಪ್ರಕಟವಾಗಿದೆ. ಈ ಎಲ್ಲ ಪುಸ್ತಕಗಳಿಗೆ ಚಿ.ಸು.ಕೃಷ್ಣಸೆಟ್ಟಿಯವರು ಸಂಪಾದಕತ್ವದ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ. ಈ ಪುಸ್ತಕಗಳು ವಿಶೇಷವಾಗಿ ಕಲೆಗೆ ಸಂಬಂಧಪಟ್ಟದ್ದವುಗಳಾಗಿವೆ. ಹಾಗೆಯೇ ಕಲಾಪತ್ರಿಕೆಗಳಿಗೂ ಕೂಡ ಸಂಪಾದನೆ ಮಾಡಿರುತ್ತಾರೆ. ಅದರಲ್ಲಿ ಕಲಾವಾರ್ತೆಯು ಸೇರಿದೆ.

ದೃಶ್ಯಕಲೆಯಲ್ಲಿ ವಿಮರ್ಶೆ ಅಂತ ಬಂದಾಗ ಬೆರಳೆಣಿಕೆಯಷ್ಟು ವಿಮರ್ಶಕರು ನಮ್ಮ ಕರ್ನಾಟಕದಲ್ಲಿ ಕಂಡುಬರುತ್ತಾರೆ. ಅದರಲ್ಲಿ ಮುಂಚೂಣಿಯಲ್ಲಿರುವ ಕಲಾಸಾಹಿತಿ ಚಿ.ಸು. ಕೃಷ್ಣಸೆಟ್ಟಿಯವರು, ಅವರ ಸಾವಿರಕ್ಕೂ ಅಧಿಕ ವಿಮರ್ಶಾ ಲೇಖನಗಳನ್ನು ಸಂಗ್ರಹ ಮಾಡಲಾಗಿದ್ದು, ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**೧. ಸಹಸ್ರಮಾನದ ಹೊಸ್ತಿಲಲ್ಲಿ ಗ್ರಾಫಿಕ್ ಕೃತಿಗಳ ವೈಭವ**[೧]

ಬೆಂಗಳೂರಿನ 'ಸಂಯೋಜಿತಾ' ಸಂಸ್ಥೆ ಏರ್ಪಡಿಸಿದ್ದ ಕಲಾ ಪ್ರದರ್ಶನದಲ್ಲಿನ ಕಲಾಕೃತಿಗಳ ಕುರಿತಂತೆ ಈ ಲೇಖನವನ್ನು ಚಿ.ಸು.ಕೃಷ್ಣಸೆಟ್ಟಿಯವರು ರಚಿಸಿದ್ದಾರೆ. ಕರ್ನಾಟಕವು ಇತರ ಕಲೆಗಳಲ್ಲಿ ಸಾಕಷ್ಟು ಮುಂಚೂಣಿಯಲ್ಲಿದೆಯಾದರೂ ಗ್ರಾಫಿಕ್ ಶೈಲಿಯ ಕೃತಿಗಳ ರಚನೆಯ ವಿಷಯದಲ್ಲಿ

---

೧. ಸಹಸ್ರಮಾನದ ಹೊಸ್ತಿಲಲ್ಲಿ ಗ್ರಾಫಿಕ್ ಕೃತಿಗಳ ವೈಭವ, ಕರ್ನಾಟಕ ದರ್ಶನ, ಪ್ರಜಾವಾಣಿ, ೧, ಜನವರಿ, ೨೦೦೦

ಸಾಕಷ್ಟು ಹಿನ್ನಡೆ ಸಾಧಿಸಿ ಬಹುತೇಕ ಅನಾಥವಾಗಿದೆ. ನಾಡಿನಲ್ಲಿ ಸಾಕಷ್ಟು ಒಳ್ಳೆಯ ಗ್ರಾಫಿಕ್ ಕಲಾವಿದರಿದ್ದರೂ ಸಹಾ ಅವರೆಲ್ಲ ತಮ್ಮ ಮೂಲ ಮಾಧ್ಯಮವನ್ನು ಬಿಟ್ಟು ಪಕ್ಕದ ಸುಲಭ ಮಾಧ್ಯಮಗಳೆಡೆಗೆ ಗಮನ ಹರಿಸಿರುವುದು ಮತ್ತು ಇದರಲ್ಲಿ ಉಂಟಾದ ನೂತನ ಅವಿಷ್ಕಾರಗಳನ್ನು ಆಳವಡಿಸಿಕೊಳ್ಳದೇ ಇರುವುದು ಇದಕ್ಕೆ ಕಾರಣವಾಗಿದೆ ಎಂಬುದನ್ನು ಸ್ಥೂಲವಾಗಿ ಪ್ರಸಕ್ತ ಲೇಖನದಲ್ಲಿ ವಿವರಿಸಿದ್ದಾರೆ.

**೨. ಹೊಸ ಹೊಳಹುಗಳ ಉದಯೋನ್ಮುಖರು**[೨]

ಬೆಂಗಳೂರಿನ 'ಎಸ್‌ಪ್ರೆಸ್ಸೊ ಗ್ಯಾಲರಿ' ಮತ್ತು 'ಶ್ರೇಷ್ಠ ಆರ್ಟ್ ರಿಸೋರ್ಸ್' ಸಂಯುಕ್ತವಾಗಿ 'ದಿ ನ್ಯೂ ಮಿಲೇನಿಯಂ' ಎಂಬ ವಿಶೇಷ ಕಲಾ ಪ್ರದರ್ಶನವನ್ನು ೨೦೦೦ ಮೇ ೨೫ ರಂದು ತಾಜ್ ರೆಸಿಡೆನ್ಸಿಯ ಟ್ರಿನಿಟಿಹಾಲ್‌ನಲ್ಲಿ ಏರ್ಪಡಿಸಿದ್ದವು. ಇಲ್ಲಿ ರಾಜ್ಯ ಮತ್ತು ಹೊರ ರಾಜ್ಯದ ಹಲವು ಯುವ ಕಲಾವಿದರ ಹಲವು ಕಲಾಕೃತಿಗಳನ್ನು ಪ್ರದರ್ಶಿಸಿದ್ದರಿಂದ ಆದ ಪರಿಣಾಮಗಳ ಕುರಿತು ಪ್ರಸಕ್ತ ಲೇಖನದಲ್ಲಿ ಚರ್ಚಿಸಿದ್ದಾರೆ. "ಸಹಸ್ರಮಾನದ ಹೊಸ್ತಿಲಲ್ಲಿ ಕೆಲವು ಅಪರಿಚಿತರು ಇಲ್ಲಿನ ಕ್ಷೇತ್ರಕ್ಕೆ ಪರಿಚಿತರಾಗುವಂತಹ ಅವಕಾಶವನ್ನು ಈ ಪ್ರದರ್ಶನ ನೀಡಿದೆ" ಎಂಬುದಾಗಿ ಶ್ರೀಯುತರು ಅಭಿಪ್ರಾಯಪಟ್ಟಿದ್ದಾರೆ.

**೩. ಛಾಯಾಚಿತ್ರ ಕಲೆಯಲ್ಲಿನ ಸ್ತಬ್ಧತೆ**[೩]

ಡಾ.ಚಂದ್ರಶೇಖರ್‌ಅವರ ಛಾಯಾಚಿತ್ರಗಳ ಪ್ರದರ್ಶನವು ೨೦೦೦ ಡಿಸೆಂಬರ್ ತಿಂಗಳ ೨೯ ರವರೆಗೆ ಬೆಂಗಳೂರಿನ ಭಾರತೀಯ ವಿದ್ಯಾಭವನದಲ್ಲಿ ನಡೆಯಿತು. ಇದರಲ್ಲಿ ನೂರಾರು ಸಂಸ್ಥೆಯ ಛಾಯಾಚಿತ್ರಗಳು ವೈಲ್ಡ್‌ಲೈಫ್, ಭಾವಚಿತ್ರ ಹಾಗೂ ಸಂಯೋಜನಾ ಚಿತ್ರಗಳು ಪ್ರದರ್ಶನಗೊಂಡವು. ಈ ಪ್ರದರ್ಶನ ಕುರಿತಂತೆ ಶ್ರೀಯುತರಿಂದ ರಚಿತವಾಗಿರುವ ಈ ಲೇಖನದಲ್ಲಿ ನಮ್ಮ ಕರ್ನಾಟಕದ ಹೆಚ್ಚಿನ ಛಾಯಾಗ್ರಾಹಕರು ಸೃಜನಶೀಲತೆಗೆ ಹೆಚ್ಚು ಆದ್ಯತೆ ಕೊಡುತ್ತಿಲ್ಲ ಆದರೆ ರವೀಶ್ ಕಾಸರವಳ್ಳಿ, ಮನೋಹರ್ ಆಚಾರ್ಯ, ರಮಾ ತಿರುಮಲಾಚಾರ್ ಅವರಂತಹ ಕೆಲವರು ಅದನ್ನು ಭಿನ್ನವಾಗಿ ಅಭಿವ್ಯಕ್ತಿಯ ಮಾಧ್ಯಮವನ್ನಾಗಿಸುವ ಪ್ರಯತ್ನ ಮಾಡಿದ್ದಾರೆ. ಈ ಹಿನ್ನೆಲೆಯಲ್ಲಿ ಡಾ.ಚಂದ್ರಶೇಖರ್ ಅವರ ಛಾಯಚಿತ್ರಗಳು ಆಕಾಡೆಮಿಕ್‌ಶಿಸ್ತಿಗೆ ಬದ್ಧವಾಗಿವೆ. ಈ ಪ್ರದರ್ಶನದಲ್ಲಿ 'ಬಣ್ಣದ ಬಡತನ', 'ಹೊಳೆ ದಂಡೆಯ ತೀರದಲ್ಲಿ' ಗಮನಾರ್ಹವಾದ ಛಾಯಾಚಿತ್ರಗಳಾಗಿದ್ದು, ಅವು ನೇತ್ರಾನಂದಕರವಾಗಿವೆ ಎಂದು ಲೇಖಕರು ವಿವರಿಸಿದ್ದಾರೆ.

---

೨. ಹೊಸ ಹೊಳಹುಗಳ ಉದಯೋನ್ಮುಖರು,ಕ.ದರ್ಶನ, ಪ್ರಜಾವಾಣಿ, ಮೇ ೨೫ ೨೦೦೦

೩. ಛಾಯಾಚಿತ್ರ ಕಲೆಯಲ್ಲಿನ ಸ್ತಬ್ಧತೆ, ಕ.ದರ್ಶನ, ಪ್ರಜಾವಾಣಿ, ಮೇ ೨೯ ೨೦೦೦

**೪. ವಿಲಕ್ಷಣವಾದ ಮನಸ್ಸಿಗೆ ತಂತ್ರದ ನೆರವು**[೪]

ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ಕಲಾವಿದರಾದ ಕೃಷ್ಣರಾಜ್ ಅವರ ಈಚಿನ ಕೃತಿಗಳ ಪ್ರದರ್ಶನವು ಇದೇ ತಿಂಗಳ ೨ ರಿಂದ ೧೦ ರವರೆಗೆ ನಡೆಯಿತು. 'ಆರ್ಟ್ ಇನ್ ಕ್ರಾಫ್ಟ್' ಪ್ರಸ್ತುತಪಡಿಸಿದ ಈ ಪ್ರದರ್ಶನದಲ್ಲಿ ಮುಖ್ಯವಾಗಿ ಕಾಗದದ ಮೇಲೆ ಮಿಶ್ರಮಾಧ್ಯಮದಲ್ಲಿ ಹಾಗೂ ಕ್ಯಾನ್ವಾಸ್ ಮೇಲೆ ರಚಿಸಿದ ಕಲಾಕೃತಿಗಳ ಪ್ರದರ್ಶನ ನಡೆಯಿತು. ಇಲ್ಲಿ ಪ್ರದರ್ಶಿತವಾದ ಕಲಾಕೃತಿಗಳನ್ನು ಮೂರು ವಿಭಾಗಗಳಲ್ಲಿ ವಿಭಾಗಿಸಬಹುದು.

ಇಲ್ಲಿರುವ ಮೊದಲ ಬಗೆಯ ಕೃತಿಗಳಲ್ಲಿ ಗ್ರಾಫಿಕ್ ಮಾಧ್ಯಮದಲ್ಲಿ ರಚಿಸಿದ ಕಲಾ ಕೃತಿಗಳು ನಮ್ಮ ಗಮನಸೆಳೆಯುತ್ತವೆ. ಇಲ್ಲಿ ಕಲಾವಿದ ಫೆವಿಕಾಲ್ ಇತ್ಯಾದಿಗಳನ್ನು ಬಳಸಿ ವಿಶಿಷ್ಟ ಮೈವಳಿಕೆ ಸೃಷ್ಟಿಸಿ ಅದರ ಮೇಲೆ ಇಂಕ್ ಹಚ್ಚಿ ಅದರಿಂದ ಕಾಗದದ ಮೇಲೆ ಮುದ್ರಿತ ಪ್ರತಿ ತೆಗೆದುಕೊಂಡಿದ್ದಾರೆ. ಹೀಗೆ ಮೋನೋ ಪ್ರಿಂಟ್‌ನಂತೆ ತೆಗೆದುಕೊಂಡ ಈ ಪ್ರತಿಯನ್ನೆ ಮೂಲವಾಗಿ ಬಳಸಿಕೊಂಡು ಅದರ ಮೇಲೆ ಮತ್ತೆ ಕುಂಚದಿಂದ ನಿರ್ವಹಿಸಿದ್ದಾರೆ. ಇಲ್ಲಿನ ಎರಡನೆಯ ವಿಭಾಗದ ಕೃತಿಗಳಲ್ಲಿ ಕ್ಯಾನ್ವಾಸ್, ಬೋರ್ಡುಗಳ ಮೇಲೆ ಅಕ್ರಾಲಿಕ್ ಎಮಲ್ಷನ್ ಬಳಸಿ ಮೈವಳಿಕೆ ರಚಿಸುವಂತೆ ಕೃತಿಗಳನ್ನು ಬೆಳೆಸಿದ್ದಾರೆ. ಇವುಗಳಲ್ಲಿ ಚೈತನ್ಯಶಾಲೀ ನಿರ್ವಹಣೆಯಿದೆ. ಮೂರನೆಯ ಬಗೆಯ ಕೃತಿಗಳು ಕಾಗದದ ಮೇಲೆ ಸಂದರ್ಭ ಚಿತ್ರಗಳಂತೆ ಕಪ್ಪು ವರ್ಣದಲ್ಲಿ ರಚಿಸಿದ ಸರಳ ಕೃತಿಗಳಾಗಿವೆ. ಈ ಕೃತಿಗಳಲ್ಲಿ ಜೈವಿಕ ಆಕೃತಿಗಳನ್ನು ನಿರೂಪಣಾ ಚಿತ್ರಗಳಂತೆ ನಿರ್ವಹಿಸಲಾಗಿದೆ.

ವ್ಯಕ್ತಿಯೊಬ್ಬನ ಅದುಮಿಟ್ಟುಕೊಂಡಂತಹ ಅಂತರಂಗಿಕ ಆಸೆಗಳು ಕನಸಿನಲ್ಲಿ ಹೊರಚಿಮ್ಮುವಂತೆ ಇವುಗಳಲ್ಲಿ ಕೃಷ್ಣರಾಜ್ ಅವರ ಒಳಮನಸ್ಸುಗಳು ಅನಾವರಣಗೊಂಡಿವೆ. ಹೀಗೆ ಇಲ್ಲಿರುವುದು ಕಳವಳದ, ವ್ಯಾಕುಲದ ಜಗತ್ತೇ ಹೊರತು 'ಆನಂದದಾಯಿ' ಯಾದುದಲ್ಲ. ಕಲಾವಿದರು ತಾವು ಬಯಸುವಂತಹ ಪರಿಣಾಮಕ್ಕೆ ಅನುಗುಣವಾಗಿ ಮಾಧ್ಯಮಗಳನ್ನು ಬಳಸಿಕೊಳ್ಳುತ್ತಾರೆ. ಆದರೆ ಒಂದು ಮಾಧ್ಯಮದ ಸಾಧ್ಯತೆಯನ್ನು ಇನ್ನೊಂದಕ್ಕಾಗಿ ದುಡಿಸಿಕೊಳ್ಳುವ ಪ್ರಯತ್ನಗಳು ಕಲಾವಿದರಲ್ಲಿ ಕಂಡುಬರುತ್ತಿವೆ. ಹೀಗೆ ಗ್ರಾಫಿಕ್ ಮಾಧ್ಯಮವೊಂದರಲ್ಲಿನ ಪರಿಣಾಮವನ್ನು ವರ್ಣಚಿತ್ರ ರಚನೆಯಲ್ಲಿ ದುಡಿಸಿಕೊಳ್ಳುವ ಪ್ರಯತ್ನವನ್ನು ಕಲಾವಿದ ಕೃಷ್ಣರಾಜ್ ಚೋನಟ್ ಅವರಲ್ಲಿ ಕಾಣಬಹುದು ಎನ್ನುವುದನ್ನು ಉದಾಹರಣೆಗಳೊಂದಿಗೆ ಲೇಖಕರು ಚರ್ಚಿಸಿದ್ದಾರೆ.

**೫. ಮೆಲುದನಿಯ ನೋಟ**[೫]

ಕಲಾವಿದ ಆನಂದ.ಎಸ್.ಪಂಚಾಲ್ ಅವರ ಕ್ಯಾನ್ವಾಸ್‌ನ ಮೇಲೆ ತೈಲವರ್ಣದಲ್ಲಿ ರಚಿಸಿದ ಕಲಾಕೃತಿಗಳ ಪ್ರದರ್ಶನವು ಬೆಂಗಳೂರಿನ ಸಫೀನಾ ಪ್ಲಾಜಾದಲ್ಲಿರುವ ಕ್ರಿಮ್‌ಸನ್ ಗ್ಯಾಲರಿಯಲ್ಲಿ

---

೪. ವಿಲಕ್ಷಣವಾದ ಮನಸ್ಸಿಗೆ ತಂತ್ರದ ನೆರವು, ಕರ್ನಾಟಕ ದರ್ಶನ,ಪ್ರಜಾವಾಣಿ ೮, ಜನವರಿ, ೨೦೦೦

೫. ಮೆಲುದನಿಯ ನೋಟ, ಅದೇ

ನಡೆಯಿತು. ಈ ಕುರಿತಂತೆ ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದಾರೆ. ಇಲ್ಲಿನ ಕಲಾಕೃತಿಗಳ ಮೇಲೆ ಅಮೃತಾ ಶೇರ್‌ಗಿಲ್ ಅವರ ಪ್ರಭಾವವಿದ್ದರೂ ಸಹಾ ಚಿತ್ರ ಸಂಯೋಜನೆಯಲ್ಲಿ ವಿಭಿನ್ನತೆ ಇದೆ, ವಿಶಾಲವಾದ ಚಿತ್ರ ಕ್ಷೇತ್ರದಲ್ಲಿ ನೆಗೆಟಿವ್ ಸ್ಪೇಸ್‌ಗೆ ಆದ್ಯತೆ ನೀಡಲಾಗಿದೆ. ಇಲ್ಲಿನ ಚಿತ್ರಗಳಲ್ಲಿ ಅಬ್ಬರವಿಲ್ಲದೆ ಇವುಗಳಲ್ಲಿ ಕಲೆ ಮತ್ತು ಕೌಶಲ್ಯಗಳೆರಡರ ಸಮ್ಮಿಲನವಿದೆ. ಇಲ್ಲಿ ತೈಲವರ್ಣವನ್ನು ಜಲವರ್ಣದಂತೆ ತೆಳುವಾಗಿ ನಿರ್ವಹಿಸಲಾಗಿದೆ. ಆಂತರಿಕ ಆಶಯ ಮಾತ್ರ ಒಂದೇ ಆಗಿರುವ ಇಲ್ಲಿನ ಭಿನ್ನ ನೆಲೆಯ ಕೃತಿಗಳಲ್ಲಿ ತೀಕ್ಷ್ಣವಾದ, ಉದ್ದಮೂಗಿನ, ದೇವತೆಯಂತಹ ಆಕೃತಿಗಳಿದ್ದು ಇವು ಉಳಿದವುಗಳಿಗಿಂತಲೂ ಪರಿಣಾಮಕಾರಿಯಾಗಿವೆ. ಒಟ್ಟಾರೆಯಾಗಿ ಇಲ್ಲಿನ ಕಲಾಕೃತಿಗಳು ಕಲಾಸಕ್ತರಿಗೆ ತನ್ನೊಳಗೆ ಅಲಂಕರಣದ ಸೆಳಕುಗಳನ್ನು ಇಟ್ಟುಕೊಂಡಿದ್ದರೂ ಸಾಂತ್ವನ ನೀಡುವಂತಹ ಕೃತಿಗಳಾಗಿವೆ ಎಂದು ಚಿ.ಸು. ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

**೬. ಅಲಂಕರಣದ ಸಾನ್ನಿಧ್ಯದಲ್ಲಿ ವೃಕ್ಷ ಪ್ರೇಮ**[೬]

ತುಮಕೂರಿನ ರವೀಂದ್ರ ಕಲಾನಿಕೇತನದಲ್ಲಿ ಕಲಾಶಿಕ್ಷಣ ಪಡೆದ ರೂಪಾ ರವಿಶಂಕರ್ ಅವರ ಕಲಾಕೃತಿಗಳ ಪ್ರದರ್ಶನ ಬೆಂಗಳೂರಿನ ಇನ್‌ಫೆಂಟ್ರಿ ರಸ್ತೆಯ **ಇಮೇಜೆಸ್** ಗ್ಯಾಲರಿಯಲ್ಲಿ ನಡೆಯಿತು. ಈ ಪ್ರದರ್ಶನದ ಕಲಾಕೃತಿಗಳನ್ನು ಆಧರಿಸಿ ಈ ಲೇಖನವನ್ನು ಕೃ.ಸೇ ಅವರು ರಚಿಸಿದ್ದಾರೆ. ಇದರಲ್ಲಿ ಕಲಾವಿದರು ಮುಖ್ಯವಾಗಿ ವೃಕ್ಷವನ್ನು ಆಧರಿಸಿಯೇ ಚಿತ್ರಗಳನ್ನು ರಚಿಸಿದ್ದಾರೆ. ಇಲ್ಲಿ ವೃಕ್ಷದ ಕಾಂಡದ ಮೂಲಕವೇ ವೃಕ್ಷವನ್ನು ಪ್ರತಿನಿಧಿಸುವ ಮನಸ್ಸುಗಳನ್ನು ಸಾಂಕೇತಿಕವಾಗಿ ಚಿತ್ರಿಸಲಾಗಿದೆ. ಚಿತ್ರ ತಂತ್ರವನ್ನು ಹೊರತುಪಡಿಸಿ ಕಲಾವಿದರ ಚಿತ್ರ ಸಂಯೋಜನಾ ವಿಧಾನ, ನೆರಳು–ಬೆಳಕಿನ ಸಂಯೋಜನೆಯಲ್ಲಿ ಕಲಾವಿದ ಯೂಸುಫ್ ಅರಕ್ಕಲ್ ಅವರನ್ನೇ ಬಹುತೇಕ ಅನುಸರಿಸಿರುವುದನ್ನು ನಾವು ಗುರುತಿಸಬಹುದು. ಇಲ್ಲಿನ ಕಲಾಕೃತಿಗಳ ಮುಖ್ಯ ಆಶಯ ಅಲಂಕರಣವೇ ಆಗಿದ್ದು, ಅಮೂರ್ತದಿಂದ ಬೇರೆಯದೆನಿಸುವಂತಹ ಕೃತಿಗಳಲ್ಲೂ ಅಮೂರ್ತವೇ ಪ್ರಧಾನವಾಗಿದೆ ಎನ್ನುತ್ತಾರೆ ಚಿ.ಸು.ಕೃಷ್ಣಸೆಟ್ಟಿಯವರು.

**೭. ವಿಭಿನ್ನ ಕಥೆ ಹೇಳುವ ರೂಪಕಗಳ ಜಗತ್ತು**[೭]

ಕಲ್ಕತ್ತದ ಗವರ್ನಮೆಂಟ್ ಕಾಲೇಜ್ ಆಫ್ ಆರ್ಟ್ ಮತ್ತು ಲಂಡನ್ನಿನ ಸೆಂಟ್ರಲ್ ಸ್ಕೂಲ್ ಆಫ್ ಆರ್ಟ್ ಅಂಡ್ ಡಿಸೈನ್‌ನಲ್ಲಿ ಕಲಾಭ್ಯಾಸ ನಡೆಸಿದ ಅಮಲ್ ಘೋಷ್ ಅವರ ಕಲಾಕೃತಿಗಳ ಪ್ರದರ್ಶನವು ಬೆಂಗಳೂರಿನಲ್ಲಿ ಮೊಟ್ಟ ಮೊದಲ ಬಾರಿಗೆ **ಸುಮುಖ ಗ್ಯಾಲರಿಯಲ್ಲಿ ಈ** ಪ್ರದರ್ಶನ ನಡೆಯಿತು. ಈ ಪ್ರದರ್ಶನದಲ್ಲಿ ಅನಾವರಣಗೊಂಡ ಕಲಾಕೃತಿಗಳನ್ನು ಆಧರಿಸಿ ಪ್ರಸಕ್ತ ಲೇಖನವನ್ನು ಕೃ.ಸೆ.ಯವರು ರಚಿಸಿದ್ದು, ಅದರ ಮುಖ್ಯ ವಿವರ ಇಂತಿದೆ.

---

೬. ಅಲಂಕರಣದ ಸಾನ್ನಿಧ್ಯದಲ್ಲಿ ವೃಕ್ಷ ಪ್ರೇಮ, ಕ.ದರ್ಶನ, ಪ್ರಜಾವಾಣಿ, ೮ ಜನವರಿ ೨೦೦೦

೭. ವಿಭಿನ್ನ ಕಥೆ ಹೇಳುವ ರೂಪಕಗಳ ಜಗತ್ತು, ಕರ್ನಾಟಕ ದರ್ಶನ, ಪ್ರಜಾವಾಣಿ ೧೫, ಜನವರಿ, ೨೦೦೦

ಅಮಲ್ ಘೋಷ್ ಅವರ ಹೆಚ್ಚಿನ ಕಲಾ ಕೃತಿಗಳಲ್ಲಿ ಆಕೃತಿಗಳನ್ನು ಬಹುತೇಕ ವಾಸ್ತವೇತರ ಹಾಗೂ ವಿಭಿನ್ನ ಭಂಗಿಗಳಲ್ಲಿ ರಚಿಸಿದ್ದಾರೆ. ಇವರ ವಿಭಿನ್ನ ಭಂಗಿಗಳಲ್ಲಿ ರೂಪಿಸಲಾಗಿರುವ ಕ್ರಿಯಾಶೀಲತೆ, ನಿರ್ಮಾಣ ಪ್ರತಿಭೆ ಗಮನಾರ್ಹವಾಗಿದೆ. ಎಕ್ಸ್‌ಪ್ರೆಶನಿಸಂನ ಆರಂಭದ ಕಲಾವಿದರೂ ನಿರ್ವಹಿಸಿದಂತೆ ವರ್ಣಗಳನ್ನು ಸಡಿಲವಾಗಿ ಬಳಸಿದ್ದಾರೆ. ಆದರೆ ಕುಂಚದ ಬೀಸುಗಳು ಕಾಣಿಸುವಂತಹ ವಿಧಾನ ಇವರದ್ದಾಗಿದ್ದು, ಇದು ಎಲ್ಲ ಕೃತಿಗಳಲ್ಲೂ ಸಮನಾಗಿಲ್ಲ. ಹೆಚ್ಚಿನೆಡೆ ತೈಲವರ್ಣವನ್ನು ಪೇಸ್ಟಲ್‌ನಂತೆ ಬಳಸಿದ್ದಾರೆ. ಜೊತೆಗೆ ಕೃತಿಯಿಂದ ಕೃತಿಗೂ ವರ್ಣಮೇಳದಲ್ಲಿ ವೈವಿಧ್ಯವಿದೆ. ಮುನ್ನೆಲೆಗೂ ಹಿನ್ನೆಲೆಗೂ ಅಥವಾ ಪಾಸಿಟಿವ್ ಸ್ಪೇಸ್‌ಗೂ, ನೆಗೆಟಿವ್ ಸ್ಪೇಸ್‌ಗೂ ವ್ಯತ್ಯಾಸವಿಲ್ಲದಂತೆ ಒಂದೇ ಪದರಕ್ಕೆ ತಂದಿದ್ದಾರೆ. ಕೃತಿಗಳಲ್ಲಿ ದಿಗ್ದರ್ಶನದ (ಪರ್ಸ್‌ಪೆಕ್ಟಿವ್) ವಿರೂಪವೂ ಇದೆ. ಹೀಗೆ ಈ ಎಲ್ಲವೂ ಬಹುತೇಕ ಎಕ್ಸ್‌ಪ್ರೆಶನಿಸ್ಟ್ ಕಲಾವಿದರ ಕೃತಿಗಳನ್ನು ಹೋಲುತ್ತವೆ. ಅದರಲ್ಲೂ ಕೆಲವೆಡೆ ಎರ್ನ್ಸ್ಟ್‌ರೇಶ್‌ನರ್ ಕೃತಿಗಳನ್ನು ನೆನಪಿಸುತ್ತವೆ. ಫ್ರಿಕ್ಷನ್‌ನಂತಹ ಕೃತಿಗಳಲ್ಲಿ ಮೋಡಿಲಿಯಾನಿ ಕೃತಿಯ ಛಾಯೆಯಿದೆ ಎನ್ನುವುದನ್ನು ಲೇಖಕರು ದಾಖಲಿಸಿದ್ದಾರೆ. ಘೋಷ್ ಅವರ ಈ ಬಗೆಯ ಕೃತಿಗಳು ಪಾಶ್ಚಾತ್ಯ ಕಲೆಯ ಸಂದರ್ಭದಲ್ಲಿ ಹೇರಳವಾಗಿ ಬಂದಿರುವುದರಿಂದ ಅಂತಹ ಮಹತ್ವದ ಪರಿಣಾಮವನ್ನೇನೂ ಉಂಟು ಮಾಡುವುದಿಲ್ಲ ಎಂಬ ಅಭಿಪ್ರಾಯವನ್ನು ಲೇಖಕರು ಮುಕ್ತವಾಗಿ ವ್ಯಕ್ತಪಡಿಸುತ್ತಾರೆ.

**೮. ಮೂರ್ತದಲ್ಲಿಯೇ ಅಮೂರ್ತ ಕೊಂಡಿ**[೮]

ಉಡುಪಿಯ ಚಿತ್ರಕಲಾ ಮಂದಿರದಲ್ಲಿ ಕಲಾಭ್ಯಾಸ ಮಾಡಿದವರು. ಮಣಿಪಾಲದ ಪವನ ಕುಮಾರಿ ಭಟ್ ಅವರು 'ಲಿಂಕ್ಸ್' ಶೀರ್ಷಿಕೆಯ ಅವರ ಕೃತಿಗಳ ಪ್ರದರ್ಶನವು ೨೦೦೦ ಮೇ ತಿಂಗಳ ೭ ರಿಂದ ೧೧ ರವರೆಗೆ ಬೆಂಗಳೂರಿನ ಕನ್ನಡ ಭವನದಲ್ಲಿರುವ ಚಿತ್ರ ಗ್ಯಾಲರಿಯಲ್ಲಿ ನಡೆಯಿತು. ಈ ಪ್ರದರ್ಶನದ ಕುರಿತು ಕೃ.ಸೆ.ಅವರಿಂದ ರಚಿತವಾಗಿರುವ ಈ ಲೇಖನದಲ್ಲಿ ಈ ಮುಂದಿನ ಸಂಗತಿಗಳು ಚರ್ಚಿಸಲ್ಪಟ್ಟಿವೆ.

ಕಲಾವಿದೆ ಪವನ ಕುಮಾರಿಯವರ ಬಹುತೇಕ ಕಲಾಕೃತಿಗಳ ವೈಶಿಷ್ಟ್ಯತೆಯನ್ನು ಲೇಖಕರು ಪ್ರಸ್ತಾಪಿಸುತ್ತಾ ಆ ಕಲಾಕೃತಿಗಳು ನೋಡುಗರಿಗೆ ಮೂರ್ತ ಮತ್ತು ಅಮೂರ್ತವಾಗಿ ಗೋಚರಿಸುತ್ತವೆ ಮತ್ತು ಇವರ ರಚನೆಗಳು ನೋಡಲು ಸರಳವೆನಿಸಿದರೂ ಅವುಗಳಲ್ಲಿ ಬಳಕೆ ಮಾಡಿದ ಸಂಕೇತಗಳು ಭಿನ್ನವಾಗಿವೆ ಎನ್ನುತ್ತಾರೆ. ಅಂದರೆ ಹಗ್ಗದಂತೆ ಬಳುಕುವ ಆಕೃತಿಗಳ ರಚನೆ ಇವರ ವೈಶಿಷ್ಟ್ಯತೆಯಾಗಿದೆ. ಅದಕ್ಕಾಗಿ ಅವರು ಅಗ್ಗ, ರಿಬ್ಬನ್, ರಬ್ಬರ್ ಟ್ಯೂಬು ಇತ್ಯಾದಿ ವಿಶಿಷ್ಟ ಲಯದಲ್ಲಿ ಬಳಕುವ ಆಕೃತಿಗಳನ್ನು ನೇರ, ಸಮತಟ್ಟಾದ ಗಟ್ಟಿಯಾದ ಆಕೃತಿಗಳೊಂದಿಗೆ ತಳಕು ಹಾಕುತ್ತಾರೆ. ಇವು

೮. ಮೂರ್ತದಲ್ಲಿಯೇ ಅಮೂರ್ತ ಕೊಂಡಿ, ಕ.ದರ್ಶನ, ಪ್ರಜಾವಾಣಿ, ೧೫ ಜನವರಿ ೨೦೦೦

ಹೆಣ್ಣು-ಗಂಡಿನ ಸಂಬಂಧಗಳನ್ನು ಬೆಸೆಯುವ ಮತ್ತು ಬದುಕಿನ ವೈದೃಶ್ಯಗಳು ಹಾಸು ಹೊಕ್ಕಾಗಿರುವುದನ್ನು ಸೂಚಿಸುತ್ತವೆ. ಈ ಕಲಾವಿದೆ ಬಹುತೇಕ ನಿರ್ಜೀವ, ಸರಳ ವಸ್ತುಗಳನ್ನೇ ಬಳಸಿಕೊಳ್ಳುತ್ತಾರೆ. ಕೃತಿಗಳಲ್ಲಿ ಏಕತಾನತೆಯನ್ನು ಮುರಿಯಲು ಹಾಗೂ ಅರ್ಥ ಸಾಧ್ಯತೆಗಳನ್ನು ವಿಸ್ತರಿಸಲು ವಿಭಿನ್ನ ವಸ್ತುಗಳನ್ನು ತಂದಿದ್ದಾರೆ. 'ಇನ್ ಟು ದಿ ನ್ಯೂ ಮಿಲೇನಿಯಂ' ನಂತಹ ಕೆಲವೆಡೆ ಅನಾವಶ್ಯಕವಾಗಿ ಅರ್ಥಗಳನ್ನು ಹೊರಡಿಸುವ ಪ್ರಯತ್ನ ಮಾಡಿದ್ದಾರೆ. ಇವರ ಕೃತಿಗಳಲ್ಲಿ ಕಲೆಯ ಸೂಕ್ಷ್ಮಗಳು ಬಹುತೇಕ ಕಡೆ ಕಂಡುಬರುತ್ತಿದ್ದೂ, ಅವು ಗಮನಾರ್ಹವೆನಿಸುತ್ತವೆ.

**೯. ರೇಖೆಗಳ ಸಾನ್ನಿಧ್ಯದಲ್ಲಿ ಆನುಭಾವಿಕ ಹುಡುಕಾಟ**[೯]

ಮೂಲತಃ ಕೇರಳದ ಕಣ್ಣಾನೂರಿನ ವಿ.ಪಿ.ರತ್ನಕಿಶೋರ್ ಅವರು ಮದ್ರಾಸಿನ ಗವರ್ನಮೆಂಟ್ ಕಾಲೇಜ್ ಆಫ್ ಆರ್ಟ್‌ನಲ್ಲಿ ಕಲಾ ಶಿಕ್ಷಣ ಪಡೆದವರು. ಈ ತಿಂಗಳ ೧೫ ರಿಂದ ೨೨ ರವರೆಗೆ ಬೆಂಗಳೂರಿನ ಸೈಂಟ್ ಮಾರ್ಕ್ಸ್ ರಸ್ತೆಯ ಹೌಸ್ ಆಫ್ ಲಾರ್ಡ್ಸ್ ಕಟ್ಟಡದಲ್ಲಿರುವ 'ಟೈಮ್ ಅಂಡ್ ಸ್ಪೇಸ್' ಗ್ಯಾಲರಿಯಲ್ಲಿ ಅವರ ಕಲಾಕೃತಿಗಳ ಪ್ರದರ್ಶನ ನಡೆಯಿತು. ಈ ಕುರಿತಂತೆ ಕೃ.ಸೆ.ಅವರಿಂದ ರಚಿತವಾಗಿರುವ ಪ್ರಸಕ್ತ ಲೇಖನದಲ್ಲಿ ಈ ಮುಂದಿನ ಸಂಗತಿಗಳು ಚರ್ಚಿಸಲ್ಪಟ್ಟಿವೆ. ಸಾಮಾನ್ಯವಾಗಿ ಪ್ರತಿಯೊಬ್ಬ ಕಲಾವಿದನಲ್ಲಿಯೂ ಅವನಿಗೆ ಅವನದೇ ಆದ ವೈಯಕ್ತಿಕ ಧೋರಣೆಗಳಿದ್ದರೂ, ಅವನು ಇತರರ ಕೃತಿಗಳಿಂದ ಪ್ರಭಾವಿತನಾಗುತ್ತಾನೆ ಇದಕ್ಕೆ ಕಲಾವಿದ ವಿ.ಪಿ.ರತ್ನಕಿಶೋರ್ ಸಹಾ ಹೊರತಾಗಿಲ್ಲ.

ವಿಷ್ಣುಧರ್ಮೋತ್ತರ ಪುರಾಣದಲ್ಲಿ 'ರೇಖಂ ಪ್ರಶಂಸತಾಚಾರ್ಯಃ' ಅಂದರೆ 'ರೇಖೆಗಳೇ ನಿಪುಣ ಕಲಾವಿದನೊಬ್ಬನ ಅತ್ಯುನ್ನತ ಸಾಧನೆ' ಎನ್ನುವಂತೆ ಅಮೂರ್ತತೆಗೆ ಹೆಚ್ಚು ಒತ್ತು ನೀಡುತ್ತಿರುವ ರತ್ನಕಿಶೋರ್ ಅವರು ರೇಖೆಗಳನ್ನೇ ಪ್ರಧಾನವಾಗಿಸಿ ಹಲವು ಕಲಾಕೃತಿಗಳನ್ನು ರಚಿಸಿದ್ದಾರೆ. ಈ ರೇಖೆಗಳ ಅಭಿವ್ಯಕ್ತಿ ಸಾಮರ್ಥ್ಯ ಅಪರಿಮಿತವಾದದು. ರೇಖೆಗಳ ದಪ್ಪ, ಭಾರ, ಹರಿತ, ವೇಗ ಇವುಗಳಲ್ಲಿ ವ್ಯತ್ಯಾಸ ಮಾಡುವ ಮೂಲಕ ಇವುಗಳಲ್ಲಿ ವಿವಿಧ ಭಾವನೆಗಳನ್ನು ಹೊರಡಿಸಬಹುದಾಗಿದೆ. ಅಂತೆಯೇ ಈ ಕಲಾವಿದ ವಿವಿಧ ಬಗೆಯ ರೇಖೆಗಳ ಮೂಲಕ ಅದರ ಸಾಧ್ಯತೆಗಳನ್ನು ಅನಾವರಣಗೊಳಿಸುವ ಪ್ರಯತ್ನ ಮಾಡಿದ್ದಾರೆ. ಹಾಗಾಗಿ ಒಂದು ನಿರ್ದಿಷ್ಟ ಧೋರಣೆಯನ್ನು ಇವು ಪ್ರಕಟಿಸದೇ ಕಲಾವಿದನೊಳಗಿರುವ ಗೊಂದಲಗಳನ್ನು ಹೊರ ಹಾಕುತ್ತವೆ ಎನ್ನುತ್ತಾರೆ ಲೇಖಕರು.

---

೯. ರೇಖೆಗಳ ಸಾನ್ನಿಧ್ಯದಲ್ಲಿ ಆನುಭಾವಿಕ ಹುಡುಕಾಟ, ಕರ್ನಾಟಕ ದರ್ಶನ, ಪ್ರಜಾವಾಣಿ ೨೨, ಜನವರಿ, ೨೦೦೦

## ೧೦. ಪಣಿಕ್ಕರ್ ಗರಡಿಯಲ್ಲಿ[೧೦]

ಹೆಸರಾಂತ ಕಲಾವಿದ ದಿವಂಗತ ಕೆ.ಸಿ.ಎಸ್.ಪಣಿಕ್ಕರ್ ಅವರ ಗರಡಿಯಲ್ಲಿ ಪಳಗಿದ ರತ್ನ ಕಿಶೋರ್ ಮತ್ತು ಯೂಸುಫ್ ಅರಕ್ಕಲ್ ಅವರ ಕಲಾಕೃತಿಗಳ ಪ್ರದರ್ಶನ ಕುರಿತಂತೆ ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದಾರೆ. ರತ್ನ ಕಿಶೋರ್ ಕಲಾಕೃತಿಗಳಲ್ಲಿ ವೈವಿಧ್ಯತೆ ಇದೆಯಾದರೂ ಮುಖ್ಯವಾಗಿ ಮೂರು ಮಾಧ್ಯಮಗಳ ಕೃತಿಗಳನ್ನು ಪರಿಶೀಲಿಸಬಹುದು. ವರ್ಣ ಚಿತ್ರಗಳು ಒಂದು ಬಗೆಯವಾದರೆ, ಕಪ್ಪು ಬಿಳುಪಿನ ಚಿತ್ರಗಳು ಎರಡನೆಯ ಬಗೆಯವು. ಡಾಟ್‌ಪೆನ್ ಕೃತಿಗಳು ಮೂರನೆಯ ಪ್ರಕಾರದವು. ಈ ಡಾಟ್‌ಪೆನ್ ಪ್ರಕಾರದ ಕೃತಿಗಳು ಬಹುತೇಕ ಪಾಶ್ಚಾತ್ಯ ಕಲಾವಿದ ಐಷರ್‌ನ ಕೃತಿಗಳಂತೆ ಅನಂತತೆಯ ದರ್ಶನ ಮಾಡಿಸುತ್ತವೆ ಎಂದು ಕೃ.ಸೆ.ಯವರು ಅಭಿಪ್ರಾಯಪಡುತ್ತಾರೆ. ಈ ಕಲಾಕೃತಿಗಳ ಕುತೂಹಲದ ಅಂಶವೆಂದರೆ ಈ ಬಗೆಯ ಕೃತಿಗಳಲ್ಲಿ ಶಿಲ್ಪದ ಘನತ್ವವನ್ನು, ಗಡಸುತನವನ್ನು ತರುವ ಪ್ರಯತ್ನ ಮಾಡಿದ್ದಾರೆ. ಈ ಡಾಟ್‌ಪೆನ್ ಕೃತಿಗಳಲ್ಲಿ ಬಹುತೇಕ ಏಕವರ್ಣದ ಕೃತಿಗಳೇ ಇದ್ದು, ಒಂದೆರಡು ಬಹುವರ್ಣದ ಕೃತಿಗಳೂ ಇವೆ. ಸರಳ ಕೃತಿಗಳಾದರೂ ಇವು ವಿಶಿಷ್ಟ ಪರಿಣಾಮವನ್ನು ಬೀರುವಲ್ಲಿ ಯಶಸ್ವಿಯಾಗಿವೆ. ಇವರ ಮೇಲಿನ ಇನ್ನೊಂದು ಪ್ರಭಾವವೆಂದರೆ ತಾಂತ್ರಿಕ್ ಕೃತಿಗಳದ್ದು. ಕೆಲವೆಡೆ ಬಿರೇನ್ ಡೇ ಅವರಂಥ ಕಲಾವಿದರ ಹತ್ತಿರಕ್ಕೆ ಇವರು ಹೋಗುತ್ತಾರೆ. ಇವರ 'ಸೈಕ್ಲಿಕ್ ಟ್ರಯಾಂಗಲ್ಸ್' ನಲ್ಲಿ ತ್ರಿಕೋಣಗಳ ಸಂಯೋಜನೆಯಿದ್ದು, ತಾಂತ್ರಿಕ್ ಆಶಯಗಳಿಗೆ ಇದು ಸಾಮೀಪ್ಯವುಳ್ಳಂತಹ ಕೃತಿ. ಒಟ್ಟಾರೆಯಾಗಿ ಅಪಾರ ವೈವಿಧ್ಯದ ಮೂಲಕ ರೇಖೆಗಳ ಹಿಂದೆ ಬಿದ್ದಿರುವ ಈ ಕಲಾವಿದ ಕೆಲವೊಮ್ಮೆ ಮಿಂಚಿದರೆ ಮತ್ತೆ ಕೆಲವೊಮ್ಮೆ ಸಾಮಾನ್ಯ ಮಟ್ಟಕ್ಕೆ ಇಳಿದು ಬಿಡುತ್ತಾರೆ. ಹೀಗೆ ಮಿಶ್ರ ಅನುಭವ ನೀಡುವಂತಹ ಪ್ರದರ್ಶನವಿದು.

ಅದೇ ರೀತಿ ಕಲಾವಿದ ಯೂಸುಫ್ ಅರಕ್ಕಲ್ ಅವರು ಸಮಯಕ್ಕೆ ಅನ್ವರ್ಥವೆನಿಸುವಂತೆ ಹಲವಾರು ಚಿತ್ರಗಳನ್ನು ರಚಿಸಿದ್ದು, ಅವುಗಳಲ್ಲಿ ಆಧುನಿಕ ಕ್ರಿಸ್ತನ ಬೃಹತ್ ಚಿತ್ರ ನಮ್ಮ ಗಮನಸೆಳೆಯುತ್ತದೆ. ಎಂಟು ಅಡಿ ಎತ್ತರ ಹಾಗೂ ಎಂಟು ಅಡಿ ಅಗಲಗಳ ಈ ಬೃಹತ್ ಚಿತ್ರದಲ್ಲಿ ಧಾರ್ಮಿಕ ಏಸುಕ್ರಿಸ್ತನಿಗಿಂತಲೂ ವರ್ತಮಾನದ ಕ್ರಿಸ್ತನನ್ನು ಹೆಸರಾಂತ ಕಲಾವಿದ ಸಾಲ್ವಡಾರ್ ಡಾಲಿಯ ಕೃತಿಯ ಮಾದರಿಯಲ್ಲಿಯೇ ಚಿತ್ರಿಸಿದ್ದಾರೆ. ಅಮೂರ್ತ ಹಿನ್ನೆಲೆಯಲ್ಲಿ ರಚಿತಗೊಂಡ ಈ ಏಸುಕ್ರಿಸ್ತ ನೀಳಕಾಯದ ಕೃಶಗೊಂಡವನಲ್ಲ. ಬದಲಿಗೆ ದೃಢಕಾಯ, ಸ್ನಾಯುಗಳಿಂದ ಬಲಿಷ್ಠವಾದ, ಶಿಲ್ಪಿಯ ಗುಣಗಳನ್ನು ತುಂಬಿಕೊಂಡವನು. ಶಿಲುಬೆಗೇರಿಸಿದಂತೆ ಕಂಡರೂ ಇಲ್ಲಿ ಶಿಲುಬೆಯಾಗಲೀ, ಮೊಳೆಗಳಾಗಲೀ ಇಲ್ಲ. ಮೊಳೆಗಳು ಹೊರ ಅಂಚಿನಲ್ಲಿ

೧೦. ಪಣಿಕ್ಕರ್ ಗರಡಿಯಲ್ಲಿ, ಕ.ದರ್ಶನ, ಪ್ರಜಾವಾಣಿ, ೨೨ ಜನವರಿ ೨೦೦೦

ಬಿದ್ದಿವೆ. ಇವನ ಮುಖದಲ್ಲಿ ಯಾತನೆಯೂ ಇಲ್ಲ. ಈ ಕೃತಿಯ ದೊಡ್ಡ ಅಳತೆಯೂ ಪರಿಣಾಮಕಾರಿಯಾಗಿದೆ. ಸಿದ್ಧಗೊಂಡ ಈ ಕಲಾವಿದ ಚೋಳ ಮಂಡಲದ ಹಲವು ಕಲಾವಿದರಂತೆ ಮೆಟಾಫಿಸಿಕಲ್ ಆಯಾಮದೆಡೆಗೂ ತಮ್ಮ ಬಾಹುಗಳನ್ನು ಚಾಚಿದ್ದಾರೆ. ಅಂತೆಯೇ ಇವರ ಕೆಲವು ಕೃತಿಗಳಲ್ಲಿ ಆನುಭಾವಿಕ ನೆಲೆಯಲ್ಲಿನ ಹುಡುಕಾಟವಿದೆ ಎನ್ನುವ ಅಭಿಪ್ರಾಯ ಲೇಖಕರದು.

**೧೧. ಉದಯೋನ್ಮುಖರದ್ದೇ ಆಧಿಪತ್ಯ, ಪರಿಚಿತರದ್ದು ಬರಿಯ ಪಾರುಪತ್ಯ**[೧೧]

'ಕ್ಯಾಮ್ಲಿನ್ ಆರ್ಟ್ ಫೌಂಡೇಷನ್' ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ಏರ್ಪಡಿಸಿದ್ದ ರಾಷ್ಟ್ರೀಯ ಮಟ್ಟದ ಕಲಾಪ್ರದರ್ಶನದಲ್ಲಿ ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ ಮತ್ತು ಕೇರಳದ ಅನೇಕ ಉದಯೋನ್ಮುಖ ಗ್ರಾಮೀಣ ಪ್ರತಿಭೆಗಳು ಭಾಗವಹಿಸಿ ತಮ್ಮ ಸೃಜನಶೀಲತೆಯನ್ನು ವ್ಯಕ್ತಪಡಿಸಿದ ಸಂಗತಿಯನ್ನು ಕೃ.ಸೆ.ಯವರು ಈ ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ. ಪ್ರದರ್ಶಿತ ಕೃತಿಗಳಲ್ಲಿ ವಿದ್ಯಾರ್ಥಿಗಳ ಪಾಲೇ ಹೆಚ್ಚು. ಅದರಲ್ಲೂ ಕರ್ನಾಟಕದ ಹಿಂದುಳಿದಂತಹ ಪ್ರದೇಶಗಳಿಂದ ಬಂದ ವಿದ್ಯಾರ್ಥಿಗಳ ಸಾಧನೆ ನಿಜಕ್ಕೂ ಬೆರಗು ಹುಟ್ಟಿಸುವಂತಿವೆ.

ವೃತ್ತಿನಿರತರು ಹಾಗೂ ವಿದ್ಯಾರ್ಥಿಗಳು ಎಂಬ ಪ್ರತ್ಯೇಕ ವಿಭಾಗಗಳು ಇಲ್ಲಿದ್ದರೂ ಈ ವಿದ್ಯಾರ್ಥಿಗಳ ಕೃತಿಗಳು ಕೆಲವೆಡೆ ವೃತ್ತಿನಿರತರನ್ನೂ ಮೀರಿಸುವಂತಿರುವುದು ವಿಶೇಷ. ಇಲ್ಲಿನ ಈ ಪ್ರದರ್ಶನದಲ್ಲಿ ಸಾಜಿದ್ ಬಿನ್ ಅಮರ್, ದಿಲೀಪ್ ಕುಮಾರ್ ಕಾಳೆ, ನಿಂಗಪ್ಪ ಎಂ., ಎಂ.ಸಿ.ಚೆಟ್ಟಿ, ರಾಜೇಶ್ವರರಾವ್, ಮೈಥಾ ಅತುಲ್ ಸರೈಯಾ, ಬಾಬು ಈಶ್ವರ ಪ್ರಸಾದ್, ಪದ್ಮಾ ರೆಡ್ಡಿ ಈ ಮುಂತಾದ ಕೆಲವರ ಕೃತಿಗಳು ನಿಜಕ್ಕೂ ಉತ್ತಮ ನೆಲೆಯಲ್ಲಿವೆ. ಈ ಮಹತ್ವದ ಹಾಗೂ ಮಹತ್ವಾಕಾಂಕ್ಷೆಯ ಪ್ರದರ್ಶನದಲ್ಲಿ ಬಹುತೇಕ ಅಪರಿಚಿತರು ಮುನ್ನೆಲೆಗೆ ಬಂದಿರುವುದು ಆಶಾದಾಯಕ ಸಂಗತಿ. ಅತ್ಯಂತ ಪರಿಣಾಮವನ್ನು ಬೀರುವಂತಹ ಕೃತಿಗಳು ಇಲ್ಲಿರದಿದ್ದರೂ ಬಹುತೇಕ ಕೃತಿಗಳು ಸಾಮಾನ್ಯತೆಯಿಂದ ಮೇಲಿನ ಸ್ತರದಲ್ಲಿವೆ. ಆದರೆ ಕ್ಯಾಮ್ಲಿನ್ ಸಂಸ್ಥೆ ಏರ್ಪಡಿಸಿದ ಸ್ಪರ್ಧೆ ಇದಾದ್ದರಿಂದ ಇದರ ಬಗ್ಗೆ ಭಾರೀ ನಿರೀಕ್ಷೆಗಳು ಸಹಜವೇ. ಆದರೆ ಆ ನಿರೀಕ್ಷೆಗಳನ್ನು ಈ ಪ್ರದರ್ಶನವು ಅಷ್ಟಾಗಿ ಪೂರೈಸುವುದಿಲ್ಲ. ಆದರೆ ಇದು ಈ ಸಂಸ್ಥೆಯ ಚೊಚ್ಚಲ ಪ್ರದರ್ಶನ. ಮುಂದಿನ ಸಂದರ್ಭಗಳಲ್ಲಿ ಈ ಎಲ್ಲ ಕೊರತೆಗಳನ್ನು ಮೀರಿದ ಉತ್ತಮ ಪ್ರದರ್ಶನಗಳನ್ನು ನಿರೀಕ್ಷಿಸಬಹುದಾಗಿದೆ. ಒಟ್ಟಾರೆಯಾಗಿ ವಾಣಿಜ್ಯ ಸಂಸ್ಥೆಯೊಂದು ನಡೆಸಿದ ಕಲೋತ್ತೇಜಕ ಕಾರ್ಯಕ್ರಮ ಇದಾಗಿತ್ತೆಂಬುದನ್ನು ನಾವು ಮೆಚ್ಚಲೇಬೇಕು ಎಂದು ಲೇಖಕರು ಪ್ರಸಕ್ತ ಲೇಖನದಲ್ಲಿ ದಾಖಲಿಸಿದ್ದಾರೆ.

---

೧೧. ಉದಯೋನ್ಮುಖರದ್ದೇ ಆಧಿಪತ್ಯ, ಪರಿಚಿತರದ್ದು ಬರಿಯ ಪಾರುಪತ್ಯ, ಕರ್ನಾಟಕ ದರ್ಶನ, ಪ್ರಜಾವಾಣಿ ೨೯, ಜನವರಿ, ೨೦೦೦

### ೧೨. ಆನಂದ ಹುಟ್ಟಿಸುವ ಗೀಳು[೧೨]

ಬೆಂಗಳೂರಿನ ಸಂಧ್ಯಾಶೆಟ್ಟಿಯವರು ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಾಲೇಜಿನಲ್ಲಿ ಆನ್ವಯಿಕ ಕಲೆಯಲ್ಲಿ ಪದವಿ ಪಡೆದವರು. ಬೆಂಗಳೂರಿನಲ್ಲಿ ಪ್ರದರ್ಶಿತಗೊಂಡ ಈ ಕಲಾವಿದೆಯ ವಿವಿಧ ಶೈಲಿಗಳ, ವಿವಿಧ ವಸ್ತು ವಿಷಯಗಳ ಚಿತ್ರಗಳ ಕುರಿತು ಕೃ.ಸೆ. ಯವರು ಈ ಲೇಖನದ ಮೂಲಕ ಈ ರೀತಿ ಅಭಿಪ್ರಾಯಪಡುತ್ತಾರೆ. "ಹೊಸ ಉತ್ಸಾಹದ ಈ ಕಲಾವಿದೆಯಲ್ಲಿ ಒಳ್ಳೆಯ ಹಸ್ತ ನೈಪುಣ್ಯವಿದೆ. ಮನಸ್ಸಿನಲ್ಲಿ ಕಲ್ಪಿಸಿಕೊಂಡದ್ದನ್ನು ಕಾಗದಕ್ಕೆ ಇಳಿಸುವ ತಾಳ್ಮೆಯೂ ಇದೆ. ಆದರೆ ಇವರು ಹಿಡಿದ ದಾರಿ ಮಾತ್ರ ಕಲೆಯ ಮಾರ್ಗದಲ್ಲಿ ಇವರನ್ನು ತುಂಬ ದೂರ ನಡೆಸಲಾಗದು. ಏಕೆಂದರೆ ಸ್ವಂತ ಅನಿಸಿಕೆಗಳನ್ನು ಅಭಿವ್ಯಕ್ತಿಸುವುದಕ್ಕಿಂತಲೂ ಇತರರ ಮನೆಗಳ ಗೋಡೆಗಳನ್ನು ಅಲಂಕರಿಸುವ ಮನಸ್ಸು ಇವರದು. ಹೀಗಾದಾಗ ಸ್ವಂತಿಕೆಗೆ ಅಷ್ಟಾಗಿ ಅವಕಾಶ ದೊರೆಯುವುದಿಲ್ಲ. ಕ್ಯಾಲೆಂಡರು, ಗ್ರೀಟಿಂಗ್ ಕಾರ್ಡುಗಳಲ್ಲಿ ಕಂಡುಬರುವಂತಹ ಹಗುರ ಸ್ವಭಾವದ ಜನಪ್ರಿಯ ವಸ್ತು ವಿಷಯಗಳನ್ನು ಅದೇ ನೆಲೆಯಲ್ಲಿ ಚಿತ್ರಗಳನ್ನಾಗಿಸಿದ್ದಾರೆ. ಅಲ್ಲದೆ ಇಲ್ಲಿರುವುದು ಮನಸ್ಸಿಗೆ ವಿಶಿಷ್ಟ ರೀತಿಯಲ್ಲಿ ಆಹ್ಲಾದಗೊಳಿಸುವ ನಯನ ಮನೋಹರ ಪ್ರಪಂಚ. ನೋಡುಗರನ್ನು ತಕ್ಷಣಕ್ಕೆ ಹಿಡಿದು ನಿಲ್ಲಿಸಿ ಅವರ ಮನಸ್ಸಿಗೆ ಖುಷಿ ನೀಡುವಂತಹ ಕೃತಿಗಳಿವು. ತಾಜಾತನದ, ಒಳ್ಳೆಯ ನಿರ್ವಹಣೆಯೇ ಇಲ್ಲಿನ ಮೂಲ ಬಂಡವಾಳ. ಇಂದು ನಮ್ಮ ಕಲಾಶಾಲೆಗಳಿಂದ ಸಂಪೂರ್ಣ ಮರೆಯಾಗಿರುವ ಸ್ಟಾಂಪ್ ವರ್ಕ್ಸ್ ಕೂಡಾ ಇಲ್ಲಿವೆ. ರಷ್ಯನ್ ಮಕ್ಕಳ ಚಿತ್ರಗಳಲ್ಲಿ ಕಂಡುಬರುವ ಕೆಲವು ಸ್ವಪ್ನಲೋಕದ ಕೃತಿಗಳೂ ಇಲ್ಲಿದ್ದು, ಪ್ರಭಾವಗಳ ನಡುವೆಯೂ ಗಮನ ಸೆಳೆಯುತ್ತವೆ".

### ೧೩. ಆಳಕ್ಕಿಳಿಯದ ಸಾಂಪ್ರದಾಯಿಕತೆ[೧೩]

ಬೆಂಗಳೂರಿನ ಬ್ಯಾಟರಾಯಸ್ವಾಮಿ ಅವರ ಸಾಂಪ್ರದಾಯಿಕ ಕೃತಿಗಳ ಪ್ರದರ್ಶನವು ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ಮೈಸೂರು ಸಾಂಪ್ರದಾಯಿಕ ಕೃತಿಗಳ ಪ್ರದರ್ಶನವೆಂದು ಇದನ್ನು ಕರೆಯಲಾಗಿದೆಯಾದರೂ ತಂಜಾವೂರು ಕೃತಿಗಳಲ್ಲಿಯಂತೆ ಹರಳು, ಮುತ್ತುಗಳು ಇತ್ಯಾದಿಗಳನ್ನು ಇಲ್ಲಿ ಅಂಟಿಸಲಾಗಿದೆ. ಬಹುತೇಕ ಸಾಂಪ್ರದಾಯಿಕ ಕಲೆಯ ವಲಯದಲ್ಲಿನ ಕೃತಿಗಳನ್ನೇ ಇವರು ಅನುಸರಿಸಿದ್ದಾರಾದರೂ ಅಪೇಕ್ಷಿತ, ರೇಖಾ ಲಾಲಿತ್ಯ, ವ್ಯಕ್ತಿಗಳ ಪ್ರಮಾಣಗಳು ಇಂತಹ ದೃಷ್ಟಿಯಿಂದ ಪ್ರದರ್ಶನದಲ್ಲಿ ಕೆಲವು ಕೊರತೆಗಳಿವೆ. ಚಿನ್ನದ ತಗಡುಗಳ, ಪ್ರಖರ ಬಣ್ಣಗಳ ಮರೆಯಲ್ಲಿಯೂ ಈ ದೋಷಗಳನ್ನು ಮುಚ್ಚಿ ಹಾಕಲಾಗದು. ಸಾಂಪ್ರದಾಯಿಕ ಕೃತಿಗಳ ರಚನೆಗಂತೂ ಗಂಭೀರವಾದ ಅಭ್ಯಾಸದ ಮೂಲಕ ಹಸ್ತ ಕೌಶಲ್ಯವನ್ನು ರೂಢಿಸಿಕೊಳ್ಳುವುದು ಅವಶ್ಯ ಎಂದು ಕೃ.ಸೆ.ಯವರು ಈ ಲೇಖನದ ಮೂಲಕ ಅಭಿಪ್ರಾಯಪಡುತ್ತಾರೆ.

೧೨. ಆನಂದ ಹುಟ್ಟಿಸುವ ಗೀಳು, ಅದೇ

೧೩. ಆಳಕ್ಕಿಳಿಯದ ಸಾಂಪ್ರದಾಯಿಕತೆ, ಕ.ದರ್ಶನ, ಪ್ರಜಾವಾಣಿ, ೨೯ ಜನವರಿ ೨೦೦೦

### ೧೪. ಮಾತಿಗೆ ದಕ್ಕದ್ದಿದು, ಮನಸ್ಸಿಗೆ ತಕ್ಕದ್ದಿದು[೧೪]

ಭಾರತೀಯ ಸೌಂದರ್ಯಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದಿರುವ ತಿರುವನಂತಪುರದ ಎಸ್.ಮುರಳಿಯವರ ಕೃತಿಗಳ ಪ್ರದರ್ಶನವು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ಈ ಕುರಿತಂತೆ ಕೃ.ಸೆ.ಯವರು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೨/೨/೨೦೦೦ರಂದು ಲೇಖನ ಪ್ರಕಟಿಸಿದ್ದು, ಅದರ ಪ್ರಮುಖಾಂಶಗಳು ಇಂತಿವೆ. ಮುರಳಿಯವರ ಕೃತಿಗಳಲ್ಲಿ ನಿಶ್ಚಿತ ವಸ್ತುವೊಂದನ್ನು ಗುರುತಿಸಬಹುದಾದರೂ ಅವು ಪೂರ್ವಯೋಜಿತವಾಗಿ ಬರುವಂತದಲ್ಲ. ಅಂದರೆ ಇವೆಲ್ಲ ವಸ್ತುವಿಗಿಂತಲೂ ಹೆಚ್ಚಾಗಿ ಚಿತ್ರ, ಭಾಷೆಯನ್ನು ಮರೆಸುವ ಆಶಯದಿಂದ ಬಂದವುಗಳಾಗಿವೆ. ಇವರ ಕೃತಿಗಳನ್ನು ನೋಡಿದಾಗ ಎಂದಿನ ದೃಶ್ಯ ಭಾಷೆಯಿಂದ ಸ್ವಲ್ಪ ಆಚೀಚೆ ಸರಿದಂತಹ ಅನುಭವವಾಗುತ್ತದೆ. ಕೆಲವೆಡೆ ಚಿತ್ರದೊಳಗೇ ಒಂದು ರೇಖಾ ಚಿತ್ರವನ್ನೂ ತರುತ್ತಾರೆ. ಶೈಲೀಕೃತಗೊಂಡ ಇವುಗಳಲ್ಲಿ ಅಮೂರ್ತ ಆವರಣವೇ ಪ್ರಧಾನವಾದುದಾದರೂ ಅಲ್ಲಲ್ಲಿ ಪರಿಚಿತ ಪ್ರಪಂಚದ ಆಕೃತಿಗಳು ಬರುತ್ತವೆ. ಅತ್ಯಂತ ಸೃಜನಶೀಲತೆ ಇಲ್ಲಿಲ್ಲದಿದ್ದರೂ ಹೃದಯದಾಳಕ್ಕೆ ಇಳಿಯುವಂತಹ ನಿರ್ವಹಣೆ ಇಲ್ಲಿದೆ. ಹೀಗೆ ಅಲಂಕರಣವನ್ನು ಮುಚ್ಚಿಟ್ಟು ತೋರಿಸುವ ಸುಪ್ತ ಆಶಯ ಇಲ್ಲಿದೆ. ಈ ಪ್ರದರ್ಶನದಲ್ಲಿ ಮುರಳಿಯವರು ಅಲ್ಯುಮಿನಿಯಂ ಹಾಳೆಗಳ ಮೇಲೆ ರಚಿಸಿದ ಕೃತಿಗಳನ್ನೂ ಇಟ್ಟಿದ್ದಾರೆ. ಇವುಗಳಲ್ಲಿ ಕೆಲವು ಭಾಗಗಳಲ್ಲಿ ಅಲ್ಯುಮಿನಿಯಂ ಹಾಳೆಯ ಹಿನ್ನೆಲೆಯನ್ನು ಹಾಗೆಯೇ ಉಳಿಸಿಕೊಂಡು ಕೃತಿಯಲ್ಲಿ ಮೌನದ ಭಾಗವಾಗಿ ಕೆಲಸ ಮಾಡುವುದರ ಜೊತೆಗೆ ಸಂಯೋಜನೆಯ ಆಕರ್ಷಣೆಯನ್ನು ಹೆಚ್ಚಿಸುತ್ತವೆ. ಒಟ್ಟಾರೆಯಾಗಿ ಕೆಲವು ಕ್ಲೀಷೆಯ ವಿನ್ಯಾಸಗಳ ನಡುವೆಯೂ ಅಲ್ಲಲ್ಲಿನ ಹೊಸ ಹೊಳಹುಗಳಿಂದಾಗಿ ಮುರಳಿಯವರ ಕೃತಿಗಳು ಗಮನಾರ್ಹವೆನಿಸುತ್ತವೆ.

### ೧೫. ಆಳಕ್ಕಿಳಿಯುವ ಬಂಗಾಳದ ಚೈತನ್ಯ[೧೫]

ಕಲ್ಕತ್ತದ ಇಂಡಿಯನ್ ಕಾಲೇಜ್ ಆಫ್ ಆರ್ಟ್‌ನ ಕೆಲವು ಹಳೆಯ ವಿದ್ಯಾರ್ಥಿಗಳು 'ಇಮೇಜಸ್ ೨೦೦೦' ಹೆಸರಿನಲ್ಲಿ ತಮ್ಮ ಕೃತಿಗಳನ್ನು ಪ್ರದರ್ಶಿಸಿದ್ದರು. ಇದರಲ್ಲಿ ಐವರು ಕಲಾವಿದರು ಭಾಗವಹಿಸಿದ್ದರು. ಇವರಲ್ಲಿ ಒಬ್ಬಿಬ್ಬರನ್ನು ಹೊರತುಪಡಿಸಿದರೆ ಎಲ್ಲರೂ ಬಂಗಾಳದ ಎಂದಿನ ಚೈತನ್ಯವನ್ನು ಮೈಗೂಡಿಸಿಕೊಂಡವರು. ಈ ಕಲಾವಿದರ ಕಲಾ ವೈಶಿಷ್ಟ್ಯತೆಯನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಮುಂದಿನಂತೆ ದಾಖಲಿಸಿದ್ದಾರೆ. ಕಲಾವಿದ ಸಮೀರ್ ರಾಯ್ ಅವರು ಇಂಕ್, ಕಲರ್ಸ್ ರೇಖೆಗಳ ಮೂಲಕ ಹಲವು ಸಬಲ ಕೃತಿಗಳನ್ನು ರಚಿಸಿದ್ದಾರೆ. ಈ ಶೈಲೀಕೃತ ಕೃತಿಗಳಲ್ಲಿ ಮಾನವನ ಬಯಕೆಗಳು ಪೂರೈಕೆಗೊಳ್ಳದೇ ವಿಷಾದಗೊಂಡಂತಹ ವಸ್ತು–ವಿಷಯಗಳಿವೆ.

---

೧೪. ಮಾತಿಗೆ ದಕ್ಕದ್ದಿದು, ಮನಸ್ಸಿಗೆ ತಕ್ಕದ್ದಿದು, ಕರ್ನಾಟಕ ದರ್ಶನ,ಪ್ರಜಾವಾಣಿ ೧೨, ಫೆಬ್ರವರಿ, ೨೦೦೦

೧೫. ಆಳಕ್ಕಿಳಿಯುವ ಬಂಗಾಳದ ಚೈತನ್ಯ, ಅದೇ

ಅದರಂತೆ ಕಲಾವಿದೆ ಸ್ವಾತಿ ಮುಖರ್ಜಿಯವರ ಕೃತಿಗಳಲ್ಲಿ ವಿಶಿಷ್ಟ ಚೈತನ್ಯವಿದೆ. ಅಲ್ಲದೇ ಕಲಾವಿದೆ ರಂಜನಿ ಜುಂಜನ್‌ವಾಲಾ ಅವರು ನಿಸರ್ಗ ಪ್ರೀತಿಯವರು. ಅವರು ಚಿಟ್ಟೆ, ಹಕ್ಕಿ, ಮೀನು, ಹುಳು ಇತ್ಯಾದಿಗಳನ್ನು ಹೂವು, ಎಲೆ ಈ ಮುಂತಾದವುಗಳೊಂದಿಗೆ ಸಂಯೋಜಿಸಿ ಸರಳ ಕೃತಿಗಳನ್ನು ರಚಿಸಿದ್ದಾರೆ. ಅದೇ ರೀತಿ ಕಲಾವಿದ ಕಿಂಕರ್ ಘೋಷ್ ಅವರು ಕಲ್ಕತ್ತದ ಕಲಾವಿದರಲ್ಲಿ ಬಹುತೇಕ ವಿರಳ ಎನ್ನುವಂತಹ ಎಕ್ಸ್‌ಪ್ರೆಶನಿಸ್ಟ್‌ರ ಮಾದರಿಯಲ್ಲಿ ಬಹುತೇಕ ಕಾಮ ಸಂಬಂಧಿತ ವಸ್ತುವುಳ್ಳ, ಕೆಲವೆಡೆ ವ್ಯಂಗ್ಯ ಚಿತ್ರಗಳ ಸೆಳಕುಗಳನ್ನು ವಿಶೇಷವಾಗಿ ಅಭಿವ್ಯಕ್ತಪಡಿಸಿದ್ದಾರೆ. ಅಲ್ಲದೇ ಕಲಾವಿದ ಕುಶಾಲ್ ರಾಯ್ ಅವರು ತಮ್ಮ ರಚನೆಗಳಲ್ಲಿ ಮಾನವನ ಪರಕೀಯ ಪ್ರಜ್ಞೆಗೆ(ಏಲಿಯನೇಶನ್) ಹೆಚ್ಚು ಆದ್ಯತೆ ನೀಡಿ ಕೃತಿಗಳನ್ನು ರಚಿಸಿದ್ದಾರೆ. ಬಹುತೇಕ ಸ್ಕೆಚ್‌ನಂತಿರುವ ಇವುಗಳಲ್ಲಿ ಅಲ್ಲಲ್ಲಿ ವರ್ಣಗಳ ಬಳಕೆಯಿದೆ. ಒಟ್ಟಾರೆ ಈ ಎಲ್ಲರಲ್ಲೂ ಕಾಣುವ ಸಕಾರಾತ್ಮಕವಾದ ಒಂದು ಅಂಶವೆಂದರೆ ಎಲ್ಲೆಡೆ ಪ್ರಖರ ವರ್ಣಗಳ ನಿರಾಕರಣೆಯಾಗಿದೆ. ಕಲ್ಕತ್ತದ ಕಲಾವಿದರ ಈ ಪ್ರದರ್ಶನವು ಸಾಮಾನ್ಯತೆಯಿಂದ ಮೇಲಿನ ಸ್ತರದಲ್ಲಿದ್ದು, ನಮ್ಮ ಗಮನವನ್ನು ಸೆಳೆಯುತ್ತದೆ.

**೧೬. ಆಕಾಡೆಮಿಕ್‌ಅಭ್ಯಾಸಕ್ಕೆ ಬದ್ಧತೆ**[೧೬]

ಬೆಂಗಳೂರಿನ ಚಿತ್ರ ಗ್ಯಾಲರಿಯಲ್ಲಿ ನಡೆದ ಕಲಾ ಮಂದಿರದ ವಿದ್ಯಾರ್ಥಿಗಳ ಕಲಾ ಪ್ರದರ್ಶನದ ಕುರಿತಂತೆ ಕೃ.ಸೆ.ಯವರು ಪ್ರಸಕ್ತ ಲೇಖನದ ಮುಖಾಂತರ ಮುಂದಿನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ನಮ್ಮ ಇಂದಿನ ಕಲಾ ಶಾಲೆಗಳವರ ಪ್ರದರ್ಶನದಲ್ಲಿ ಬಹುತೇಕ ಅಭಿವ್ಯಕ್ತಿ ಪ್ರಧಾನ ಆಶಯಗಳಿದ್ದರೆ ಇಲ್ಲಿ ಅಭ್ಯಾಸ ಪ್ರಧಾನ ಆಶಯಗಳಿವೆ. ಹೀಗೆ ಅಕಾಡೆಮಿಕ್ ಅಭ್ಯಾಸಕ್ಕೆ ಬದ್ಧವಾದಂತಹ ಈ ಪ್ರದರ್ಶನದಲ್ಲಿ ಲೈಫ್ ಪೈಂಟಿಂಗ್, ಗ್ರಾಫಿಕ್ ಹಾಗೂ ಸಂಯೋಜನಾ ಕೃತಿಗಳಿಗೇ ಆದ್ಯತೆಯಿದೆ. ಆದರೆ ಈ ಆಕಾಡೆಮಿಕ್‌ಶಿಕ್ಷಣದ ನಿಜವಾದ ಚೈತನ್ಯವನ್ನು ಸಮರ್ಥವಾಗಿ ಗ್ರಹಿಸಿದಂತಹ ಕೃತಿಗಳು ಇಲ್ಲಿ ವಿರಳವೆಂದರೆ ತಪ್ಪಲ್ಲ. ಇಲ್ಲಿನ ಕೃತಿಗಳಲ್ಲಿ ಪಿ.ಫೈಜಲ್, ಆರ್.ಸುರೇಶ್, ಚಲಪತಿ, ಎನ್.ಬಿ.ಸತೀಶ್, ಜಿ.ಜಯಲಕ್ಷ್ಮಿ, ಕೆ.ಎಸ್.ಮಹೇಶ್ ಅವರ ಕೃತಿಗಳು ಗಮನಾರ್ಹವಾಗಿವೆ. ಉಳಿದಂತೆ ಸಾಮಾನ್ಯ ನೆಲೆಯ ಕೃತಿಗಳು ಸಾಕಷ್ಟಿವೆ. ವಿದ್ಯಾರ್ಥಿ ದೆಸೆಯಲ್ಲಿ ಅಕಡೆಮಿಕ್‌ಗಿಂತಲೂ ಅಭಿವ್ಯಕ್ತಿಗೆ ಅದ್ಯತೆ ನೀಡಬೇಕೆನ್ನುವ ಹಲವರು ನಮ್ಮಲ್ಲಿದ್ದಾರೆ. ಹೀಗಿರುವಾಗ ಆಕಾಡೆಮಿಕ್‌ಶಿಕ್ಷಣವೇ ಮುಖ್ಯ ಎಂಬ ಸುಪ್ತ ಆಶಯದ ಪ್ರಶ್ನೆಯನ್ನು ಈ ಪ್ರದರ್ಶನವು ನಮ್ಮ ಮುಂದಿಡುತ್ತದೆ.

**೧೭.ವಿಕೃತ ಕಾಮಕ್ಕೆ ಆಧ್ಯಾತ್ಮದ ಲೇಪನ**[೧೭]

ಮೂಲತಃ ತಮಿಳುನಾಡಿನ ಕಲಾವಿದರಾದ ಜಿ.ಸುಬ್ರಹ್ಮಣ್ಯನ್ ಹಲವು ವರ್ಷಗಳ ಹಿಂದೆ ಬೆಂಗಳೂರಿನಲ್ಲಿದ್ದವರು. ಕುಂಭಕೋಣಂನ ಗವರ್ನ್‌ಮೆಂಟ್ ಕಾಲೇಜ್ ಆಫ್ ಆರ್ಟ್‌ನಲ್ಲಿ ಕಲಾಭ್ಯಾಸ

---

೧೬. ಆಕಾಡೆಮಿಕ್‌ಅಭ್ಯಾಸಕ್ಕೆ ಬದ್ಧತೆ, ಕರ್ನಾಟಕ ದರ್ಶನ,ಪ್ರಜಾವಾಣಿ ೧೨, ಫೆಬ್ರವರಿ,೨೦೦೦

೧೭. ವಿಕೃತ ಕಾಮಕ್ಕೆ ಆಧ್ಯಾತ್ಮದ ಲೇಪನ, ಕರ್ನಾಟಕ ದರ್ಶನ,ಪ್ರಜಾವಾಣಿ ೧೯, ಫೆಬ್ರವರಿ,೨೦೦೦

ಮಾಡಿ ಪ್ರಸ್ತುತ ಸೌದಿ ಅರೇಬಿಯಾದ ಜೆಡ್ಡಾದಲ್ಲಿ ನೆಲೆಸಿರುವ ಅವರ ಕೃತಿಗಳ ಪ್ರದರ್ಶನವು ಬೆಂಗಳೂರಿನ ಡಿ ವಿಂಚಿಯನ್ ಆರ್ಟ್ ಗ್ಯಾಲರಿಯಲ್ಲಿ 'ಸೇಕ್ರೆಡ್ ಬುಕ್ ಪೇಜಸ್' ಶೀರ್ಷಿಕೆಯಲ್ಲಿ ನಡೆಯಿತು. ಈ ಪ್ರದರ್ಶನದಲ್ಲಿ ಕ್ಯಾನ್ವಾಸ್‌ನ ಮೇಲೆ ಅಕ್ರಾಲಿಕ್ ಮಾಧ್ಯಮದಲ್ಲಿ ಹಾಗೂ ಕೆಲವು ರೇಖಾಚಿತ್ರಗಳನ್ನು ಪ್ರದರ್ಶಿಸಲಾಗಿತ್ತು. ಪ್ರಾಯಶಃ ವಿಶ್ವದ ಕಲಾವಿದರನ್ನು ಉತ್ಕಟವಾಗಿ ಕಾಡಿರುವ ವಸ್ತುಗಳಲ್ಲಿ ಕಾಮವು ಒಂದು. ಇದನ್ನು ಕಲಾವಿದರಾದ ಜಿ.ಸುಬ್ರಹ್ಮಣ್ಯನ್ ಅವರು ಕೂಡಾ ತಮ್ಮದೇ ಆದ ರೀತಿಯಲ್ಲಿ ತಮ್ಮ ಕಲಾಕೃತಿಗಳ ಮೂಲಕ ಅಭಿವ್ಯಕ್ತಪಡಿಸಿರುವುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಮುಂದಿನಂತೆ ದಾಖಲಿಸಿದ್ದಾರೆ.

ಈ ಕಲಾವಿದ ತಮ್ಮ ರಚನೆಗಳಲ್ಲಿ ಆಧ್ಯಾತ್ಮಿಕ ಅಧಿಕೃತತೆಯನ್ನು ತರಲು ಪುರಾಣ ಗ್ರಂಥಗಳ ಸಹಾಯ ಪಡೆದಿದ್ದಾರೆ. ಇವರದ್ದು ಸ್ವಲ್ಪ ಶೈಲೀಕೃತ ರೂಪವಾದರೂ ನಗ್ನ ಪ್ರೇಮಿಗಳ ದೈಹಿಕ ಭಂಗಿಗಳನ್ನು ಯಾವುದೇ ಮುಚ್ಚುಮರೆಯಿಲ್ಲದೆ ನೇರವಾಗಿ ಚಿತ್ರಿಸಿದ್ದಾರೆ. ಮೈಥುನ ವಿಷಯ ಕುರಿತಂತೆ ಚಿತ್ರಗಳನ್ನು ನಮ್ಮ ಎಸ್.ಜಿ.ವಾಸುದೇವ್ ಅವರೂ ಸೇರಿದಂತೆ ಅನೇಕ ಸಮಕಾಲೀನ ಕಲಾವಿದರೂ ಚಿತ್ರಿಸಿದ್ದಾರೆ. ಅವರೆಲ್ಲ ಕಾಮಸಂಬಂಧೀ ಅಂಗಾಂಗಳನ್ನು ಅಷ್ಟಾಗಿ ತೋರಿಸದೇ ಚಿತ್ರಿಸಿದರೆ ಈ ಕಲಾವಿದ ಅವುಗಳನ್ನು ಹೆಚ್ಚು ಸ್ಪಷ್ಟವಾಗಿ ಎದ್ದು ಕಾಣುವಂತೆ ಚಿತ್ರಿಸಿದ್ದಾರೆ. ಹೀಗೆ ಇಲ್ಲಿರುವುದು ಕಾಮದ ನಿರೂಪಣೆಯ ವಿವಿಧ ಭಂಗಿಗಳ ನೇರ ಚಿತ್ರಣ. ಕೆಲವಂತೂ ನಮ್ಮ ಕೀಳುಮಟ್ಟದ ಕೋಕ ಶಾಸ್ತ್ರದ ಪುಸ್ತಕಗಳಲ್ಲಿರುವಂತೆ ಅತಿಭಂಗಿಗಳಲ್ಲೂ ಇವೆ. ಹೀಗೆ ಇಲ್ಲಿ ಕಾಮವನ್ನು ಆಧ್ಯಾತ್ಮಿಕವಾಗಿಸುವುದಕ್ಕಿಂತ ವಿಕೃತ ನೆಲೆಯಲ್ಲಿ ನೋಡುವ ಬಯಕೆ ಸುಪ್ತವಾಗಿರುವುದು ಎದ್ದು ಕಾಣುತ್ತದೆ.

ಇವರು ಕ್ಯಾನ್ವಾಸಿನ ಮೇಲೆ ಸಮತಟ್ಟಾಗಿ ಕಪ್ಪು ಅಥವಾ ಕೆಂಪು ಬಣ್ಣವನ್ನು ಹಚ್ಚಿ ಅದು ಒಣಗಿದ ಮೇಲೆ ಗೋಲ್ಡ್ ಪೆನ್ನಿನಿಂದ ಈ ಕಾಮಾಕೃತಿಗಳ ರೇಖಾಚಿತ್ರವನ್ನು ವಿಶೇಷವಾಗಿ ರಚಿಸಿದ್ದಾರೆ. ಬಹುತೇಕ ಕಾರ್ಟೂನಿನ ಶೈಲಿಗೆ ಹತ್ತಿರವೆನಿಸುವ ರೇಖಾ ಚಿತ್ರಗಳಲ್ಲಿ ಗಂಡು ಹೆಣ್ಣಿನ ಸಮ್ಮಿಲನದ ಚಿತ್ರಗಳಿವೆ. ಆದರೆ ಈ ರೇಖಾಚಿತ್ರಗಳ ಸ್ಪಷ್ಟತೆಯನ್ನು ಕಡಿಮೆಗೊಳಿಸಲು ಇವರು ಸುತ್ತಲಿನ ಆವರಣವನ್ನು ದುಡಿಸಿಕೊಂಡಿದ್ದಾರೆ. ಈ ರೇಖಾಚಿತ್ರಗಳ ಸುತ್ತ ವಿವಿಧ ಬಗೆಯ ಕುಂಚದ ಬೀಸುಗಳು, ಸಂಯೋಜನಾ ವೈವಿಧ್ಯಗಳನ್ನು ತಂದಿದ್ದಾರೆ. ಹೀಗೆ ಈ ರೇಖಾಚಿತ್ರಗಳನ್ನು ಚೌಕ, ವೃತ್ತ ಹಾಗೂ ಅನಿಯತವಾದ ಕೆಲವು ಪ್ರದೇಶಗಳೊಳಗೆ ಬಂಧಿಸಿಟ್ಟಿದ್ದಾರೆ. ಕೃತಿಯ ಸಂಯೋಜನೆಗೆ ಹೊಂದುವಂತೆ ನಮ್ಮ ಪುರಾತನ ಚಿಕಣಿ ಚಿತ್ರಗಳಲ್ಲಿನ ಸಂಯೋಜನಾ ವಿಧಾನಗಳನ್ನು ಬಳಸಿಕೊಂಡಿದ್ದಾರೆ. ಜೊತೆಗೆ ಶ್ಲೋಕಗಳಂತೆ ತಮಿಳು ಬರಹವನ್ನು ಅಲ್ಲಲ್ಲಿ ಸಂಯೋಜಿಸಿದ್ದಾರೆ. ಈ ಆಧ್ಯಾತ್ಮಿಕ ಆವರಣವನ್ನು ತೆಗೆದು ನೋಡಿದರೆ ಹೆಚ್ಚಿನವು ಪೋಲಿ ಚಿತ್ರಗಳೆನಿಸದೇ ಇರದು. ಹೆಚ್ಚಿನೆಡೆ ಬಳಸಿರುವ ತೆಳುವಾದ ಚಿನ್ನದ ಬಣ್ಣ ಹಾಗೂ ಕೆಂಪು ಬಣ್ಣಗಳೂ ಕಾಮಭಾವನೆಗೆ ಪೂರಕವಾಗಿವೆ. ಈ ಕೃತಿಗಳಿಗೆ ಸಮಕಾಲೀನ ಆವರಣವನ್ನು ನೀಡಿರುವುದು ಈ ಹಿನ್ನೆಲೆಯೇ ಎಂದರೆ ತಪ್ಪಲ್ಲ.

ಇವರ ರಚನೆಗಳು ರೇಖಾಚಿತ್ರ ಮತ್ತು ವರ್ಣಚಿತ್ರಗಳ ಸಂಗಮವಾಗಿವೆ. ಒಂದೇ ಕೃತಿಯಲ್ಲಿ ಶಿಖರಪ್ರಾಯವಾದ ಭಾಗಗಳೆಲ್ಲ ರೇಖಾಚಿತ್ರಗಳೇ ಆಗಿದ್ದರೆ, ಉಳಿದ ಭಾಗಗಳೆಲ್ಲ ವರ್ಣಚಿತ್ರದ ವಿಧಾನಗಳಾಗಿವೆ. ನಮ್ಮ ಅನೇಕ ಕಲಾವಿದರು ಈ ಬಗೆಯ ವಸ್ತುಗಳನ್ನು ರಚಿಸುವಾಗ ಸಂಕೇತಗಳ ಮೊರೆ ಹೋದರೆ ಇವರು ನೇರವಾಗಿ ತೋರಿಸುವುದಕ್ಕೇ ಒತ್ತಾಸೆ ನೀಡಿದ್ದಾರೆ. ಈ ನೇರತೆಯು ತೀವ್ರತೆಯನ್ನು ತರುವುದಾದರೂ ಅಶ್ಲೀಲತೆಯ ಛಾಯೆ ತಂದಿದೆ. ಜೊತೆಗೆ ಕಲೆಯ ಸೂಕ್ಷ್ಮತೆಗಳನ್ನು ಕಳೆದುಕೊಂಡಿದೆ. ಹೀಗೆ ಸುಬ್ರಹ್ಮಣ್ಯನ್ ಅವರು ತಮ್ಮ ರಚನೆಗಳಲ್ಲಿ ಪುರಾತನ– ಸಮಕಾಲೀನ, ಕಾಮ–ಆಧ್ಯಾತ್ಮ, ಸಾಹಿತ್ಯ– ಚಿತ್ರ, ಅಶ್ಲೀಲ–ಶೀಲ ಈ ಮುಂತಾದ ಭಿನ್ನ ನೆಲೆಗಳನ್ನು ಒಗ್ಗೂಡಿಸುವ ಪ್ರಯತ್ನ ಮಾಡಿದ್ದಾರೆ. ಒಟ್ಟಾರೆಯಾಗಿ ಈ ಕೃತಿಗಳು ಕುತೂಹಲಗಳ ಕಣಜದಂತೆ ಗಮನಾರ್ಹವಾಗಿವೆ.

**೧೮. ನಶಿಸುತ್ತಿರುವ ದೇಹಗಳು**[೧೮]

ಮುಂಬಯಿ ಮತ್ತು ಹೈದರಾಬಾದ್‌ಗಳಲ್ಲಿ ಕಲಾಶಿಕ್ಷಣ ಪಡೆದ ಕಲಾವಿದೆ ಭಾರತಿ ಸಾಗರ್ ಅವರ ಕೃತಿಗಳ ಪ್ರದರ್ಶನವು ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ಬಹುತೇಕ ಕಲಾವಿದೆಯರಂತೆ ಇವರದ್ದೂ ಸ್ತ್ರೀ ಕೇಂದ್ರಿತ ಪ್ರಪಂಚ. ಹೆಣ್ಣಿನ ಆನಂದದ ಗಳಿಗೆಗಳಿಗಿಂತ ನೋವಿನ ಕ್ಷಣಗಳನ್ನು ಮುಂದಿಡುವುದೇ ಇವರ ಆಶಯವಾಗಿದೆ. ಅಂತೆಯೇ ಅದಕ್ಕೆ ತಕ್ಕ ರೂಪ ಮತ್ತು ತಂತ್ರಗಳನ್ನು ಅವರ ರಚನೆಗಳಲ್ಲಿ ರೂಪಿಸಿಕೊಂಡಿರುವುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಗುರುತಿಸಿದ್ದಾರೆ.

ಇವರ ಬಹುತೇಕ ಮಂದ ಬೆಳಕಿನ ಏಕವರ್ಣದ ಈ ಕಲಾ ಕೃತಿಗಳು ಸರಳವೆನಿಸಿದರೂ ಒಳಗೆ ಸಂಕೀರ್ಣತೆಯನ್ನು ಅಡಗಿಸಿಟ್ಟುಕೊಂಡಿವೆ. ಇದಕ್ಕಾಗಿ ಇವರು ವಿವಿಧ ಬಗೆಯ ತಂತ್ರಗಳನ್ನು ಬಳಸಿಕೊಂಡಿದ್ದಾರೆ. ಕೆಲವೆಡೆ ದೇಹದೊಳಗೇ ಕಬ್ಬಿಣದ ತುಕ್ಕು ಹಿಡಿದು ನಶಿಸುತ್ತಿರುವಂತಹ ಟ್ರೀಟ್‌ಮೆಂಟ್ ನೀಡಿದ್ದಾರೆ. ಬಲೂನಿನಂತೆ ಉಬ್ಬಿದ ದೇಹಗಳೇ ಹೆಚ್ಚಾಗಿರುವ ಇವು ಸರಳವಾದರೂ ಪರಿಣಾಮಕಾರಿಯಾಗಿವೆ. ಜೊತೆಗೆ ವಸ್ತುವಿಗೆ ಪೂರಕವಾದ ಭಾವನಾತ್ಮಕ ಆವರಣವನ್ನು ನೀಡುವಲ್ಲಿಯೂ ಈ ಕಲಾವಿದೆ ಹೆಚ್ಚಿನೆಡೆ ಯಶಸ್ವಿಯಾಗಿದ್ದಾರೆ ಎನ್ನುತ್ತಾರೆ.

**೧೯. ಕಲ್ಪನೆಯೇ ಕಲೆಯಾಗುವ ಪರಿ, ಆಧ್ಯಾತ್ಮಿಕ ಅನುಭವದ ಗುರಿ**[೧೯]

ರಂಜನಿ ಕೆ.ಶೆಟ್ಟರ್ ಅವರು ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಾಲೇಜಿನ ಶಿಲ್ಪ ವಿಭಾಗದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಇವರ ಕಲಾಕೃತಿಗಳ ಪ್ರದರ್ಶನವು ಬೆಂಗಳೂರಿನ ಕನ್ನಡ

---

೧೮. ನಶಿಸುತ್ತಿರುವ ದೇಹಗಳು, ಕರ್ನಾಟಕ ದರ್ಶನ,ಪ್ರಜಾವಾಣಿ ೧೯, ಫೆಬ್ರವರಿ,೨೦೦೦

೧೯. ಕಲ್ಪನೆಯೇ ಕಲೆಯಾಗುವ ಪರಿ, ಆಧ್ಯಾತ್ಮಿಕ ಅನುಭವದ ಗುರಿ, ಕರ್ನಾಟಕ ದರ್ಶನ, ಪ್ರಜಾವಾಣಿ ೨೫, ಮಾರ್ಚ್, ೨೦೦೦

ಭವನದ 'ಚಿತ್ರ' ಗ್ಯಾಲರಿಯಲ್ಲಿ ನಡೆಯಿತು. ಈ ಕುರಿತಂತೆ ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೫/೩/೨೦೦೦ರಂದು ಪ್ರಕಟವಾದ ಲೇಖನದಲ್ಲಿ ಕೃ.ಸೆ.ಯವರು ಕಲಾವಿದೆ ರಂಜನಿ ಕೆ.ಶೆಟ್ಟರ್ ರವರ ಕಲಾಕೃತಿಗಳನ್ನು ಪಾಶ್ಚಾತ್ಯ ಪೋಸ್ಟ್ ಮಾಡರ್ನಿಸ್ಟ್ ಕಲಾ ವಿಮರ್ಶಕ ಜರ್ಮಾನೊ ಸೆಲಾಂಟ್‌ಗೆ ಹೋಲಿಸಿ ಚರ್ಚಿಸಿರುವುದನ್ನು ಗಮನಿಸಬಹುದು. ಈ ಪ್ರದರ್ಶನವನ್ನು ವಿಶೇಷವಾಗಿ ರಂಗ ಪ್ರದರ್ಶನದಲ್ಲಿರುವಂತೆ ಕತ್ತಲಿನ ನಡುವೆ ಸ್ಪಾಟ್‌ಲೈಟುಗಳನ್ನು ಬಳಸಿ ವಿವಿಧ ಪ್ರಖರತೆಯ ಬೆಳಕನ್ನು ಕೃತಿಗಳಿಗೆ ಬಿಡುವುದರ ಮೂಲಕ ಪ್ರೇಕ್ಷಕರನ್ನು ಆಕರ್ಷಿಸಲಾಗಿತ್ತು.

'ಮನೆ' ಶೀರ್ಷಿಕೆಯ ಈ ಕೃತಿಗಳಲ್ಲಿ ಕೆಲವು ಚಿತ್ರಗಳಾದರೆ ಹೆಚ್ಚಿನವು ಶಿಲ್ಪಗಳು. ಆದರೆ ಈ ಶಿಲ್ಪಗಳು ಎಂದಿನಂತೆ ಪೆಡಸ್ಟಲ್ ಮೇಲಿಟ್ಟಂತವಲ್ಲ, ಬದಲಿಗೆ ಅಗತ್ಯಕ್ಕೆ ಅನುಗುಣವಾಗಿ ಮೇಲೆ ತೂಗು ಹಾಕಿದ, ನೆಲದ ಮೇಲೆ ಹರಡಿದ ಶಿಲ್ಪಗಳು. ಕಾನ್ಸೆಪ್ಚುಯಲ್ ಕಲೆಯಲ್ಲಿರುವಂತೆ ಇಲ್ಲಿ ಕಲಾವಿದನ ಕಲ್ಪನೆಗೇ ಆದ್ಯತೆ. ಎಲ್ಲ ವಸ್ತುಗಳನ್ನೂ ಮನೆಯಾಗಿ ಕಲ್ಪಿಸಿಕೊಂಡು ಅದರೊಳಗೆ ದೈವಿಕ ಶಕ್ತಿಯು ನೆಲೆಸಬೇಕೆಂಬ ಸಾಮಾನ್ಯ ಆಶಯ ಈ ಕಲಾವಿದೆಯದು.ಸಾಮಾನ್ಯವಾಗಿ ಶಿಲ್ಪಗಳಲ್ಲಿ ಬಳಸುವ ಮಾಧ್ಯಮವನ್ನು ನಿರಾಕರಿಸಿ ಪ್ಲಾಸ್ಟಿಕ್ ಹಾಳೆ, ರಬ್ಬರ್ ಟ್ಯೂಬು, ಲೇಟೆಕ್ಸ್ ರಬ್ಬರ್, ಜೇನಿನ ಮೇಣ, ಆಲದ ಮರದೆಲೆ ಇತ್ಯಾದಿ ಸಾಮಾನ್ಯ ಪದಾರ್ಥಗಳನ್ನು ಬಳಸಿಕೊಂಡು ತಾವೇ ಇವುಗಳನ್ನು ರಚಿಸಿದ್ದಾರೆ.

ಇವರ 'ಜನರೇಶನ್ ಗ್ಯಾಪ್'ನ್ನು ಸೂಚಿಸುವ ಬೃಹತ್ ಕಲಾ ಕೃತಿಯೊಂದಿದ್ದು, (ಚಿತ್ರ ನೋಡಿ)ಅದು ಗಮನಾರ್ಹವಾಗಿದೆ. ಹೀಗೆ ನಮ್ಮ ಬೌದ್ಧಿಕತೆಯನ್ನು ಒರೆಗೆ ಹಚ್ಚುವ ಹಲವಾರು ಕೃತಿಗಳು ಇಲ್ಲಿವೆ. ಈ ಕಲಾವಿದೆ ಜೇನುಗೂಡು, ಹಕ್ಕಿಯ ಗೂಡು, ಗೆದ್ದಲಿನ ಮನೆ, ರೇಷ್ಮೆಯಗೂಡು ಈ ಮುಂತಾಗಿ ವಿಭಿನ್ನ ಬಗೆಯ ಮನೆಗಳ ಮೂಲಕ ಆಧ್ಯಾತ್ಮಿಕ ಅನುಭವವನ್ನು ಮುಟ್ಟಿಸಬಯಸುತ್ತಾರೆ. ವಿಶಿಷ್ಟ ಬೆಳಕಿನ ಯೋಜನೆಯ ಮೂಲಕ ಅವುಗಳ ಶಕ್ತಿಯನ್ನು, ಸತ್ವವನ್ನು ಹೆಚ್ಚಿಸುವ ಪ್ರಯತ್ನವನ್ನೂ ಮಾಡಿದ್ದಾರೆ. ಹೀಗೆ ನಾಟಕೀಯ ಆವರಣದಲ್ಲಿ ಪ್ರದರ್ಶಿತವಾದ ರಂಜನಿ ಶೆಟ್ಟರ್ ಅವರ ಕೃತಿಗಳು ನಿಜಕ್ಕೂ ಪರಿಣಾಮಕಾರಿಯಾಗಿದ್ದು 'ಹೊಸ ಬಗೆಯ ನೋಡುವಿಕೆ'ಯನ್ನು ಪ್ರೋತ್ಸಾಹಿಸುವಂತಿದೆ.

### ೨೦. ವೈದ್ಯರ ಚಿತ್ರಕಲೆ[೨೦]

ವೃತ್ತಿಯಲ್ಲಿ ಆರ್ಥೋಪೆಡಿಕ್ ವೈದ್ಯರಾಗಿರುವ ಡಾ.ರಮೇಶ್ ರಚಿಸಿದ ಚಿತ್ರಗಳ ಪ್ರದರ್ಶನವನ್ನು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ಏರ್ಪಡಿಸಿದ್ದರು. ರಮೇಶ್ ಅವರಿಗೆ ತಮ್ಮ ಸ್ವಂತ ಅನಿಸಿಕೆಗಳನ್ನು ಅಭಿವೃದ್ಧಿಪಡಿಸುವುದಕ್ಕಿಂತಲೂ ಜನಪ್ರಿಯ ಕಲೆಯಲ್ಲಿನ ಚಿತ್ರಗಳ

---

೨೦. ವೈದ್ಯರ ಚಿತ್ರಕಲೆ, ಕರ್ನಾಟಕ ದರ್ಶನ,ಪ್ರಜಾವಾಣಿ ೧೯, ಫೆಬ್ರವರಿ,೨೦೦೦

ನಕಲು ಮಾಡುವಲ್ಲಿ ಆಸಕ್ತಿ. ಕೆಲವು ಛಾಯಾಚಿತ್ರಗಳನ್ನು ಆಧರಿಸಿದ್ದರೆ, ಮತ್ತೆ ಕೆಲವು ಕಾಲ್ಪನಿಕ ಚಿತ್ರಗಳು. ಕಣ್ಣಿಗೆ ಇಂಪಾಗಿ ಕಾಣಿಸುವ ಆಶಯವೇ ಇವರಿಗೆ ಅಂತಿಮ. ಆದರೆ ತುಂಬ ಸಮರ್ಥವಾದ ಕೃತಿಗಳನ್ನು ರಚಿಸಲು ಬೇಕಾದ ಹಸ್ತಕೌಶಲ್ಯ ಇವರಿಗೆ ಇನ್ನೂ ದಕ್ಕಿದಂತೆ ಕಂಡುಬರುವುದಿಲ್ಲ. ಹಾಗಾಗಿ ಎಲ್ಲ ಕಲಾವಿದರೂ ತಮ್ಮ ಕಲಿಕೆಯ ಆರಂಭದಲ್ಲಿ ಮಾಡುವಂತೆ ಪ್ರಾಥಮಿಕ ಹಂತದ ಚಿತ್ರಗಳನ್ನು ಇವರು ರಚಿಸಿದ್ದಾರೆಂದು ಪ್ರಸಕ್ತ ಲೇಖನದಲ್ಲಿ ಕೃ.ಸೆ.ಯವರು ಅಭಿಪ್ರಾಯಪಡುತ್ತಾರೆ.

### ೨೧. ಅಮೂರ್ತ ವೈವಿಧ್ಯ[೨೧]

ಡಿ.ರಾಜ್‌ಕುಮಾರ್ ಅವರ ಕೃತಿಗಳ ಪ್ರದರ್ಶನವು ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ರಾಜ್‌ಕುಮಾರ್ ಅವರದ್ದು ಬಹುತೇಕ ಅಮೂರ್ತ ಪ್ರಪಂಚ. ಒಂದೆರಡು ಕೃತಿಗಳನ್ನು ಬಿಟ್ಟರೆ ಉಳಿದುದೆಲ್ಲ ನಿಶ್ಚಿತ ವಸ್ತು ರಹಿತವಾದ ಅಮೂರ್ತ ಕೃತಿಗಳೇ. ಆದರೆ ಇವರ ಈ ಕೃತಿಗಳ ಶೈಲಿಯು ಸುಮಾರು ಒಂದೆರಡು ದಶಕಗಳ ಹಿಂದಿನದು. ಆಗ ಸಾಕಷ್ಟು ಬದಲಾವಣೆ ಯಲ್ಲಿದ್ದಂತಹ ಇಂಪಾಸ್ಟೊ ತಂತ್ರದಲ್ಲಿ ಬಣ್ಣದ ಮುದ್ದೆಗಳನ್ನು ದಪ್ಪನಾಗಿ ಮೆತ್ತಿದ್ದಾರೆ. ಆದರೆ ಈ ವರ್ಣ ಮೇಳವು ತನ್ನ ತಾಜಾತನವನ್ನು ಕಳೆದುಕೊಂಡು ಕೊಳಕಾದಂತೆ ಭಾಸವಾಗುತ್ತದೆ. ಜೊತೆಗೆ ನಿರ್ವಹಣೆಯಲ್ಲೂ ಕೌಶಲ್ಯದ ಕೊರತೆ ಕಂಡುಬರುತ್ತದೆ. ಹೀಗಾಗಿ ರಾಜ್‌ಕುಮಾರ್ ಅವರ ಈ ಕೃತಿಗಳು ನೋಡುಗರ ಮೇಲೆ ವಿಶಿಷ್ಟ ಪರಿಣಾಮವನ್ನೇನೂ ಮಾಡುವುದಿಲ್ಲವೆಂದು ಪ್ರಸಕ್ತ ಲೇಖನದಲ್ಲಿ ಕೃ.ಸೆ.ಯವರು ಅಭಿಪ್ರಾಯಪಡುತ್ತಾರೆ.

### ೨೨. ಜಪಾನಿನ ಶರಾಕುವಿಗೆ ಪರಾಕು, ಪೌರ್ವಾತ್ಯ ಕಲೆಯೆಡೆಗೆ ಹೊಸ ಬೆಳಕು[೨೨]

ಚೆನ್ನೈನ ಕಾನ್ಸುಲೇಟ್ ಜನರಲ್ ಆಫ್ ಜಪಾನ್, ಜಪಾನ್ ಫೌಂಡೇಷನ್, ಕರ್ನಾಟಕದ ಇಂಡೊ ಜಪಾನ್ ಫ್ರೆಂಡ್‌ಶಿಪ್ ಅಸೋಸಿಯೇಷನ್‌ಗಳು ಸಂಯುಕ್ತವಾಗಿ ಜಪಾನಿನ ಕಲಾವಿದನೊಬ್ಬನಿಗೆ ಗೌರವ ಅರ್ಪಿಸುವ ಉದ್ದೇಶದಿಂದ ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಈ ಪ್ರದರ್ಶನವನ್ನು ಏರ್ಪಡಿಸಿದ್ದವು. ಈ ಕುರಿತಂತೆ ಕೃ.ಸೆ.ಯವರಿಂದ ರಚಿತವಾದ ಲೇಖನ ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೧/೩/೨೦೦೦ರಂದು ಪ್ರಕಟವಾಗಿದೆ. ಈ ಲೇಖನದಲ್ಲಿ ನಮ್ಮ ಇತ್ತೀಚಿನ ಕಲೆಯು ಬಹುತೇಕ ಪಾಶ್ಚಾತ್ಯ ದೇಶಗಳಿಂದ ಪ್ರಭಾವಿತರಾಗಿರುವುದನ್ನು ಉಲ್ಲೇಖಿಸುತ್ತಾ, ಈ ಪ್ರದರ್ಶನದಲ್ಲಿದ್ದ ಕಲಾಕೃತಿಗಳ ವೈಶಿಷ್ಟ್ಯತೆಗಳನ್ನು ಈ ಮುಂದಿನಂತೆ ವಿಶ್ಲೇಷಿಸಿದ್ದಾರೆ.

---

೨೧. ಅಮೂರ್ತ ವೈವಿಧ್ಯ, ಕರ್ನಾಟಕ ದರ್ಶನ,ಪ್ರಜಾವಾಣಿ ೨೫, ಫೆಬ್ರವರಿ,೨೦೦೦

೨೨. ಜಪಾನಿನ ಶರಾಕುವಿಗೆ ಪರಾಕು, ಪೌರ್ವಾತ್ಯ ಕಲೆಯೆಡೆಗೆ ಹೊಸ ಬೆಳಕು, ಕರ್ನಾಟಕ ದರ್ಶನ, ಪ್ರಜಾವಾಣಿ ೧೧, ಮಾರ್ಚ್, ೨೦೦೦

ಈ ಪ್ರದರ್ಶನದಲ್ಲಿದ್ದ ಕಲಾಕೃತಿಗಳು ಪ್ರಸ್ತುತದ ಜಪಾನಿನ ಕಲೆಯ ಮುಖ್ಯವಾದ ಮೂರು ನೆಲೆಗಳನ್ನು ಪರಿಚಯಿಸುವಂತಿವೆ. ಮೊದಲನೆಯದರದಲ್ಲಿ ಶರಾಕುವಿನ ಮೂಲಕೃತಿಗಳ ನಕಲು ಕೃತಿಗಳಿವೆ. ಇಂದಿನ ಅಡಾಬಿ ಇನ್‌ಸ್ಟಿಟ್ಯೂಟ್‌ನ ಕಲಾವಿದರು ಅಂದು ಶರಾಕು ರಚಿಸಿದ ೨೮ ಭಾವಚಿತ್ರಗಳನ್ನು ಇಲ್ಲಿ ಯಥಾವತ್ತಾಗಿ ನಕಲು ಮಾಡಿದ್ದಾರೆ. ಇವುಗಳಲ್ಲಿ ವ್ಯಕ್ತಿಯ ಬಾಹ್ಯ ವಿವರಗಳಿಗಿಂತಲೂ ಅಂತರಂಗದ ಭಾವವನ್ನು ಹಿಡಿದಿಡುವ ಗುಣವುಳ್ಳ ಪೌರ್ವಾತ್ಯ ದೇಶಗಳ ಪುರಾತನ ಕಲೆಯ ಸತ್ವವೇ ಮೆರೆದಿದೆ. ತುಂಬ ಸರಳೀಕೃತ ಆಕೃತಿಗಳಲ್ಲಿ. ಕೆಲವೇ ವರ್ಣಗಳಲ್ಲಿ ಈ ವುಡ್‌ಬ್ಲಾಕ್ ಮುದ್ರಣಗಳನ್ನು ಸಮರ್ಥವಾಗಿ ಮಾಡಿದ್ದಾರೆ. ವ್ಯಕ್ತಿಯೊಬ್ಬನ ಕಣ್ಣು, ಬಾಯಿ ಮತ್ತು ಕೈಗಳೇ ವಿಶಿಷ್ಟ ರೀತಿಯಲ್ಲಿ ಮಾತನಾಡುವಂತೆ ವ್ಯಕ್ತಿಯ ಅಂತರಂಗಿಕ ಸತ್ವವನ್ನು ಹಿಡಿದಿಡುವ ಇಲ್ಲಿನ ವಿಧಾನವು ಕುತೂಹಲಕಾರಿಯಾಗಿದೆ. ತಿಳಿಯಾದ, ಮಂದವಾದ ವರ್ಣಗಳಲ್ಲಿರುವ ಇವು ೨೦೦ ವರ್ಷಗಳಷ್ಟು ಹಳೆಯ ಕಲೆಯಾದರೂ ಇಂದಿಗೂ ಸಲ್ಲುವಷ್ಟು ಪ್ರಭಾವಶಾಲಿಯಾಗಿದೆ. ತಾಂತ್ರಿಕ ಕೌಶಲ್ಯ ಹಾಗೂ ರೂಪಗಳೆರೆಡರ ದೃಷ್ಟಿಯಿಂದಲೂ ಇವು ಗಮನಾರ್ಹವಾದ ಕೃತಿಗಳಾಗಿವೆ.

ಎರಡನೆಯ ವಿಭಾಗದಲ್ಲಿ ಇಂದಿನ 'ಗ್ರಾಫಿಕ್' ಕೃತಿಗಳ ಮೂಲಕ ಶರಾಕು'ವನ್ನು ನೋಡುವ ಗಂಭೀರ ಪ್ರಯತ್ನವಿದೆ. ೧೯೯೫ರಲ್ಲಿ ಜಪಾನಿನ ಗ್ರಾಫಿಕ್ ವಿನ್ಯಾಸಗಾರರು ರಚಿಸಿದ ಪೋಸ್ಟರುಗಳು ಇಲ್ಲಿವೆ. ಕೆಲವೇ ಕೆಲವು ವಿಶಿಷ್ಟವಾದ ಆಕೃತಿಗಳ ಮೂಲಕ ಶರಾಕುವಿನ ನೆನಪು ಮೂಡಿಸುವಂತಹ ಈ ಕೃತಿಗಳು ಸರಳವಾದರೂ ಕುತೂಹಲಕಾರಿಯಾಗಿವೆ. ಇಂದು ವಾಣಿಜ್ಯ ಕಲೆಯಲ್ಲಿ ಪ್ರಚಲಿತವಿರುವ ಸಂವೇದನೆಗಳಿಂದಲೇ ಶರಾಕುವನ್ನು ಅರ್ಥ ಮಾಡಿಸುವ ಪ್ರಯತ್ನ ಇಲ್ಲಿದೆ.

ಮೂರನೆಯ ವಿಭಾಗದಲ್ಲಿ ಇಂದಿನ ಜಪಾನಿನ ಹೆಸರಾಂತ ಸಮಕಾಲೀನ ಕಲಾವಿದರು ತಮ್ಮದೇ ಆದ ರೀತಿಯಲ್ಲಿ ತಮ್ಮ ಕೃತಿಗಳ ಮೂಲಕ 'ಶರಾಕುವಿಗೆ ಶ್ರದ್ಧಾಂಜಲಿ' ಅರ್ಪಿಸಿದ್ದಾರೆ. ಇನ್‌ಸ್ಟಲೇಶನ್, ಶಿಲ್ಪ, ಛಾಯಾಚಿತ್ರ, ವರ್ಣಚಿತ್ರ ಈ ಹಲವಾರು ವಿಧಾನಗಳಲ್ಲಿ ಕಲಾವಿದರು ಇಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಸಂಕೀರ್ಣತೆಯಿಂದ ದೂರವಾದ ಸರಳತೆಯ ಮೂಲಕವೇ ಪರಿಣಾಮಕಾರಿಯಾದ ಅಭಿವ್ಯಕ್ತಿ ಸಾಧ್ಯ ಎಂಬ ಅಂಶವನ್ನು ಈ ಪ್ರದರ್ಶನ ಮುಂದಿಡುತ್ತದೆ. ಒಟ್ಟಾರೆಯಾಗಿ ಈ ಪ್ರದರ್ಶನ ಮೂಲಕ ಜಪಾನಿಯರು ತಮ್ಮ ಎರಡು ಶತಮಾನಗಳ ಹಿಂದಿನ ಕಲಾವಿದನೊಬ್ಬನನ್ನು ಸಮಕಾಲೀನವಾಗಿಯೂ ಪ್ರಸ್ತುತವಾಗಿಸುವ ಪ್ರಯತ್ನ ಮಾಡಿದ್ದಾರೆ. ನಮ್ಮ ದೇಶದಲ್ಲಿಯೂ ಹೀಗೆಯೇ ಆಗಿ ಹೋದ ಪ್ರಸಿದ್ಧ ಕಲಾವಿದರಿಗೆ ನಾವು ಇದೇ ಬಗೆಯ ಗೌರವವನ್ನು ನೀಡಿದ್ದೇವೆಯೇ ಎಂಬ ಪ್ರಶ್ನೆಯನ್ನು ನಮಗೆ ನಾವೇ ಹಾಕಿಕೊಳ್ಳಲು ಈ ಪ್ರದರ್ಶನ ಆಸ್ಪದ ನೀಡುತ್ತದೆ.

## ೨೩. ಸಂಸ್ಕೃತಿ ಇಲಾಖೆಯ ಹೊಸ ಹೆಜ್ಜೆ[೨೩]

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಬೆಂಗಳೂರಿನ ಕನ್ನಡ ಭವನದ ಆವರಣದಲ್ಲಿ ಕರ್ನಾಟಕ ಲಲಿತಕಲಾ ಮೇಳ ಏರ್ಪಡಿಸಿತ್ತು. ಈ ಸಂದರ್ಭದಲ್ಲಿ ಚಿತ್ರ ಹಾಗೂ ಶಿಲ್ಪ ಶಿಬಿರ, ಕಲಾ ಪ್ರದರ್ಶನ, ವಿಚಾರ ಸಂಕಿರಣ ಹಾಗೂ ಉಪನ್ಯಾಸಗಳು ನಡೆದವು. ಆದರೆ ಭಾಗವಹಿಸಿದ ಹಲವು ಹಿರಿಯ ಕಲಾವಿದರು ಗುರುತಿಸಿದಂತೆ ಇಲ್ಲಿ ಮೇಳದ ವಾತಾವರಣವಿರಲಿಲ್ಲ(ಈ ಹಿಂದೆ ಬೆಂಗಳೂರಿನಲ್ಲಿ ಕಲಾವಿದರೇ ಸ್ವತಃ ನಡೆಸಿದ ಕರ್ನಾಟಕ ಕಲಾ ಮೇಳಗಳು ನಿಜವಾದ ಅರ್ಥದಲ್ಲಿ ಮೇಳಗಳೇ ಆಗಿದ್ದವು ಎಂಬುದನ್ನು ಇಲ್ಲಿ ನಾವು ನೆನಪಿಸಿಕೊಳ್ಳಬಹುದು). ಈ ಅಭೂತ ಪೂರ್ವ ಕಾರ್ಯಕ್ರಮದ ಸಂದರ್ಭದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯು ನಡೆಸಿಕೊಟ್ಟ ಕಲಾ ಪ್ರದರ್ಶನವು ಬಹುತೇಕ ಉತ್ತಮ ನೆಲೆಯಲ್ಲಿತ್ತಾದರೂ ರಾಜ್ಯದ ಇಂದಿನ ನಿಜವಾದ ಸಮಕಾಲೀನ ಕಲೆಯ ನಾಡಿ ಮಿಡಿತವನ್ನು ಹಿಡಿದಿಡುವಷ್ಟು ಪ್ರಭಾವಶಾಲಿಯಾಗಿರಲಿಲ್ಲ. ಹೀಗೆ ಹಲವು ನೆಲೆಗಳಲ್ಲಿ ನೀರಸವಾದ ಈ ಕಾರ್ಯಕ್ರಮ ಅಪಾರ ವೆಚ್ಚದ ನಡುವೆಯೂ ಅಪೇಕ್ಷಿತ ಮಟ್ಟವನ್ನು ಮುಟ್ಟಲಿಲ್ಲ. ಅದೇನೇ ಇರಲಿ. ಮುಂಬರುವ ವರ್ಷಗಳಲ್ಲಿ ಈ ಇಲಾಖೆಯು ಇನ್ನಷ್ಟು ಯೋಗ್ಯ ರೀತಿಯಲ್ಲಿ ಈ ಕಾರ್ಯಕ್ರಮವನ್ನು ನಿರಂತರವಾಗಿ ನಡೆಸಿಕೊಂಡು ಬರಬೇಕೆಂಬ ಅಪೇಕ್ಷೆ ಎಲ್ಲ ಕಲಾವಿದರದ್ದು ಆಗಿದೆ ಎಂಬುದನ್ನು ಲೇಖಕರಾದ ಕೃ.ಸೆ.ಯವರು ಈ ಲೇಖನದ ಮೂಲಕ ವ್ಯಕ್ತಪಡಿಸಿದ್ದಾರೆ.

## ೨೪. ಗ್ರಾಮ್ಯ ಸಂವೇದನೆಗಳು[೨೪]

ಬರೋಡಾ ಕಾಲೇಜಿನಲ್ಲಿ ಉನ್ನತ ಶಿಕ್ಷಣ ಪಡೆದು ಪ್ರಸ್ತುತ ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಾಲೇಜಿನಲ್ಲಿ ಉಪನ್ಯಾಸಕರಾಗಿರುವ ಅಜಿತ್ ದುಬೆ ಅವರ ಕೃತಿಗಳ ಪ್ರದರ್ಶನವು ಬೆಂಗಳೂರಿನ ಸುಮುಖ ಗ್ಯಾಲರಿಯಲ್ಲಿ ನಡೆಯಿತು. ಇತ್ತೀಚಿನ ವರ್ಷಗಳಲ್ಲಿ ಇವರು ಜನಪದದಿಂದ ಪ್ರೇರಿತವಾದ ತಮ್ಮದೇ ಆದ ಒಂದು ಶೈಲಿಯಿಂದ ಕೃತಿಗಳನ್ನು ರಚಿಸುತ್ತಿದ್ದಾರೆ. ಈ ಪ್ರದರ್ಶನದಲ್ಲಿನ ಒಂದು ವೈಶಿಷ್ಟ್ಯವೆಂದರೆ ಇಲ್ಲಿ ಗ್ರಾಫಿಕ್ ವರ್ಣ ಚಿತ್ರ ಹಾಗೂ ರೇಖಾ ಚಿತ್ರ ಈ ಮೂರು ಮಾಧ್ಯಮಗಳಲ್ಲಿನ ಕೃತಿಗಳಿದ್ದರೂ ಎಲ್ಲ ಮಾಧ್ಯಮಗಳಲ್ಲೂ ತಮ್ಮ ರೂಪದ ಏಕಸೂತ್ರತೆಯನ್ನು ಕಾಯ್ದುಕೊಂಡಿರುವುದು. ಅಜಿತ್ ದುಬೆ ಅವರದ್ದು ಗ್ರಾಮ್ಯ ಸಂವೇದನೆಗಳನ್ನು ಸಮಕಾಲೀನವಾಗಿಸುವ ಆಶಯ. ಈ ವಸ್ತುವಿಗೆ ಪೂರಕವಾಗಿ ಸಮರ್ಥವಾದ ರೂಪವೊಂದನ್ನು ಆರಿಸಿಕೊಂಡಿದ್ದಾರೆ. ಹೀಗೆ ಮಾಡುವಾಗ ಕೆಲವೆಡೆ ಅಜ್ಜಿಯ ಕಥೆಗಳಂತೆ ಫ್ಯಾಂಟಸಿಯ ಅಂಶಗಳು

---

೨೩. ಸಂಸ್ಕೃತಿ ಇಲಾಖೆಯ ಹೊಸ ಹೆಜ್ಜೆ, ಕರ್ನಾಟಕ ದರ್ಶನ,ಪ್ರಜಾವಾಣಿ ೧೧, ಮಾರ್ಚ್, ೨೦೦೦

೨೪. ಗ್ರಾಮ್ಯ ಸಂವೇದನೆಗಳು, ಅದೇ



ಬರುತ್ತವಾದರೂ ಅದು ಉಳಿದೆಡೆಗಳಲ್ಲಿ ಆಗುವಂತೆ ಸಫಿಸ್ಟಿಕೇಟೆಡ್ ಆದುದಲ್ಲ. ಅದು ಕೂಡಾ ಒರಟಾದ ಗ್ರಾಮ್ಯ ನೆಲೆಯಲ್ಲಿನ ಫ್ಯಾಂಟಸಿಯೇ ಆಗಿದೆ. ವಿಶೇಷತಃ ಇವರ ಗ್ರಾಫಿಕ್ ಕೃತಿಗಳಲ್ಲಿ ಎಂದಿನಂತೆ ರೂಪವು ಒರಟಾಗಿದ್ದರೂ ತಾಂತ್ರಿಕವಾಗಿ ಉತ್ತಮ ನಿರ್ವಹಣೆಯಿದೆ. ತಂತ್ರದ ಸೂಕ್ಷ್ಮಗಳನ್ನು ಯಶಸ್ವಿಯಾಗಿ ದುಡಿಸಿಕೊಂಡಿರುವುದು ಇಲ್ಲಿನ ವಿಶೇಷ. ಹೀಗೆ ವಿಶಿಷ್ಟವಾದ ಶೈಲೀಕೃತ ರೂಪಗಳ ಈ ಕೃತಿಗಳು ಉತ್ತಮ ನೆಲೆಯಲ್ಲಿದ್ದು ಪರಿಣಾಮಕಾರಿಯಾಗಿವೆ. ಇಲ್ಲಿನ ಮುಖ್ಯವಾದ ಒಂದು ಸಂಗತಿಯೆಂದರೆ ಈ ನೆಲದ ರೂಪಗಳಲ್ಲಿಯೇ ಹೊಸತನದ ಹುಡುಕಾಟ ನಡೆಸಿವೆ ಎಂಬುದನ್ನು ಲೇಖಕರಾದ ಕೃ.ಸೆ.ಯವರು ಈ ಲೇಖನದ ಮೂಲಕ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**.೨೫. ಆಕೃತಿಗಳಿಗಿದೆ ಅಂತರಾಳ, ವಿಕೃತಿಯೇ ಇಲ್ಲಿ ಬಂಡವಾಳ**[೨೫]

ಮೈಸೂರಿನ ಕಲಾ ಶಾಲೆಯೊಂದರಲ್ಲಿ ಕಲಾಭ್ಯಾಸ ನಡೆಸಿರುವ ಹುಸೇನಿ ಅವರು ತಮ್ಮ ಈಚಿನ ಹೈ–ರಿಲೀಫ್ ಶಿಲ್ಪಗಳನ್ನು ಬೆಂಗಳೂರಿನ ಮಣಿಪಾಲ್ ಸೆಂಟರ್‌ನಲ್ಲಿರುವ ಸೆಂಟ್ರಲ್ ಪಾರ್ಕ್ ಹೋಟೆಲಿನ ಕಾರಿಡಾರ್ ಆಫ್ ಕಲರ್ಸ್‌ನಲ್ಲಿ ಪ್ರದರ್ಶಿಸಿದ್ದಾರೆ. ಈ ಕುರಿತಂತೆ ಕೃ.ಸೆ.ಯವರು ಪ್ರಜಾವಾಣಿಯ ೧೮/೩/೨೦೦೦ರ ತಮ್ಮ ಲೇಖನದಲ್ಲಿ ಹುಸೇನಿಯವರ ಕಲಾ ವೈಶಿಷ್ಟ್ಯತೆಯನ್ನು ಈ ಮುಂದಿನಂತೆ ದಾಖಲಿಸಿದ್ದಾರೆ. ಕಾಗದವನ್ನು ಲೋಹದ ಫಲಕದಂತೆ ಉಬ್ಬು–ತಗ್ಗುಗಳಾಗುವಂತೆ ಹಚ್ಚಿ ಹೈ–ರಿಲೀಫ್ ಶಿಲ್ಪಗಳನ್ನಾಗಿಸುವ ವಿಧಾನ ಇವರದು. ಇವರು ಸೌಮ್ಯ ನೆಲೆಯ ವಿಕೃತಿಗಿಂತಲೂ ವಿಪರೀತದ ವಿಕೃತಿಯೆಡೆಗೆ ಸಾಗಿದ್ದಾರೆ. ಸಾಮಾನ್ಯ ಭಾವಕ್ಕಿಂತಲೂ ಅತಿರೇಕದ ಭಾವವನ್ನು ಹೊರಸೂಸುವ ಈ ವಿಧಾನವು ನಮ್ಮ ಹಿಂದಿನ ತಲೆಮಾರಿನ ಶಿಲ್ಪಿ ಅಮರನಾಥ ಸೆಹಗಾಲರ ಕೃತಿಗಳ ನೆನಪು ತರುತ್ತದೆ. ಇಲ್ಲಿನ ವಿಕೃತಿಯಲ್ಲಿ ಮುಖದಿಂದ ಹಿಡಿದು ಅದರೊಳಗಿನ ಕಣ್ಣು, ಬಾಯಿ, ಮೂಗುಗಳೆಲ್ಲವನ್ನೂ ಅತಿಶಯಿಸುವ ಮೂಲಕ ಅದು ವಿಪರೀತದ ಹಂತದಲ್ಲಿದೆ. ಅದರೆ ಈ ವೈಪರೀತ್ಯದ ಅತಿಯಾದ ಬಳಕೆಯಿಂದಾಗಿ ಹಲವೊಮ್ಮೆ ಕಲೆಯ ಸೂಕ್ಷ್ಮಗಳನ್ನು ಅದು ಕೊಂದುಬಿಡುತ್ತದೆ. ಹುಸೇನಿ ಅವರ ಕೃತಿಗಳಲ್ಲೂ ಅದರ ಸೂಚನೆಯಿದೆ. ಹೀಗೆ ಆಕ್ರಮಣಕಾರಿ ನೆಲೆಯಲ್ಲಿ ನೋಡುಗರ ಮನವನ್ನು ಘಾಸಿಗೊಳಿಸುವ ಮೂಲಕವೇ ಅವರನ್ನು ತಟ್ಟುವ ಆಶಯ ಇಲ್ಲಿದೆ.

ಈ ಪ್ರದರ್ಶನದಲ್ಲಿ ಮುಖ್ಯವಾಗಿ ಎರಡು ನೆಲೆಯ ಕೃತಿಗಳಿದ್ದು, ಅದರಲ್ಲಿ ಮೊದಲನೆಯದು ಸಂಯೋಜನೆಗಳಾದರೆ, ಎರಡನೆಯದು ಭಾವಶಿಲ್ಪಗಳದ್ದು. ಭಾವಶಿಲ್ಪಗಳಲ್ಲಿ ಕಣ್ಣು, ಮೂಗು,

---

೨೫. ಆಕೃತಿಗಳಿಗಿದೆ ಅಂತರಾಳ, ವಿಕೃತಿಯೇ ಇಲ್ಲಿ ಬಂಡವಾಳ, ಕರ್ನಾಟಕ ದರ್ಶನ, ಪ್ರಜಾವಾಣಿ ೧೮, ಮಾರ್ಚ್, ೨೦೦೦

ಬಾಯಿಗಳಲ್ಲಿ ವ್ಯತ್ಯಾಸಗೊಳಿಸುವ ಮೂಲಕವೇ ವೈವಿಧ್ಯ ತಂದಿದ್ದಾರೆ. ಆದರೆ ಈ ಎರಡೂ ಪ್ರಕರಣಗಳಲ್ಲಿ ಕೇಂದ್ರದಲ್ಲಿರುವುದು ಮಾನವನೇ. ಮಾನವನ ವೈಯಕ್ತಿಕ ಸಮಸ್ಯೆಗಳನ್ನು ಕುರಿತ ಇವುಗಳಲ್ಲಿ ಮುಖ್ಯವಾಗಿ ಅವನ ಅಪೇಕ್ಷೆಗಳ ಗುರಿ ಮುಟ್ಟಿ ಅದನ್ನು ತನ್ನದಾಗಿಸಿಕೊಳ್ಳುವ ಆಶಯವಿದೆ. ಇಲ್ಲಿ ಆ ಗುರಿಗೆ ಸಂಕೇತವಾಗಿ ಸೇಬನ್ನು ಬಳಸಿಕೊಂಡಿದ್ದಾರೆ. ಕೃತಿಯ ಮುಖ್ಯ ಸಂಕೇತವಾದ ಸೇಬು ಕಾಮದಿಂದ ಹಿಡಿದು ಬದುಕಿನ ಹಲವು ಗುರಿಗಳ ಸಂಕೇತವಾಗಿ ಕೆಲಸ ಮಾಡುತ್ತದಾದರೂ ಇಲ್ಲಿ ಕಂಡುಬರುವುದು ದುರಾಸೆಯ, ಲೋಭದ ನೆಲೆಯಿದು.

ಹುಸೇನಿ ಅವರ ಈ ಕೃತಿಗಳಲ್ಲಿ ರೂಪದ ದೃಷ್ಟಿಯಿಂದ ಸ್ವಲ್ಪ ಕುತೂಹಲದ ಆವರಣವಿದೆ ಯಾದರೂ ಜೀವನದನುಭವದ ಕೊರತೆಯಿಂದಾಗಿ ಅದು ಆಳಕ್ಕೆ ಇಳಿಯಲು ಬಿಡುವುದಿಲ್ಲ. ಹಾಗಾಗಿ ಇಲ್ಲಿರುವುದು ಬರೀ ಬೌದ್ಧಿಕ ನೆಲೆಯ ಅಭಿವ್ಯಕ್ತಿ. ಜೊತೆಗೆ ರೂಪದಲ್ಲಿ ಅಷ್ಟಾಗಿ ವೈವಿಧ್ಯವಿಲ್ಲದ್ದರಿಂದ ಕೃತಿಗಳಲ್ಲಿ ಏಕತಾನತೆಯ ಅನುಭವವೂ ಆಗುತ್ತದೆ. ಹಾಗಿದ್ದರೂ ಈ ಯುವ ಕಲಾವಿದನ ಕೃತಿಗಳು ಭರವಸೆಯ ಹಾದಿಯಲ್ಲಿದ್ದು ಇಲ್ಲಿ ಹೆಚ್ಚಿನದಕ್ಕೆ ಹಾತೊರೆಯುವ ಮನಸ್ಸಿದೆ. ಈ ಮನಸ್ಸೇ ಕಲಾವಿದನನ್ನು ಮುಂದಕ್ಕೆ ಕೊಂಡೊಯ್ಯುವ ಸಾಧ್ಯತೆಯಿದೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಈಚೆಗೆ ಬೆಂಗಳೂರಿನಲ್ಲಿ ನಡೆಸಿದ ಕರ್ನಾಟಕ ಲಲಿತಕಲಾ ಮೇಳದ ಸಂದರ್ಭದಲ್ಲಿ ಎರಡು ಕಲಾ ಶಿಬಿರಗಳು ಒಂದು ವಾರದ ಕಾಲ ನಡೆದವು. ಚಿತ್ರ ಹಾಗೂ ಶಿಲ್ಪ ವಿಭಾಗಗಳಲ್ಲಿ ಪ್ರತ್ಯೇಕವಾಗಿ ನಡೆದ ಈ ಶಿಬಿರಗಳಲ್ಲಿ ರಾಜ್ಯದ ಕೆಲವು ಹಿರಿಯ ಕಲಾವಿದರೂ ಸೇರಿದಂತೆ ಕೆಲವು ಕಿರಿಯ ಕಲಾವಿದರು ಭಾಗವಹಿಸಿದ್ದರು. ವಿವಿಧೆಡೆಗಳಿಂದ ಬಂದಿದ್ದ ಈ ಕಲಾವಿದರು ವಿವಿಧ ತಲೆಮಾರುಗಳಿಗಷ್ಟೇ ಅಲ್ಲ, ವಿವಿಧ ಪ್ರಕಾರಗಳಿಗೆ ಸೇರಿದವರೆನ್ನುವುದು ಶ್ಲಾಘನೀಯ ಅಂಶ.

ಈ ಅಪರೂಪದ ಶಿಬಿರದಲ್ಲಿ ಪಾಲ್ಗೊಂಡಿದ್ದ ಜೆ.ಎಂ.ಎಸ್.ಮಣಿಯವರು ಇಲ್ಲಿ ತಮ್ಮ ಎಂದಿನ ಶೈಲಿಯಲ್ಲಿಯೇ ಫಿಗರೆಟಿವ್ ಚಿತ್ರಗಳ ಒಂದು ಕೃತಿಯನ್ನು ರಚಿಸಿದ್ದರೆ, ಇನ್ನೊಂದನ್ನು ತಮ್ಮ ದಾರಿಯಿಂದ ಭಿನ್ನವಾಗಿ ಅಮೂರ್ತದನ್ನಾಗಿಸಿದ್ದಾರೆ. ಅಧಿಕವಾದಂತಹ ಮೈವಳಿಕೆ, ವಿಶಿಷ್ಟವಾದ ಕುಂಚದ ಬೀಸುಗಳ ಮೂಲಕ ರಚಿತವಾದ ಈ ಕೃತಿಯೂ ಕುತೂಹಲದ ನಡುವೆಯೂ ಸಂಯೋಜನೆಯ ಸಮತೂಕದಲ್ಲಿ ಸ್ವಲ್ಪ ಕಿರಿಕಿರಿ ಮಾಡುವಂತಿದೆ. ಈ ಬಗೆಯ ಬದಲಾವಣೆಯನ್ನು ಜಮಖಂಡಿಯ ವಿಜಯ ಸಿಂಧೂರ್ ಅವರೂ ತೋರಿಸಿದ್ದಾರೆ. ಅವರು ಕೂಡಾ ಸಾಮಾನ್ಯವಾಗಿ ಫಿಗರೇಟಿವ್ ಕೃತಿಗಳನ್ನು ರಚಿಸುವವರೇ. ಅವರು ಇಲ್ಲಿನ ಕ್ಯಾನ್ವಾಸಿನ ವಿವಿಧ ಕಡೆಗಳಿಗೆ ತೀವ್ರವಾಗಿ ಚಲಿಸುವಂತಹ ರೇಖಾತ್ಮಕ ಆಕೃತಿಗಳನ್ನು ಬಳಸಿಕೊಂಡು ಕುತೂಹಲಕರ ಸಂಯೋಜನೆಯನ್ನು ರಚಿಸಿದ್ದಾರೆ. ಆದರೆ ಇದರೊಳಗೆ ಅವರ ಎಂದಿನ ರೊಮ್ಯಾಂಟಿಕ್ ಸೆಳಕುಗಳು ಸೇರಿಕೊಂಡಿವೆ.

ಅದೇ ರೀತಿ ಕಲಾವಿದ ರಮೇಶ ರಾವ್ ಅವರದ್ದು ಎಂದಿನಂತೆ ಕೌಶಲ್ಯ ಹಾಗೂ ಕಲ್ಪನೆಗಳ ಸಂಗಮ. ಗ್ರಾಮೀಣ ಮಹಿಳೆಯರ ದೈನಂದಿನ ಬದುಕಿನ ಅವರ ಎಂದಿನ ವಸ್ತುವನ್ನೇ ಇಲ್ಲಿ ಮುಂದುವರೆಸಿದ್ದಾರೆ. ಹಡಪದ್ ಅವರು ಇತ್ತೀಚಿನ ಕಾರ್ಗಿಲ್ ಯುದ್ಧದ ನೆನಪಿನಲ್ಲಿ ಯುದ್ಧ ಹಾಗೂ ಶಾಂತಿಗಳನ್ನು ತಮ್ಮ ವಸ್ತುವಾಗಿಸಿಕೊಂಡಿದ್ದಾರೆ. ಶಿವರಾತ್ರಿಯ ಸಂದರ್ಭದಲ್ಲಿ ಈ ಶಿಬಿರ ನಡೆದಿದ್ದು ಹಿರೇಗೌಡರ್ ಅವರು ಅದನ್ನೆ ತಮ್ಮ ಕೃತಿಯ ವಸ್ತುವಾಗಿಸಿಕೊಂಡಿದ್ದಾರೆ. ಇಲ್ಲಿರುವುದು ಅವರ ಎಂದಿನ ಡಿಸೈನಿನಂತಹ ಅಲಂಕರಣದ ಆಶಯಗಳೇ. ಎಸ್.ಜಿ.ವಾಸುದೇವ್ ಅವರು ದಶಕಗಳಿಂದ ಪಾಲಿಸಿಕೊಂಡು ಬಂದಿರುವ ತಮ್ಮ ಶೈಲಿಯಲ್ಲಿನ ಅಮೂರ್ತ ರೂಪವನ್ನೇ ಮುಂದುವರೆಸಿದ್ದಾರೆ. ಉಳಿದಂತೆ ರಾಮದಾಸ್ ಅಡ್ಯಂತರಾಯ, ರೇಣುಕಾ ಮಾರ್ಕಂಡೆ, ನಿಜಲಿಂಗಪ್ಪ ಹಾಲವಿ ಅವರುಗಳೂ ತಮ್ಮ ಎಂದಿನ ರೂಪಗಳಲ್ಲೇ ಮುಂದುವರೆದಿದ್ದಾರೆ. ಹೀಗೆ ಇಲ್ಲಿರುವುದು ಉತ್ತಮತೆಯ ನಡುವೆಯೂ ಯಥಾಸ್ಥಿತಿವಾದೀ ನಿಲುವುಗಳು.

ಚಿತ್ರ ಶಿಬಿರಕ್ಕೆ ಹೋಲಿಸಿದರೆ ಸಾಕಷ್ಟು ಕುತೂಹಲಕಾರಿಯಾದ ಕೃತಿಗಳು ರಚನೆಯಾದುದು ಶಿಲ್ಪ ವಿಭಾಗದಲ್ಲಿಯೇ. ವಿಶೇಷತಃ ಶಿಲೆ, ಮರ ಹಾಗೂ ಸರಪಳಿಗಳ ಮೂಲಕ ರಚಿಸಿದ ಶ್ರೀನಿವಾಸ ಪ್ರಸಾದ್ ಅವರ ಶಿಲ್ಪವು ನಮ್ಮನ್ನು ಬೆರಗುಗೊಳಿಸುವಂತಿದೆ. ಅಣಬೆ, ಎತ್ತಿನ ಕೊಂಬು, ಕೊಡ ಇತ್ಯಾದಿ ಆಕೃತಿಗಳ ಮೂಲಕ ಸಾಂಕೇತಿಕವಾಗಿ ಅನುಭವಗಳನ್ನು ಮುಂದಿಡುವ ಇಲ್ಲಿನ ಪರಿ ವಿಶಿಷ್ಟವಾದುದು. ಇದರಂತೆಯೇ ಮೈಸೂರಿನ ವಿಜಯರಾವ್ ಅವರ ಶಿಲ್ಪವು ಪ್ರಭಾವಗಳ ನಡುವೆಯೂ ಉತ್ತಮ ನೆಲೆಯಲ್ಲಿ ನಿಲ್ಲುತ್ತದೆ. ಸ್ತ್ರೀ ಪುರುಷರ ಲೈಂಗಿಕಾಂಗಗಳನ್ನು ಸಾಂಕೇತಿಕವಾಗಿ ರೂಪಿಸಿರುವ ಈ ಶಿಲ್ಪವೂ ಹೊಸ ಅನುಭವ ನೀಡುವಂತಿದೆ. ಉಳಿದಂತೆ ಭಾಸ್ಕರರಾವ್, ಪ್ರದೀಪ್ ಕುಮಾರ್, ನಾಗಪ್ಪ ಪ್ರಧಾನಿ, ದ್ಯಾಮೇಶ್ವರ ಮಠ ಅವರ ಕೃತಿಗಳು ಎಂದಿನ ಕುತೂಹಲವನ್ನೇ ಉಳಿಸಿಕೊಂಡಿವೆ. ಇಲ್ಲಿ ಕೆಲವು ಸಾಂಪ್ರದಾಯಿಕ ಶಿಲ್ಪಿಗಳೂ ಭಾಗವಹಿಸಿ ತಮ್ಮ ಕೃತಿಗಳನ್ನು ರಚಿಸಿದರು. ಹೀಗೆ ಒಟ್ಟಾರೆಯಾಗಿ ಈ ಶಿಬಿರದಲ್ಲಿ ಬಹುತೇಕ ಉತ್ತಮ ನೆಲೆಯ ಕೃತಿಗಳೇ ರಚನೆಯಾಗುವ ಮೂಲಕ ಇದೊಂದು ಗಮನಾರ್ಹ ಶಿಬಿರವೆನಿಸಿತು ಎನ್ನುತ್ತಾರೆ.

**೨೬. ಇಲ್ಲಿ ಭಾರವೂ ಹಗುರಗೊಳ್ಳುತ್ತದೆ, ಭಾವವು ಕೂಡಾ**[೨೬]

ಬೆಂಗಳೂರಿನ ಸಫೀನಾ ಪ್ಲಾಜಾದಲ್ಲಿರುವ ಕ್ರಿಮ್‌ಸನ್ ಗ್ಯಾಲರಿಯಲ್ಲಿ ನಡೆದ ಕಲಾವಿದ ಶೇಖರ್‌ಕರ್ ಅವರ ಕಲಾ ಕೃತಿಗಳ ಪ್ರದರ್ಶನ ಕುರಿತಂತೆ ಕೃ.ಸೆ.ಯವರು ಪ್ರಜಾವಾಣಿ ದಿನಪತ್ರಿಕೆಯ ಕರ್ನಾಟಕ ದರ್ಶನದಲ್ಲಿ ೧.೪.೨೦೦೦ರ ಲೇಖನ ರಚಿಸಿದ್ದು, ಈ ಕೆಳಗಿನ ಅಂಶಗಳ ಕುರಿತು

೨೬. ಇಲ್ಲಿ ಭಾರವೂ ಹಗುರಗೊಳ್ಳುತ್ತದೆ, ಭಾವವು ಕೂಡಾ.., ಕರ್ನಾಟಕ ದರ್ಶನ, ಪ್ರಜಾವಾಣಿ ೧, ಏಪ್ರಿಲ್, ೨೦೦೦

ಚರ್ಚಿಸಿದ್ದಾರೆ. ತಮ್ಮದೇ ಆದ ವಿಶೇಷ ಶೈಲಿಯನ್ನು ಶಾಶ್ವತವಾಗಿ ಸ್ಥಾಪಿಸುವ ಒತ್ತಾಸೆಯನ್ನು ಶೇಖರ್‌ಕರ್ ಅವರು ಕ್ಯಾನ್ವಾಸ್‌ನ ಮೇಲೆ ಅಕ್ರಲಿಕ್ ವರ್ಣಗಳನ್ನು ಜಲವರ್ಣದಂತೆ ಸ್ವಚ್ಛಂದವಾಗಿ ವಿಶೇಷವಾಗಿ ರಚಿಸಿದ್ದಾರೆ. ಬಹುತೇಕ ಮಂದವೆನಿಸುವಂತಹ ವರ್ಣಗಳಲ್ಲಿ ರಚಿತವಾದ ಇಲ್ಲಿನ ರಚನೆಗಳ ಹಿನ್ನೆಲೆ ಮತ್ತು ಮುನ್ನೆಲೆ ಒಂದೇ ಆಗಿರುವಂತಿವೆ. ಕಪ್ಪು ರೇಖೆಗಳಲ್ಲಿ ಅಪೇಕ್ಷಿತ ಆಕೃತಿಗಳನ್ನು ರೂಪಿಸಿ ಮತ್ತೆ ಅಲ್ಲಲ್ಲಿ ಬಣ್ಣ ತುಂಬಿರುವ ಇವರ ಚಿತ್ರ ರಚನಾ ವಿಧಾನ ಕುತೂಹಲಕಾರಿಯಾದುದು. ಹೀಗೆ ಒಟ್ಟಾರೆಯಾಗಿ ಇವು ವಸ್ತು ನೆಪ ಮಾತ್ರವಾಗಿ ಸಂಯೋಜನೆಯನ್ನೇ ಮೆರೆಸುವ ಆಶಯವುಳ್ಳವು. ಇಲ್ಲಿನ ಆಕೃತಿಗಳು ಹಗುರವಾಗಿ ತೇಲಿದಂತಹ ಅನುಭವ ನೀಡುತ್ತವೆ. ಹಾಗಿದ್ದರೂ ವಸ್ತು ಹಾಗೂ ಶೈಲಿಗಳೆರಡರಲ್ಲೂ ಇಲ್ಲಿ ಏಕತಾನತೆಯಿದೆ. ಕಣ್ಣುಗುಡ್ಡೆಗಳಿಲ್ಲದಿದ್ದರು ನೋಡುಗರನ್ನು ನೇರವಾಗಿ ದಿಟ್ಟಿಸುವಂತಿರುವ ಇಲ್ಲಿನ ಹೆಣ್ಣು, ಗಂಡು ಆಕೃತಿಗಳ ನಿರ್ವಹಣೆಯು ಸಮಕಾಲೀನವಾಗಿ ಸಲ್ಲುವಂತಿವೆಯಾದರೂ ಇವುಗಳ ಅಂತರಾಳದಲ್ಲಿ ಅಡಗಿರುವುದು ರೊಮ್ಯಾಂಟಿಕ್ ಎನ್ನುವಂತಿವೆ. ಇಲ್ಲಿನ ನಿರ್ವಹಣೆ ಬೇರೆಯಾದರೂ ವಸ್ತು ಹಾಗೂ ಸಂಯೋಜನಾ ವಿಧಾನಗಳು ಆಕಾಡೆಮಿಕ್‌ಮನಸ್ಸಿನದೇ ಆಗಿದೆ. ಶೇಖರ್‌ಕರ್ ಅವರ ಮುದಗೊಳಿಸುವ ಈ ಕೃತಿಗಳಲ್ಲಿನ ವಸ್ತುವಿನಲ್ಲಿ ಅಷ್ಟಾಗಿ ವೈವಿಧ್ಯವಿಲ್ಲ. ಕೃತಿಗಳ ಸಂಯೋಜನೆಯಲ್ಲಿ ಸಂಕೀರ್ಣತೆ ಇಲ್ಲ. ಹೀಗೆ ಏಕತಾನತೆಯನ್ನು ಹೊರತುಪಡಿಸಿ ನೋಡಿದರೆ ಶೇಖರ್‌ಕರ್ ಅವರ ಈ ಕೃತಿಗಳು ಉತ್ತಮ ನೆಲೆಯಲ್ಲಿದ್ದು ನೋಡುಗರ ಮನಸ್ಸನ್ನು ಹಗುರಗೊಳಿಸುವಂತಿವೆ ಎನ್ನುತ್ತಾರೆ ಕೃ.ಸೆಯವರು.

**೨೭. ತೃಪ್ತಿಗೊಳ್ಳದ ವೈವಿಧ್ಯ**[೨೭]

ಬೆಂಗಳೂರಿನ ಕನ್ನಡ ಭವನದ ಚಿತ್ರ ಗ್ಯಾಲರಿಯಲ್ಲಿ ನಡೆದ ಕರ್ನಾಟಕ ಲಲಿತಕಲಾ ಅಕಾಡೆಮಿಯ ವಾರ್ಷಿಕ ಕಲಾ ಪ್ರದರ್ಶನ ಕುರಿತಂತೆ ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದು, ಆ ವಿವರ ಈ ಮುಂದಿನಂತಿದೆ. ಕೇಂದ್ರ ಲಲಿತಕಲಾ ಅಕಾಡೆಮಿಯ ಸಹಯೋಗದೊಂದಿಗೆ ನಡೆದ ರಾಜ್ಯಮಟ್ಟದ ಈ ಪ್ರದರ್ಶನದಲ್ಲಿ ಬಹುತೇಕ ಅಪರಿಚಿತರಾದ ಯುವ ಕಲಾವಿದರು ಭಾಗವಹಿಸಿದ್ದರು. ಅವರಲ್ಲಿ ಸಿ.ಜಿ.ಕಮ್ಮಾರ, ನಾಗರಾಜ ಎಸ್.ಕೆ, ಅಶೋಕ್, ದಿಲೀಪ್ ಕುಮಾರಕಾಳೆ, ರಘುರಾಮ ಆಚಾರ್ಯ, ಪಿ.ಎನ್.ಶ್ರೀಧರ್, ಶಶಿಕಾಂತ ಮಶಾಳ್ಕರ್, ಬಿ.ಒ.ಶೈಲೇಶ್, ಸಂತೋಷ್ ಪಾಟೀಲ್, ವಿ.ಜಿ.ವೇಣುಗೋಪಾಲ್, ಶೇಷಿರಾವ್ ಬಿರಾದಾರ್, ಕೆ.ಎಂ.ಲೋಕಯ್ಯ ಮುಖ್ಯವಾಗಿದ್ದು, ಅವರ ಕೃತಿಗಳು ಉತ್ತಮ ನೆಲೆಯಲ್ಲಿವೆ. ರಮೇಶ್ ತೇರದಾಳ್ ಮತ್ತು ಮೊದಲಾದವರ ಕಲಾಕೃತಿಗಳು ಸಾಕಷ್ಟು ಪರಿಣಾಮಕಾರಿಯಾಗಿ ಮೂಡಿಬಂದಿದ್ದು, ಪ್ರೇಕ್ಷಕರಿಗೆ ಮುದ ನೀಡುವಲ್ಲಿ ಯಶಸ್ವಿಯಾಗಿವೆ.

---

೨೭. ತೃಪ್ತಿಗೊಳ್ಳದ ವೈವಿಧ್ಯ, ಕರ್ನಾಟಕ ದರ್ಶನ, ಪ್ರಜಾವಾಣಿ ೧, ಏಪ್ರಿಲ್, ೨೦೦೦

### ೨೮. ಸರಳತೆ ನಡುವೆಯೂ ಅಲಂಕರಣ[೨೮]

ಕರ್ನಾಟಕ ಚಿತ್ರಕಲಾ ಪರಿಷತ್ತಿನ ಆರ್ಟ್‌ಗ್ಯಾಲರಿಯಲ್ಲಿ ನಡೆದ ಕಲಾವಿದೆ ಚಂದನ ಎಚ್.ಕಟಾರಿಯಾ ರವರ ಕಲಾ ಕೃತಿಗಳ ಪ್ರದರ್ಶನದ ಕುರಿತು ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದು, ಆ ವಿವರ ಈ ಮುಂದಿನಂತಿದೆ. ನಮ್ಮ ಕಲಾವಿದರಿಂದ ದೂರವಾಗುತ್ತಿರುವ ಜಲವರ್ಣ ಮಾಧ್ಯಮವನ್ನು ಆಪ್ತವಾಗಿಸಿಕೊಂಡಿರುವುದು ಈ ಕಲಾವಿದೆಯ ವೈಶಿಷ್ಟ್ಯವಾಗಿದ್ದು, ಇವರಲ್ಲಿ ಬಹುತೇಕ ತುಂಬ ಸರಳ ನೆಲೆಯ ಕೃತಿಗಳ ಜಲವರ್ಣದ ಹರಿಯುವ ಗುಣವೇ ಇಲ್ಲಿನ ವಿಶೇಷವಾಗಿದೆ. ವಿಶಿಷ್ಟ ಮೈವಳಿಕೆಯ ಹ್ಯಾಂಡ್‌ಮೇಡ್ ಕಾಗದದ ಮೇಲೆ ತಾಜಾ ವರ್ಣಗಳನ್ನು ಹರಿಸಿ, ಕೆಲವೆಡೆ ಮಾತ್ರ ಡ್ರೈಬ್ರಶ್ ನೆನಪಿಸುವಂತೆ ಬಿಳಿಯನ್ನು ಹಾಗೆಯೇ ಬಿಟ್ಟಿರುವುದು ಕುತೂಹಲಕರ. ಆದರೆ ಬಹುತೇಕ ತಂತ್ರವೇ ಮೆರೆದು ಸಂಕೀರ್ಣತೆಯಿಂದ ದೂರವಾಗಿರುವ ಇವುಗಳ ಅತಿಯಾದ ಸರಳತೆಯಿಂದಾಗಿ ನೋಡುಗರ ಆಳಕ್ಕೆ ಇಳಿಯುವುದಿಲ್ಲ. ವಸ್ತುವಿನ ದೃಷ್ಟಿಯಿಂದ ಭಾವಗೀತಾತ್ಮಕ ನೆಲೆಗೆ ಸಾಗಬಯಸುವ ಆಶಯವಿದೆ ಎನ್ನುವುದನ್ನು ಅವರ ಶೀರ್ಷಿಕೆಗಳೇ ಸೂಚಿಸುತ್ತವೆ.

### ೨೯. ಆರಂಭಿಕ ಹಂತ[೨೯]

ಬೆಳಗಾವಿಯ ಜಿನಾನ್‌ಸ್ಮಿತ್ ಕಲಾಶಾಲೆಯಲ್ಲಿ ಕಲಾಭ್ಯಾಸ ಮಾಡಿರುವ ನಂದಾ ಎಲ್. ಬೊಕಾಡೆಯವರ ಕೃತಿಗಳ ಪ್ರದರ್ಶನವು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆದ ಕಲಾ ಪ್ರದರ್ಶನದ ಕುರಿತು ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದು, ಆ ವಿವರ ಈ ಮುಂದಿನಂತಿದೆ. ಬಹುತೇಕ ಮಾನವನ ಬವಣೆಗಳನ್ನು ಅದರಲ್ಲೂ ಸ್ತ್ರೀ ಜಗತ್ತಿನ ಅನುಭವಗಳನ್ನು ಹಂಚುವ ಆಶಯದ ಹಲವು ಕೃತಿಗಳು ಇಲ್ಲಿವೆ. ಅಲ್ಲದೆ ಕೆಲವು ನಿಸರ್ಗ ದೃಶ್ಯಗಳೂ ಇಲ್ಲಿದ್ದೂ ಗಮನಾರ್ಹವೆನಿಸಿವೆ. ಇಲ್ಲಿನ ಸಂಶೋಧನಾ ಚಿತ್ರಗಳ ವಸ್ತುವಿನ ಸಂಕೇತ ಪ್ರತಿಮೆಗಳಲ್ಲಿ ಸಶಕ್ತತೆಯಿದೆ. ಆದರೆ ರೂಪದ ದೃಷ್ಟಿಯಿಂದ ಆರಂಭಿಕ ಹಂತದ ವಾಚ್ಯ ನೆಲೆಯಲ್ಲಿಯೇ ಇವು ಪ್ರಕಟಗೊಂಡಿವೆ. ಹಾಗಾಗಿ ಕಲೆಯ ಸೂಕ್ಷ್ಮಗಳು ಬಹುತೇಕ ಕಳೆದುಹೋಗಿವೆ. ಜೊತೆಗೆ ನಿರ್ಮಾಣ ಕೌಶಲ್ಯವೂ ಪಕ್ವಗೊಂಡಿಲ್ಲ. ಆದರೆ ಅದೇ ವಸ್ತುವಿನ ಕೆಲವು ಚಿಕ್ಕ ಅಳತೆಯ ಕೃತಿಗಳಿದ್ದು ಅವು ಪರಿಣಾಮಕಾರಿ ಯಾಗಿದ್ದು, ಆಶಾದಾಯಕವಾಗಿವೆ.

---

೨೮. ಸರಳತೆ ನಡುವೆಯೂ ಅಲಂಕರಣ, ಕರ್ನಾಟಕ ದರ್ಶನ,ಪ್ರಜಾವಾಣಿ ೧, ಏಪ್ರಿಲ್, ೨೦೦೦

೨೯. ಆರಂಭಿಕ ಹಂತ, ಅದೇ

### ೩೦. ಉತ್ತಮ ವಿಶ್ವಕ್ಕಾಗಿ ತುಡಿಯುವ ಯುವ ಮನಸ್ಸು[೩೦]

ಬೆಂಗಳೂರಿನ ವಿಂಡ್ಸರ್ ಮ್ಯಾನರ್ ಹೋಟೆಲಿನ ವೆಸ್ಟ್ ಮಿನಿಸ್ಟರ್ ಗ್ಯಾಲರಿಯಲ್ಲಿ 'ಐಡಿಯಾ ಆಫ್ ಏ ಬೆಟರ್ ವರ್ಲ್ಡ್' ಹೆಸರಿನಲ್ಲಿ ಹೆಬ್ಬಾರ್ ಫೌಂಡೇಷನ್‌ನವರು ಏರ್ಪಡಿಸಿದ ಕಲಾ ಸ್ಪರ್ಧೆಯ ಪ್ರದರ್ಶನದ ಕುರಿತು ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದು, ಆ ವಿವರ ಈ ಮುಂದಿನಂತಿದೆ.

ಉದಯೋನ್ಮುಖ ಯುವ ಕಲಾವಿದರು ಮತ್ತು ವಿದ್ಯಾರ್ಥಿಗಳು ಅಧಿಕವಾಗಿ ಭಾಗವಹಿಸಿದ್ದ ಈ ಪ್ರದರ್ಶನದಲ್ಲಿ ನಿಯೊ ಎಕ್ಸ್‌ಪ್ರೆಶನಿಸ್ಟ್, ಪೋಸ್ಟ್ ಮಾಡರ್ನಿಸ್ಟ್ ಧೋರಣೆಗಳು ಪ್ರಧಾನವಾಗಿ ವ್ಯಕ್ತವಾಗಿವೆ. ಸಾಮಾನ್ಯ ಮಾಧ್ಯಮಗಳಲ್ಲೇ ಈ ವಿದ್ಯಾರ್ಥಿಗಳು ಹೊಸತನದ ಸೆಳಕುಗಳನ್ನು ತರುವ ಪ್ರಯತ್ನ ಮಾಡಿದ್ದಾರೆ.

ವಿಷ್ಣುಕುಮಾರ್, ರಮೇಶ್ ತೇರದಾಳ್, ಬಿ.ಐ.ಎಸ್.ಅಶೋಕ್, ಪಿ.ಎನ್.ಶ್ರೀಧರ್, ಸೂರ್ಯಕಾಂತ ನಂಧೂರ್, ವಿ.ಜಿ.ವೇಣುಗೋಪಾಲ್, ಸುಪ್ರಿಯಾ ವರ್ಮ, ಡಿ.ವೆಂಕಟೇಶ, ಡಿ.ಮಹೇಂದ್ರ, ಡಿ.ಎಚ್.ಸುರೇಶ್, ಯು.ಅಶೋಕ್, ಬಿ.ಓ.ಶೈಲೇಶ್, ಅಶೋಕಕುಮಾರ್ ಶೆಟ್ಟಿ, ಕೆ.ಪ್ರವೀಣ್, ರೇಣುಕಾ ಮಾರ್ಕಂಡೆ ಅವರ ಕೃತಿಗಳು ಉಳಿದವರಿಗಿಂತ ಪ್ರಭಾವಶಾಲಿಯಾಗಿವೆ.

ಹೀಗೆ ಕರ್ನಾಟಕದ ಯುವ ಕಲಾವಿದರ ಈ ಪ್ರದರ್ಶನವು ಹಲವಾರು ಅಪರಿಚಿತ ಮುಖಗಳನ್ನು ಮುನ್ನೆಲೆಗೆ ತಂದಿದೆ. ಜೊತೆಗೆ ಯುವ ಕಲಾವಿದರಲ್ಲಿರುವ ನಿಜವಾದ ಕಲಾಸಾಮರ್ಥ್ಯವನ್ನೂ ಪರಿಚಯಿಸುವಲ್ಲಿ ಬಹುತೇಕ ಯಶಸ್ವಿಯಾಗಿದೆ. ಹೆಬ್ಬಾರ್ ಫೌಂಡೇಶನ್‌ನಂತಹ ಖಾಸಗಿ ಸಂಸ್ಥೆಯೊಂದು ಯುವ ಪ್ರತಿಭೆಗಳನ್ನು ಗುರುತಿಸಲು ಹಮ್ಮಿಕೊಂಡ ಈ ಪ್ರದರ್ಶನವು ಗಮನಾರ್ಹವಾಗಿದೆ. ಆದರೆ ಗ್ರಾಫಿಕ್ ಮಾಧ್ಯಮದಲ್ಲಿ ಹೆಚ್ಚಿನ ಕೃತಿಗಳು ಅದರಲ್ಲೂ ಉತ್ತಮ ನೆಲೆಯ ಕೃತಿಗಳು ಇಲ್ಲದಿರುವುದು ನಿರಾಸೆಯ ಸಂಗತಿಯೇ ಆಗಿದೆ ಎಂಬುದನ್ನು ಲೇಖಕರು ಗುರುತಿಸಿದ್ದಾರೆ.

### ೩೧. ಭರವಸೆಯ ಆಸೆಯುಳ್ಳ ಸ್ತ್ರೀಶಕ್ತಿ[೩೧]

ಗುಲ್ಬರ್ಗದ ಎಂ.ಎಂ.ಕೆ ಕಲಾ ಶಾಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಸುಪ್ರಿಯಾ ವರ್ಮ ಅವರ ಕೃತಿಗಳ ಪ್ರದರ್ಶನವು ಬೆಂಗಳೂರಿನ ಎಸ್‌ಪ್ರೆಸ್ಸೊ ಗ್ಯಾಲರಿಯಲ್ಲಿ ನಡೆಯಿತು.

---

೩೦. ಉತ್ತಮ ವಿಶ್ವಕ್ಕಾಗಿ ತುಡಿಯುವ ಯುವಮನಸ್ಸು, ಕ ದರ್ಶನ, ಪ್ರಜಾವಾಣಿ ೮, ಏಪ್ರಿಲ್, ೨೦೦೦

೩೧. ಭರವಸೆಯ ಆಸೆಯುಳ್ಳ ಸ್ತ್ರೀಶಕ್ತಿ, ಅದೇ

ಕೆಫೆ ಕಾಫಿಡೇಯ ಮೂರು ವಿವಿಧ ಸ್ಥಳಗಳಲ್ಲಿ ನಡೆಯುತ್ತಿರುವ ಈ ಪ್ರದರ್ಶನವನ್ನು 'ಹೋಪ್: ದಟ್ ಎಟರ್ನಲ್ ಸ್ಟ್ರೆಂತ್' ಎಂದು ಕರೆಯಲಾಗಿದೆ. ಈ ಕುರಿತು ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದು, ಆ ವಿವರ ಈ ಮುಂದಿನಂತಿದೆ.

ಸುಪ್ರಿಯಾ ಅವರು ಸ್ತ್ರೀ ಜಗತ್ತಿನ ಅನುಭವಗಳನ್ನು ಕ್ಯಾನ್ವಾಸಿಗೆ ಸ್ಥಳಾಂತರಿಸುವ ಕೆಲಸ ಮಾಡಿದ್ದೇನೆಂದು ತಮ್ಮ ಕ್ಯಾಟಲಾಗ್‌ನಲ್ಲಿ ಹೇಳುತ್ತಾರೆ. ಆದರೆ ಈ ಅನುಭವಗಳನ್ನು ಹೊರಹಾಕಲು ಅವರು ಬಳಸಿಕೊಂಡ ಮೋಟಿಫ್ ಹೆಣ್ಣಿನ ಮುಖವಾಗಿದೆ. ವಿರೂಪಗೊಂಡ, ಶೈಲೀಕೃತಗೊಂಡ ಈ ಮುಖಗಳು ವಿವಿಧ ಭಾವನೆಗಳನ್ನು ವ್ಯಕ್ತಪಡಿಸುತ್ತದೆ. ಆದರೆ ಕಲಾವಿದೆ ಬಯಸಿದಂತೆ ಇವುಗಳ ಮೂಲಕ ಸ್ತ್ರೀ ಜಗತ್ತಿನ ಅನುಭವಗಳೊಂದಿಗೆ ನಾವಿಲ್ಲಿ ಮುಖಾಮುಖಿಯಾಗುವುದಿಲ್ಲ. ಬದಲಿಗೆ ವಿವಿಧ ಬಣ್ಣಗಳ, ಹಿನ್ನೆಲೆಗಳ ಈ ವೈವಿಧ್ಯಮಯ ಮುಖಗಳು ನಮಗೆ ಭಾವಚಿತ್ರಗಳ ಅನುಭವ ನೀಡುತ್ತವೆ. ಕೆಲವೆಡೆಯಂತೂ ಇಲ್ಲಿನ ಸ್ತ್ರೀಯರು ಪುರುಷನಂತೆ ಘನವಾದ ಆಕೃತಿಗಳನ್ನು ಹೊಂದಿದ್ದಾರೆ. ಕಲಾವಿದೆ ಬಯಸಿದಂತೆ ಕನಸುಗಳು. ಭರವಸೆಗಳು ಹಾಗೂ ಸ್ತ್ರೀ ಜಗತ್ತಿನ ಅನುಭವಗಳಿಂದ ಹೊರತಾಗಿಸಿ ನೋಡಿದಾಗ ಮಾತ್ರ ಈ ಕೃತಿಗಳು ಆಶಾದಾಯಕ ನೆಲೆಯಲ್ಲಿ ನಿಲ್ಲುತ್ತವೆ ಎನ್ನುವುದನ್ನು ವಿಶೇಷವಾಗಿ ಲೇಖಕರು ಗುರುತಿಸಿದ್ದಾರೆ.

**೩೨. ಅವಳಿ-ಜವಳಿಯ ವಿಶಿಷ್ಟ ದಾಖಲಾತಿ, ತಂತ್ರಕ್ಕಿಂತ ಘಟನೆಯೇ ಸರ್ವವ್ಯಾಪಿ**[೩೨]

ಕೇತಕಿ ಶೇಠ್ ಅವರು ನ್ಯೂಯಾರ್ಕ್ ಯೂನಿವರ್ಸಿಟಿಯ ಟಿಷ್ ಸ್ಕೂಲ್ ಫಾರ್ ದಿ ಆರ್ಟ್ಸ್‌ನಲ್ಲಿ ಕೆಲ ಕಾಲ ಛಾಯಾಚಿತ್ರ ಕಲೆಯನ್ನು ಅಭ್ಯಾಸ ಮಾಡಿದವರು. ಅವರ ಸದ್ಯದ ಮಹತ್ವಾಕಾಂಕ್ಷೆಯ 'ಟ್ವಿನ್ ಸ್ಪಾಟಿಂಗ್' ಹೆಸರಿನ ಪ್ರದರ್ಶನವು ಬೆಂಗಳೂರಿನ ಲ್ಯಾವೆಲೆ ರಸ್ತೆಯ ಪಕ್ಕದ ವಾಲ್ಟನ್ ರಸ್ತೆಯಲ್ಲಿರುವ 'ಸಿನ್ನಮೋನ್'ನಲ್ಲಿ ನಡೆದ ಛಾಯಾಚಿತ್ರಗಳ ಪ್ರದರ್ಶನ ಈ ಕುರಿತು ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದು, ಆ ವಿವರ ಈ ಮುಂದಿನಂತಿದೆ.

ಇದರಲ್ಲಿ ಬ್ರಿಟನ್ ಮತ್ತು ಅಮೆರಿಕದ ಗುಜರಾತಿ ಸಮುದಾಯದಲ್ಲಿ ಜನಿಸಿದ ಸರಿಸುಮಾರು ಒಂದೇ ತಲೆಮಾರಿಗೆ ಸೇರಿದ ೮೨ ಅವಳಿ-ಜವಳಿ ಮಕ್ಕಳ ಛಾಯಾಚಿತ್ರಗಳಿದ್ದು, ಮಾನವಶಾಸ್ತ್ರದ ಒಂದು ವಿಲಕ್ಷಣ ದಾಖಲೆಗಳಾಗಿವೆ. ಇವು ಮೇಲ್ನೋಟಕ್ಕೆ ತುಂಬ ಸರಳವಾಗಿದ್ದು, ವಸ್ತುವಿನ ದೃಷ್ಟಿಯಿಂದ ಕುತೂಹಲಕಾರಿಯಾದ ಅಂಶಗಳಿವೆ. ಅವುಗಳಲ್ಲಿ ಮೊದಲನೆಯ ಅಂಶವೆಂದರೆ ಇಲ್ಲಿನ ವಸ್ತುವು ಅವಳಿ-ಜವಳಿಗಳನ್ನು ಕುರಿತದ್ದು. ಆದರೆ ಈ ಅವಳಿ-ಜವಳಿಗಳೂ ಕೂಡಾ

---

೩೨. ಅವಳಿ-ಜವಳಿಯ ವಿಶಿಷ್ಟ ದಾಖಲಾತಿ, ತಂತ್ರಕ್ಕಿಂತ ಘಟನೆಯೇ ಸರ್ವವ್ಯಾಪಿ, ಕರ್ನಾಟಕ ದರ್ಶನ, ಪ್ರಜಾವಾಣಿ, ೧೫, ಏಪ್ರಿಲ್, ೨೦೦೦



ಗುಜರಾತ್ ಮತ್ತು ಬ್ರಿಟನ್‌ಗಳಲ್ಲಿ ನೆಲೆಸಿರುವ ಪಟೇಲ್ ಕುಟುಂಬದಲ್ಲಿರುವ ಅವಳಿ–ಜವಳಿಗಳನ್ನು ಕುರಿತದ್ದು ಎಂದಾಗಿ ಆಶ್ಚರ್ಯವೆನಿಸದಿರದು. ಏಕೆಂದರೆ ಉಪಜಾತಿಯೊಂದಕ್ಕೆ ಸಂಬಂಧಿಸಿದ ನೂರಾರು ಅವಳಿ–ಜವಳಿಗಳು ಗುಜರಾತಿನಲ್ಲಿ ಹಾಗೂ ಬ್ರಿಟನಿನಲ್ಲಿದ್ದಾರೆಂಬ ಅಂಶವು ಕುತೂಹಲಕಾರಿಯಾದುದು. ಇದು ಕಲೆಗಿಂತಲೂ ಮಾನವಶಾಸ್ತ್ರೀಯ ಅಭ್ಯಾಸದ ಮೇಲೆ ಬೆಳಕು ಚೆಲ್ಲುವಂತದ್ದು. ಆದರೆ ಈ ಮಾನವಶಾಸ್ತ್ರೀಯ ಘಟನೆಯನ್ನು ಕಲೆಗೆ ಪೂರಕವಾಗಿ ದುಡಿಸಿಕೊಳ್ಳುವ ಆಶಯ ಇಲ್ಲಿದೆ. ಇಂದು ವರ್ಣ ಛಾಯಾಗ್ರಹಣವು ತುಂಬ ಸುಲಭದ್ದಾದರೂ ಈ ವಸ್ತುವಿಗೆ ಕಲೆಯ ಸೆಳಕು ನೀಡುವ ದೃಷ್ಟಿಯಿಂದ ಇವುಗಳನ್ನು ಕಪ್ಪು–ಬಿಳುಪಿನ ಛಾಯಾ ಚಿತ್ರಗಳನ್ನಾಗಿಸಿದ್ದಾರೆ. ಬಹುತೇಕ ಸಾಮಾನ್ಯ ಸನ್ನಿವೇಶಗಳಲ್ಲಿ ಪೋಸು ನೀಡಿದಂತೆ ನಿಂತ ಅವಳಿಗಳು ಆಯಾ ಸನ್ನಿವೇಶಗಳ ಮೂಲಕವೇ ವಿವಿಧ ಬಗೆಯ ಕಥೆ ಹೇಳಬಲ್ಲರು. ಹಲವೆಡೆ ಕುತೂಹಲಕಾರಿಯಾದ ಸಂಯೋಜನೆಗಳು ಕಲಾತ್ಮಕವಾಗಿ ಮನಸೆಳೆಯುತ್ತವೆ ಅಲ್ಲದೇ ಇವು ಸೃಜನಶೀಲತೆಗಿಂತಲೂ ಆಕಾಡೆಮಿಕ್‌ಶೈಲಿಗೆ ಬದ್ಧವಾಗಿವೆ ಒತ್ತಾಸೆಯಿದೆ ಎನ್ನುತ್ತಾರೆ ಲೇಖಕರು.

**೩೩. ಹೊಸ ಬಗೆಯ ನೋಡುವಿಕೆಗೆ ಪ್ರೋತ್ಸಾಹ**[೩೩]

ಕೆ.ಟಿ.ಶಿವಪ್ರಸಾದ್ ಅವರ ಕಲಾ ಕೃತಿಗಳ ಕುರಿತಂತೆ ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೨/೪/೨೦೦೦ರಂದು ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದು, ಆ ವಿವರ ಈ ಮುಂದಿನಂತಿದೆ.

ಇವರು ಯಾವ ಆಕೃತಿಯೂ ಮುಖ್ಯವಲ್ಲ. ಅಮುಖ್ಯವೂ ಅಲ್ಲ ಎನ್ನುವಂತೆ ಸಮಾನ ಪ್ರಾಧಾನ್ಯ ನೀಡಿ ಸಂಯೋಜಿಸಿ ಕ್ಯಾನ್ವಸ್‌ನಲ್ಲಿ ಚಿತ್ರಿಸಿದ್ದಾರೆ. ಇವರ ಇನ್ನೊಂದು ವಿಶೇಷವೆಂದರೆ ವಿಭಿನ್ನ ಶೈಲಿಗಳನ್ನು ಒಂದೆಡೆಗೆ ತಂದಿರುವುದು. ಅವರ ಎಂದಿನ 'ಇಂಪ್ರೆಶನಿಸ್ಟಿಕ್ ರಿಯಲಿಸಂ'ನ ಜೊತೆಗೆ ಪುರಾತನ ತೊಗಲುಗೊಂಬೆಗಳ ರೂಪಗಳನ್ನೂ ತಂದಿದ್ದಾರೆ. ಹೀಗೆ ಇವು ಒಂದೆಡೆ ಶೈಲಿಯ ಐಕ್ಯವನ್ನು ಮುರಿದರೆ ಇನ್ನೊಂದೆಡೆ 'ಕಾಲೈಕ್ಯ'ವನ್ನು ಮುರಿಯುತ್ತದೆ. ಹೀಗೆ ಇವುಗಳಲ್ಲಿ ಇಂದಿನ ಸಮಕಾಲೀನ ಸಮಾಜದ ರೂಪಗಳ ನಡುವೆಯೇ ತಂದಿರುವ ತೊಗಲು ಗೊಂಬೆಗಳ ರೂಪದಲ್ಲಿ ಪುರಾತನ ಕಾಲದ ಆವರಣವಿದೆ. ಹೀಗೆ ನಮ್ಮ ಸರ್ರಿಯಲಿಸ್ಟರನ್ನು ನೆನಪಿಸುವಂತೆ ಅವರಿಂದ ಬೇರೆಯದೇ ಆದ ಇನ್ನೊಂದು ಬಗೆಯ ಸರ್ರಿಯಲಿಸಂನ್ನು ಇಲ್ಲಿ ಇವರು ಸೃಷ್ಟಿಸಿದ್ದಾರೆ. ಇದಕ್ಕೆ ಕಾಕತಾಳೀಯವೋ ಎಂಬಂತೆ 'ಮ್ಯಾಗ್ರೈಟ್ ಕ್ಯಾಸಲ್' ಕೃತಿಯಲ್ಲಿ ಹೆಸರಾಂತ ಸರ್ರಿಯಲಿಸ್ಟ್ ಕಲಾವಿದ ರೆನೆ ಮ್ಯಾಗ್ರೈಟ್‌ನ ಕೃತಿಯೊಂದನ್ನು ತಲೆಕೆಳಗಾಗಿ ನೋಡುವ ಪ್ರಯತ್ನ ಮಾಡಿದ್ದಾರೆ.

ಇವರ ಕೃತಿಗಳಲ್ಲಿ ಮುಖ್ಯವಾದ ಇನ್ನೊಂದು ಬದಲಾವಣೆಯೆಂದರೆ, ಬಹುತೇಕ ಕೃತಿಗಳ ಕೇಂದ್ರ ಸ್ಥಾನವನ್ನು ಖಾಲಿ ಬಿಟ್ಟು ಅದರ ನಾಲ್ಕು ಬದಿಗಳಲ್ಲಿ ವಿಭಿನ್ನ ಆಕೃತಿಗಳನ್ನು

---

೩೩. ಹೊಸ ಬಗೆಯ ನೋಡುವಿಕೆಗೆ ಪ್ರೋತ್ಸಾಹ, ಕರ್ನಾಟಕ ದರ್ಶನ, ಪ್ರಜಾವಾಣಿ, ೨೨, ಏಪ್ರಿಲ್,೨೦೦೦

ಜೋಡಿಸಿರುವುದರಿಂದ ನೋಡುಗರು ತಮ್ಮ ಕಣ್ಣುಗಳನ್ನು ಗಿರಗಿಟ್ಲೆಯಂತೆ ಸುತ್ತಿಸಬೇಕಾಗುತ್ತದೆ. ಈ ಕಲಾವಿದ ವಿಶೇಷವಾಗಿ ದಪ್ಪನಾಗಿ ತೈಲವರ್ಣವನ್ನು ಇಂಪಾಸ್ಟೋನಂತೆ ಬಳಕೆ ಮಾಡಿದ್ದಾರೆ. (ಪಾಶ್ಚಾತ್ಯ ದೇಶಗಳಲ್ಲಿ ಕೆಲವು ನಿಯೋ ಎಕ್ಸ್‌ಪ್ರೆಶನಿಸ್ಟರು ಹೀಗೆ ಮಾಡಿದ್ದಾರೆ) ಈ ಕಲಾವಿದ ಸಮಾಜ ಶಾಸ್ತ್ರೀಯ ನೆಲೆಯಲ್ಲಿ ಕೃತಿಗಳನ್ನು ಪರಿಭಾವಿಸಿದರೂ ಅವುಗಳ ಆಳದಲ್ಲಿ ಕಾಮವು ಕೆಲಸ ಮಾಡುತ್ತಿರುತ್ತದೆ. ಅವು ಹಲವಾರು ಹಿಂದಿನ ಕೃತಿಗಳೂ ಸೇರಿದಂತೆ ಇಂದಿನ ಕೃತಿಗಳ ಒಳಹೊಕ್ಕು ನೋಡಿದಾಗ ಅದರೊಳಗೆ ಕಾಮವನ್ನು ಮುಚ್ಚಿಟ್ಟಿರುವುದು ಕಂಡುಬರುತ್ತದೆ. ಹಿಂದೆ ಅದು ಸಾತ್ವಿಕ ನೆಲೆಯಲ್ಲಿದ್ದರೆ ಇತ್ತೀಚೆಗೆ ಅದು ವಿಕೃತದ ಹಾದಿ ಹಿಡಿದಿದೆ ಎಂಬುದನ್ನು 'ಬೈ ದಿ ಸೀ' ಅಂತಹ ಅವರ ಕೆಲವು ಕೃತಿಗಳಲ್ಲಿ ನೋಡಬಹುದಾಗಿದೆ ಎನ್ನುವುದನ್ನು ಲೇಖಕರು ಗುರುತಿಸಿದ್ದಾರೆ.

**೩೪. ಐತಿಹಾಸಿಕ ಮಹತ್ವದ ಕೃತಿಗಳು**[೩೪]

ಜರ್ಮನಿಯ ಕ್ರಿಶ್ಚಿಯನ್ ಪಾಡ್, ಕಲೆಯ ಇತಿಹಾಸದಲ್ಲಿ ಗಮನಾರ್ಹ ಕಲಾವಿದ. ಎಕ್ಸ್‌ಪ್ರೆಶನಿಸಂ ಹಾಗೂ ದಾದಾಯಿಸಂಗಳ ಸಂದರ್ಭದಲ್ಲಿ ವಿಶಿಷ್ಟ ಕೊಡುಗೆ ನೀಡಿದ ಈ ಕಲಾವಿದನ ಗ್ರಾಫಿಕ್ ಕೃತಿಗಳ ಪ್ರದರ್ಶನವು ಬೆಂಗಳೂರಿನ ಲ್ಯಾವೆಲೆ ರಸ್ತೆಯಲ್ಲಿರುವ ಮ್ಯಾಕ್ಸ್‌ಮುಲ್ಲರ್ ಭವನದಲ್ಲಿ ನಡೆಯಿತು. ಪ್ರದರ್ಶನದ ಕುರಿತು ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದು, ಆ ವಿವರ ಈ ಮುಂದಿನಂತಿದೆ.

ಇವರ ಕಲಾಕೃತಿಗಳಲ್ಲಿ ಷಾಡೋಗ್ರಾಫ್‌ಗಳು ವಿಶಿಷ್ಟವಾಗಿವೆ. ಇವುಗಳನ್ನು ಕ್ಯಾಮರಾ ರಹಿತ ಛಾಯಾಚಿತ್ರಗಳೆನ್ನಬಹುದು. ಕತ್ತಲೆಯಲ್ಲಿ ಫೋಟೋ ಸೆನ್ಸಿಟಿವ್ ಕಾಗದ ಮೇಲೆ ಪಾರದರ್ಶಕ, ಅಪಾರದರ್ಶಕವಾದ ವಿವಿಧ ಬೆಳಕಿನ ಸಾಂದ್ರತೆಯುಳ್ಳ ವಸ್ತುಗಳನ್ನು ಜೋಡಿಸಿ ಅದರ ಮೇಲೆ ಬೆಳಕು ಹರಿಸಿ, ಅನಂತರ ರಾಸಾಯನಿಕಗಳಿಂದ ತೊಳೆದು ಚಿತ್ರಗಳನ್ನು ಪಡೆಯುವ ವಿಶಿಷ್ಟ ವಿಧಾನವಿದು. ತಾಂತ್ರಿಕ ಬೆಳವಣಿಗೆಯ ದೃಷ್ಟಿಯಿಂದ ಮಹತ್ವದ್ದೆನಿಸಿವೆ. ಏಕೆಂದರೆ ಎಕ್ಸ್‌ಪ್ರೆಶನಿಸಂ ಹಾಗೂ ದಾದಾಯಿಸಂ ಚಳುವಳಿಗಳಲ್ಲಿ ಈ ಕೃತಿಗಳ ಪಾತ್ರವೂ ಇದೆ. ಅಲ್ಲದೆ ಇವರ ವುಡ್‌ಕಟ್ ಮುದ್ರಣಗಳೂ ಸಹಾ ಗಮನಾರ್ಹವಾಗಿವೆ. ಎಚ್ಚಿಂಗ್ ಕೃತಿಗಳಲ್ಲಿ ಆರ್ಮರ್, ಹೋಮೇಜ್ ಟು ದಾದಾ ಕೃತಿಗಳು ನಮ್ಮ ಗಮನ ಸೆಳೆದರೆ ಷಾಡೋಗ್ರಾಫ್‌ಗಳಲ್ಲಿ ನ್ಯೂಯರ್ ಟಮ್, ದಾದಾ ಇನ್ ಎನಟ್‌ಶೆಲ್ ಕೃತಿಗಳು ತಂತ್ರ ಹಾಗೂ ವಸ್ತುವಿನ ದೃಷ್ಟಿಯಿಂದ ಪರಿಣಾಮಕಾರಿಯಾಗಿವೆ. ಪುಸ್ತಕಗಳಲ್ಲಿನ ಮುದ್ರಿತ ಚಿತ್ರಗಳನ್ನಷ್ಟೇ ನೋಡಿದ್ದವರಿಗೆ ಕ್ರಿಶ್ಚಿಯನ್ ಷಾಡ್‌ನ ಮೂಲ ಕೃತಿಗಳನ್ನು

---

೩೪. ಐತಿಹಾಸಿಕ ಮಹತ್ವದ ಕೃತಿಗಳು, ಕರ್ನಾಟಕ ದರ್ಶನ,ಪ್ರಜಾವಾಣಿ ೨೨ ಏಪ್ರಿಲ್, ೨೦೦೦

ನೋಡಿದಾಗ ಅವು ಸರಳವಾದುದಾದರೂ ಮೈಪುಳಕಗೊಳ್ಳುವುದು. ಏಕೆಂದರೆ ಈ ಕೃತಿಗಳ ಹಿಂದೆ ಹಲವಾರು ಚಾರಿತ್ರಿಕ ಅಂಶಗಳಿವೆ ಎನ್ನುವುದನ್ನು ಲೇಖಕರು ಚರ್ಚಿಸಿದ್ದಾರೆ.

**೩೫. ಸಾಂದರ್ಭಿಕ ಪರಿಸರದ ಪ್ರತಿಸೃಷ್ಟಿ**[೩೫]

ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಾಲೇಜಿನ ಸ್ನಾತಕೋತ್ತರ ಮತ್ತು ರಾಜ್ಯದ ಇತರೆ ಪದವಿ ವಿದ್ಯಾರ್ಥಿಗಳು 'ಎಕ್ಸ್‌ಪೊಸಿಶನ್' ಎನ್ನುವ ಹೆಸರಿನಲ್ಲಿ ಪರಿಷತ್‌ನ ಗ್ಯಾಲರಿಯಲ್ಲಿ ಕಲಾಕೃತಿಗಳನ್ನು ಆನಾವರಣ ಮಾಡಲಾಗಿತ್ತು. ಈ ಕುರಿತಂತೆ ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೯/೪/೨೦೦೦ರಂದು ಕೃ.ಸೆ.ಅವರು ಲೇಖನ ಪ್ರಕಟಿಸಿದ್ದು, ಅದರ ಸಾರಾಂಶ ಇಂತಿದೆ.

ಇಲ್ಲಿನ ಕಲಾ ಕೃತಿಗಳ ವೈಶಿಷ್ಟ್ಯವೆಂದರೆ ಒಂದು ಕಾಲದಲ್ಲಿ ಪೆಡಸ್ಟಲ್ ಮೇಲಿನ ಸ್ಥಾನವನ್ನಷ್ಟೇ ಗಟ್ಟಿಯಾಗಿಸಿಕೊಂಡಿದ್ದ ಶಿಲ್ಪಗಳನ್ನು ಸ್ಥಾನಪಲ್ಲಟಗೊಳಿಸಿರುವುದು. ಅಂದರೆ ಇಂದಿನ ಶಿಲ್ಪಗಳೆಲ್ಲ ನೆಲದ ಮೇಲೆ ಹರಡಿದಂತೆ ಮಾಳಿಗೆಯಿಂದ ಇಳಿಬಿಟ್ಟಂತೆ ವಿವಿಧ ಆಯಾಮಗಳನ್ನು ಪಡೆದುಕೊಳ್ಳುತ್ತಿವೆ. ಜೊತೆಗೆ ಹಲವು ವಿಭಿನ್ನ ಮಾಧ್ಯಮಗಳ, ವಸ್ತುಗಳ ಸಂಲಗ್ನದಿಂದಾಗಿ ಶಿಲ್ಪ ಮಾಧ್ಯಮಕ್ಕೆ ಒಂದು ಬಗೆಯ ಸಂಕೀರ್ಣತೆ ಬಂದಿದೆ. ಇಲ್ಲಿನ ಶಿಲ್ಪಗಳಲ್ಲಿ ರುದ್ರಗೌಡ ಪಾಟೀಲ್, ವೈಕುಂಠ, ಸಂತೋಷ್, ಎಂ.ರಘುನಾಥ್, ಹರೀಶ್ ಸಿ.ಎಚ್.ರಶ್ಮಿ, ಉಮೇಶ್ ತೇರದಾಳ, ಸುಭಾಷ್ ಕಮ್ಮಾರ್, ವಿಷ್ಣುಕುಮಾರ್, ಮಹೇಂದ್ರ, ವೇಣುಗೋಪಾಲ್, ಪಿ.ಎನ್.ಶ್ರೀಧರ್, ಎಸ್.ಸುರೇಶ್, ಎಲ್.ಉಮೇಶ್ ಮೊದಲಾದವರ ಕೃತಿಗಳು ಕುತೂಹಲಕಾರಿಯಾಗಿದ್ದು, ನಮ್ಮ ಗಮನ ಸೆಳೆಯುತ್ತವೆ. ಒಟ್ಟಾರೆಯಾಗಿ ವಿದ್ಯಾರ್ಥಿಗಳ ದೃಷ್ಟಿಯಿಂದ ಗಮನಾರ್ಹ ಪ್ರದರ್ಶನವಿದು.

**೩೬. ಆಧ್ಯಾತ್ಮಿಕ ಅನುಭವಗಳ ಭಿತ್ತಿಯಲ್ಲಿ**[೩೬]

ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆದ 'ನಿಸರ್ಗ – ವಾಸ್ತುಶಿಲ್ಪಿ' ಎಂದು ಖ್ಯಾತರಾದ ಗುರುರಾಜ ಪಾಗಡ್ ಅವರ ಕಲಾಕೃತಿಗಳ ಪ್ರದರ್ಶನ ಮುಖ್ಯವಾದದು. ಕಲೆಯ ಮುಖ್ಯವಾಹಿನಿಯಿಂದ ಬೇರೆಯಾದ ಇವರ ಕೃತಿಗಳು ಕಲೆಯ ಸೂಕ್ಷ್ಮಗಳಿಗೆ ತೆರೆದ ಕಣ್ಣುಗಳಿಂದ ನೋಡುವುದಕ್ಕಿಂತಲೂ ಭಿನ್ನವಾದ ನೆಲೆಯಲ್ಲಿ ನೋಡುವುದನ್ನು ಪ್ರೋತ್ಸಾಹಿಸುತ್ತವೆ. ಏಕೆಂದರೆ ಇಲ್ಲಿ ಕಲಾವಲಯದ ಹಲವಾರು 'ಒಪ್ಪಿತ ಆದರ್ಶಗಳನ್ನು' ನಿರಾಕರಿಸುವ ಧೋರಣೆಯಿದೆ. ಅವುಗಳಲ್ಲಿ ಒಂದೆಂದರೆ **ಶೈಲೀಕರಣ**, ಎರಡನೆಯ **ಕಲಾತ್ಮಕ ಸೂಕ್ಷ್ಮಗಳು**. ಹೀಗೆ ಪ್ರತಿಯೊಂದು

---

೩೫. ಸಾಂದರ್ಭಿಕ ಪರಿಸರದ ಪ್ರತಿಸೃಷ್ಟಿ, ಕರ್ನಾಟಕ ದರ್ಶನ, ಪ್ರಜಾವಾಣಿ, ೨೯, ಏಪ್ರಿಲ್, ೨೦೦೦

೩೬. ಆಧ್ಯಾತ್ಮಿಕ ಅನುಭವಗಳ ಭಿತ್ತಿಯಲ್ಲಿ, ಅದೇ

ಕೃತಿಯೂ ಮತ್ತೊಂದರಿಂದ ರೂಪದಲ್ಲಿ ಸಂಪೂರ್ಣ ಭಿನ್ನವಾಗಿರುವುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಗುರುತಿಸಿದ್ದಾರೆ.

**೩೭.ಉತ್ಕಟವಾದ ಆಧ್ಯಾತ್ಮಿಕ**[೩೭]

ಅನುಭವಗಳನ್ನು ಚಿತ್ರರೂಪವಾಗಿಸುವ ಆಶಯವುಳ್ಳವರು. ಹಾಗಾಗಿ ಇಲ್ಲಿನ ರೂಪಗಳು ಅರ್ಥದ ಸಹಚರ್ಯ ಹೊಂದಿರುವಂತವು. ಆದರೆ ಈ ಸಹಚರ್ಯವು ಸಾಮಾನ್ಯ ನೆಲೆಯಲ್ಲಿನ ಯೋಚನೆಯಲ್ಲ. ಬದಲಿಗೆ ಅದು ಯೋಗಿಕ ದೃಷ್ಟಿಯದು. ಹೀಗೆ ಅರ್ಥಧಾರಣೆಗೆ ಮಹತ್ವ ನೀಡಿರುವುದರಿಂದ ಚಿತ್ರ ಸಂಯೋಜನೆಯಲ್ಲಿನ ಸಾಂಗತ್ಯಕ್ಕೆ ಇಲ್ಲಿ ಆದ್ಯತೆ ನೀಡಲಾಗಿಲ್ಲ. ಇವುಗಳೆಲ್ಲ ಆಧ್ಯಾತ್ಮಿಕ ಅನುಭವಗಳನ್ನು ಸುಲಭವಾಗಿ ನೋಡುಗರಿಗೆ ಬಿಟ್ಟು ಕೊಡುವುದಿಲ್ಲ. ಇವರ ಕಲಾಕೃತಿಗಳು ಹಲವಾರು ವೈರುಧ್ಯ-ವೈದೃಶ್ಯಗಳನ್ನ ತುಂಬಿಕೊಳ್ಳುವ ಮೂಲಕವೇ ಗಮನಾರ್ಹವಾಗುತ್ತವೆ ಎನ್ನುವುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಗುರುತಿಸಿದ್ದಾರೆ.

**೩೮. ಆಳ, ಅಪ್ಯಾಯಮಾನವನ್ನು ತಿರಸ್ಕರಿಸುವ ಪ್ರಯೋಗಶೀಲತೆ**[೩೮]

ಬೆಂಗಳೂರಿನ ಕೆನ್ ಕಲಾ ಶಾಲೆಯಲ್ಲಿ ಮತ್ತು ಬರೋಡಾದ ಎಂ.ಎಸ್.ವಿಶ್ವವಿದ್ಯಾಲಯದಲ್ಲಿ ಅಭ್ಯಾಸ ಮಾಡಿದ ಜಯರಾಮ್ ಕೋಡಿಬಟ್ಟಾಜೆ ಅವರು ವಿಶಿಷ್ಟ ರೀತಿಯಲ್ಲಿ ಕಲೆಯನ್ನು ಅಭಿವ್ಯಕ್ತಿಸಬೇಕೆಂಬ ಕಳಕಳಿಯುಳ್ಳವರು. ಈ ದಿಸೆಯಲ್ಲಿ ಬೆಂಗಳೂರಿನ ಬಸವನಗುಡಿಯ ಕೃಷ್ಣರಾವ್ ಪಾರ್ಕ್ ಬಳಿಯ ಆರ್ಮುಗಂ ಬೃಹತ್ ವೃತ್ತದೊಳಗಿರುವ ನಾಲ್ಕಾರು ಮರಗಳೆಲ್ಲ ಎಲೆಗಳನ್ನೇ ಮರೆಸುವಂತೆ ವಿವಿಧ ಬಣ್ಣಗಳ ಹೂವುಗಳಿಂದ ಸಂಭ್ರಮಿಸುತ್ತಿದ್ದವು. ನಡುವೆ ಒಂದು ಮರದಲ್ಲಿ ಮಾತ್ರ ವಿರಳವಾಗಿದ್ದ ಹೂವುಗಳ ನಡುವೆ ಮರದ ತುಂಬೆಲ್ಲಾ ಬಿಳಿಯ ಆಕೃತಿಗಳು ನೇತಾಡುತ್ತಿದ್ದ **'ಜ್ಯೋತಿರ್ವೃಕ್ಷ'** ಎಂಬ ವಿಶಿಷ್ಟ ಕಲಾ ಪ್ರತಿಷ್ಠಾಪನೆ(ಆರ್ಟ್ ಇನ್‌ಸ್ಟಲೇಶನ್) ಮಾಡಿದ್ದರು. ಕೃ.ಸೆ.ಯವರು ಈ ಕುರಿತಂತೆ ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೬/೫/೨೦೦೦ರಂದು ಲೇಖನ ರಚಿಸಿದ್ದು, ಅದರಲ್ಲಿನ ಪ್ರಮುಖಾಂಶಗಳು ಇಂತಿವೆ.

ಸುಮಾರು ೩೦೦ಕ್ಕೂ ಹೆಚ್ಚಿನ ಬಿಳಿ ಮತ್ತು ಹೆಂಚಿನ ಬಣ್ಣದ ಮಣ್ಣಿನ ದೀಪಗಳನ್ನು ಮರದ ಕೊಂಬೆಗಳಿಗೆ ನೇತು ಹಾಕಿ ಈ ಕಲಾಕೃತಿಯನ್ನು ರಚಿಸಲಾಗಿದ್ದು, ನೋಡುಗರಿಗೆ ಹೊಸ ಅನುಭವವನ್ನು ನೀಡುವ ಆಶಯ ಇವರದ್ದು. ಈ ಸ್ಥಳ ನಿರ್ದಿಷ್ಟ ಕಲಾಕೃತಿಯಲ್ಲಿ(ಸೈಟ್ ಸ್ಪೆಸಿಫಿಕ್ ವರ್ಕ್) ಬಳಸಿದ ದೀಪಗಳ ಮಾದರಿಯು ಮೂಲತಃ ಗುಜರಾತಿನದಾಗಿದ್ದು ಈ ಕಲಾವಿದ

---

೩೭. ಉತ್ಕಟವಾದ ಆಧ್ಯಾತ್ಮಿಕ, ಕರ್ನಾಟಕ ದರ್ಶನ,ಪ್ರಜಾವಾಣಿ ೬, ಮೇ, ೨೦೦೦

೩೮. ಆಳ, ಅಪ್ಯಾಯಮಾನವನ್ನು ತಿರಸ್ಕರಿಸುವ ಪ್ರಯೋಗಶೀಲತೆ, ಕರ್ನಾಟಕ ದರ್ಶನ, ಪ್ರಜಾವಾಣಿ, ೬, ಮೇ, ೨೦೦೦

ಅದರಲ್ಲಿ ಸಣ್ಣ ಪುಟ್ಟ ಬದಲಾವಣೆ ಮಾಡಿಕೊಂಡು ವೈವಿಧ್ಯ ತರುವ ಪ್ರಯತ್ನ ಮಾಡಿದ್ದಾರೆ. ಹೀಗೆ ನಿಸರ್ಗದಲ್ಲಿನ ಎರಡು ಶಕ್ತಿಗಳಾದ ಮರ ಮತ್ತು ಜ್ಯೋತಿಗಳನ್ನು ಒಂದೆಡೆ ತಂದಿದ್ದಾರೆ.

ಈ ಪ್ರತಿಷ್ಠಾಪನಾ ಕಲೆಯು ಬಿಲ್ ವಯೊಲಾ ೧೯೮೫ರಲ್ಲಿ ಕ್ಯಾಲಿಫೋರ್ನಿಯಾದ ನ್ಯೂಪೋರ್ಟ್ ಹಾರ್ಬರ್ ಮ್ಯೂಸಿಯಂನಲ್ಲಿ ಪ್ರದರ್ಶಿಸಿದ ಕೃತಿಯ ನೆನಪು ತರುತ್ತದೆ. ಅಲ್ಲಿ ವಯೊಲಾ ಮರವನ್ನು ಅಡ್ಡಲಾಗಿ ಮಲಗಿಸಿ ಅವುಗಳಿಗೆ ನೂರಾರು ಗಂಟೆಗಳನ್ನು ನೇತು ಹಾಕಿದ್ದರೆ ಜಯರಾಮ್ ಅವರು ದೀಪಗಳನ್ನು ಕಟ್ಟಿದ್ದಾರೆ. ಆದರೆ ಈ ಪ್ರತಿಷ್ಠಾಪನೆಯಲ್ಲಿ ದೀಪಗಳನ್ನು ಬೆಂಕಿಯಿಂದ ಹೊತ್ತಿಸಿ ಉರಿಯುವಂತೆ ಮಾಡಿದ್ದರೆ ಕನಿಷ್ಠ ಕತ್ತಲಿನಲ್ಲಾದರೂ ಅದು ವಿಶಿಷ್ಟ ಪರಿಣಾಮವುಂಟು ಮಾಡುವ ಸಾಧ್ಯತೆಯಿತ್ತು. ಹಾಗಿಲ್ಲದೆ ದೀಪಗಳು ನಿಜವಾದ ಅರ್ಥದಲ್ಲಿನ ದೀಪಗಳಾಗದೇ ಅಲಂಕರಣದ ನೆಲೆಯಲ್ಲಿಯೇ ನಿಂತಿದ್ದರಿಂದ ಈ ಕೃತಿ ಅಷ್ಟಾಗಿ ಪರಿಣಾಮ ಬೀರುವುದಿಲ್ಲ. 'ಜ್ಯೋತಿವೃಕ್ಷ' ಎಂಬ ಹೆಸರು ಕೂಡಾ ಅನ್ವರ್ಥವೆನಿಸುವುದಿಲ್ಲ. ದೀಪಗಳ ಅಳತೆಯೂ ಸಾಕಷ್ಟು ಚಿಕ್ಕದಾದ್ದರಿಂದ ಕೃತಿಯು ತಕ್ಷಣದ ಗಮನ ಸೆಳೆಯುವಲ್ಲಿಯೂ ಹಿಂದೆ ಬೀಳುತ್ತದೆ. ಹೀಗೆ ಜಯರಾಮ್ ಅವರ ಮಹತ್ವಾಕಾಂಕ್ಷೆಯ ಈ ಪ್ರಯೋಗವು ಕೇವಲ ಹೊಸ ಪ್ರಯತ್ನವಾಗಿ ದಾಖಲಾಗುತ್ತದೆಯೇ ಹೊರತು ಪರಿಣಾಮದ ದೃಷ್ಟಿಯಿಂದ ಸೋಲುತ್ತದೆ ಎನ್ನುವುದನ್ನು ಲೇಖಕರು ಪ್ರಾಸಂಗಿಕವಾಗಿ ಚರ್ಚಿಸಿದ್ದಾರೆ.

### ೩೯. ಆದಿಮ ಚೈತನ್ಯ[೩೯]

ಪ್ರಸ್ತುತ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಸ್ನಾತಕೋತ್ತರ ಪದವಿಯಲ್ಲಿ ಅಭ್ಯಾಸ ಮಾಡುತ್ತಿರುವ ಡಿ.ಎಚ್.ಸುರೇಶ್ ಅವರ ಕಲಾ ಕೃತಿಗಳ ಪ್ರದರ್ಶನ ಬೆಂಗಳೂರಿನ ಕೆಫೆ ಕಾಫಿ ಡೇಗಳಲ್ಲಿ ನಡೆಯಿತು. ಇತ್ತೀಚಿನ ವರ್ಷಗಳಲ್ಲಿ ಈ ಕಲಾವಿದ ಗ್ರಾಮ್ಯ ನೆಲೆಯ ಸಂವೇದನೆಗಳನ್ನು ಮುಂದಿಟ್ಟುಕೊಂಡು ತಮ್ಮದೇ ಆದ ಶೈಲಿಯಲ್ಲಿ ಕೃತಿ ರಚಿಸುವ ಪ್ರಯತ್ನ ಮಾಡುತ್ತಿದ್ದಾರೆ. ಬಹುತೇಕ ಚಿಕ್ಕ ಅಳತೆಯ ಕೃತಿಗಳೆನ್ನಬಹುದಾದ ಇವುಗಳನ್ನು ಕಾಗದದ ಮೇಲೆ ಮಿಶ್ರ ಮಾಧ್ಯಮದಲ್ಲಿ ರಚಿಸಿದ್ದಾರೆ. ಒಂದೆರಡು ತೈಲ ಚಿತ್ರಗಳೂ ಇವೆ. ಪ್ರಸ್ತುತ ಪ್ರದರ್ಶನದಲ್ಲಿ ವಸ್ತುವಿನ ದೃಷ್ಟಿಯಿಂದ ಇವರು ವಿವಿಧೆಡೆಗಳಿಗೆ ಗಮನ ಹರಿಸಿದ್ದಾರೆ. ಹೆಚ್ಚಿನ ಕೃತಿಗಳು ಉತ್ತಮ ನೆಲೆಯಲ್ಲಿದ್ದು ಸೌಮ್ಯ ನೆಲೆಯಲ್ಲಿ ಪ್ರಭಾವಿಸುವಂತಿವೆ. ಒಟ್ಟಾರೆಯಾಗಿ ಇದೇ ದಿಸೆಯಲ್ಲಿ ಗಂಭೀರ ಪ್ರಯತ್ನ ಮುಂದುವರೆಸಿದರೆ ಭವಿಷ್ಯದಲ್ಲಿ ಅವರು ಕಲಾವಲಯದಲ್ಲಿ ಸುಭದ್ರ ಸ್ಥಾನ ಪಡೆದುಕೊಳ್ಳುವ ಸಾಧ್ಯತೆಯಿದೆ ಎಂಬ ಅಭಿಪ್ರಾಯವನ್ನು ಕೃ.ಸೆ.ಯವರು ಈ ಲೇಖನದ ಮೂಲಕ ವ್ಯಕ್ತಪಡಿಸಿದ್ದಾರೆ.

---

೩೯. ಆದಿಮ ಚೈತನ್ಯ, ಕರ್ನಾಟಕ ದರ್ಶನ,ಪ್ರಜಾವಾಣಿ ೬, ಮೇ, ೨೦೦೦

**೪೦. ಆಕಾಡೆಮಿಕ್‌ನಿಸರ್ಗ**[೪೦]

ಮೈಸೂರಿನ ಕಲಾವಿದ ಎಂ.ಸುರೇಶ್ ಅವರ ಕೃತಿಗಳ ಪ್ರದರ್ಶನವು ಇದೇ ತಿಂಗಳ ೧ ರಿಂದ ೧೪ ರವರೆಗೆ ಬೆಂಗಳೂರಿನ ಮಣಿಪಾಲ್ ಸೆಂಟರ್‌ನಲ್ಲಿರುವ ಕಾರಿಡಾರ್ ಆಫ್ ಕಲರ್ಸ್‌ನಲ್ಲಿ ನಡೆಯಿತು. ಪ್ರದರ್ಶಿತ ಕೃತಿಗಳೆಲ್ಲ ನಿಸರ್ಗ ಚಿತ್ರಗಳಾಗಿದ್ದು ಆಕಾಡೆಮಿಕ್‌ನೆಲೆಯಲ್ಲಿವೆ. ಹೆಚ್ಚಿನವು ಜಲವರ್ಣ ಚಿತ್ರಗಳಾದರೆ ಒಂದೆರಡು ತೈಲ ಚಿತ್ರಗಳೂ ಇವೆ. ಸೃಜನಶೀಲ ಅಭಿವ್ಯಕ್ತಿಗಿಂತಲೂ ಎದುರಿನ ದೃಶ್ಯಗಳನ್ನು ಬಹುತೇಕ ಯಥಾವತ್ತಾಗಿಯೇ ಹಿಡಿದಿಡುವ ಆಶಯ ಇವರದ್ದು. ಆಕಾಡೆಮಿಕ್‌ನೆಲೆಯ ಕೆಲವು ಜಲವರ್ಣ ಚಿತ್ರಗಳು ನಿರ್ವಹಣೆಯಲ್ಲಿ ಪರಿಣಾಮಕಾರಿಯಾಗಿವೆ. ಮತ್ತೆ ಕೆಲವು ಸಾಮಾನ್ಯ ನೆಲೆಯಲ್ಲಿವೆ. ತೈಲ ಮಾಧ್ಯಮದ ಕೃತಿಗಳಲ್ಲಂತೂ ಜಲವರ್ಣದ ಕೃತಿಗಳಲ್ಲಿರುವ ತೀವ್ರತೆಯಾಗಲೀ, ಚೈತನ್ಯವಾಗಲೀ ಕಂಡುಬರುವುದಿಲ್ಲ. ಹೀಗೆ ನಿಸರ್ಗದಲ್ಲಿನ ಸೌಂದರ್ಯವನ್ನು ಮೆರೆಸುವ ಈ ಕೃತಿಗಳಲ್ಲಿ ಕೆಲವೆಡೆ ಆಳದ, ದೂರದ ಭಾವನೆಗಳನ್ನು ಮೂಡಿಸುವಲ್ಲಿ ಈ ಕಲಾವಿದ ಯಶಸ್ವಿಯಾಗಿದ್ದಾರೆ ಎಂಬುವುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಚರ್ಚಿಸಿದ್ದಾರೆ.

**೪೧. ರಾಜರಿಲ್ಲಿ ಸಾಮಾನ್ಯ, ಸಾಮಾನ್ಯರದೂ ಅನನ್ಯ**[೪೧]

ನವದೆಹಲಿಯ 'ಔಟ್‌ಲುಕ್' ಪತ್ರಿಕೆಯ ಚಿತ್ರ ಸಂಪಾದಕರಾದ ಪ್ರಶಾಂತ್ ಪಂಜಿಯಾರ್ ಅವರ 'ಕಿಂಗ್ಸ್ ಅಂಡ್ ಕಾಮನರ್ಸ್' ಶೀರ್ಷಿಕೆಯಲ್ಲಿನ ಛಾಯಾಚಿತ್ರಗಳ ಪ್ರದರ್ಶನವು ಬೆಂಗಳೂರಿನ ಚಿತ್ರಕಲಾ ಗ್ಯಾಲರಿಯಲ್ಲಿ ನಡೆಯಿತು. ಈ ಕುರಿತಂತೆ ಲೇಖನವನ್ನು ಕೃ.ಸೆ.ಯವರು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೩/೫/೨೦೦೦ರಂದು ಪ್ರಕಟಿಸಿದ್ದಾರೆ. ಆ ಕುರಿತ ಸಂಕ್ಷಿಪ್ತ ವಿವರ ಇಂತಿದೆ. ರಾಜ, ಮಹಾರಾಜರ ಮತ್ತು ದೇಶದ ಪ್ರಧಾನ ಮಂತ್ರಿಗಳ ಹಾಗೂ ಶ್ರೇಣೀಕೃತ ವ್ಯವಸ್ಥೆಯಲ್ಲಿನ ಇನ್ನೊಂದು ತುದಿಯಲ್ಲಿರುವ ಶ್ರೀಸಾಮಾನ್ಯನ ಕುರಿತ ಚಿತ್ರಗಳೂ ಇಲ್ಲಿವೆ. ಒಂದು ಕಾಲದಲ್ಲಿ ಬಹುಪರಾಕ್ ಹೇಳಿಸಿಕೊಂಡು ರಾಜವೈಭವದಲ್ಲಿ ಮೆರೆದ ಹಲವಾರು ಮಹಾರಾಜರುಗಳು ವರ್ತಮಾನದಲ್ಲಿ ಸಾಮಾನ್ಯ ಮಟ್ಟಕ್ಕೆ ಇಳಿದಿದ್ದಾರೆ. ಕೆಲವರಂತೂ ನಿಜವಾದ ಅರ್ಥದಲ್ಲಿ ಭಿಕಾರಿಗಳೇ ಆಗಿದ್ದಾರೆ. ಅವರ ಇಂದಿನ ಜೀವನ ಶೈಲಿಯನ್ನು ಪರಿಚಯಿಸುವ ವೈವಿಧ್ಯಮಯ ಚಿತ್ರಣ ಇಲ್ಲಿದೆ. ಈ ಪ್ರತಿಯೊಂದು ಚಿತ್ರವೂ ತನ್ನದೇ ಅದ ವಿಶಿಷ್ಟ ಕಥೆಯನ್ನು ನಿರೂಪಿಸುವಷ್ಟು ಪರಿಣಾಮಕಾರಿಯಾದ ಸನ್ನಿವೇಶ ನಿರ್ಮಾಣ ಇಲ್ಲಿದೆ. ಕೆಲವರು ಆಂಟಿಕ್‌ಗಳಂತೆ ರಾಜ ವೈಭವದ ಚಿಹ್ನೆಗಳನ್ನು ಹಿಡಿದುಕೊಂಡಿದ್ದರೆ, ಮತ್ತೆ ಕೆಲವರು ತಾವು ರಾಜರ ವಂಶದವರೆನ್ನುವುದನ್ನು

೪೦. ಆಕಾಡೆಮಿಕ್ ನಿಸರ್ಗ, ಅದೇ

೪೧. ರಾಜರಿಲ್ಲಿ ಸಾಮಾನ್ಯ, ಸಾಮಾನ್ಯರದೂ ಅನನ್ಯ, ಕರ್ನಾಟಕ ದರ್ಶನ,ಪ್ರಜಾವಾಣಿ, ೧೩,ಮೇ,೨೦೦೦

ಮರೆಯುವಷ್ಟು ಆಧುನಿಕದವರಾಗಿದ್ದಾರೆ. ಆದರೆ ಇವು ಇಷ್ಟಕ್ಕೆ ಸೀಮಿತಗೊಂಡಿಲ್ಲ. ಕಲೆಯ ದೃಷ್ಟಿಯಿಂದ ತುಂಬ ಮುಖ್ಯವಾದ ಚಿತ್ರ ಸಂಯೋಜನೆ, ನೆರಳು-ಬೆಳಕಿನ ಯೋಜನೆ ಇವುಗಳನ್ನು ವಿಶಿಷ್ಟವಾಗಿ ದುಡಿಸಿಕೊಳ್ಳುವಲ್ಲಿ ಯಶಸ್ವಿಯಾಗಿವೆ. ಇದರೊಂದಿಗೆ ಜನಸಾಮಾನ್ಯರ ಬವಣೆಗಳನ್ನು ದೃಶ್ಯಗಳ ಮೂಲಕ ಯಶಸ್ವಿಯಾಗಿ ಹಿಡಿದಿಡುವ ಕೆಲಸವನ್ನು ಇವರು ತುಂಬಾ ಪರಿಣಾಮಕಾರಿಯಾಗಿ ಮಾಡಿದ್ದಾರೆ. ಕಲಾತ್ಮಕ ದೃಷ್ಟಿಯಿಂದ ಇವರ ಕಲಾಕೃತಿಗಳು ಅತ್ಯಂತ ಮುಖ್ಯವಾಗಿವೆ ಎಂಬುದನ್ನು ಲೇಖಕರು ಇಲ್ಲಿ ವಿಶೇಷವಾಗಿ ಚರ್ಚಿಸಿದ್ದಾರೆ.

**೪೨. ಪೌರ್ವಾತ್ಯದ ಹಲವು ಮುಖಗಳು**[೪೨]

ಬೆಂಗಳೂರಿನ ವಿಂಡ್ಸರ್ ಮ್ಯಾನರ್ ಹೋಟೆಲಿನಲ್ಲಿ ನಡೆದ ಕಲಾವಿದರಾದ ಲೀಲಾ ತ್ಯಾಗಿ ಹಾಗೂ ಉಮಾ ಗೌತಮ್ ಅವರ ಕೃತಿಗಳ ಪ್ರದರ್ಶನ ಕುರಿತಂತೆ ಲೇಖನವನ್ನು ಕೃ.ಸೆ.ಯವರು ರಚಿಸಿದ್ದು, ಆ ವಿವರ ಈ ಮುಂದಿನಂತಿದೆ.

ಲೀಲಾ ಅವರು ತಮ್ಮ ಕೃತಿಗಳನ್ನು 'ಪೈಂಟಿಂಗ್ ಡ್ರಾಯಿಂಗ್ಸ್' ಎಂದು ಕರೆದಿರುವುದು ಉಚಿತವಾಗಿದೆ. ಚಿತ್ರ ಯೋಜನೆಯಲ್ಲಿ ಹಲವಾರು ಪೌರ್ವಾತ್ಯ ಕಲೆಯ ಅಂಶಗಳನ್ನು ಅಳವಡಿಸಿಕೊಂಡಿದ್ದೂ, ಸಮತಟ್ಟಾದ ದೃಗ್ದರ್ಶನ (ಪರ್ಸ್‌ಪೆಕ್ಟಿವ್) ಅವುಗಳಲ್ಲೊಂದು. ಶೈಲೀಕೃತ ಗೊಂಡ ನಿಸರ್ಗವಿರುವ ಇವರ ಕೃತಿಗಳಲ್ಲಿ ಸೂರ್ಯ, ಚಂದ್ರರು ಎಲ್ಲೆಡೆ ಬರುತ್ತಾರೆ. ಎಲ್ಲೆಡೆ ಪೌರ್ವಾತ್ಯ ಕಲೆಯ ಅಂಶಗಳಿವೆಯಾದರೂ, ವ್ಯಕ್ತಿಗಳ ಮುಖಗಳು ಮಾತ್ರ ಪಾಶ್ಚಾತ್ಯವೆನಿಸುವಂತಿವೆ. ಹೀಗೆ ಲೀಲಾ ಅವರ ಕೃತಿಗಳು ವಿಭಿನ್ನ ಧೋರಣೆಗಳನ್ನು ಒಗ್ಗೂಡಿಸಿ ರಚಿಸಿದವುಗಳಾಗಿವೆ. ಭಾವನಾತ್ಮಕ ದೃಷ್ಟಿಯಿಂದಲೂ ಲೀಲಾ ಅವರ ಕೃತಿಗಳು ಕನಸಿನ ಲೋಕವೊಂದನ್ನು ಕಟ್ಟಿಕೊಡುತ್ತವೆ. ಎಲ್ಲ ಕೃತಿಗಳಲ್ಲಿ ಬೂದು ವರ್ಣ ಪ್ರಧಾನವಾಗಿದ್ದು ಸೀಮಿತ ವರ್ಣಗಳನ್ನು ಬಳಸಿಕೊಂಡಿರುವುದರಿಂದ ಸರಳತೆಯಲ್ಲಿಯೇ ಮಹಾನತೆಯನ್ನು ಪ್ರದರ್ಶಿಸುವ ಪರಿ ಇಲ್ಲಿ ಕಂಡುಬರುತ್ತಿದ್ದೂ, ಹೊಸ ಅನುಭವ ನೀಡುವಷ್ಟು ಗಮನಾರ್ಹವಾಗಿವೆ.

ಅದೇ ರೀತಿ ಉಮಾ ಗೌತಮ್ ಅವರದು ಮೂಲತಃ ಸಾಹಿತ್ಯ ಕ್ಷೇತ್ರ, ಸ್ವಂತ ಅಭ್ಯಾಸದಿಂದ ಕಲೆಯನ್ನು ಕಲಿತ ಇವರು ಇತ್ತೀಚೆಗೆ ಆ ಮೂಲಕ ವ್ಯಕ್ತಿಯೊಬ್ಬನ ಆತಂಕ ಜೀವನವನ್ನು ತೆರೆದಿಡುವ ಪ್ರಯತ್ನ ಮಾಡುತ್ತಿದ್ದಾರೆ. ವರ್ಣ ಸಂಯೋಜನೆಯೂ ಶೀತಲ ನೆಲೆಯಲ್ಲಿದೆ. ಆದರೆ ಕೃತಿಗಳ ನಿರ್ವಹಣೆಯಲ್ಲಿನ ಪರಿಪಕ್ವತೆಯಲ್ಲಿ ಸ್ವಲ್ಪ ಹಿನ್ನಡೆಯಿಂದಾಗಿ ಇವು ಅಲಂಕರಣದ ನೆಲೆಯಲ್ಲಿಯೇ ನಿಂತು ಬಿಡುವ ಸಾಮಾನ್ಯ ಕೃತಿಗಳಾಗುವ ಅಪಾಯವನ್ನು ತನ್ನೊಳಗೆ ತುಂಬಿಕೊಂಡಿವೆ ಎನ್ನುವುದನ್ನು ಲೇಖಕರು ಗುರುತಿಸಿದ್ದಾರೆ.

---

೪೨. ಪೌರ್ವಾತ್ಯದ ಹಲವು ಮುಖಗಳು, ಕರ್ನಾಟಕ ದರ್ಶನ,ಪ್ರಜಾವಾಣಿ ೧೩, ಮೇ, ೨೦೦೦

**೪೩. ವೈವಿಧ್ಯಮಯ ಶಿಲ್ಪಗಳು**[೪೩]

ಕೇರಳದ ಎಂ.ನಂದ ಕುಮಾರ್ ಅವರು ಬರೋಡ ಕಲಾಶಾಲೆಯಲ್ಲಿ ಕಲಾ ಇತಿಹಾಸವನ್ನು ಕಲಿತವರು. ಸದ್ಯಕ್ಕೆ ಋಷಿ ವ್ಯಾಲಿ ಶಾಲೆಯಲ್ಲಿ ಶಿಕ್ಷಕರಾಗಿರುವ ಇವರ ಶಿಲ್ಪ ಕೃತಿಗಳ ಪ್ರದರ್ಶನವು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ನಂದಕುಮಾರ್ ಅವರು ಈ ಪ್ರದರ್ಶನದಲ್ಲಿ ವಿವಿಧ ಶೈಲಿಗಳಲ್ಲಿನ ಸಮಕಾಲೀನ ಶಿಲ್ಪಗಳನ್ನು ಪ್ರದರ್ಶಿಸಿದ್ದಾರೆ. ಕುತೂಹಲಕರ ಸನ್ನಿವೇಶಗಳಲ್ಲಿರುವ ಈ ಶಿಲ್ಪಗಳಲ್ಲಿ ವಸ್ತು–ರೂಪಗಳಂತೆಯೇ ತಾತ್ವಿಕ ಅಂಶಗಳು ಗಾಢವಾಗಿವೆ. ಆದರೆ ಅಭಿವ್ಯಕ್ತಿಯಲ್ಲಿ ಸಂಕೀರ್ಣತೆಯಿಲ್ಲದೆ ಸರಳತೆಯಿರುವುದು ಇಲ್ಲಿನ ವೈಶಿಷ್ಟ್ಯ. ಆದರೆ ಈ ಸರಳ ಕೃತಿಗಳು ವಿಪರೀತ ವೈವಿಧ್ಯದಿಂದಾಗಿ ಆಳದಲ್ಲಿ ಪರಿಣಾಮ ಬೀರುವಲ್ಲಿ ಅಷ್ಟಾಗಿ ಯಶಸ್ವಿಯಾಗಿಲ್ಲ. ಆದರೆ ಪಾದಗಳನ್ನು ಬಳಸಿಕೊಂಡಿರುವ ಶಿಲ್ಪವೊಂದು ಗಮನಾರ್ಹವಾಗಿದೆ ಎನ್ನುವುದನ್ನು ಕೃ.ಸೆ.ಯವರು ಈ ಲೇಖನದಲ್ಲಿ ಚರ್ಚಿಸಿದ್ದಾರೆ.

**೪೪. ಸಾಂಪ್ರದಾಯಿಕ ನೆಲೆ ಪಡೆದುಕೊಳ್ಳುತ್ತಿರುವ ಜನಪದ ಕಲೆಗಳು**[೪೪]

ಬೆಂಗಳೂರಿನ ದೇಶದ ಗ್ರಾಮೀಣ ಪ್ರದೇಶದ ಜನಪದ ಕಲಾ ಚಳುವಳಿಯನ್ನು ನಗರದ ಜನತೆಗೆ ಪರಿಚಯ ಮಾಡಿಕೊಡಲು ಈ 'ಕಲಾ ಮಾಧ್ಯಮ' ಹೆಸರಿನಲ್ಲಿ ಮಾಧ್ಯಮ್ ಹಾಗೂ ಹೋಟೆಲ್ ಒಬೆರಾಯ್‌ಗಳು ಸಂಯುಕ್ತವಾಗಿ ಹಮ್ಮಿಕೊಂಡಿದ್ದವು. ಇದರಲ್ಲಿ ಗುಜರಾತಿನ ಪೀಠೋರಾ, ಬಿಹಾರದ ಮಧುಬನಿ, ಮಹಾರಾಷ್ಟ್ರದ ವರ್ಲಿ, ರಾಜಸ್ತಾನದ ಪರ್ಧ್ ಹಾಗೂ ಕರ್ನಾಟಕದ ಚಿತ್ತಾರ ಪ್ರಕಾರದ ಕೃತಿಗಳ ಪ್ರದರ್ಶನ ಹಾಗೂ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಲಾಗಿತ್ತು.

ದೇಶದ ದೂರ ದೂರ ಪ್ರದೇಶಗಳ ಪ್ರಕಾರಗಳು ನಮಗೆ ಸಾಕಷ್ಟು ಪರಿಚಿತವಾಗಿದ್ದರೂ ಚಿತ್ತಾರ ಪ್ರಕಾರವು ಅಷ್ಟಾಗಿ ಬೆಳಕಿಗೆ ಬಂದಿಲ್ಲ. ಶರಾವತಿ ಹಿನ್ನೀರಿನ ಪ್ರದೇಶದಲ್ಲಿ ಅಂದರೆ ಶಿವಮೊಗ್ಗ ಜಿಲ್ಲೆಯ ಹಸುವಂತೆ, ಹೊನ್ನೆಮರಡು ಮತ್ತು ಮಂಜಿನಕಾನು ಪ್ರದೇಶಗಳಲ್ಲಿ ಶತಮಾನಗಳ ಹಿಂದಿನ ಚಿತ್ತಾರ ಪ್ರಕಾರವು ಚಲಾವಣೆಯಲ್ಲಿದೆ. ದೀವರು ಜನಾಂಗದ ಮಹಿಳೆಯರು ಗೋಡೆಗಳ ಮೇಲೆ ರಚಿಸುವ ಈ ಪ್ರಕಾರವು ಚಲಾವಣೆಯಲ್ಲಿದ್ದರೂ ನಶಿಸುವ ಹಂತದಲ್ಲಿದೆ. ಅಲ್ಲಿನ ಅಶಿಕ್ಷಿತ ಮಹಿಳೆ ಲಕ್ಷ್ಮಕ್ಕ ಮತ್ತಿತರರು ಈ ಕಲೆಗೆ ಪುನಶ್ಚೇತನ ನೀಡಲು ಪ್ರಯತ್ನಿಸುತ್ತಿದ್ದಾರೆ. ಈ ಚಿತ್ತಾರ ಪ್ರಕಾರವನ್ನು ಬೆಂಗಳೂರಿನ ಕಲಾವಲಯಕ್ಕೆ ಪರಿಚಯಿಸುವ ಪ್ರಯತ್ನ ನಡೆದದ್ದು ಇಲ್ಲಿ ನಿಜಕ್ಕೂ ಶ್ಲಾಘನೀಯ. ಈ ಪ್ರಕಾರದ ಹಲವು ಕೃತಿಗಳನ್ನು ಇಲ್ಲಿ ಪ್ರದರ್ಶಿಸಲಾಗಿತ್ತು. ಸಾಮಾನ್ಯವಾಗಿ

---

೪೩. ವೈವಿಧ್ಯಮಯ ಶಿಲ್ಪಗಳು, ಅದೇ

೪೪. ಸಾಂಪ್ರದಾಯಿಕ ನೆಲೆ ಪಡೆದುಕೊಳ್ಳುತ್ತಿರುವ ಜನಪದ ಕಲೆಗಳು, ಕರ್ನಾಟಕ ದರ್ಶನ, ಪ್ರಜಾವಾಣಿ, ೨೦, ಮೇ, ೨೦೦೦

ಮಣ್ಣಿನ ಗೋಡೆಗಳ ಮೇಲೆ ರಚಿಸುವ ಈ ಕೃತಿಗಳನ್ನು ಇಲ್ಲಿ ಕಾಗದದ ಮೇಲೆ ರಚಿಸಲಾಗಿತ್ತು. ಅತಿ ಹೆಚ್ಚಿನ ಕುಸುರಿ ಕೆಲಸ, ಸಂಕೀರ್ಣ ಹಾಗೂ ನಿಬಿಡ ವಿನ್ಯಾಸಗಳುಳ್ಳ ಈ ಪ್ರಕಾರದಲ್ಲಿ ಬಹುತೇಕ ಹಳ್ಳಿಯ ಜನಜೀವನದ ಚಿತ್ರಗಳೇ ಇವೆ. ಅದರಲ್ಲೂ ವಿಶೇಷವಾಗಿ ಮದುವೆಯ ಸಂದರ್ಭದಲ್ಲಿ ಗೋಡೆಗಳ ಮೇಲೆ ರಚಿಸುವ 'ಹಸೆಗೋಡೆ' ಚಿತ್ರಗಳಿಗೆ. ಏಕವರ್ಣ ಪ್ರಧಾನವಾದ ಇವುಗಳನ್ನು ಮುಖ್ಯವಾಗಿ ಬಿಳಿ, ಕಪ್ಪು, ಕೆಂಪು ಹಾಗೂ ಹಳದಿ ಬಣ್ಣಗಳಲ್ಲಿ ರಚಿಸಲಾಗಿದೆ. ಇಲ್ಲಿ ನಿಸರ್ಗದತ್ತ ಬಣ್ಣಗಳನ್ನು ಬಳಸಿರುವುದು ಇಲ್ಲಿನ ವೈಶಿಷ್ಟ್ಯ. ತಕ್ಷಣಕ್ಕೆ ರಂಗೋಲಿಯ ನೆನಪು ತರುವಂತಿರುವ ಈ ಕೃತಿಗಳಲ್ಲಿ ಜಾಮಿತೀಯ ಹಾಗೂ ಅಲಂಕರಣದ ಆಕೃತಿಗಳೇ ತುಂಬಿವೆ. ಅಲಂಕರಣಕ್ಕೆ ಪ್ರಾಧಾನ್ಯತೆ ದೊರೆತು ತುಂಬ ವಿರಳವಾಗಿ ಒಂದೆರಡು ಕಡೆ ಮಾತ್ರ ವ್ಯಕ್ತಿಗಳ ಆಕೃತಿಗಳಿರುವ ಇವುಗಳು ಜನಪದ ಪ್ರಕಾರದ್ದಾದರೂ ಆಧುನಿಕತೆ ಸ್ಪರ್ಶ ಪಡೆದಿರುವಂತಿದೆ.

ಉಳಿದಂತೆ ಇಲ್ಲಿ ತಕ್ಷಣಕ್ಕೆ ಗಮನ ಸೆಳೆಯುವ ಪ್ರಕಾರವೆಂದರೆ ರಾಜಸ್ತಾನದ ಪರ್ಡ್ ಕೃತಿಗಳು. ಪ್ರಖರವಾದ ವರ್ಣಗಳಲ್ಲಿ ತೆರೆಯ ಮೇಲೆ ರಚಿಸಿದ ಈ ಕೃತಿಯಲ್ಲಿ ಬಿಕಣಿ ಚಿತ್ರಗಳ ಪ್ರಭಾವವೂ ಇದೆ. ಬಿಹಾರದ ಮಧುಬನಿ ಕೂಡಾ ಸಾಕಷ್ಟು ಪ್ರಸಿದ್ಧವಾದ ಜನಪದ ಪ್ರಕಾರ. ರಾಮಾಯಣ ಹಾಗೂ ಮಹಾಭಾರತಗಳನ್ನು ಕುರಿತ ಈ ಕೃತಿಗಳಲ್ಲಿ ಪ್ರಖರ ಹಾಗೂ ಚೈತನ್ಯದಾಯೀ ವರ್ಣಮೇಳವಿದೆ. ಪ್ರಾಯಶಃ ವಾಣಿಜ್ಯ ಮಾರುಕಟ್ಟೆಯ ಕಾರಣದಿಂದಾಗಿ ಇಲ್ಲೆಲ್ಲ ಢಾಳದ ವರ್ಣಮೇಳ ಬಂದಿದೆ. ಶೈಲಿಯ ದೃಷ್ಟಿಯಿಂದಲೂ ವಿಶಿಷ್ಟ ವಿರೂಪವುಳ್ಳ ಕೃತಿಗಳಿವು. ಇಲ್ಲಿನ ಕೃತಿಗಳಲ್ಲಿ ಸಾಕಷ್ಟು ಪ್ರಸಿದ್ಧವಾದ ಇನ್ನೊಂದು ಪ್ರಕಾರವೆಂದರೆ ವರ್ಲಿ ಕೃತಿಗಳು.

ಮಹಾರಾಷ್ಟ್ರದ ಗುಡ್ಡಗಾಡಿನ ವರ್ಲಿ ಜನಾಂಗದವರ ಚಿತ್ರಗಳು ಇವುಗಳಲ್ಲಿನ ವೈಶಿಷ್ಟ್ಯವೆಂದರೆ ವಿಶಿಷ್ಟ ಶೈಲಿಯ ಸರಳೀಕೃತ ವ್ಯಕ್ತಿಗಳು. ಗುಹಾ ಚಿತ್ರಗಳಲ್ಲಿರುವಂತೆ ವ್ಯಕ್ತಿಯ ಅತ್ಯಂತ ಸರಳ ರೂಪಗಳುಳ್ಳ ಇವುಗಳ ಚಿತ್ರ ಯೋಜನೆಯಲ್ಲಿ ವೃತ್ತಾಕಾರದಲ್ಲಿ ಸಾಗುವಿಕೆ ಗಮನಾರ್ಹವಾದುದು. ಬಹುತೇಕ ಬೇಸಾಯಕ್ಕೆ ಸಂಬಂಧಿಸಿದ ಈ ಕೃತಿಗಳಲ್ಲಿ ಅಲ್ಲಿನ ಸಾಮಾನ್ಯ ಜನರ ಕಲಾ ಪ್ರೌಢಿಮೆಯ ಪರಿಚಯವಾಗುತ್ತವೆ. ರೇಖೆಗಳ ದೃಷ್ಟಿಯಿಂದ ಇಲ್ಲಿ ಗಮನ ಸೆಳೆಯುವ ಇನ್ನೊಂದು ಪ್ರಕಾರವೆಂದರೆ ಬಿಹಾರದ ಹಚ್ಚೆ(ಟಾಟ್ಟೂ) ಚಿತ್ರಗಳು ಅಲೆಮಾರಿ ಜನಾಂಗದ ಬಂಜಾರರು ರಚಿಸುವ ಈ ಕೃತಿಗಳಲ್ಲಿ ಶಿಷ್ಟ ಕಲೆಯಲ್ಲಿರುವಂತೆ ಹರಿತವಾದ, ಖಚಿತವಾದ ರೇಖೆಗಳ ನಿರ್ವಹಣೆಯಿದ್ದು ಇವು ಗಮನ ಸೆಳೆಯುತ್ತವೆ.

ಈ ಎಲ್ಲ ಜನಪದ ಕಲಾ ಪ್ರಕಾರಗಳೂ ಕಾಲ ಕ್ರಮೇಣ ಸಾಂಪ್ರದಾಯಿಕ ಹಾಗೂ ಶಿಷ್ಟ ಕಲೆಯ ಹಲವಾರು ಅಂಶಗಳನ್ನು ದುಡಿಸಿಕೊಂಡಿವೆ. ಹಾಗೆಯೇ ಜನಪದ ಕಲೆಯಲ್ಲಿ ಸ್ವಾಭಾವಿಕವಾದ ಒರಟುತನವನ್ನು ನಿರಾಕರಿಸಿ ನೀಟಾದ ನಿರ್ವಹಣೆಗೆ ಇವು ಬದ್ಧವಾಗುತ್ತಿವೆ. ಜೊತೆಗೆ ಇವುಗಳಲ್ಲಿ

ಆಳದ ಭಾವನೆಯನ್ನು ತ್ಯಜಿಸಿ, ದೂರವಿಲ್ಲದ ಸಮತಟ್ಟಾದ (Flat) ನಿರ್ವಹಣೆಗೆ ಇಲ್ಲಿ ಆದ್ಯತೆ ನೀಡಲಾಗಿದೆ. ಹೀಗೆ ಈ ಜನಪದ ಪ್ರಕಾರಗಳಲ್ಲಿ ಶೈಲಿ, ಮಾಧ್ಯಮ, ನಿರ್ವಹಣೆಗಳು ಬೇರೆಯಾದರೂ ಸಮಾನವೆನಿಸುವ ಕೆಲವು ಅಂಶಗಳೂ ಇವೆ. ಆ ಆರೂ ಪ್ರಕಾರಗಳನ್ನು ಒಂದೆಡೆ ತರುವ ಮೂಲಕ ಮಾಧ್ಯಮ್ ಸಂಸ್ಥೆಯು ಶ್ಲಾಘನೀಯ ಕೆಲಸ ಮಾಡಿದೆ ಎಂಬುದನ್ನು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೦/೫/೨೦೦೦ರಂದು ಪ್ರಕಟವಾದ ಈ ಲೇಖನದಲ್ಲಿ ಲೇಖಕರು ಗುರುತಿಸಿದ್ದಾರೆ.

**೪೫. ಅಲಂಕರಣಕ್ಕೆ ಆದ್ಯತೆ**[೪೫]

ಬೆಂಗಳೂರಿನ ಶೀರಾ ಬೆಟ್ಟನಾಗ್ ಅವರ ಕಲಾಕೃತಿಗಳ ಪ್ರದರ್ಶನವು ಬೆಂಗಳೂರಿನ ಕೆ.ಸಿ.ದಾಸ್ ಗ್ಯಾಲರಿಯಲ್ಲಿ ನಡೆಯುತ್ತಿದೆ. ಕಾಗದದ ಮೇಲೆ ವಿಶಿಷ್ಟ ತಂತ್ರದಲ್ಲಿ ರಚಿಸಿದ ಈ ಕೃತಿಗಳ ಮುಖ್ಯ ವಸ್ತು ಸಸ್ಯ ಸಂಪತ್ತು, ಈ ಸಸ್ಯ, ಹೂವುಗಳನ್ನು ಶೈಲೀಕೃತಗೊಳಿಸಿ ಅಲಂಕರಣದೆಡೆಗೆ ತಿರುಗಿಸಿದ್ದಾರೆ. ಇಲ್ಲಿನ ತಂತ್ರ, ವರ್ಣ ಮೇಳಗಳೂ ಅಲಂಕರಣಕ್ಕೆ ಪೂರಕವಾಗಿವೆ. ಕೆಲವು ಅಮೂರ್ತ ಕೃತಿಗಳೂ ಇಲ್ಲಿದ್ದು, ಅವು ಅತ್ಯಂತ ಸರಳವಾಗಿ ಮೂಡಿ ಬಂದಿವೆ ಎಂದು ಕೃ.ಸೆ.ಯವರು ಈ ಲೇಖನದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

**೪೬. ಗ್ರಾಮ್ಯ ಲಯ ಹಿಡಿಯಬಯಸುವ ವರ್ತಮಾನ**[೪೬]

ಬೆಂಗಳೂರಿನ ಫಿಲಿಪ್ಸ್ ಸಾಫ್ಟ್‌ವೇರ್ ಸೆಂಟರ್ ಶಿಲ್ಪ ಶಿಬಿರ ಮತ್ತು ಪ್ರದರ್ಶನವನ್ನು ಅಲ್ಲಿನ ಸಾಕ್ಷಿ ಗ್ಯಾಲರಿ ಹಾಗೂ ಸಿನ್ನಮಾನ್ ಗ್ಯಾಲರಿಗಳಲ್ಲಿ ಏರ್ಪಡಿಸಿತ್ತು. ಇವುಗಳ ಮಹತ್ವದ ಕುರಿತಾಗಿ ಕೃ.ಸೆ.ಯವರು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ (೨೯/೭/೨೦೦೦) ಪ್ರಕಟಿಸಿದ ಲೇಖನದಲ್ಲಿ ಕಲಾವಿದ ಭೂಪಾಲದ ಜಿ.ರಘು ಅವರ ಕಲಾ ವೈಶಿಷ್ಟ್ಯತೆಯನ್ನು ದಾಖಲಿಸುವ ಪ್ರಯತ್ನ ಮಾಡಿದ್ದಾರೆ. ಮೂಲತಃ ಕೇರಳದವರಾದರೂ ಪ್ರಸ್ತುತ ಭೂಪಾಲ್‌ನಲ್ಲಿರುವ ಜಿ.ರಘು ಅವರು ನಮ್ಮ ಬೆಂಗಳೂರಿನ ಕಲಾವಲಯಕ್ಕೆ ಸಾಕಷ್ಟು ಪರಿಚಿತರೇ. ಈವರೆಗೂ ಒಂದು ನಿರ್ದಿಷ್ಟ ಶೈಲಿಯ ಕೃತಿಗಳಿಗೆ ಹೆಸರಾಗಿದ್ದ ಅವರು ಈಚೆಗೆ ತಮ್ಮ ದಾರಿಯನ್ನು ಬದಲಾಯಿಸಿದ್ದಾರೆ. ಆದರೆ ದಾರಿ ಬದಲಾದರೂ ಅವರು ಹಿಂದಿನ ಲಯವನ್ನೇ ಈ ಕೃತಿಗಳಲ್ಲಿ ಮೇಲ್ನೋಟಕ್ಕೆ ಕಾಣಬಹುದಾದರೂ ಅವುಗಳಲ್ಲಿ ಹಲವು ಹೊಸ ವೈವಿಧ್ಯಗಳನ್ನು ಕಾಣಬಹುದಾಗಿದೆ. ಅವರ ಕೃತಿಗಳಲ್ಲಿ ಮಕ್ಕಳಲ್ಲಿರುವಂತಹ ಆಕೃತ್ತಿಮ. ನಿಷ್ಕಪಟ (ನೇಯ್ವ್) ಗುಣಲಕ್ಷಣಗಳಿರುತ್ತವೆ. ಅವರು 'ಅಶಿಕ್ಷಿತ' ಜನರ ಮುಗ್ಧ ಮನಸ್ಸನ್ನು ತಮ್ಮ ಕಲೆಯಲ್ಲಿ ಯಶಸ್ವಿಯಾಗಿ ಅಳವಡಿಸಿಕೊಂಡಿದ್ದಾರೆ.

---

೪೫. ಅಲಂಕರಣಕ್ಕೆ ಆದ್ಯತೆ, ಕರ್ನಾಟಕ ದರ್ಶನ,ಪ್ರಜಾವಾಣಿ ೨೦, ಮೇ, ೨೦೦೦

೪೬. ಗ್ರಾಮ್ಯ ಲಯ ಹಿಡಿಯ ಬಯಸುವ ವರ್ತಮಾನ, ಕ. ದರ್ಶನ, ಪ್ರಜಾವಾಣಿ, ೨೯, ಜುಲೈ, ೨೦೦೦

ರಘು ಅವರು ತಮ್ಮ ವಿಶಿಷ್ಟ ಶೈಲಿಯ ಕುಂಭಗಳಂತಹ ಎದೆಮೊಗದ (ಬಸ್ಟ್) ಶಿಲ್ಪಗಳನ್ನೇ ಹೆಚ್ಚಾಗಿ ಪ್ರದರ್ಶಿಸುತ್ತಿದ್ದು, ಅವುಗಳಲ್ಲಿ ಮುಗ್ದ ಭಾವವೇ ಎದ್ದು ಕಾಣುತ್ತದೆ. ಸಾಮಾನ್ಯವಾಗಿ ಮನುಷ್ಯನ ಭಾವನೆಗಳನ್ನು ಸ್ಪಷ್ಟಪಡಿಸುವಲ್ಲಿ ಕಣ್ಣಿನ ಪಾತ್ರ ಹಿರಿದು. ಆದರೆ ಇವರು ತಮ್ಮ ಬಹುತೇಕ ಕೃತಿಗಳಲ್ಲಿ ಕಣ್ಣುಗಳನ್ನು ಕೇವಲ ತೂತುಗಳ ಮೂಲಕವೇ ಸೂಚಿಸುತ್ತಿದ್ದುದರಿಂದ ಅವರು ತಟಸ್ಥವೆನಿಸುತ್ತಿತ್ತು. ಉಳಿದಂತೆ ಮುಖದಲ್ಲಿ ಅತಿರೇಕದ ಭಾವನೆಗಳೂ ಇರುತ್ತಿರಲಿಲ್ಲ. ಹೀಗಾಗಿ ಮಕ್ಕಳಲ್ಲಿ ಕಾಣುವಂತ ಮುಗ್ಧತೆಯನ್ನು ಹೊತ್ತಿರುವಂತಹ ವಿಸ್ಮಯವೇ ಅವುಗಳಲ್ಲಿ ಕಂಡುಬರುತ್ತಿತ್ತು. ಅವು ಸರಳೀಕೃತ ಎನಿಸಿದರೂ ತಮ್ಮೊಳಗೆ ಇಟ್ಟುಕೊಂಡಂತಹ ಮುಗ್ಧ, ನಿಷ್ಕಪಟ ಗುಣಗಳಿಂದಾಗಿ ಇವು ಪ್ರಭಾವಶಾಲಿ ಕೃತಿಗಳೆನಿಸಿದ್ದವು. ಸಾಮಾನ್ಯವಾಗಿ ಇವರ ಹಿಂದಿನ ಶಿಲ್ಪಿಗಳಿಗಿಂತಲೂ ಭಿನ್ನವಾಗಿ ಉದ್ದೇಶಪೂರ್ವಕವಾಗಿ ದೇಹದ ಸ್ಥಾನವನ್ನು ಟೊಳ್ಳಾಗಿಸಿ ವಸ್ತುಗಳ ಮೂಲಕವೇ ದೇಹದ ಭಾವನೆ ಮೂಡಿಸಿದ್ದಾರೆ. ಈ ಸಾಲಂಕೃತ ರೂಪವು ಈ ಶಿಲ್ಪಗಳಿಗೆ ಗೊಂಬೆಯಂತಹ ಭಾವನೆಯನ್ನು ಆರೋಪಿಸುತ್ತದೆ.

ಇವರ ಕೃತಿಗಳಲ್ಲಿ ಹಲವಾರು ಗ್ರಾಮ್ಯ, ಆದಿಮ ಲಕ್ಷಣಗಳಿವೆಯಾದರೂ ವರ್ಣಮೇಳದ ಸಂದರ್ಭದಲ್ಲಿ ಅವು ಸಾಕಷ್ಟು ಭಿನ್ನವಾಗಿದೆ. ಸಾಮಾನ್ಯವಾಗಿದೆ. ಗ್ರಾಮ್ಯ ಕೃತಿಗಳಲ್ಲಿ ಢಾಳಾದ, ರಾಚುವಂತಹ ವರ್ಣಮೇಳವಿದ್ದರೆ, ಇಲ್ಲಿ ಸೆರಾಮಿಕ್ ಕೃತಿಗಳಲ್ಲಿಯಂತೆ ಸೌಮ್ಯ ನೆಲೆಯ ವರ್ಣಮೇಳವಿದೆ. ಏಕವರ್ಣ ಪ್ರಧಾನವಾದ ಈ ಅಂಶವೂ ಈ ಕೃತಿಗಳ ಕಲಾತ್ಮಕತೆಯನ್ನು ಎತ್ತರಿಸಿದೆ. ಅಂದರೆ ಇವರು ಕೇವಲ ಆಕಾರಗಳ ಅನುಸರಣೆಯಲ್ಲಿ ಗ್ರಾಮ್ಯ ಧೋರಣೆಗಳಿಗೆ ಒಲವು ತೋರಿಸಿದ್ದಾರೆಯೇ ಹೊರತು ಇತರ ಸಂಗತಿಗಳಲ್ಲಿ ಅಲ್ಲ ಎನ್ನುವುದನ್ನು ಇದು ಸ್ಪಷ್ಟಪಡಿಸುತ್ತದೆ. ಇದರಂತೆಯೇ ಆಧುನಿಕ ವಸ್ತ್ರಗಳು, ಪರಿಕರಗಳೂ ಗೊಂಬೆಯಂತಹ ಭಾವನೆಗಳಿಗೆ ಪೂರಕವಾಗಿದೆ. ಹೀಗೆ ಇಲ್ಲಿ ಭೂತ ವರ್ತಮಾನಗಳ ಸಂಲಗ್ನವಿದೆ. ಆದರೆ ಪ್ರದರ್ಶನದಲ್ಲಿ ಈ ಗೊಂಬೆಯ ಲಕ್ಷಣಗಳನ್ನು ಮೀರಿದ ಹಲವಾರು ಕೃತಿಗಳಿವೆ. ಗಮನಾರ್ಹವಾದ ಇನ್ನೊಂದು ಸಂಗತಿಯೆಂದರೆ ರಘು ಅವರು ಇಲ್ಲಿನ ಬಹುತೇಕ ಶಿಲ್ಪಗಳನ್ನು ಒಂದೊಂದು ಗುಂಪಾಗಿ ರೂಪಿಸಿದ್ದಾರೆ. ಹಾಗಾಗಿ ಈ ಗುಂಪಿನ ಪ್ರತಿಯೊಂದು ಶಿಲ್ಪವೂ ಸಮೂಹ ಚಟುವಟಿಕೆಯ ಭಾಗವಾಗಿ ಕೆಲಸ ನಿರ್ವಹಿಸುತ್ತವೆ.

ಒಟ್ಟಾರೆ ಇವರ ಟೆರಕೊಟ್ಟಾ ಮಾಧ್ಯಮದ ಶಿಲ್ಪಗಳು ನಮ್ಮ ಸಂದರ್ಭದಲ್ಲಿ ಹೊಸ ಅನುಭವವನ್ನು ಮುಂದಿಡುವಲ್ಲಿ ಯಶಸ್ವಿಯಾಗಿವೆ ಎಂದು ಲೇಖಕರು ಅಭಿಪ್ರಾಯಪಡುತ್ತಾರೆ.

## ೪೭. ನಂಬಿಕೆಗಳನ್ನು ಒಡೆಯುವ ಗಂಭೀರ ಪ್ರಯತ್ನ[೪೭]

ರಮೇಶ್ ತೇರದಾಳ್ ಅವರು ಗದಗಿನವರು. ಚಿತ್ರಕಲಾ ಪರಿಷತ್ತಿನ ಕಾಲೇಜಿನಲ್ಲಿ ಸ್ನಾತಕೋತ್ತರ ಪದವಿ ಅಭ್ಯಾಸ ಮಾಡಿ ಯುವ ಕಲಾವಿದರಲ್ಲಿ ಗಂಭೀರ ಹೆಜ್ಜೆಗಳನ್ನಿಡುತ್ತಿರುವಂತಹ ಕಲಾವಿದರಾಗಿದ್ದಾರೆ. ಅವರ ಈಚಿನ ಕೃತಿಗಳ ಪ್ರದರ್ಶನವು ಬೆಂಗಳೂರಿನ ಕೆಫೆ ಕಾಫಿಡೇಯ ಎರಡು ಕಡೆಗಳಲ್ಲಿ ನಡೆಯಿತು. 'ಶ್ರೇಷ್ಠ ಆರ್ಟ್ ರಿಸೋರ್ಸ್' ವ್ಯವಸ್ಥೆಗೊಳಿಸಿದ್ದ ಈ ಪ್ರದರ್ಶನದಲ್ಲಿ ಎಂ.ಜಿ.ರಸ್ತೆಯ ಕೆಫೆ ಕಾಫಿಡೇಯಲ್ಲಿ ಇವರ ಚಿಕ್ಕ ಅಳತೆಯ ಹನ್ನೆರಡು ಕೃತಿಗಳನ್ನು ಪ್ರದರ್ಶಿಸಲಾಗಿತ್ತು. ಈ ಕುರಿತಂತೆ ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿ ಅವರ ಕಲಾಕೃತಿಗಳ ವೈಶಿಷ್ಟ್ಯತೆಯನ್ನು ದಾಖಲಿಸಿದ್ದಾರೆ.

ಕೃತಿಯೊಂದರಲ್ಲಿ ಕಥೆ ಹೇಳುವ ಕ್ರಿಯೆಯ ನಿರಾಕರಣೆಯು ಅವುಗಳಲ್ಲೊಂದು. ಒಂದು ಕಥೆ ಹೇಳುವದಕ್ಕಿಂತ/ನಿರೂಪಣೆಗಿಂತ ಆ ಸ್ಥಿತಿಯ ಭಾವವನ್ನು ಹಿಡಿದಿಡುವ ಕಾರ್ಯವನ್ನು ತಮ್ಮ ಕಲಾಕೃತಿಗಳಲ್ಲಿ ಮುಖ್ಯವಾಗಿ ರಮೇಶ್ ಅವರು ಮಾಡಿದ್ದಾರೆ. ಇವರ ಕೃತಿಗಳ ವಸ್ತು ಬಹುತೇಕ ಆಧ್ಯಾತ್ಮಿಕವಾದುದು. ಈ ಆಧ್ಯಾತ್ಮಿಕ ಅನುಭವಗಳನ್ನು ಅವರು ವರ್ತಮಾನದೊಂದಿಗೆ, ಸಮಕಾಲೀನತೆಯೊಂದಿಗೆ ತಳುಕು ಹಾಕುವ ಪ್ರಯತ್ನ ಮಾಡುತ್ತಾರೆ. ಆದರೆ ಅವುಗಳೆಲ್ಲ ವೈಯಕ್ತಿಕವಾದ ಅನುಭವಗಳೇ. 'ಐ ಆ್ಯಮ್ ಫ್ರೀ ನವ್', 'ಹ್ಯಾಂಗಿಗ್ ಮೈ ಸೆಲ್ಫ್', 'ವಿಲ್ ಯು ಪ್ಲೀಸ್', 'ಲಿಸನ್ ಟು ಮಿ', 'ಟ್ರೈಯಿಂಗ್ ಟು ಟೈ ಹ್ಯಾಂಡ್ ವಿತ್ ಅನ್‌ನೋನ್ ಪವರ್' ಮುಂತಾದ ಅವರ ಕೃತಿಗಳ ಶೀರ್ಷಿಕೆ ನೋಡಿದರೆ ಅದು ಮತ್ತಷ್ಟು ಸ್ಪಷ್ಟವಾಗುತ್ತದೆ. ಈ ವೈಯಕ್ತಿಕ ತುಡಿತಗಳನ್ನು ಸಾರ್ವತ್ರಿಕಗೊಳಿಸುವಲ್ಲಿಯೇ ಕಲಾವಿದನ ಜಾಣ್ಮೆ ಅಡಗಿರುತ್ತದೆ. ಅಂತೆಯೇ ಅವರು ಚಿತ್ರಭಾಷೆಯ, ವ್ಯಾಕರಣದ ಮೊರೆ ಹೋಗುತ್ತಾರೆ. ಆದರೆ ಹಲವೆಡೆ ಆ ವ್ಯಾಕರಣವನ್ನು ಒಡೆದು ಹೊಸ ವ್ಯಾಕರಣ ಕಟ್ಟುವಂಥ ಮನಸ್ಥಿತಿ ಇವರದು. ಇವರು ಕ್ಯಾನ್ವಾಸಿನ ಮೇಲೆ ತೆಳುವಾದ ಟ್ರೇಸಿಂಗ್ ಕಾಗದ ಹಚ್ಚಿ ಅದರ ಮೇಲೆ ವಿಶೇಷವಾಗಿ ಕೃತಿ ರಚಿಸಿದ್ದಾರೆ. ಆದರೆ ಆ ಕಾಗದವನ್ನು ಹಚ್ಚುವಾಗ ಅಡ್ಡಾದಿಡ್ಡಿಯಾಗಿ ಹಚ್ಚಿ ಅದರೊಳಗೇ ಮೈವಳಿಕೆಗಳನ್ನು ಸೃಷ್ಟಿಸುತ್ತಾರೆ. ಇದೇ ಇವರ ಕೃತಿಗಳ ಟ್ರಂಪ್‌ಕಾರ್ಡ್ ಆಗಿದೆ.

ಆ ಬಗೆಯ ಅಡ್ಡಾದಿಡ್ಡಿಯಾದ, ಬಿರುಕು ಬಿಟ್ಟಂತಹ ಗೋಡೆಯ ಹಾಗೆ ಕಾಣುವ ಹಿನ್ನೆಲೆಯ ಮೇಲೆಯೇ ಅಕ್ರಿಲಿಕ್ ಸೇರಿದಂತೆ ಮಿಶ್ರ ಮಾಧ್ಯಮಗಳಲ್ಲಿ ಇವರು ಕೃತಿ ರಚಿಸುತ್ತಾರೆ. ದಟ್ಟ ಹಿನ್ನೆಲೆಯಲ್ಲಿ ಬಹುತೇಕ ಮಂಕು ಕವಿದಂತಹ ಆವರಣವೇ ಇವರ ಕೃತಿಗಳಲ್ಲಿ ಇರುತ್ತದಾದರೂ ಎಲ್ಲೋ ಒಂದೆರಡು ಕಡೆ ಸೀಮಿತ ಸ್ಥಳದಲ್ಲಿ ಮಾತ್ರ ಪ್ರಖರವಾದ ಕೆಂಪು ಅಥವಾ ನೀಲಿ ಅಥವಾ ಹಸಿರು ಬಣ್ಣ ಬಳಸಿ ಕೃತಿಯ ಆಕರ್ಷಣೆ ಹೆಚ್ಚಿಸುತ್ತಾರೆ. ಇವರ ಹಿಂದಿನ ಕೃತಿಗಳಲ್ಲಿ

---

೪೭. ನಂಬಿಕೆಗಳನ್ನು ಒಡೆಯುವ ಗಂಭೀರ ಪ್ರಯತ್ನ, ಕರ್ನಾಟಕ ದರ್ಶನ, ಪ್ರಜಾವಾಣಿ, ೫, ಆಗಸ್ಟ್, ೨೦೦೦

ಬಹುತೇಕ ಕಂದು ಬಣ್ಣ ಪ್ರದಾನವಾಗಿದ್ದರೆ ಇಲ್ಲಿ ಸ್ವಲ್ಪ ಭಿನ್ನ ಹಾದಿ ಹಿಡಿಯುವ ಪ್ರಯತ್ನ ಮಾಡಿದ್ದಾರೆ.

ಇವರ ಕೃತಿಗಳ ಇನ್ನೊಂದು ವೈಶಿಷ್ಟ್ಯವೆಂದರೆ ವಾಸ್ತವೇತರ ಹಿನ್ನೆಲೆಯಲ್ಲಿದ್ದರೂ ಬಹುತೇಕ ವಾಸ್ತವವನ್ನು ಹೋಲುವಂತಹ ವಸ್ತುಗಳ, ಆಕೃತಿಗಳ ಬಳಕೆ ಜೊತೆಗೆ ವಾಸ್ತವದ ಆಕೃತಿಗಳೊಂದಿಗೆ ಪಿರಮಿಡ್, ತ್ರಿಕೋನಗಳಂತಹ ಅಮೂರ್ತ ಆಕೃತಿಗಳನ್ನು ಬಳಸುತ್ತಾರೆ. ಇಲ್ಲಿ ಹಿನ್ನೆಲೆಯೂ ಬೇರೆಯಾಗುವುದರಿಂದ ಮೂರ್ತ-ಅಮೂರ್ತಗಳ, ವಾಸ್ತವ-ಅವಾಸ್ತವಗಳ ಸಮ್ಮಿಲನವಾಗುತ್ತದೆ. ಇವರನ್ನು ಅತ್ಯಂತ ಆಳವಾಗಿ ಕಾಡಿರುವ ಸದ್ಯದ ವಸ್ತುವೆಂದರೆ ಸಾವು. ಅಂತೆಯೇ ಸಾವಿಗೆ ಸಂಬಂಧಿಸಿದ ಸಂಕೇತಗಳೇ ಇವರ ಕೃತಿಗಳಲ್ಲಿ ಅಲ್ಲಲ್ಲಿ ಸುಳಿಯುತ್ತದೆ. ಸಾವಿನ ಸಂದರ್ಭದಲ್ಲಿ ಹೆಣದ ಮುಂದೆ ಕೊಂಡೊಯ್ಯುವಂತಹ ಮಡಕೆಯಂತೂ ಇವರ ಕೃತಿಗಳಲ್ಲಿ ಅಲ್ಲಲ್ಲಿ ಬರುತ್ತದೆ.

ನೇರವಲ್ಲದ, ಹರಿದ ಅಂಚುಗಳ ಅನಿಯತ ಅಂಚುಗಳುಳ್ಳ ಕೃತಿಗಳು ಇದರ ವೈಶಿಷ್ಟ್ಯ. ಈ ಅಂಚುಗಳ ಮೂಲಕ ಒಂದೆಡೆ ಅನನ್ಯವೆನಿಸುವ ಆಶಯವಿದ್ದರೆ ಇನ್ನೊಂದೆಡೆ ಕೃತಿಯೊಳಗಿನ ಕಾಣುವಿಕೆಯಲ್ಲೂ ಕುತೂಹಲ ನಿರ್ಮಿಸುತ್ತಾರೆ. ಇವರ ಕೃತಿಗಳಲ್ಲಿನ ಫಿಸಿಕ್ಸ್ ಮತ್ತು ಕೆಮಿಸ್ಟ್ರಿಗಳೆರಡೂ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ. ಆದರೆ ಕಾಮರ್ಸ್ ಮುಖ್ಯವಾಗಿರುವ ಇಂದಿನ ಕಲಾವಲಯದಲ್ಲಿ ಅದನ್ನು ನಿರಾಕರಣೆಯ ದೃಷ್ಟಿಯಿಂದ ನೋಡುತ್ತಿರುವುದು ಇಲ್ಲಿನ ಒಳ್ಳೆಯ ಅಂಶವಾಗಿದೆ. ಭಾರತದ ಆಧುನಿಕ ಕಲೆಯು ಹಿಂದಿನ ಹಲವಾರು ನಂಬಿಕೆಗಳನ್ನು, ಮಿಥ್‌ಗಳನ್ನು ಒಡೆಯ ಬಯಸುತ್ತದೆ. ಅದೇ ರೀತಿ ಕಲಾವಿದ ರಮೇಶ್ ತೇರದಾಳ ಅವರ ಕೃತಿಗಳಲ್ಲಿ ಅದಕ್ಕೂ ಮೀರಿದಂತಹ ನಂಬಿಕೆಗಳನ್ನು ಒಡೆಯುವ ಪ್ರಯತ್ನವಿದೆ ಎಂಬುದನ್ನು ಕೃ.ಸೆ.ಯವರು ಪ್ರಸಕ್ತ ಲೇಖನದಲ್ಲಿ ದಾಖಲಿಸಿದ್ದಾರೆ.

**೪೮. ಇಲ್ಲಿರುವುದು ಮಕ್ಕಳಾಟವಲ್ಲ, ಬಣ್ಣಗಳ ಘನ ಗಂಭೀರ ಚೆಲ್ಲಾಟವೇ ಎಲ್ಲ**[೪೮]

ಐ.ಜಿ.ಕೆ.ಜಯಪ್ರಕಾಶ್ ದಂಪತಿಯ ನಾಲ್ಕು ವರ್ಷದ ಎ.ಜೆ.ಎಸ್.ಲಕ್ಷ್ಮಿಶ್ರೀ ರಚಿಸಿದ ಕೃತಿಗಳ ಪ್ರದರ್ಶನವು ಬೆಂಗಳೂರಿನ ಕನ್ನಡ ಭವನದಲ್ಲಿರುವ ಚಿತ್ರ ಗ್ಯಾಲರಿಯಲ್ಲಿ ನಡೆಯಿತು. ಇದರ ಮಹತ್ವ ಕುರಿತಂತೆ ಕೃ.ಸೆ.ಯವರು ಪ್ರಜಾವಾಣಿ ಕರ್ನಾಟಕ ದರ್ಶನ(೧-೯-೨೦೦೦)ದಲ್ಲಿ ಲೇಖನ ರಚಿಸಿದ್ದು, ಅದರ ವಿವರ ಇಂತಿದೆ.

ಚಿಕ್ಕ ವಯಸ್ಸಿನಲ್ಲಿ ಸಾಮಾನ್ಯವಾಗಿ ಯಾರೂ ರಚಿಸಲಾಗದ, ಗಂಭೀರ ಕಲಾಸಕ್ತರನ್ನೂ ಮೂಕವಿಸ್ಮಿತರಾಗಿಸುವ ಕೃತಿಗಳು ಇಲ್ಲಿವೆ. ಇವುಗಳನ್ನು ನೋಡಿದಾಗ ಸರಿಯಾಗಿ ಮಾತನಾಡಲೂ

---

೪೮. ಇಲ್ಲಿರುವುದು ಮಕ್ಕಳಾಟವಲ್ಲ, ಬಣ್ಣಗಳ ಘನಗಂಭೀರ ಚೆಲ್ಲಾಟವೇ ಎಲ್ಲ, ಕರ್ನಾಟಕದರ್ಶನ, ಪ್ರಜಾವಾಣಿ, ೨, ಸೆಪ್ಟಂಬರ್, ೨೦೦೦

ಆಗದ ಈ ಚಿಕ್ಕ ಬಾಲೆ ರಚಿಸಿದ್ದು ಹೌದೇ ಎನ್ನುವ ಅನುಮಾನ ಮೊಟ್ಟಮೊದಲಿಗೆ ಎಲ್ಲರನ್ನೂ ಕಾಡುವುದು ಸಹಜ. ಏಕೆಂದರೆ ಮಕ್ಕಳು ಅಮೂರ್ತ ಕೃತಿಗಳಿಗಿಂತಲೂ, ಫಿಗರೇಟಿವ್ ಚಿತ್ರಣಕ್ಕೆ ತಮ್ಮ ಒಲವು ತೋರಿಸುತ್ತಾರೆ. ಆದರೆ ಇಲ್ಲಿ ಹಾಗಿಲ್ಲದೇ ದೊಡ್ಡವರಂತೆ ಅಮೂರ್ತ ಹಾದಿ ಹಿಡಿದಿರುವುದರಿಂದ ಹೀಗನ್ನಿಸುತ್ತದೆ.

ಗೊಂಬೆಗಳೊಂದಿಗೆ ಆಡಬೇಕಾದ ಈ ವಯಸ್ಸಿನಲ್ಲಿ ವಯಸ್ಸಿಗೂ ಮೀರಿ, ದೊಡ್ಡವರಂತೆ ಸ್ಪ್ರೇಗನ್ ಬಳಸಿ ರಚಿಸಿದ ಹಲವಾರು ಕೃತಿಗಳು ಇಲ್ಲಿವೆ. ವೆಟ್ ಆನ್ ವೆಟ್ ತಂತ್ರದಲ್ಲಿ ಸ್ಟೆನ್ಸಿಲ್ ತಂತ್ರದಲ್ಲಿ ರಚಿಸಿದ ಕೃತಿಗಳೂ ಇಲ್ಲಿವೆ. ಇಲ್ಲಿ ಆಶ್ಚರ್ಯ ತರುವ ಇನ್ನೊಂದು ಸಂಗತಿಯೆಂದರೆ ಎಲ್ಲ ಮಕ್ಕಳಂತೆ ಪ್ರೈಮರಿ ವರ್ಣಗಳನ್ನಾಗಲೀ, ಗಾಢ, ಪ್ರಖರ ಬಣ್ಣಗಳಾಗಲೀ ಈ ಬಾಲೆ ಬಳಸಿಲ್ಲ. ಬದಲಿಗೆ ಸಾಂಗತ್ಯಪೂರ್ಣವೆನಿಸುವ ಬಣ್ಣಗಳನ್ನು ಆರಿಸಿಕೊಂಡು, ಒಳ್ಳೆಯ ಬ್ಯಾಲೆನ್ಸ್ ನಿರ್ಮಿಸುವಂತಹ ಕೃತಿಗಳು ಇಲ್ಲಿವೆ. ಇಲ್ಲಿನ ಇನ್ನೊಂದು ವೈಶಿಷ್ಟ್ಯವೆಂದರೆ ವಿವಿಧ ತಂತ್ರಗಳಲ್ಲಿ ಕಾಗದದ ಮೇಲೆ ರಚಿಸಿದ ಇವುಗಳಲ್ಲಿ ಒಂದರ ಹಾಗೆ ಇನ್ನೊಂದಿಲ್ಲ. ಸ್ವಚ್ಛಂದತೆಯ ನಡುವೆಯೂ ಲೆಕ್ಕಾಚಾರದ ನಿರ್ವಹಣೆ. ಆಕಸ್ಮಿಕ ತಂತ್ರಗಳ ನಡುವೆಯೂ ಗಾಂಭೀರ್ಯದ ಸೆಳಕುಗಳು ಈ ಮುಂತಾದವುಗಳನ್ನು ನೋಡಿದಾಗ ನಮ್ಮ ಕುತೂಹಲವು ವಿಸ್ಮಯದೆಡೆಗೆ ತಿರುಗುವುದು ಸಹಜವೇ. ಒಟ್ಟಾರೆಯಾಗಿ ವಿಭಿನ್ನ ಭಾವನೆಗಳನ್ನು ಮೂಡಿಸುವ ಈ ಕೃತಿಗಳ ಮೂಲಕ ಈ ಪುಟ್ಟ ಬಾಲೆ ನಮ್ಮ ಪ್ರಜ್ಞೆಯನ್ನೇ ಅಲ್ಲಾಡಿಸಿ ಬಿಟ್ಟಿದ್ದಾಳೆ. ನಾಲ್ಕನೆಯ ವಯಸ್ಸಿನವರೆಗೂ ಎಲ್ಲರಲ್ಲೂ ಸೃಜನಶೀಲತೆಯಿರುತ್ತದೆ. ಆ ಬಳಿಕ ಕ್ರಮೇಣ ಮಕ್ಕಳ ಸೃಜನಶೀಲತೆಗೆ ಹಿನ್ನಡೆ ಆರಂಭವಾಗುತ್ತದೆಂದು ಕೆಲವು ತಜ್ಞರು ಅಭಿಪ್ರಾಯಪಡುತ್ತಾರೆ. ಲಕ್ಷ್ಮಿಶ್ರೀಯ ಈ ಕೃತಿಗಳು ಈ ಸೃಜನಶೀಲತೆಗೆ ಸಾಕ್ಷಿಯಾಗಿ ನಿಲ್ಲುತ್ತವೆ ಎನ್ನುವುದನ್ನು ಲೇಖಕರು ಗುರುತಿಸಿದ್ದಾರೆ.

**೪೯. ಬಾಲ್ಯಾನುಭವಗಳು**[೪೯]

ಬೆಂಗಳೂರಿನ ಕೆನ್ ಕಲಾಶಾಲೆಯಲ್ಲಿ ಕಲಾಭ್ಯಾಸ ನಡೆಸಿದ ಯುವ ಕಲಾವಿದೆ ಗೀತಾ ಸಾಳೊಂಕೆ ಅವರ ಕೃತಿಗಳ ಪ್ರದರ್ಶನವು ಮಹಾತ್ಮಾಗಾಂಧಿ ರಸ್ತೆಯಲ್ಲಿರುವ 'ಕೆಫೆ ಕಾಫಿ ಡೇ'ಯಲ್ಲಿ ನಡೆಯಿತು. ಈ ಪ್ರದರ್ಶನದಲ್ಲಿ ಮುಖ್ಯವಾಗಿ ಕಂಡುಬರುವುದು ಬಾಲಕಿಯೊಬ್ಬಳ ಬಾಲ್ಯಾನುಭವಗಳ ನೆನಪು. ಅಲ್ಲದೆ ಪ್ರೌಢಾವಸ್ಥೆಗೆ ಬಂದ ಬಾಲಕಿಯೊಬ್ಬಳ ಪರಕೀಯ ಪ್ರಜ್ಞೆಯೂ ಇಲ್ಲಿ ಸುಳಿದಿದೆ. ಇವುಗಳ ನಡುವೆ ಮುಗ್ಧತೆಯೂ ಮನೆಮಾಡಿದೆ. ಈ ಹಲವು ಅಂಶಗಳ ಸಂಲಗ್ನವನ್ನು ಇಲ್ಲಿ ಕಾಣಬಹುದು. ಅಂತೆಯೇ ಹುಲಿಮರಿಯೂ ಕೂಡಾ ಇಲ್ಲಿ ಬಾಲಕಿಯ ಮುದ್ದಿನ ಪ್ರಾಣಿಯಾಗಿ

೪೯. ಬಾಲ್ಯಾನುಭವಗಳು,ಕರ್ನಾಟಕ ದರ್ಶನ,ಪ್ರಜಾವಾಣಿ ೨, ಸೆಪ್ಟಂಬರ್, ೨೦೦೦

ರೂಪುಗೊಳ್ಳುತ್ತದೆ. ಕೃತಿಗಳ ಶೀರ್ಷಿಕೆಗಳಲ್ಲಿ ಅಲ್ಲಲ್ಲಿ 'ನನ್ನ' ಎಂದು ಸೇರಿಸಿರುವುದು ಕೂಡಾ ಇವುಗಳೆಲ್ಲ ಸ್ವಾನುಭಾವದ ಅಭಿವ್ಯಕ್ತಿ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಗೀತಾ ಅವರು ಹೆಚ್ಚು ಪಾಶ್ಚಾತ್ಯ ಶೈಲಿಯಿಂದ ಪ್ರೇರೇಪಣೆಗೊಂಡಿದ್ದರೂ ಅವರ 'ಮೈ ನೈಬರ್', 'ಗರ್ಲ್ ಅಂಡ್ ಬರ್ಡ್', 'ಬಾರ್ಕಿಂಗ್ ಡಾಗ್', 'ಅವ್ಲ್'ನಂತಹ ಕೆಲ ಕೃತಿಗಳನ್ನು ಗಮನಿಸಿದಾಗ ಅವರ ಮೇಲೆ ಜನಪದ ಕಲೆಯ ಅಂಶಗಳು ಪ್ರಭಾವಿತವಾಗಿವೆ ಎನ್ನಬಹುದು. ಇಲ್ಲಿನ ಮುಖ್ಯ ಆಕೃತಿಗಳೆಲ್ಲ ಚಿತ್ರ ಕ್ಷೇತ್ರದೊಳಗೆ ತುಂಬಿಕೊಂಡು, ಹೊರಗೆ ಬಿರಿದು ಬರುತ್ತಿರುವಂತೆ ರೂಪಿತವಾಗಿವೆ. ದಿಟ್ಟ ವರ್ಣಗಳಲ್ಲಿ ದೃಶ್ಯಾತ್ಮಕ ತೀವ್ರತೆಯನ್ನು ಮುಟ್ಟಿಸುವಂತಹ ಇವುಗಳಲ್ಲಿ ಸೋದ್ದಿಶ್ಯ ವಿರೂಪವೂ ಒಂದು ಮುಖ್ಯ ಬಂಡವಾಳವಾಗಿದೆ. 'ಗರ್ಲ್ ಇನ್ ಗ್ರೀನ್' ನಂತಹ ಕೃತಿಗಳಲ್ಲಿ ಏಕವರ್ಣ ಪ್ರಾಧಾನ್ಯವಿದ್ದು ವಾಸುದೇವ್ ಅವರ ಕೃತಿಗಳ ನೆನಪಾಗುತ್ತದೆ. ಅದೇನೇ ಇರಲಿ, ತೀರ ಖಾಸಗಿಯಾದ ಮುಗ್ಧ ಅನುಭವಗಳನ್ನು ಸಾರ್ವತ್ರಿಕಗೊಳಿಸಲು ಬಳಸಿಕೊಂಡ ರೂಪಕಗಳು ಹಾಗೂ ಶೈಲಿ ಇಲ್ಲಿ ಕುತೂಹಲಕಾರಿಯಾಗಿದೆ. ಒಟ್ಟಾರೆಯಾಗಿ ಗೀತಾ ಅವರ ಈ ಕೃತಿಗಳು ನಿಜಕ್ಕೂ ಭರವಸೆಯಿಂದ ಕೂಡಿದ್ದು ಭವಿಷ್ಯದಲ್ಲಿ ಗಂಭೀರ ಹೆಜ್ಜೆಗಳನ್ನು ಇಡುವಂತಹ ಸೂಚನೆ ಇದೆ ಎಂದು ಕೃ.ಸೆ.ಯವರು ಪ್ರಸಕ್ತ ಲೇಖನದ ಮೂಲಕ ಹೇಳುತ್ತಾರೆ.

**೫೦. ಮೊದಲೆರಡು ಆದರ್ಶ ಹೀನ, ಮತ್ತೊಂದು ನವನವೀನ**[೫೦]

ಮೀರತ್ ಕಾಲೇಜಿನಲ್ಲಿ ಕಲಾಭ್ಯಾಸ ಮಾಡಿರುವ ಲಲಿತಾ ಡಾಂಗ್ ಅವರ ಕೃತಿಗಳ ಪ್ರದರ್ಶನವು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ಅವರ ಕಲಾಕೃತಿಗಳ ಮಹತ್ವ ಕುರಿತು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೦/೯/೨೦೦೦ರಂದು ಲೇಖನ ಪ್ರಕಟಿಸಿದ್ದು, ಅದರ ಪ್ರಮುಖಾಂಶಗಳು ಇಂತಿವೆ.

ಸಾಮಾನ್ಯ ನೆಲೆಯ ಹವ್ಯಾಸಿ ಕಲಾವಿದರಲ್ಲಿ ಕಂಡು ಬರುವಂತಹ ವೈವಿಧ್ಯಗಳು ಇಲ್ಲಿವೆ. ಆದರೆ ಗಂಭೀರ ಕಲಾವಲಯದದಲ್ಲಿ ಒಪ್ಪಲಾಗದಂತಹ ಹಲವಾರು ಸಂಗತಿಗಳೂ ಇಲ್ಲಿವೆ. ಪ್ರಸಿದ್ಧ ಕಲಾವಿದರ ಕೃತಿಗಳ ನಕಲು ಮಾಡಿ ತಮ್ಮ ಸಹಿ ಹಾಕಿರುವುದೂ ಒಂದು. ಹೀಗೆ ರವಿವರ್ಮ, ಹುಸೇನ್ ಹಲ್ದಂಕರ್ ಮುಂತಾದ ಹಲವಾರು ಪ್ರಸಿದ್ಧ ಕಲಾವಿದರ ಕೃತಿಗಳನ್ನು ಹಸಿಹಸಿಯಾಗಿ ನಕಲು ಮಾಡಲು ಪ್ರಯತ್ನಿಸಿದ್ದರಾದರೂ ಅದರಲ್ಲಿ ಯಶಸ್ವಿಯಾಗಿಲ್ಲ. ಜೊತೆಗೆ ಇವುಗಳಿಗೆ ತಮ್ಮ ಸಹಿಯನ್ನೇ ಹಾಕಿದ್ದಾರೆ.

---

೫೦. ಮೊದಲೆರಡು ಆದರ್ಶ ಹೀನ, ಮತ್ತೊಂದು ನವನವೀನ, ಕ ದರ್ಶನ,ಪ್ರಜಾವಾಣಿ ೧೦,ಸೆಪ್ಟಂಬರ್,೨೦೦೦

ಈ ಕಲಾವಿದೆ ಜನಪ್ರಿಯ ಕ್ಯಾಲೆಂಡರುಗಳು, ಗ್ರೀಟಿಂಗ್ ಕಾರ್ಡುಗಳ ರೂಪಗಳನ್ನು ಬಹುತೇಕ ನಕಲು ಮಾಡಿದ್ದಾರೆ. ಆದರೆ ಈ ನಕಲು ಮಾಡಲು ಅಗತ್ಯವಾದಂತಹ ಹಸ್ತ ಕೌಶಲ್ಯವಾಗಲೀ, ಗಂಭೀರ ಪರಿಶ್ರಮವಾಗಲೀ ಇಲ್ಲಿ ಕಂಡುಬರುವುದಿಲ್ಲ. ಅಪರೂಪಕ್ಕೆ, ಕಗ್ಗತ್ತಲೆಯ ನಡುವಿನ ಮಿಂಚು ಹುಳದಂತೆ ಕೆಲವೆಡೆ ಒಳ್ಳೆಯ ಸ್ಟ್ರೋಕ್ಸ್ ಅನುಭವಕ್ಕೆ ಬರುತ್ತದೆ.

**೫೧. ಇಲ್ಲಿ ಕೌಶಲ್ಯವೇ ಮೆರೆದಿದೆ**[೫೧]

ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಅಭ್ಯಾಸ ಮಾಡಿದ ಹೈದರಾಬಾದಿನ ಡಿ.ಟಿ.ಲೋಹಿತ್ ಅವರು ಸದ್ಯ ಹೈದರಾಬಾದಿನಲ್ಲಿ ವಾಣಿಜ್ಯ ಕಲೆಯ ಸ್ಟುಡಿಯೋ ನಡೆಸುತ್ತಿದ್ದಾರೆ. ಇವರ ಕೃತಿಗಳ ಪ್ರದರ್ಶನವು ಚಿತ್ರಕಲಾ ಪರಿಷತ್ತಿನಲ್ಲಿ ನಡೆದಿದೆ. ಈ ಪ್ರದರ್ಶನದಲ್ಲಿ ಮುಖ್ಯವಾಗಿ ಎರಡು ವಿಭಾಗಗಳಿವೆ.

ಈ ಮೊದಲ ವಿಭಾಗದಲ್ಲಿ ವಿಶ್ವವಿಖ್ಯಾತ ಕಲಾವಿದರಾದ ಲಿಯೊನಾರ್ಡೊ, ವ್ಯಾನ್‌ಗೊ, ಪಿಕಾಸೊ, ರವಿವರ್ಮ, ರೂಬೆನ್ಸ್ ಮುಂತಾದವರ ನಕಲು ಚಿತ್ರಗಳಿವೆ. ಇವುಗಳಲ್ಲಿ ಲೋಹಿತ್ ಅವರು ಕೃತಿಗಳ ಒಟ್ಟಾರೆಯಾದ ರೂಪ ಹಿಡಿದಿಡುವಲ್ಲಿ ಯಶಸ್ವಿಯಾಗಿದ್ದಾರೆಯೇ ಹೊರತು ಅವುಗಳ ಸತ್ವ ಹಿಡಿಯಲು ಯಶಸ್ವಿಯಾಗಿಲ್ಲ. ಹೀಗೆ ಇವುಗಳಲ್ಲಿ ಆಯಾ ಕೃತಿಗಳ ದೇಹವಿದೆಯೇ ಹೊರತು ಪ್ರಾಣ ಚೈತನ್ಯವಿಲ್ಲ. ಇಲ್ಲಿ ಹಸ್ತಕೌಶಲ್ಯ ಸ್ವಲ್ಪವಾದರೂ ಮೆಚ್ಚುವಂತಿದೆ. ಈ ವಿಶ್ವವಿಖ್ಯಾತ ಕಲಾವಿದರ ಕೃತಿಗಳಿಗೆ ಲೋಹಿತ್ ಅವರು ತಮ್ಮ ಸಹಿ ಹಾಕಿ ಪ್ರದರ್ಶಿಸಿರುವುದು ನಿಜಕ್ಕೂ ಅಕ್ಷಮ್ಯ ಅಪರಾಧ.

ಎರಡನೆಯ ವಿಭಾಗದಲ್ಲಿ ಲೋಹಿತ್ ಅವರು ತಾವೇ ಕಲ್ಪನೆಯಿಂದ ರೂಪಿಸಿದಂತಹ ಹಲವಾರು ಕೃತಿಗಳಿವೆ. ಕೆಲವು ಕಲ್ಪನೆಗಳು ಕುತೂಹಲವಾಗಿದ್ದರೂ ಅದನ್ನು ಕಲೆಯಾಗಿಸುವಲ್ಲಿ ಹಿಂದೆ ಬಿದ್ದಿದ್ದಾರೆ. ಒಂದೇ ವಸ್ತುವನ್ನು ಎರಡು ಬಗೆಗಳಲ್ಲಿ ನಿರ್ವಹಿಸಿದ 'ಡ್ಯೂಯರ್ ಕಾಂಪೊಸಿಶನ್' ಗಳಲ್ಲಿಯೂ ಹೀಗೆಯೇ ಆಗಿದೆ. ಒಟ್ಟಾರೆಯಾಗಿ ಲೋಹಿತ್ ಅವರು ತಮ್ಮ ಉತ್ತಮ ಹಸ್ತಕೌಶಲ್ಯದ ನಡುವೆಯೂ ನಿಜವಾದ ಕಲೆಯನ್ನು ತಮ್ಮದಾಗಿಸಿಕೊಳ್ಳುವಲ್ಲಿ ಅಷ್ಟಾಗಿ ಯಶಸ್ವಿಯಾಗಿಲ್ಲ ಎಂಬುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಗುರುತಿಸುವ ಪ್ರಯತ್ನ ಮಾಡಿದ್ದಾರೆ.

**೫೨. ಹೊಸ ನಿಲುವುಗಳು**[೫೨]

ಯುವ ಕಲಾವಿದರಲ್ಲಿ ಗಮನಾರ್ಹವಾಗಿ ಬೆಳೆಯುತ್ತಿರುವ ಗುಲ್ಬರ್ಗದ ವೀರೇಂದ್ರ ಷಹಾ ಅವರ ಕಲಾಕೃತಿಗಳ ಪ್ರದರ್ಶನವನ್ನು ಬೆಂಗಳೂರಿನ 'ಸುಮುಖ' ಗ್ಯಾಲರಿಯಲ್ಲಿ ಏರ್ಪಡಿಸಲಾಗಿತ್ತು.

೫೧. ಇಲ್ಲಿ ಕೌಶಲ್ಯವೇ ಮೆರೆದಿದೆ,ಕರ್ನಾಟಕ ದರ್ಶನ,ಪ್ರಜಾವಾಣಿ ೧೦ ಸೆಪ್ಟಂಬರ್, ೨೦೦೦

೫೨. ಹೊಸ ನಿಲುವುಗಳು, ಅದೇ

ಈ ಕುರಿತಂತೆ ಕೃ.ಸೆ.ಯವರು ಈ ಪ್ರಸಕ್ತ ಲೇಖನ ರಚಿಸಿದ್ದು, ಆ ಕುರಿತ ವಿವರ ಇಂತಿದೆ. ಅಮೂರ್ತತೆಯಿಂದ ಮೂರ್ತತೆಯೆಡೆಗೆ ತಮ್ಮ ನಿಲುವನ್ನು ಬದಲಿಸಿಕೊಂಡಿರುವ ಕಲಾವಿದರು ಕ್ಯಾನ್ವಾಸಿನ ಮೇಲೆ ತೆಳು ಟ್ರೇಸಿಂಗ್ ಕಾಗದವನ್ನು ಅಡ್ಡಾದಿಡ್ಡಿಯಾಗಿ ಹಚ್ಚಿ ವಿಶಿಷ್ಟ ರಚನೆಗಳನ್ನು ಮಾಡಿದ್ದಾರೆ. ತ್ರಿಮಾನದ ಆಕೃತಿಗಳನ್ನೂ ಹಚ್ಚಿ ರಿಲೀಫ್ ಶಿಲ್ಪಗಳಂತೆ ಇವನ್ನು ರೂಪಿಸಿರುವುದು ಇಲ್ಲಿ ಗಮನಾರ್ಹವಾಗಿದೆ. ಈ ಬಾರಿ ದೋಣಿಯ ಆಕೃತಿಯನ್ನು ವೈವಿಧ್ಯಮಯವಾಗಿ ಬಳಸಿಕೊಂಡಿದ್ದು, ಅಲ್ಲಲ್ಲಿ ಮಕ್ಕಳ ಚಿತ್ರಕಲೆಯಲ್ಲಿನಂತಹ ಕೃತಿಗಳು, ಗೀಚುವಿಕೆ, ನಿರ್ವಹಣೆಯಿದೆ. ಇವು ನಮ್ಮ ನಡುವಿನ ಎಂದಿನ ಅಮೂರ್ತ ಕೃತಿಗಳಿಗಿಂತ ವಿಭಿನ್ನ ನೆಲೆಯ ಕೃತಿಗಳಿವು.

ಇವುಗಳೊಂದಿಗೆ ಸಂಪೂರ್ಣ ಹೊಸತನವನ್ನು ಪ್ರಕಟಿಸುವಂತಹ ಕೃತಿಗಳೂ ಇಲ್ಲಿವೆ. ಅನಿಯತ ಅಂಚುಗಳ ಈ ಕೃತಿಗಳಲ್ಲಿ ಜನಪದ ಕಲೆಯ ಅಂಶಗಳನ್ನು ಆಧುನಿಕ ನೆಲೆಯಲ್ಲಿ ಪರಿಭಾವಿಸಲಾಗಿದೆ. ಈ ಹೊಸ ನಿಲುವುಗಳ ಕೃತಿಗಳು ಪರಿಣಾಮಕಾರಿಯಾದ ಅನುಭವ ನೀಡುವಂತಿವೆ. ಉಳಿದಂತೆ ಇವರ ಸಂಗತಿಗಳು ಹೊಸ ಅನುಭವ ನೀಡುತ್ತವಾದರೂ ಅವುಗಳೊಳಗೆ ಬಚ್ಚಿಟ್ಟುಕೊಂಡ ಗುಟ್ಟುಗಳನ್ನು ಸುಲಭವಾಗಿ ಬಿಟ್ಟುಕೊಡುವುದಿಲ್ಲ. ಅದೇನೇ ಇದ್ದರೂ ವೀರೇಂದ್ರ ಷಹಾ ಅವರು ತಮ್ಮ ಕಲಾತ್ಮಕ ಹಾದಿಯಲ್ಲಿ ಇನ್ನಷ್ಟು ಮುನ್ನಡೆ ಸಾಧಿಸಿರುವ ಸೂಚನೆಯನ್ನು ಲೇಖಕರು ಇಲ್ಲಿ ನೀಡಿದ್ದಾರೆ.

**೫೩. ಪೆಡಸ್ಟಲ್‌ನಿಂದ ನೆಲಕ್ಕಿಳಿದ ಕಲ್ಪನೆಗಳು**[೫೩]

ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಹಾಗೂ ಬರೋಡಾ ಕಾಲೇಜಿನಲ್ಲಿ ಶಿಲ್ಪ ಕಲಾಭ್ಯಾಸ ಮಾಡಿದ ಮಾರಿಯೊ ಡಿಸೋಜಾರವರ ಪ್ರದರ್ಶನವು ಬೆಂಗಳೂರಿನ ಅಲಿಯನ್ಸ್ ಫ್ರಾನ್ಸೈಯಲ್ಲಿ ನಡೆಯಿತು. ಈ ಕುರಿತಂತೆ ಕೃ.ಸೆ.ಯವರು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೬/೯/೨೦೦೦ರ ಲೇಖನ ಪ್ರಕಟಿಸಿದ್ದಾರೆ. ಈ ಕುರಿತ ವಿವರ ಇಂತಿದೆ.

ಇಲ್ಲಿನ ಪ್ರತಿಯೊಂದು ಕೃತಿಯೂ ತನ್ನ ದೃಶ್ಯಾತ್ಮಕ ಪರಿಣಾಮಗಳಿಗಿಂತಲೂ ಕಾನ್ಸೆಪ್ಚುಯಲ್ ನೆಲೆಯಲ್ಲಿ ನೋಡುಗರ ಮೆದುಳಿಗೇ ಕೈ ಹಾಕುವಂತಿದೆ. ಮಾರಿಯೊ ಅವರು ತಮ್ಮ ಕಲ್ಪನೆಗಳನ್ನು ಸಂವಹನಗೊಳಿಸಲು ಹಲವಾರು ಸಂಕೇತಗಳನ್ನು ಬಳಸಿಕೊಂಡಿದ್ದಾರಾದರೂ ಅವುಗಳಲ್ಲಿ ಅಗ್ರಸ್ಥಾನ ಪಡೆದುಕೊಂಡಿರುವುದು ಕೈಚೀಲ. 'ನೇಲ್ಸ್ ಫ್ರಂ ಇನ್, ನೇಲ್ಸ್ ಫ್ರಂ ಔಟ್' ಕೃತಿಯಲ್ಲಿ ದೊಡ್ಡದಾದ ಎರಡು ಪ್ಲಾಸ್ಟಿಕ್ ಬ್ಯಾಗ್‌ಗಳಿದ್ದು ಒಂದರಲ್ಲಿ ನೂರಾರು ಮೊಳೆಗಳಿಂದ ಒಳಗಿನಿಂದ ಹೊರಗೆ ಚುಚ್ಚಿದ್ದಾರೆ. ಹೀಗೆ ಈ ಕೈ ಚೀಲವು ನಿಜಕ್ಕೂ ಅನುಪಯೋಗಿ ಎನಿಸುವುದಲ್ಲದೆ ವಿವಿಧ ರೀತಿಯ

೫೩. ಪೆಡಸ್ಟಲ್‌ನಿಂದ ನೆಲಕ್ಕಿಳಿದ ಕಲ್ಪನೆಗಳು, ಕರ್ನಾಟಕದರ್ಶನ, ಪ್ರಜಾವಾಣಿ, ೧೬, ಸೆಪ್ಟಂಬರ್, ೨೦೦೦

ಕಲ್ಪನೆಗಳಿಗೆ ಅವಕಾಶ ಮಾಡಿಕೊಡುತ್ತದೆ. ಮಾರಿಯೊ ಅವರನ್ನು ಗಾಢವಾಗಿ ಕಾಡಿದ ಇನ್ನೊಂದು ಅಂಶವೆಂದರೆ ಮ್ಯೂಸಿಯಂಗಳಲ್ಲಿನ ಪ್ರದರ್ಶನದ ರೀತಿ. ಅಮೆರಿಕದ ಕಲಾವಿದ ಜೇಮ್ಸ್ ಲಿ ಬ್ಯಾರ್ಸ್ ಕೂಡಾ 'ದಿ ಪರ್ಫೆಕ್ಟ್ ಥಾಟ್'ನಂತಹ ಕೃತಿಗಳಲ್ಲಿ ಮ್ಯೂಸಿಯಂ ಪ್ರದರ್ಶನ ನೆನಪಿಸುವಂತೆ ಹಳೆಯ ವಸ್ತುಗಳನ್ನು ಇನ್‌ಸ್ಟಲೇಶನ್‌ಗಳಲ್ಲಿ ಬಳಸಿಕೊಳ್ಳುತ್ತಾನೆ. ಇದೇ ರೀತಿ ಮಾರಿಯೊ ಅವರಲ್ಲಿ ಕೂಡಾ ಹಲವೆಡೆ ಹಳೆಯದನ್ನು ಹೊಸ ದೃಷ್ಟಿಯಿಂದ ತೋರಿಸುವ ಆಶಯವಿದೆ. ಹೀಗೆ ಈ ಪ್ರದರ್ಶನದಲ್ಲಿ ಪ್ರತಿಯೊಂದೂ ಭಿನ್ನವಾದ ವೈವಿಧ್ಯಮಯ ಅಭಿವ್ಯಕ್ತಿಯಿದೆ. ಆದರೆ ಕೆಲವು ಕೃತಿಗಳಲ್ಲಿ ಅತಿಯಾದ ಸಂಕೀರ್ಣತೆ, ನೀರಸ ವಾತಾವರಣಗಳಿವೆ. ತನ್ನಲ್ಲಿರುವ ಅಗಾಧತೆ ಹಾಗೂ ವೈಶಾಲ್ಯದಿಂದಾಗಿ ಮೊಟ್ಟಮೊದಲ ನೋಟಕ್ಕೆ ನೋಡುಗರನ್ನು ಬೆರಗುಗೊಳಿಸಿ ತನ್ನೊಳಗೆ ಸೆಳೆದುಕೊಳ್ಳುವಂತಹ ಸೆಳೆತವಿದೆ ಎನ್ನುವುದನ್ನು ಕೃ.ಸೆ.ಯವರು ಈ ಪ್ರಸಕ್ತ ಲೇಖನದಲ್ಲಿ ಗುರುತಿಸಿದ್ದಾರೆ.

**೫೪. ವಾಣಿಜ್ಯೀಕರಣದ ಪ್ರಭಾವ**[೫೪]

ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ 'ಕಾನ್ಸೆಪ್ಟ್ ಶಾಪ್' ಶೀರ್ಷಿಕೆಯಲ್ಲಿ ಕಲಾ ಪ್ರದರ್ಶನವೊಂದು ನಡೆಯಿತು. ನಾಲ್ವರು ಯುವ ಕಲಾವಿದರು ಇನ್‌ಸ್ಟಲೇಶನ್‌ಗಳ ಮೂಲಕ ನಗರ ವಾಣಿಜ್ಯ ಜನಜೀವನದ ಕಲ್ಪನೆಗಳಿಗೆ ಅಭಿವ್ಯಕ್ತಿ ನೀಡಿರುವುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಗುರುತಿಸಿದ್ದಾರೆ.

ವಾಣಿಜ್ಯೀಕರಣವನ್ನು ಆಧ್ಯಾತ್ಮಿಕ ನೆಲೆಯಲ್ಲಿಟ್ಟು ನೋಡ ಬಯಸುವ ರಂಜನಿ ಶೆಟ್ಟರ್ ಅವರು ನಿಸರ್ಗ ನಿರ್ಮಿತ ಕವಚ, ಚಿಪ್ಪುಗಳು, ಆವರಣಗಳನ್ನು ತಮ್ಮ ಕೃತಿಯಲ್ಲಿಟ್ಟು ನೋಡುತ್ತಾರೆ. ವಿಶೇಷತಃ ಪ್ಲಾಸ್ಟಿಕ್ ಹಾಳೆ, ಬೀಜ ಇತ್ಯಾದಿಗಳನ್ನು ಬಳಸಿಕೊಂಡಿರುವ ಇವುಗಳಲ್ಲಿ ಅಂಗಡಿಗಳಲ್ಲಿನ ಮಾರಾಟದ ವಸ್ತುವನ್ನು ಪ್ರದರ್ಶಿಸಿದಂತಿದೆ. ಈ ವೈವಿಧ್ಯಮಯ ಕೃತಿಗಳ ಗರ್ಭದಲ್ಲಿ ಅಡಗಿರುವುದು 'ಬೀಜ'ವೇ ಆಗಿದ್ದು ಇವು ಕುತೂಹಲಕಾರಿಯಾಗಿವೆ. ಅರ್ಚನಾ ಹಂಡೆಯವರು ತಮ್ಮ ಗ್ರಾಫಿಕ್ ಮಾಧ್ಯಮದಲ್ಲಿರುವ ಪ್ರಭುತ್ವವನ್ನು ಇಲ್ಲಿ ಯಥೇಚ್ಛವಾಗಿ ಬಳಸಿಕೊಂಡಿದ್ದಾರೆ. ಮನೆಗಳ ನಿರ್ಮಾಣದಲ್ಲಿ ನೆಲಕ್ಕೆ, ಗೋಡೆಗಳಿಗೆ ಹಾಸಲು ಬಳಸುವ ಟೈಲ್ಸ್‌ಗಳನ್ನು ತಮ್ಮದೇ ಆದ ಕಲಾತ್ಮಕ ರೀತಿಯಲ್ಲಿ ಪುನರ್ ಸೃಷ್ಟಿಸಿದ್ದಾರೆ. ಇಲ್ಲಿ ಕೆಲವೆಡೆ ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಭಾವಚಿತ್ರಗಳಿವೆ ಯಾದರೂ ವಿಶೇಷತಃ ಸಸ್ಯ ಸಂಪತ್ತಿನ ಮೋಟಿಫ್ ಬಳಸಿಕೊಂಡಿರುವುದು ಕುತೂಹಲಕರ. ಕೆಲವು ಕೃತಿಗಳಂತೂ ಗೋಡೆಗಳ ಮೇಲೆ ಪ್ರದರ್ಶಿಸುವುದಕ್ಕೆ ಬದಲಾಗಿ ನೆಲದ ಮೇಲೆ ಜೋಡಿಸಿದಂತಿದೆ.

---

೫೪. ವಾಣಿಜ್ಯೀಕರಣದ ಪ್ರಭಾವ, ಅದೇ

ಕೃಷ್ಣರಾಜ ಚೋನಟ್ ಅವರ 'ಕ್ಯಾರಿಯಿಂಗ್ ಹರ್ ಫ್ರಾಜೈಲ್ ಡ್ರೀಮ್ ಕ್ಯಾನ್ ಬಿ ಕ್ವೊಯ್ಟ್ ಎ ಪೇಯ್ನ್' ನಲ್ಲಿ ಹೆಣ್ಣೊಬ್ಬಳ ಮಾತೃತ್ವದ ಕನಸು ನನಸಾಗುವಲ್ಲಿ ಅನುಭವಿಸುವ ಯಾತನೆಯಿದೆ. ಇಲ್ಲಿ ವಾಚ್ಯ ನೆಲೆಗಿಳಿಯದೇ ರೂಪಕದ ಮೂಲಕ ಈ ಅನುಭವ ಮುಟ್ಟಿಸುವ ಪ್ರಯತ್ನ ಮಾಡಿರುವುದು ಅಭಿನಂದನೀಯ. ಆದರೆ ಮೂತ್ರಪಿಂಡ ಮಾರಾಟ ಕುರಿತಾದ ಅವರ 'ಫಾರ್ ದಿ ಸೇಕ್ ಆಫ್ ಕಂಪಾಟಿಬಿಲಿಟಿ'ಯನ್ನು ವಾಚ್ಯ ನೆಲೆಗಿಳಿಸಿರುವುದು ಸ್ವಾಗತಾರ್ಹವಾದುದಲ್ಲ. ಇದೇ ಧಾಟಿಯಲ್ಲಿ ಬಿಜು ಜೋಸ್ ಅವರು ಕೂಡಾ ನಿಸರ್ಗದ ಅಂಶಗಳನ್ನು ಮಾನವ ದೇಹದೊಂದಿಗೆ ಇಟ್ಟು ನೋಡುವ ಪ್ರಯತ್ನ ಮಾಡಿದ್ದಾರೆ. ಕಲ್ಪನೆಗಳಂತೆಯೇ ದೃಶ್ಯಾತ್ಮಕವಾಗಿಯೇ ಉತ್ತಮ ಪರಿಣಾಮ ಬೀರುವಂತಹ ಹಲವು ಕೃತಿಗಳು ಇವರವು. ಒಟ್ಟಾರೆಯಾಗಿ ಈ ಕಲಾವಿದರೆಲ್ಲ ಪಾಶ್ಚಾತ್ಯ ಪ್ರೇರಿತ ರೂಪಗಳನ್ನು ಅನುಸರಿಸಿದರೂ ಇಲ್ಲಿ ವಸ್ತುಗಳನ್ನೇ ಬಳಸಿಕೊಂಡಿರುವುದು ನಿಜಕ್ಕೂ ಶ್ಲಾಘನೀಯ ಅಂಶವಾಗಿದೆ.

**೫೫. ಹಿಂಸೆ-ಅಹಿಂಸೆ ಮುಖಾಮುಖಿ ಮಾಡಿಸುವ 'ಹರಕೆಯ ಕುರಿ'**[೫೫]

ಮೈಸೂರಿನ ಕಾವಾ ಮತ್ತು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಗ್ರಾಫಿಕ್ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಪಿ.ಎನ್.ಶ್ರೀಧರ ಅವರು ಇತ್ತೀಚೆಗೆ ರಚಿಸಿದ ಕೆಲವು ಲಿಥೊಗ್ರಫಿ ಕೃತಿಗಳ ಮೂಲಕ ಕಲಾವಲಯದಲ್ಲಿ ಸಾಕಷ್ಟು ಕುತೂಹಲ ಹುಟ್ಟಿಸಿದವರು. ಅವರ ಕಲಾಕೃತಿಗಳ ಪ್ರದರ್ಶನವು ಬೆಂಗಳೂರಿನಲ್ಲಿ ಮೂರು ಕಡೆಗಳಲ್ಲಿ ಏಕಕಾಲದಲ್ಲಿ ನಡೆದಿದೆ. ಈ 'ಒನ್ ಬೈ ತ್ರೀ' ಪ್ರದರ್ಶನವು ಎಂ.ಜಿ.ರಸ್ತೆ, ಕಮರ್ಷಿಯಲ್ ಸ್ಟ್ರೀಟ್ ಹಾಗೂ ಬ್ರಿಗೇಡ್ ರಸ್ತೆಯಲ್ಲಿರುವ ಕೆಫೆ ಕಾಫಿಡೇಯ, ಎಸ್‌ಪ್ರೆಸ್ಸೊ ಗ್ಯಾಲರಿಗಳಲ್ಲಿ ನಡೆಯಿತು. ಈ ಕುರಿತು ಕೃ.ಸೆ.ಯವರು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೭/೧೦/೨೦೦೦ರಂದು ಲೇಖನ ಪ್ರಕಟಿಸಿದ್ದು, ಅದರ ಸಂಕ್ಷಿಪ್ತ ಮಾಹಿತಿ ಇಂತಿದೆ.

ಶ್ರೀಧರ್ ಅವರ ವಸ್ತು-ವಿಷಯವು ಗ್ರಾಮೀಣ ಪರಿಸರದ್ದು. ಅದರಲ್ಲೂ ತಾವು ಬೆಳೆದು ಬಂದ ಶ್ರೀರಂಗಪಟ್ಟಣ ಸುತ್ತಲಿನ 'ಬಲಿ' ಕುರಿತದ್ದು. ಅಂದರೆ ಇಲ್ಲಿ ಹಿಂಸೆ ಮಾತ್ರವಿಲ್ಲ. ಅದರ ಮುಖಾಮುಖಿಯು ಅಹಿಂಸೆಯೊಂದಿಗೆ ಆಗುತ್ತಿದೆ. ಅಂತೆಯೇ ಇಲ್ಲಿ ಸೌಮ್ಯ-ಘೋರತೆಗಳ ಸಂಘರ್ಷವನ್ನು ಕಾಣಬಹುದು. ಆದರೆ ಇಲ್ಲಿರುವುದು ಮೌನ ಸಂಘರ್ಷವೇ ಹೊರತು, ತೀವ್ರತೆಯ ಕಾವಿನಿಂದ ಕೂಡಿದುದಲ್ಲ. ಈ ಕಾರಣಕ್ಕಾಗಿಯೇ ಇದು ಬರಿಯ ಘೋಷಣೆಯ ನೆಲೆಯಲ್ಲಿ ನಿಲ್ಲದೇ ಕಲೆಯ ಸೆಳಕುಗಳನ್ನು, ಸೂಕ್ಷ್ಮಗಳನ್ನು ಪಡೆದುಕೊಳ್ಳುತ್ತದೆ.

---

೫೫. ಹಿಂಸೆ-ಅಹಿಂಸೆ ಮುಖಾಮುಖಿ ಮಾಡಿಸುವ 'ಹರಕೆಯ ಕುರಿ', ಕರ್ನಾಟಕದರ್ಶನ, ಪ್ರಜಾವಾಣಿ, ೭, ಅಕ್ಟೋಬರ್, ೨೦೦೦

ಹಿಂಸೆ–ಅಹಿಂಸೆಗಳ ಮುಖಾಮುಖಿಗೆ ಈ ಕಲಾವಿದ ಬಹುತೇಕ ವಾಚ್ಯ ನೆಲೆಯ ಸಂಕೇತಗಳನ್ನೇ ಬಳಸಿಕೊಂಡಿದ್ದಾರೆ. ಕುರಿಯು ಹಿಂಸೆಯ ಪ್ರತೀಕವಾದರೆ, ಬುದ್ಧ ಅಹಿಂಸೆಯ ಪ್ರತೀಕವಾಗುತ್ತಾನೆ. ಆದರೆ ಇಲ್ಲಿ ಹಿಂಸೆ ನಡೆಸುವವರಿಗಿಂತಲೂ ಅದಕ್ಕೆ ಬಲಿಯಾಗುವ ರೂಪವೇ ಹೆಚ್ಚಾಗಿರುವುದರಿಂದ ಎರಡು ವಿರುದ್ಧ ಧ್ರುವಗಳ ಸಂಘರ್ಷ ಇಲ್ಲಿ ನಡೆಯುವುದಿಲ್ಲ. ಕೆಲವೆಡೆಯಂತೂ ಕಲೆಯ ಸಂದರ್ಭದಲ್ಲಿ ಆಡು, ಟಗರುಗಳ ಕಾಮೋದ್ರೇಕಗೊಂಡ ಪುರುಷರ ಪ್ರತೀಕವಾಗಿ ಬಳಕೆಯಾದುದೇ ಹೆಚ್ಚು. ಅಂದರೆ ಅದು ನೇತ್ಯಾತ್ಮಕವಾಗಿ ಪ್ರತಿನಿಧಿತವಾಗುತ್ತದೆ. ಗ್ರೀಕ್ ಪುರಾಣಗಳಲ್ಲಿ, ಕ್ರಿಶ್ಚಿಯನ್ ಕಲ್ಪನೆಗಳಲ್ಲಿ, ಈಜಿಪ್ಷಿಯನ್ ಪ್ರಾಣಿ ಪೂಜೆಯಲ್ಲಿ ಈ ಬಗೆಯ ಹಲವು ಉದಾಹರಣೆಗಳಿವೆ. ಮಧ್ಯಕಾಲೀನ ನೀತಿ ಕತೆಗಳಲ್ಲಂತೂ ಗಂಡು ಕುರಿಯು ಕಾಮಾಸಕ್ತವಾಗಿದ್ದು, ಸಂಭೋಗಕ್ಕೆ ಹಾತೊರೆಯುವ ಪ್ರಾಣಿಯಾಗಿಯೇ ಬಳಕೆಯಾಗಿದೆ. ಆದರೆ ಶ್ರೀಧರ ಅವರ ಕುರಿಯು ಈ ನೆಗೆಟಿವ್ ಗುಣಗಳನ್ನು ಹೊಂದಿರುವುದಲ್ಲ. ಬದಲಿಗೆ ತಾನೇ ಪಾಶವೀ ಶಕ್ತಿಗೆ ಬಲಿಯಾಗುವಂತದ್ದು.

ಈ ಕುರಿಯೊಂದಿಗೆ ಬಲಿಪೀಠ, ಬುದ್ಧ, ರಕ್ತದ ಮಡುವು ಮುಂತಾದವುಗಳನ್ನೂ ಈ ಕೃತಿಗಳಲ್ಲಿ ಪುನರಾವರ್ತಿಸಿದ್ದಾರೆ. ಹೀಗೆ ಕ್ಲೀಷೆಯ ಹಂತ ತಲುಪಿರುವ ವಾಚ್ಯ ನೆಲೆಯ ಸಂಕೇತಗಳನ್ನು ಇವರು ಬಳಸಿಕೊಂಡಿರುವುದರಿಂದ ಕೃತಿಗಳು ತುಂಬ ಸುಲಭವಾಗಿ ತಮ್ಮೊಳಗಿನ ಅರ್ಥ ಬಿಟ್ಟು ಕೃತಿಗಳು ತುಂಬಾ ಸರಳದ್ದೆನಿಸುತ್ತವೆ. ಗ್ರಾಫಿಕ್‌ನಲ್ಲಿ ಪಕ್ವಗೊಂಡ ಇವರ ಮನಸ್ಸು, ವರ್ಣಚಿತ್ರಕ್ಕೆ ಇನ್ನೂ ಒಗ್ಗಿಲ್ಲ.

ಇವರ ಸಂಯೋಜನೆ ಹಾಗೂ ವಾತಾವರಣ ನಿರ್ಮಾಣವು ಮೆಟಫಿಸಿಕಲ್ ಸರ್ರಿಯಲಿಸ್ಟರ ನೆನಪು ತರುವಂತಿದೆ. ಆದರೆ ಸಮತಟ್ಟಾದ ಹಿನ್ನೆಲೆಯಲ್ಲಿನ ರೂಪಗಳ ಸರಳ ಜೋಡಣೆಯು ಕೆಲವೊಮ್ಮೆ ನಮ್ಮ ಬಾಬು ಈಶ್ವರ ಪ್ರಸಾದ್ ಅವರ ಕೃತಿಗಳ ನೆನಪು ತರುತ್ತವೆ. ಮಿನಿಯೇಚರ್ ಪ್ರಭಾವದೊಂದಿಗೆ ಅರ್ಪಣಾ ಕೌರ್ ಅವರ ಕೃತಿಗಳ ಸೆಳಕುಗಳೂ ಇಲ್ಲಿ ಸುಳಿದಿವೆ. ಬುದ್ಧನ ಹಾಗೂ ಕುರಿಯ ವಾಸ್ತವ ರೂಪಗಳ ಪುನರಾವರ್ತಿತ ಪೋಟೋ ಕಾಪಿಗಳನ್ನು ಕೆಲವೆಡೆ ಅಂಟಿಸಿ ಹೊಸ ಸೆಳಕು ತರುವ ಆಶಯ ಇಲ್ಲದೆ ಬುದ್ಧನ ಧ್ಯಾನ ಮುದ್ರೆಯಲ್ಲಿನ ಕೈಗಳನ್ನು ಕೂಡಾ ಅಲ್ಲಲ್ಲಿ ತರುವ ಮೂಲಕ ಇವುಗಳಿಗೆ ಆಧ್ಯಾತ್ಮಿಕ ಆವರಣ ನೀಡಿದ್ದಾರೆ. ಕೆಲವೆಡೆ ಬುದ್ಧನ ಭಗ್ನಮುಖವನ್ನೂ ಬಳಸಿದ್ದಾರೆ. ಹಿಂಸೆಯ ಪ್ರತೀಕವಾಗಿ ರಕ್ತದ ಮಡುವನ್ನು ಬಳಸಿಕೊಂಡಿದ್ದರೂ ಅದು ಘಟನೆಯ ಘೋರತೆಯನ್ನು ನೋಡುಗರ ಮುಂದಿಡುವುದಿಲ್ಲ.

**೫೬. ಅರ್ಥದ ಭಾರ ಹೊತ್ತ ಅಪರೂಪದ ಅವತಾರಗಳು**[೫೬]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೧/೧೦/೨೦೦೦ರಂದು ಕೃ.ಸೆ.ಯವರಿಂದ ಪ್ರಕಟವಾದ ಈ ಲೇಖನದಲ್ಲಿ, ಕಲಾವಿದೆ ಲಲಿತಾ ಶಂಕರ್ ಅವರ ಕಲಾ ಪ್ರೌಢಿಮೆ ಕುರಿತು ಈ ಮುಂದಿನಂತೆ ಚರ್ಚಿಸಿದ್ದಾರೆ.

---

೫೬. ಅರ್ಥದ ಭಾರ ಹೊತ್ತ ಅಪರೂಪದ ಅವತಾರಗಳು, ಕರ್ನಾಟಕದರ್ಶನ, ಪ್ರಜಾವಾಣಿ, ೨೧, ಅಕ್ಟೋಬರ್, ೨೦೦೦

ಬೆಂಗಳೂರಿನ ಲಲಿತಾಶಂಕರ್ ಅವರು ಅಮೆರಿಕದ ಬಾಲ್ಟಿಮೋರ್‌ನ ಮೇರಿಲ್ಯಾಂಡ್ ಇನ್‌ಸ್ಟಿಟ್ಯೂಟ್‌ನಲ್ಲಿ ಶಿಲ್ಪ ಕಲಾಭ್ಯಾಸ ಮಾಡಿದವರು. ಇನ್‌ಸ್ಟಲೇಶನ್ ಪ್ರಕಾರದ ಕೃತಿಗಳಿಗೆ ಹೆಸರಾದ ಇವರ ಕೃತಿಗಳ ಪ್ರದರ್ಶನ ಬೆಂಗಳೂರಿನ 'ಸುಮುಖ ಗ್ಯಾಲರಿ'ಯಲ್ಲಿ ನಡೆಯಿತು. ಪ್ರಸ್ತುತ ಇನ್‌ಸ್ಟಲೇಶನ್‌ನಲ್ಲಿ ಈ ಕಲಾವಿದೆ ಭಾರತೀಯ ತಾಂತ್ರಿಕ ಸಂಪ್ರದಾಯದಿಂದ ಪ್ರೇರಿತವಾದ 'ಜೀವನ ಚಕ್ರ'ವನ್ನು ತಮ್ಮದೇ ಆದ ರೀತಿಯಲ್ಲಿ ಪ್ರತಿಷ್ಠಾಪಿಸಿದ್ದಾರೆ.

ತಕ್ಷಣಕ್ಕೆ ನೋಡಿದರೆ ಲಲಿತಾ ಅವರ ಈ ಕೃತಿಯು ಸಾಮಾನ್ಯ ರಂಗಸ್ಥಳವೊಂದರ ನೆನಪು ತರುತ್ತದೆ. ಪರದೆಯೊಂದರ ಮೇಲೆ ತಾಂತ್ರಿಕ ಸಂಪ್ರದಾಯದ ಸುರುಳಿಯಾಕಾರವನ್ನು ಲೋಹದಲ್ಲಿ ರಚಿಸಿ ಹಾಕಿದ್ದು, ಅದರ ಮುಂದೆ ನಾಟಕದ ಸೈಡ್‌ವಿಂಗ್‌ಗಳಂತೆ ಕಪ್ಪು, ಹಳದಿ ಮತ್ತು ಕೆಂಪು ಬಣ್ಣದ ಬಟ್ಟೆಗಳನ್ನು ಗ್ಯಾಲರಿಯಲ್ಲಿ ಮೇಲಿನಿಂದ ಕೆಳಕ್ಕೆ ನೇತು ಹಾಕಲಾಗಿದೆ. ಈ ಸೈಡ್‌ವಿಂಗ್‌ಗಳ ಪ್ರದೇಶವು ಒಂದೊಂದು ಕೋಣೆಯ ಅನುಭವ ನೀಡುವಂತಿದ್ದು ಗೂಟಕ್ಕೆ ನೇತುಹಾಕಿದ ಹಾಗೆ ಬಟ್ಟೆಗಳಿದ್ದವು. ಇವುಗಳ ಪಕ್ಕದ ಪೂರ್ತಿ ಸ್ಥಳವನ್ನು ಮುಚ್ಚುವಂತೆ ಸೊಳ್ಳೆಯ ಪರದೆಯಂತಹ ಬಿಳಿಯ ಬಟ್ಟೆಯನ್ನು ಆವರಿಸಲಾಗಿದೆ. ನೋಡುಗರು ಸರಿಯಾಗಿ ಈ ಕೃತಿಯನ್ನು ಕುಳಿತು ನೋಡಲು ಅನುವಾಗುವಂತೆ ಈ ಒಟ್ಟು ನಿರ್ಮಾಣದ ಆಚೀಚೆ ಐದು ಮಂಚಗಳನ್ನು ಇಡಲಾಗಿದೆ.

ಈ ಕಲಾವಿದೆ ಭಾರತೀಯ ಸಾಂಪ್ರದಾಯಿಕ ವಿಧಾನದಿಂದ ಪ್ರೇರಿತರಾಗಿದ್ದರೂ ಅದು ಇಲ್ಲಿ ಸೀಮಿತಗೊಂಡಿರುವುದು ಮೂಲಾಧಾರ ಚಕ್ರ ಹಾಗೂ ಬಣ್ಣಗಳ ಸಾಂಕೇತಿಕತೆಗೆ. ಹೀಗೆ ಅತಿಯಾಗಿ ಸಾಂಕೇತಿಕತೆಯನ್ನು ನಂಬಿಕೊಂಡಂತಹ ಈ ರಚನೆ ಬಹುತೇಕ ಸರಳ ನೆಲೆಯದು. ಹಾಗಾಗಿ ಇದು ಅರ್ಥದ ಭಾರದಿಂದ ತೊಳಲುತ್ತಿದ್ದರೂ ನಿಜವಾದ ಅರ್ಥಗಳನ್ನು ಸುಲಭವಾಗಿ ಬಿಟ್ಟು ಕೊಡದಷ್ಟು 'ಕಬ್ಬಿಣದ ಕಡಲೆ'ಯಾಗಿದೆ. ಅಂತೆಯೇ ಮಹಾತ್ವಾಕಾಂಕ್ಷೆಯ ನಡುವೆಯೂ ಇಲ್ಲಿನ ರಚನೆಗಳು ದೃಶ್ಯಾತ್ಮಕವಾಗಿ ಅಷ್ಟಾಗಿ ಪರಿಣಾಮಕಾರಿಯಾಗಿಲ್ಲ. ಈ ಕಾರಣದಿಂದ ಕೃತಿಯ ವಾಚ್ಯ ವಿವರಣೆಗೇ ಪ್ರೇಕ್ಷಕರು ತೃಪ್ತರಾಗಬೇಕಿದೆ. ಆದರೆ ಯಾವುದೇ ಕೃತಿಯು ಸ್ವತಃ ತನ್ನ ಅರ್ಥಗಳನ್ನು, ಅನುಭವಗಳನ್ನು ಮುಟ್ಟಿಸಬೇಕೇ ಹೊರತು ವಾಚ್ಯ ವಿವರಣೆಗಳ ಮೊರೆ ಹೋಗಬಾರದು ಎನ್ನುವುದನ್ನು ಮನಗಂಡಾಗಲೂ ಈ ಕೃತಿಗೆ ಹಿನ್ನಡೆಯುಂಟಾಗುತ್ತದೆ. ಇಷ್ಟೆಲ್ಲದರ ನಡುವೆಯೂ ಪ್ರಾಚೀನ ಭಾರತದ ಆಶಯಗಳನ್ನು ಸಮಕಾಲೀನವಾಗಿ ಪ್ರಸ್ತುತವಾಗಿಸುವ ಪ್ರಯತ್ನವು ಶ್ಲಾಘನೀಯವೇ ಸರಿ ಎನ್ನುತ್ತಾರೆ ಲೇಖಕರು.

### ೫೭. ನಾಲ್ಕು ದಿಕ್ಕುಗಳಲ್ಲಿ ಸಾಗಿದ ವೈವಿಧ್ಯ[೫೭]

ಬೆಂಗಳೂರಿನ ವಿಂಡ್ಸರ್ ಮ್ಯಾನರ್ ಹೋಟೆಲಿನ 'ವೆಸ್ಟ್ ಮಿನಿಸ್ಟರ್ ಗ್ಯಾಲರಿ'ಯಲ್ಲಿ ನಡೆಯಿತು. 'ಆರ್ಟ್ ಇನ್ ಕ್ರಾಫ್ಟ್' ಪ್ರಸ್ತುತಪಡಿಸಿದ ಈ ಪ್ರದರ್ಶನದಲ್ಲಿ ಕಲಾ ವಲಯದಲ್ಲಿ ಗಟ್ಟಿ ಹೆಜ್ಜೆಗಳನ್ನು

---

೫೭. ನಾಲ್ಕು ದಿಕ್ಕುಗಳಲ್ಲಿ ಸಾಗಿದ ವೈವಿಧ್ಯ, ಕರ್ನಾಟಕ ದರ್ಶನ,ಪ್ರಜಾವಾಣಿ ೨೧ ಅಕ್ಟೋಬರ್, ೨೦೦೦

ಇಡುತ್ತಿರುವ ನಾಲ್ವರು ಕಲಾವಿದರು ಭಾಗವಹಿಸಿದ್ದರು. ಕೃಸೆ.ಯವರು ಈ ಕಲಾವಿದರ ಕಲಾಕೃತಿಗಳ ಮಹತ್ವ ಕುರಿತು ಪ್ರಸಕ್ತ ಲೇಖನದಲ್ಲಿ ಚರ್ಚಿಸಿದ್ದು, ಅದರ ಮುಖ್ಯಾಂಶಗಳು ಇಂತಿವೆ. ಸಿ.ಎಫ್.ಜಾನ್‌ರವರ 'ಭರವಸೆಯ ಎಳೆಗಳು' ಹಾಗೂ 'ದುರ್ಬಲ ನೆನಪುಗಳು' ಶೀರ್ಷಿಕೆಯ ಕೃತಿಗಳು ಭಿನ್ನವಾಗಿದ್ದು, ಮುಖ್ಯವೆನಿಸಿವೆ. ದುರ್ಬಲ ನೆನಪುಗಳಲ್ಲಿ ಅಮೆರಿಕದ ಜಾಸ್ಪರ್ ಜೋನ್ಸ್ ಅಲ್ಲಿನ ಧ್ವಜವನ್ನು ರೂಪಕವಾಗಿ ಬಳಸಿದಂತೆ ಜಾನ್ ಅವರು ಭಾರತೀಯ ಧ್ವಜವನ್ನು ಬಳಸಿಕೊಂಡಿದ್ದಾರೆ. ಹಲವಾರು ಮೌಲ್ಯಗಳ, ತ್ಯಾಗ, ಬಲಿದಾನಗಳ ಪ್ರತೀಕವಾದ ಧ್ವಜವನ್ನು ಪ್ಲಾಸ್ಟಿಕ್ ಹಾಳೆಗಳಲ್ಲಿ ಮುದ್ರಿಸಿ ಬಳಸುತ್ತಿರುವುದನ್ನು 'ವಿರೋಧಾಭಾಸ'ವೆಂಬಂತೆ ಇವರು ಪರಿಭಾವಿಸಿದ್ದಾರೆ. 'ಭರವಸೆಯ ಎಳೆಗಳು' ಶ್ರೇಣಿಯ ಕೃತಿಗಳು ಕಲಾತ್ಮಕ ದೃಷ್ಟಿಯಿಂದ ಸಾಕಷ್ಟು ಗಂಭೀರವಾಗಿವೆ. ರಿಲೀಫ್ ಶಿಲ್ಪಗಳಂತೆ ಕಾಗದಗಳನ್ನು ಮೆತ್ತಿದಂತಹ ಈ ರೂಪಗಳಲ್ಲಿ ಆಲದ ಎಲೆಯನ್ನು ಸಾಂಕೇತಿಕವಾಗಿ ದುಡಿಸಿಕೊಳ್ಳಲಾಗಿದೆ. ಆದರೆ ತುಂಬಾ ಪರಿಣಾಮಕಾರಿಯಾದ ಸೌಮ್ಯ ನೆಲೆಯ ಕೃತಿಗಳಿಗೆ ಕಲಾವಿದ ಅನಗತ್ಯದ ಅರ್ಥದ ಭಾರ ಹೊರಿಸುವ ಪ್ರಯತ್ನ ಮಾಡಿದ್ದಾರೆ. ಇದು ಬಿಟ್ಟರೆ ಇವು ಒಳ್ಳೆಯ ದೃಶ್ಯಾತ್ಮಕ ಪರಿಣಾಮ ಬೀರಿವೆ.

ಅದೇ ರೀತಿ ಟಿ.ಎಂ.ಅಜೀಸ್ ಕೂಡಾ ತಮ್ಮ ಸರಳ ಕೃತಿಗಳಲ್ಲಿ ಗಂಭೀರ ಆಧ್ಯಾತ್ಮವನ್ನು ತುಂಬಿದ್ದಾರೆ. ಮಡಕೆ ಹಾಗೂ ನೀರುಗಳನ್ನು ರೂಪವಾಗಿ ಬಳಸಿಕೊಂಡ ಈ ಕೃತಿಗಳು ಸರಳವಾದರೂ ಪರಿಣಾಮಕಾರಿಯಾಗಿವೆ. ಅದೇ ರೀತಿ ಅನುರಾಧ ನಳಪತ್ ಅವರು ವ್ಯಕ್ತಿಯೊಬ್ಬನ ಭಾವಚಿತ್ರದ ಮೂಲಕ ನಾಗರಿಕ ಸಮಾಜದ ಯಂತ್ರ, ವಾಸ್ತುಶಿಲ್ಪ, ಸಸ್ಯ ಸಂಪತ್ತುಗಳನ್ನು ನೋಡಿದ್ದಾರೆ. ಮೆಲುದನಿಯಲ್ಲಿ ಮಾತನಾಡುವ ಈ ಕೃತಿಗಳು ತನ್ನೊಳಗೆ ಕಲೆಯ ಸೂಕ್ಷ್ಮಗಳನ್ನು ಅವಿತಿಟ್ಟುಕೊಂಡಿವೆ.

ಅಲ್ಲದೆ ರಾಘವೇಂದ್ರರಾವ್ ಅವರು ಕೂಡಾ ಮುಖ್ಯವಾಗಿ ಎರಡು ನೆಲೆಯಲ್ಲಿ ತಮ್ಮ ಗ್ರಹಿಕೆಗಳನ್ನು ಮುಂದಿಟ್ಟಿದ್ದಾರೆ. ಮೊದಲನೆಯದು ಪೈನ್ ವುಡ್ ಮೇಲಿನವುಗಳಾದರೆ ಎರಡನೆಯವು ಫೈಬರ್‌ನಂತಹ ಕಾಗದದ ಮೇಲಿನವು. ಈ ಸರಳ ಕೃತಿಗಳಲ್ಲಿ ಸಮಕಾಲೀನ ಪರಿಸರವನ್ನು ಕುರಿತ ಅಭಿವ್ಯಕ್ತಿಯಿದೆ. ಹಾಗಿದ್ದರೂ ಇವು ಸುಲಭವಾಗಿ ತಮ್ಮೊಳಗಿನ ಆಶಯವನ್ನು ಬಿಟ್ಟುಕೊಡುವುದಿಲ್ಲ. ಈ ನಾಲ್ವರೂ ಕಲಾವಿದರ ಕೃತಿಗಳು ಹೊಸ ಅನುಭವ ಲೋಕವೊಂದನ್ನು ತೆರೆಯುವಂತಿವೆ. ಈ ದಿಸೆಯಲ್ಲಿ ಇದು ಗಮನಾರ್ಹ ಪ್ರದರ್ಶನ.

### ೫೮. ಅಕಾಡೆಮಿಕ್‌ನಿಂದ ಸೃಜನಶೀಲತೆಯೆಡೆಗೆ ಜಿಗಿಯುವ ತವಕ[೫೮]

ತುಮಕೂರಿನ ರವೀಂದ್ರ ಕಲಾನಿಕೇತನ ಕಲಾ ಶಾಲೆಯಲ್ಲಿ ಅಭ್ಯಾಸ ಮುಗಿಸಿರುವ ಬೆಂಗಳೂರಿನ ಭವಾನಿ ಶಿವಪ್ರಕಾಶ್ ಮತ್ತು ಇತರೆ ಕಲಾವಿದರ ಕೃತಿಗಳ ಪ್ರದರ್ಶನವು ಬೆಂಗಳೂರಿನ ಚಿತ್ರಕಲಾ

೫೮. ಅಕಡೆಮಿಕ್‌ನಿಂದ ಸೃಜನಶೀಲತೆಯೆಡೆಗೆ ಜಿಗಿಯುವ ತವಕ, ಕರ್ನಾಟಕದರ್ಶನ, ಪ್ರಜಾವಾಣಿ, ೨೮, ಅಕ್ಟೋಬರ್, ೨೦೦೦

ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ಕೃ.ಸೆ.ಯವರು ಈ ಕಲಾವಿದರ ಕಲಾಕೃತಿಗಳ ಮಹತ್ವ ಕುರಿತು ಪ್ರಸಕ್ತ ಲೇಖನದಲ್ಲಿ ಚರ್ಚಿಸಿದ್ದು, ಅದರ ಮುಖ್ಯಾಂಶಗಳು ಇಂತಿವೆ. ಈ ಪ್ರದರ್ಶನದಲ್ಲಿ ಮುಖ್ಯವಾಗಿ ವಾಸ್ತವದ ನೆಲೆಯಲ್ಲಿಯೇ ಸುತ್ತಲಿನದನ್ನು ಪರಿಭಾವಿಸುವ ಆಶಯವಿತ್ತು. ಅಕಾಡೆಮಿಕ್ ಶಿಕ್ಷಣದ ಮಿತಿಗಳ ನಡುವೆಯೇ ಸೃಜನಶೀಲ ಸೆಳಕುಗಳನ್ನು ಮುಟ್ಟಿಸುವ ಗಂಭೀರ ಪ್ರಯತ್ನವಿದೆ. ಭವಾನಿಯವರು ತಮ್ಮ ಎದುರಿನ 'ದೃಶ್ಯಗಳ' ದಾಖಲಾತಿಗೆ ಎರಡು ನೆಲೆಗಳ ನಿರ್ವಹಣೆಗೆ ಮೊರೆ ಹೋಗಿದ್ದಾರೆ. ಮೊದಲನೆಯದು ಆಕಾಡೆಮಿಕ್‌ಶಿಕ್ಷಣದಲ್ಲಿ ಒಂದು ಭಾಗವಾಗಿರುವ 'ಸ್ಟಿಲ್ ಲೈಫ್' ಚಿತ್ರಣ. ಅಂತೆಯೇ ಈ ಕಲಾವಿದೆ ಜೋಡಿಸಿದ ಹಲವಾರು ವಸ್ತುಗಳನ್ನು ಜೋಡಿಸಿ ಛಾಯಾಚಿತ್ರದಂತೆ ದಾಖಲಿಸಿದ್ದಾರೆ. ಇವು ಕಲಾತ್ಮಕ ಜೋಡಣೆಗಳಾದ್ದರಿಂದ ಇಲ್ಲಿನ ನೆರಳು-ಬೆಳಕಿನ ಯೋಜನೆ ಕುತೂಹಲಕಾರಿಯಾಗಿದೆ. ಜೊತೆಗೆ ಪಾಶ್ಚಾತ್ಯ ಕೃತಿಗಳ ನೆನಪು ತರುವಂತಿದೆ. ಹೀಗೆ ಅವುಗಳನ್ನು ದಾಖಲಿಸುವಾಗ 'ಫಿಲ್ಟರ್' ಗಳಂತೆ ವೈವಿಧ್ಯಮಯ ತಂತ್ರಗಳನ್ನು ಬಳಸಿದ್ದರಾದರೂ ಅದು ಅಷ್ಟಾಗಿ ಸಾಲದು. ಇವುಗಳಲ್ಲಿ ಜಲವರ್ಣದಲ್ಲಿ ಚಪ್ಪಲಿಗಳನ್ನು ಜೋಡಿಸಿದ 'ಯೆಟ್ ಟುಬಿ ಡಿಸ್ಕಾರ್ಡೆಡ್' ಕೃತಿ ಪರಿಣಾಮಕಾರಿಯಾಗಿದೆ.

ಅದೇ ರೀತಿ ಚೆನ್ನೈನ ಅಸ್ಮಾ ಮೆನನ್ ಅವರು ಅಡಗೂಲಜ್ಜಿ ಕಥೆಗಳಂತಹ ಪ್ರಪಂಚ. ತಮ್ಮದೇ ಆದ ವಿಶಿಷ್ಟ ಕಥೇ ಹೆಣೆಯಲು ಅನುವು ಮಾಡಿಕೊಡುವ ಇವು ಸುಪ್ತ ಮನಸ್ಸಿನ ಆಳದಿಂದ ಹೊರಬಂದಂತವು. ಕನಸಿನ ಲೋಕದಲ್ಲಿ ಮೂಡುವಂತಹ ಮಾನವ, ಜೈವಿಕ ವಿಲಕ್ಷಣ ಪ್ರಾಣಿಗಳು ಇಲ್ಲಿವೆ. ಆದರೆ ಈ ವಿಶಿಷ್ಟ ಆಕೃತಿಗಳು ವಿಚಿತ್ರ ಆವರಣದಲ್ಲಿ ಸೇರಿಕೊಂಡಿವೆ. ವೈವಿಧ್ಯಮಯ ತಂತ್ರ, ಮಾಧ್ಯಮ, ಆವರಣಗಳನ್ನು ಬಳಸಿಕೊಂಡು ಗಮನ ಸೆಳೆಯುವುದು ಇವರ ವಿಧಾನ. ಗ್ರಾಫಿಕ್ ಮಾಧ್ಯಮ ಕುರಿತು ಅತಿಯಾದ ಆಸಕ್ತಿಯುಳ್ಳ ಅಸ್ಮಾ ಅವರು ಅಲ್ಲಿನ ರೇಖಾತ್ಮಕ ಗುಣಗಳನ್ನು ಹಲವೆಡೆ ತಂದಿದ್ದಾರೆ. ಹೀಗೆ ವಿಚಿತ್ರವಾದ ಸಂಕೀರ್ಣತೆಯುಳ್ಳ ಈ ಕೃತಿಗಳು ಕುತೂಹಲಕಾರಿಯಾಗಿವೆ. ಈ ಕೃತಿಗಳಲ್ಲಿ ನೀರು, ಭೂಮಿ, ಆಕಾಶ ಇತ್ಯಾದಿ ವಿವಿಧ ಪದರಗಳನ್ನು ದ್ವಿಮಾನದಲ್ಲಿಯಂತೆ ಸಮತಟ್ಟಾಗಿ ಒಂದೇ ಪದರ ಧ್ವನಿಸುವಂತೆ ಇವರು ರೂಪಿಸಿದ್ದಾರೆ. ಅಂತೆಯೇ ನೆರಳು ಬೆಳಕಿನ ಯೋಜನೆಯಾಗಲೀ, ಆಳದ ಭ್ರಮೆಯಾಗಲೀ ಇಲ್ಲಿಲ್ಲ. ಅವು ಸೋದ್ದಿಶ್ಯವಾಗಿ ಇಲ್ಲಿ ನಿರಾಕರಣವೆಯಾಗಿವೆ. ಈ ನಡುವೆ ಶಿಲ್ಪಗಳಂತೆ ರಚಿಸಿರುವ 'ಗುಡಿ' ಶೀರ್ಷಿಕೆಯ ಕೃತಿಗಳೂ ಇಲ್ಲಿವೆ. ವರ್ಣ ಚಿತ್ರಗಳ ಮುಂದುವರೆದ ಆಯಾಮಗಳಂತಿರುವ ಇವುಗಳಲ್ಲಿ ಗುಡಿಯಂತಹ ರೂಪವಿದೆ. ಈ ದ್ವಿಚಿತ್ರ, ತ್ರಿಚಿತ್ರದಂತಹ ಚಿತ್ರ ಶಿಲ್ಪಗಳು ಕುತೂಹಲಕಾರಿ ಯಾಗಿವೆ.

ಇದೇ ಧಾಟಿಯಲ್ಲಿ ಕಲಾವಿದೆ ಮತ್ತು ಸಾಮಾಜಿಕ ಕಾರ್ಯಕರ್ತೆಯಾದ ಮುಂಬಯಿಯ ಪ್ರೀತಾ ಅವರು ಮೂಲತಃ ಚೆನ್ನೈನ ಸರಕಾರಿ ಕಾಲೇಜಿನಲ್ಲಿ ಕಲಾಭ್ಯಾಸ ಮಾಡಿದವರು. ಈ ಕಲಾವಿದೆ ತಮ್ಮ ಕಲಾಕೃತಿಗಳಲ್ಲಿ ಸ್ತ್ರೀ ಪರ ವಸ್ತು-ವಿಷಯಗಳನ್ನೇ ತರುತ್ತಾರೆ. ಇವರು ತರುವ ಸ್ತ್ರೀ ರೂಪಗಳು ಪೂರ್ಣ ನಗ್ನವಾಗಿದ್ದರೂ ತನ್ನದೇ ಆದ ಮಡಿವಂತಿಕೆ ಹಾಗೂ ಗಂಭೀರ

ಸೊಬಗುಗಳನ್ನು, ಸೊಗಡುಗಳನ್ನು ಹೊಂದಿವೆ. ಈ ಶೈಲೀಕೃತ ನಗ್ನ ದೇಹಗಳ ತರಗೆಲೆಗಳಂತಹ ತರಂಗಿತಾತ್ಮಕ ಸಂಯೋಜನೆಗಳು ಕೃತಿಗಳಲ್ಲಿ ಲಾಲಿತ್ಯವನ್ನು ಹೆಚ್ಚಿಸಿವೆ. ಇಲ್ಲಿನ ವರ್ಣಮೇಳವು ಇವುಗಳಿಗೆ ಇನ್ನಷ್ಟು ಗಾಂಭೀರ್ಯವನ್ನು ಹೊಂದಿಸಿವೆ. ಇಲ್ಲಿರುವ ದೊಡ್ಡ ಅಳತೆಯ ಕೃತಿಗಳಲ್ಲೇ ಕಲಾತ್ಮಕ ಸೂಕ್ಷ್ಮಗಳು ಹೆಚ್ಚಾಗಿ ಮೆರೆದಿವೆ.

ನವದೆಹಲಿಯ ಕಾಮಾಕ್ಷಿ ಪಂತ್ ಅವರು ಅಮೂರ್ತದ ಮೂಲಕವೇ ಮೂರ್ತದ ದರ್ಶನ ಮಾಡಿಸುವ ಇವರ ಕೃತಿಗಳಲ್ಲಿ ಪ್ರಯೋಗಶೀಲ ಮನಸ್ಸು ವಿಜೃಂಭಿಸಿದೆ. ವೈವಿಧ್ಯಮಯ ಮಾಧ್ಯಮಗಳ, ಮೈವಳಿಕೆಗಳ ಮೂಲಕ ಪದಾರ್ಥಗಳ ಯಥಾವತ್ ಗುಣಗಳನ್ನೇ ವಿಶಿಷ್ಟವಾಗಿ ದುಡಿಸಿಕೊಳ್ಳುವ ಮನಸ್ಸಿದೆ. ಆ ಮೂಲಕವೇ ವಿಭಿನ್ನ ಅರ್ಥಗಳನ್ನು ಮೂಡಿಸುವ ಆಶಯವೂ ಇದೆ. ಸಮಕಾಲೀನ, ಪೋಸ್ಟ್ ಮಾಡರ್ನಿಸ್ಟ್ ಒಲವುಗಳನ್ನು ಒಡಲಿನಲ್ಲಿ ಬಚ್ಚಿಟ್ಟುಕೊಂಡ ಇಲ್ಲಿನ ಕಲಾ ಕೃತಿಗಳು ಗಮನಾರ್ಹವಾಗಿದ್ದು, ಪ್ರೇಕ್ಷಕರ ಮನಸ್ಸನ್ನು ಸೂರೆಗೊಳ್ಳುವಲ್ಲಿ ಯಶಸ್ವಿಯಾಗಿವೆ ಎಂದು ಕೃ.ಸೆ.ಅಭಿಪ್ರಾಯಪಟ್ಟಿದ್ದಾರೆ.

**೫೯. ಸರಕು ಸಂಸ್ಕೃತಿಯ ಕಪಿಮುಷ್ಟಿಯಲ್ಲಿ ಕಳೆದುಹೋಗುತ್ತಿರುವ ಕಲೆ**[೫೯]

ಮೂಲತಃ ಚಿತ್ರದುರ್ಗದ ಜಿ.ಈ.ಗುರುಸಿದ್ದಪ್ಪನವರ ಈಚಿನ ಕೃತಿಗಳ ಪ್ರದರ್ಶನವು 'ಟೈಮ್ ಅಂಡ್ ಸ್ಪೇಸ್ ಗ್ಯಾಲರಿ'ಯಲ್ಲಿ ನಡೆಯಿತು. ಇತ್ತೀಚೆಗೆ ಬರೋಡಾ ಕಲಾಶಾಲೆಯಲ್ಲಿ ಸ್ನಾತಕೋತ್ತರ ಪದವಿಯ ಅಭ್ಯಾಸ ಮುಗಿಸಿ ಬಂದ ಈ ಕಲಾವಿದ ನಡೆಸುತ್ತಿರುವ ಮಹಾತ್ವಾಕಾಂಕ್ಷೆಯ ಪ್ರದರ್ಶನವಿದು. 'ಭೂಮಿ ಗೀತೆ' ಎಂದು ಪ್ರದರ್ಶನವನ್ನು ಕರೆದಿದ್ದರಾದರೂ ಇಲ್ಲಿರುವುದು ನಗರ ಸಂಸ್ಕೃತಿಯ ಪರಿಣಾಮಗಳೇ ಆಗಿವೆ ಎನ್ನುವುದನ್ನು ಪ್ರಸಕ್ತ ಲೇಖನದ ಮೂಲಕ ಕೃ.ಸೆ.ಯವರು ಗುರುತಿಸುತ್ತಾರೆ. ೧೮/೧೧/೨೦೦೦ ರಂದು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ಇವರ ಈ ಲೇಖನ ಪ್ರಕಟವಾಗಿದ್ದು, ಅದರಲ್ಲಿ ಈ ಮುಂದಿನ ಅಂಶಗಳ ಕುರಿತು ಚರ್ಚಿಸಿದ್ದಾರೆ.

ಪ್ರದರ್ಶನದಲ್ಲಿ ಮುಖ್ಯವಾಗಿ ಎರಡು ನೆಲೆಯ ಕೃತಿಗಳಿದ್ದರೂ ಅವುಗಳಲ್ಲಿ ಪ್ರಧಾನವಾದುದು ಹಣದ ಪ್ರಭಾವವನ್ನು ಕುರಿತದ್ದು. ಅಧಿಕಾರದ ಪ್ರತೀಕವಾದ ಹಣವು ಸುತ್ತಲಿನ ವ್ಯವಹಾರವನ್ನು ನಿಯಂತ್ರಿಸುವ ಬಗೆಗಿನ ವಿಚಾರಗಳು ಇಲ್ಲಿವೆ. ಆದರೆ ಸೂಚ್ಯತೆಗಿಂತಲೂ ವಾಚ್ಯ ನೆಲೆಯನ್ನು ಮುಟ್ಟಿರುವ ಕೃತಿಗಳೇ ಇಲ್ಲಿ ಅಧಿಕ ಸಂಖ್ಯೆಯಲ್ಲಿವೆ. ನಮ್ಮ ದೇಶದ ನೋಟಿನ ಭಾಗಗಳ ಹಿನ್ನೆಲೆಯಲ್ಲಿ ರೂಪುಗೊಂಡ ಇವುಗಳಲ್ಲಿ ಆನೆ, ತಕ್ಕಡಿ, ಕಿರೀಟ ಈ ಮುಂತಾದ ಅಧಿಕಾರದ ಪ್ರತೀಕಗಳಿಂದ ತಮ್ಮ ಅನಿಸಿಕೆಗಳನ್ನು ಮುಟ್ಟಿಸುವ ಒತ್ತಾಯವಿದೆ. ಆದರೆ ಈ ಪ್ರತೀಕಗಳು ಯಾವ ಅರ್ಥಗಳನ್ನು ಹೊರಡಿಸುವ ಉದ್ದೇಶದಿಂದ ಸ್ವೀಕೃತವಾಗಿವೆ ಎಂಬ ಸ್ಪಷ್ಟ ಸುಳಿವುಗಳನ್ನು ಇವು ನೀಡುವುದಿಲ್ಲ. ವಿವಿಧ ಕೃತಿಗಳಲ್ಲಿ ಇವುಗಳ ಪುನರಾವರ್ತನೆ ನಡೆದಿದೆ.

---

೫೯. ಸರಕು ಸಂಸ್ಕೃತಿಯ ಕಪಿಮುಷ್ಟಿಯಲ್ಲಿ ಕಳೆದುಹೋಗುತ್ತಿರುವ ಕಲೆ,ಕರ್ನಾಟಕದರ್ಶನ, ಪ್ರಜಾವಾಣಿ, ೪, ನವಂಬರ್,೨೦೦೦

ಆದರೆ ಕಂಪ್ಯೂಟರ್, ಇಂಜಿನ್ ಆಯಿಲ್‌ಗಳ ಚಿತ್ರವಿರುವ 'ಕರೆನ್ಸಿ-೧' ಕೃತಿ ಡೆಕೋರೇಟಿವ್‌ನೆಡೆಗೆ ತಿರುಗಿದೆ. ಈ ಸರಣಿಯ ಕೃತಿಗಳಲ್ಲಿರುವ ಶ್ಲಾಘನೀಯ ಅಂಶವೆಂದರೆ ಹಿನ್ನೆಲೆಯಲ್ಲಿನ ಅತ್ಯುತ್ತಮ ಮೈವಳಿಕೆ. 'ಕಲ್ಕಿ' ಕೃತಿಯಲ್ಲಿನ ವಿಭಿನ್ನ ಮೈವಳಿಕೆಯೂ ಡೆಕೊರೇಟಿವ್ ಸೆಳಕಿನಲ್ಲಿಯೂ ಪರಿಣಾಮಕಾರಿಯಾಗಿದೆ.

### ೬೦. ವೃಷಭ ವೈಭವ[೬೦]

ಪ್ರಸ್ತುತ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಸ್ನಾತಕೋತ್ತರ ಪದವಿಯಲ್ಲಿರುವ ಸುಭಾಷ್ ಕಮ್ಮಾರ್ ಅವರು ಈಚಿನ ವರ್ಷಗಳಲ್ಲಿ ಗೀಳಿನಂತೆ 'ವೃಷಭ'ವನ್ನು ಚಿತ್ರಿಸುತ್ತಿರುವವರು. ಅವರ ಈಚಿನ ಈ ಬಗೆಯ ಡ್ರಾಯಿಂಗ್‌ಗಳ ಪ್ರದರ್ಶನವು ಬೆಂಗಳೂರಿನ ಕಮರ್ಷಿಯಲ್ ಸ್ಟ್ರೀಟ್‌ನಲ್ಲಿರುವ 'ಕೆಫೆ ಕಾಫಿ ಡೇ'ಯಲ್ಲಿ ನಡೆಯಿತು. ಇದರ ಮಹತ್ವವನ್ನು ಕೃ.ಸೆ.ಯವರು ಈ ರೀತಿ ಗುರುತಿಸುತ್ತಾರೆ.

ಈ ಪ್ರದರ್ಶನದಲ್ಲಿ ಚಾರ್ಕೋಲ್ ಹಾಗೂ ಮಿಶ್ರ ಮಾಧ್ಯಮದಲ್ಲಿ ರಚಿಸಿದ ಡ್ರಾಯಿಂಗ್‌ಗಳಿವೆ. ಶತಮಾನಗಳಿಂದಲೂ ಕಲಾವಿದರು 'ವೃಷಭ'ವನ್ನು ಪಾಶವೀ ಶಕ್ತಿಯ ಪೌರುಷದ ಸಂಕೇತವಾಗಿ ಅಭಿವ್ಯಕ್ತಿಸುತ್ತಿದ್ದಾರೆ. ಸುಭಾಷ್ ಅವರು ಕೂಡಾ ಇಲ್ಲಿನ ಘಟನೆಗಿಂತಲೂ ವೃಷಭದ ಬಾಹ್ಯ ರೂಪಕ್ಕೆ ಮಾರು ಹೋಗಿದ್ದಾರೆ. ವಿಶೇಷತಃ ಗೂಳಿಯ ಆಂತರಿಕ ಹಾಗೂ ಬಾಹ್ಯ ಶಕ್ತಿಯನ್ನು ಇಲ್ಲಿ ಮುಂದಿಡಲಾಗಿದೆ. ಚಾರ್ಕೋಲ್ ಮಾಧ್ಯಮವನ್ನು ಯಶಸ್ವಿಯಾಗಿ ದುಡಿಸಿಕೊಂಡಿರುವ ಈ ಶೈಲೀಕೃತ ರೂಪಗಳಲ್ಲಿ ಚಾರ್ಕೋಲ್ ಬೀಸುಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಿದ್ದಾರೆ. ಜೊತೆಗೆ ಕೃತಕ ನೆರಳು-ಬೆಳಕಿನ ಯೋಜನೆಯೂ ವಸ್ತುವಿನ ಘನತ್ವವನ್ನು ಪರಿಣಾಮಕಾರಿಯಾಗಿ ಪ್ರಕಟಿಸುವಂತಿದೆ. ಆದರೆ ಹೆಚ್ಚಿನೆಡೆ ಇಲ್ಲಿನ ನಿರ್ವಹಣೆಯು ಗುಹಾ ಚಿತ್ರಗಳೂ ಸೇರಿದಂತೆ ಹಲವಾರು ಕಲಾವಿದರ ಪ್ರಭಾವಗಳನ್ನು ನೆನಪಿಸುತ್ತವೆ. ಇವು ಸರಳ ಕೃತಿಗಳಾದರೂ ಗೂಳಿಯ ಸತ್ವವನ್ನು ಗಮನಾರ್ಹವಾಗಿ ಹಿಡಿದಿಟ್ಟಿವೆ. ಹೀಗೆ ಸುಭಾಷ್ ಕಮ್ಮಾರ್ ಅವರು ತಮ್ಮ ಎಂದಿನ ಅನ್ವೇಷಣೆಯನ್ನು ಗಂಭೀರ ದಿಕ್ಕಿನಲ್ಲಿ ಮುಂದುವರೆಸುತ್ತಿರುವ ಸೂಚನೆಯನ್ನು ಇಲ್ಲಿ ಲೇಖಕರು ನೀಡಿದ್ದಾರೆ.

### ೬೧. ಹೈದರಾಬಾದಿನ ವೈವಿಧ್ಯ[೬೧]

ದೇಶದ ವಿವಿಧ ಭಾಗಗಳಲ್ಲಿನ ಯುವ ಕಲಾವಿದರನ್ನು ಪರಿಚಯಿಸುವ ದೃಷ್ಟಿಯಿಂದ 'ಸಾಕ್ಷಿ ಗ್ಯಾಲರಿ'ಯು ಹೈದರಾಬಾದಿನ ಏಳು ಕಲಾವಿದರ ಕಲಾಕೃತಿಗಳನ್ನು ಪ್ರದರ್ಶಿಸಿತು. ಅವರ

---

೬೦. ವೃಷಭ ವೈಭವ, ಕರ್ನಾಟಕ ದರ್ಶನ,ಪ್ರಜಾವಾಣಿ ೪ ಅಕ್ಟೋಬರ್, ೨೦೦೦

೬೧. ಹೈದರಾಬಾದಿನ ವೈವಿಧ್ಯ, ಅದೇ

ಚಿತ್ರಗಳಲ್ಲಿ ಬಳಕೆಯಾದ ರೂಪ, ತಂತ್ರ ಮೊದಲಾದವುಗಳ ಮಹತ್ವವನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಗುರುತಿಸಿದ್ದಾರೆ.

ವಿಶೇಷವಾಗಿ ಭಿತ್ತಿಚಿತ್ರಗಳ ಅಭ್ಯಾಸ ಮಾಡಿರುವ ಕೆ.ಶ್ರೀನಿವಾಸ್ ಚಾರಿ ಅವರ ಕೃತಿಗಳಲ್ಲಿ ಭಿತ್ತಿ ಚಿತ್ರಗಳ ತಂತ್ರ, ರೂಪಗಳೇ ಮೆರೆದಿವೆ. ಹಲವೆಡೆ ಇವರ ಶೈಲೀಕರಣವು ಲಕ್ಷ್ಮಾಗೌಡ್ ಅವರನ್ನು ಹೋಲುತ್ತವಾದರೂ ಉತ್ತಮ ಹಾದಿಯಲ್ಲಿವೆ. ಲಕ್ಷ್ಮಣ ಮೂರ್ತಿ ಅವರು ಕೂಡಿ ಸಾಮಾನ್ಯ ಜನಜೀವನ ಸನ್ನಿವೇಶಗಳನ್ನು ಹಿಡಿದಿರುವ ಪ್ರಯತ್ನ ಮಾಡಿದ್ದು ಕೆಲವೆಡೆ ಅವು ಕೆ.ಜಿ.ಸುಬ್ರಹ್ಮಣ್ಯಂ ಅವರ ನೆನಪು ತರುವಂತಿದೆ. ಹಮೀದ್ ಬಿನ್ ಅಮರ್ ಅವರು ಎಕ್ಸ್‌ಪ್ರೆಶನಿಸ್ಟ್ ನೆಲೆಯಲ್ಲಿ ಪಾಶ್ಚಾತ್ಯ ಪ್ರೇರಿತ ರೂಪಗಳನ್ನು ಆಧರಿಸಿದ್ದು, ಇವರ ಸ್ಟಿಲ್‌ಲೈಫ್ ಕೃತಿಗಳಲ್ಲಿ ತುಂಬ ಪರಿಣಾಮಕಾರಿಯಾದ ನಿರ್ವಹಣೆಯಿದೆ. ಹಮೀದ್ ಮತ್ತು ಸಜಿದ್ ಬಿನ್ ಅವರಲ್ಲಿ ಪರಸ್ಪರ ಪ್ರೇರಣೆಯ ಹಲವು ಅಂಶಗಳಿವೆ. ವಿಶೇಷತಃ ಸಜಿದ್ ಬಿನ್ ಅವರ ಕೃತಿಗಳು ಪಶ್ಚಿಮದ ಜಾಹಿರಾತು ಸಂಸ್ಕೃತಿಯಿಂದ ಪ್ರೇರಿತವಾದವು. ಎಲ್.ಎನ್.ವಿ.ಶ್ರೀನಿವಾಸ್ ಅವರು ಮಿನಿಮಲಿಸ್ಟ್‌ರಂತೆ ತುಂಬ ಸರಳ ನೆಲೆಯಲ್ಲಿ ವಾತಾವರಣವನ್ನು ಚಿತ್ರಿಸುವ ಪ್ರಯತ್ನ ಮಾಡಿದ್ದಾರಾದರೂ ಅವು ಪರಿಣಾಮಕಾರಿಯಾಗಿಲ್ಲ.

ಅದೇ ರೀತಿ ಇಲ್ಲಿನ ಕಲಾವಲಯಕ್ಕೆ ಸಾಕಷ್ಟು ಪರಿಚಿತರಾದ ರಾಜೇಶ್ವರರಾವ್ ಅವರು ತಮ್ಮ ಎಂದಿನ ಅಕ್ರಲಿಕ್ ಹಾಳೆಗಳ ಪದರಗಳ ತಂತ್ರವನ್ನು ಇಲ್ಲಿಯೂ ಮುಂದುವರೆಸಿದ್ದು ಗಮನಾರ್ಹವಾಗಿವೆ. ನಮ್ಮೆಲ್ಲಾ ಕಲಾವಿದರೂ ಬಹುತೇಕ ಪಾಶ್ಚಾತ್ಯ ರೂಪಗಳೆಡೆಗೆ ತಿರುಗಿ ನೋಡುತ್ತಿರುವ ಈ ದಿನಗಳಲ್ಲಿ ಒಟ್ಟಾರೆಯಾಗಿ ಈ ಪ್ರದರ್ಶನವು ಹೈದರಾಬಾದಿನ ಪ್ರಾದೇಶಿಕ ಸತ್ವವನ್ನು ಮುಂದಿಡದಿದ್ದರೂ ಸಮಕಾಲೀನ ಧೋರಣೆಯ ದೃಷ್ಟಿಯಿಂದ ಗಮನಾರ್ಹವಾಗಿದೆ ಎಂದು ದಾಖಲಿಸಿದ್ದಾರೆ.

**೬೨. ಸ್ವಚ್ಛಂದ ವರ್ಣಗಳ ದೃಶ್ಯಕಾವ್ಯ ತಂತ್ರಗಳ ದೃಷ್ಟಿಯೂ ನವ್ಯ**[೬೨]

ಕೃ.ಸೆ.ಯವರು ೧೧/೧೧/೨೦೦೦ರಂದು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ಈ ಲೇಖನ ಪ್ರಕಟಿಸಿದ್ದು, ಕಲಾವಿದೆ ವಿನೋದಾರವರ ಕಲಾಕೃತಿಗಳ ಕುರಿತು ಚರ್ಚಿಸಿದ್ದಾರೆ. ಇವರು 'ಮಾರ್ಬಲ್ ತಂತ್ರ' ಎಂದು ಕರೆಯುವ ವಿಶೇಷ ವಿಧಾನವನ್ನು ಅನುಸರಿಸಿ ಚಿತ್ರಗಳನ್ನು ರಚಿಸಿದ್ದಾರೆ. ವರ್ಣಗಳನ್ನು ನೀರಿನಂತೆ ತುಂಬ ತೆಳುವಾಗಿ ತೆಗೆದುಕೊಂಡು ಕ್ಯಾನ್ವಾಸಿನ ಮೇಲೆ ವಿವಿಧ ರೀತಿಯಲ್ಲಿ ಹರಿಯಬಿಟ್ಟಾಗ ಅದು ವಿಶಿಷ್ಟ ಮೈವಳಿಕೆಗಳನ್ನು, ಆಕೃತಿಗಳನ್ನು ನಿರ್ಮಿಸುತ್ತಾ ಹರಿಯುತ್ತದೆ. ಈ ಸ್ವಚ್ಛಂದ ಹರಿದಾಟವನ್ನು ನಿಯಂತ್ರಿಸುವ ಮೂಲಕವೇ ಇಲ್ಲಿ ಕೃತಿಯ ಸೃಷ್ಟಿ

---

೬೨. ಸ್ವಚ್ಛಂದ ವರ್ಣಗಳ ದೃಶ್ಯಕಾವ್ಯ ತಂತ್ರಗಳ ದೃಷ್ಟಿಯೂನವ್ಯ.,ಕ ದರ್ಶನ,ಪ್ರಜಾವಾಣಿ ೪ ಅಕ್ಟೋಬರ್, ೨೦೦೦

ಕಾರ್ಯ ನಡೆಯುತ್ತದೆ. ಉದ್ದಿಶ್ಯಪೂರ್ವಕವಾಗಿ ಸೃಷ್ಟಿಸಿದ್ದಾರೆಯೇ ಎಂಬಷ್ಟು ಅವುಗಳ ಸ್ವಚ್ಛಂದತೆಯನ್ನು ನಿಯಂತ್ರಿಸಿ ಅಮೂರ್ತ ಆಕೃತಿಗಳನ್ನು ಮೂರ್ತದೆಡೆಗೆ ತಿರುಗಿಸಿ ಕಾಲ್ಪನಿಕ ನಿಸರ್ಗ ದೃಶ್ಯಗಳನ್ನು ವೈವಿಧ್ಯತೆಯಿಂದ ಸೃಷ್ಟಿಸಿದ್ದಾರೆ.

ಈ ತಂತ್ರದೊಂದಿಗೆ ಮುಂದಿನ ದಿನಗಳಲ್ಲಿ ಹೃದಯದ ಆಳಕ್ಕಿಳಿಯಬಲ್ಲಂತಹ ವರ್ಣಮೇಳ, ನಿರ್ವಹಣೆಗಳನ್ನು ಕೈಗೆತ್ತಿಕೊಂಡರೆ ಇಲ್ಲಿರುವ ಅತಿಯಾದ ಸಿಹಿತನವನ್ನು ನಿಯಂತ್ರಿಸಬಹುದಾಗಿದೆ. ಈ ಕಲೆಯ ಔಪಚಾರಿಕ ಶಿಕ್ಷಣ ಪಡೆದವರೊಬ್ಬರು ಈ ಬಗೆಯ ಸಂದರ್ಭದಲ್ಲಿ ವಿರಳ ಎಂದರೆ ತಪ್ಪಿಲ್ಲ.

**೬೩. ಕಲ್ಕತ್ತದ ನಗರ ಚೈತನ್ಯ**[೬೩]

ಕೃ.ಸೆ.ಯವರು ಪ್ರಸಕ್ತ ಲೇಖನದ ಮೂಲಕ ಕಲ್ಕತ್ತ ನಗರಕ್ಕೆ ಸಂಬಂಧಿಸಿದಂತೆ ರಚಿತವಾದ ಕೆಲ ಕಲಾವಿದರ ಕಲಾಕೃತಿಗಳ ಕುರಿತು ಮುಂದಿನಂತೆ ಚರ್ಚಿಸಿದ್ದಾರೆ. ಕಲಾವಿದ ಸೋಮನಾಥ್ ಅವರು ಆಕ್ರಿಲಿಕ್ ಬಣ್ಣಗಳಿಗಿರುವ ಎರಡೂ ಸಾಧ್ಯತೆಗಳನ್ನು ಅಂದರೆ ಜಲ ವರ್ಣದ ಹರಿಯುವ ಗುಣವನ್ನು ಹಾಗೂ ತೈಲವರ್ಣಗಳ ಅಪಾರದರ್ಶಕತೆಗಳನ್ನು ಏಕ ಕಾಲದಲ್ಲಿ ಒಂದೇ ಕೃತಿಯಲ್ಲಿ ಕಂಡಿದ್ದಾರೆ. ಜೊತೆಗೆ ಪದರ ಪದರಗಳಾಗಿ ಬಣ್ಣ ಹಚ್ಚಿ ಕೃತಿಯನ್ನು ಕುತೂಹಲವನ್ನೂ ಮೂಡಿಸಿದ್ದಾರೆ. ಕೆಲವೆಡೆ ಡ್ರೈ ಬ್ರಶ್‌ನಂತೆ ವರ್ಣಗಳನ್ನು ನಿರ್ವಹಿಸಿರುವುದರಿಂದ ಒಳ್ಳೆಯ ಮೈವಳಿಕೆಗಳ ನಿರ್ಮಾಣವೂ ಆಗಿದೆ.

ಆದರೆ ಈ ಉತ್ತಮ ಕೌಶಲ್ಯದ ನಿರ್ವಹಣೆಯ ಹಿಂದೆ ಕೆಲಸ ಮಾಡಿರುವ ಮನಸ್ಸು ಅಭಿವ್ಯಕ್ತಿಗಿಂತಲೂ ವಾಣಿಜ್ಯ ನೆಲೆಯದು. ಅಂತೆಯೇ ನವ್ಯದ ಮುಸುಕಿನೊಳಗೇ ಕೊಳ್ಳುಗರನ್ನು ಉದ್ದೇಶಿಸಿದಂತಹ ವರ್ಣಮೇಳ ನಿರ್ವಹಣೆ ಇಲ್ಲಿದೆ. ಅಲಂಕರಣದ ಹಾಗೂ ಕೃತಿಗಳನ್ನು ಸಿಹಿಯಾಗಿಸುವ ಈ ಅಂಶವೇ ಕೃತಿಗಳ ಕಲಾತ್ಮಕ ಓಟಕ್ಕೆ ಬ್ರೇಕ್ ಹಾಕುವಂತಿವೆ. ರಾಮ್‌ಕುಮಾರ್ ಅವರು ಸೇರಿದಂತೆ ಹಲವಾರು ಕಲಾವಿದರು ದಶಕಗಳ ಹಿಂದೆ ಈ ಬಗೆಯ ನಗರ ದೃಶ್ಯಗಳನ್ನು ಹಿಡಿದಿಡುವ ಪ್ರಯತ್ನ ಮಾಡಿದ್ದಾರಾದರೂ ಅವರ್ಯಾರೂ ಸೋಮನಾಥ್ ಅವರಂತೆ ಇದನ್ನು ಇಷ್ಟೊಂದು ಎಳೆದಿರಲಿಲ್ಲ. ಕೆಲವೆಡೆ ಇವರ ಶೈಲಿಯು ಪಾಶ್ಚಾತ್ಯ ಕಲಾವಿದ ಪಾಲ್ ಕ್ಲೇಯರವರ ರಚನೆಗಳ ನೆನಪು ತರುತ್ತವೆ.

**೬೪. ಕಲೆಯ ಮೂಲಕ ಆಟ**[೬೪]

ಕೃ.ಸೆ.ಯವರು ಪ್ರಸಕ್ತ ಲೇಖನದ ಮೂಲಕ ಕಲಾವಿದರಾದ ಕೆ.ಕೃಷ್ಣಪ್ರಸಾದ್‌ರವರ ಕಲಾ ವೈಶಿಷ್ಟ್ಯತೆಗಳನ್ನು ಈ ಮುಂದಿನಂತೆ ಗುರುತಿಸಿದ್ದಾರೆ. ಚಿತ್ರಕಲಾ ಪರಿಷತ್ತಿನ ಕಾಲೇಜಿನಲ್ಲಿ ಇತ್ತೀಚೆಗಷ್ಟೇ

೬೩. ಕಲ್ಕತ್ತದ ನಗರ ಚೈತನ್ಯ, ಕರ್ನಾಟಕ ದರ್ಶನ,ಪ್ರಜಾವಾಣಿ ೪ ಅಕ್ಟೋಬರ್, ೨೦೦೦

೬೪. ಕಲೆಯ ಮೂಲಕ ಆಟ, ಅದೇ

ತಮ್ಮ ಕಲಾಭ್ಯಾಸ ಮುಗಿಸಿದ ಕೆ.ಕೃಷ್ಣಪ್ರಸಾದ್ ಅವರ ರಚನೆಗಳಲ್ಲಿ ಮುಖ್ಯವಾಗಿ ಎರಡು ಅಂಶಗಳನ್ನು ಗುರುತಿಸಿದ್ದಾರೆ. ಮೊದಲನೆಯದು ಕ್ರೀಡೆಗಳನ್ನು ಕುರಿತ ವಸ್ತುವಿನಲ್ಲಾದರೆ, ಎರಡನೆಯದು ಪ್ರದರ್ಶನದ ಜೋಡಣೆಯಲ್ಲಿ. ಜೂಜಿನ ವಿವಿಧ ಪ್ರಕಾರಗಳಾದ ಶತಮಾನಕ್ಕೆ ಹಿಂದಿನ ಚದುರಂಗದಾಟ, ಹಾವು-ಏಣಿ ಆಟ, ಇಸ್ಪೀಟುಗಳಿಂದ ಹಿಡಿದು ಈಚಿನ ಕೇರಂ, ಕರೋಡ್‌ಪತಿವರೆಗೆ ಅವರ ವೈವಿಧ್ಯ ಹರಡಿದೆ. ಕೆಲವು ಗೋಡೆಗಳ ಮೇಲೆ ಪ್ರದರ್ಶಿತ. ಮತ್ತೆ ಕೆಲವು ನೆಲದ ಮೇಲಿನ ಇನ್‌ಸ್ಟಲೇಶನ್‌ಗಳು. ಹೀಗೆ ಕೆಲವು ಬದಲಾವಣೆಗಳ ಮೂಲಕ ಭಿನ್ನ ಆಯಾಮ ನೀಡಲು ಕಲಾವಿದರು ಯತ್ನಿಸಿದ್ದಾರೆ.

ವರ್ಣಚಿತ್ರಗಳಲ್ಲೂ ಕೆಲವೆಡೆ ಸ್ವತಃ ಆಕೃತಿಗಳನ್ನು ಸೃಷ್ಟಿಸಿದ್ದರೆ, ಮತ್ತೆ ಕೆಲವೆಡೆ ವಾಸ್ತವದ ವಸ್ತುಗಳನ್ನೇ ಹಚ್ಚಿ ತಮ್ಮ ಚಿತ್ರಗಳಿಗೆ ಮೆರಗು ನೀಡಿದ್ದಾರೆ. ಅಲ್ಲಲ್ಲಿ ಹಚ್ಚಿರುವ ಇಸ್ಪೀಟಿನ ಎಲೆಗಳನ್ನು ಇದಕ್ಕೆ ಉದಾಹರಿಸಬಹುದು. ಕೃತಿಗಳಲ್ಲಿ ವೈವಿಧ್ಯ, ಹೊಸತನಗಳಿವೆಯಾದರೂ ನಿರ್ವಹಣೆಯಲ್ಲಿ ಜಡತನವಿದೆ. ಜೊತೆಗೆ ನಿರ್ವಹಣೆಯಲ್ಲಿ ಕಲೆಯ ಸೂಕ್ಷ್ಮಗಳೂ ಕಳೆದುಹೋಗಿವೆ. ಹೀಗೆ ಹೊಸತನದ ಮೂಲಕ ಇವು ಗಮನಾರ್ಹವೆನಿಸಿದರೂ ಕಲಾತ್ಮಕ ಕುತೂಹಲವನ್ನು ತಣಿಸುವಲ್ಲಿ ಯಶಸ್ವಿಯಾಗಿಲ್ಲ ಎನ್ನುವುದನ್ನು ವಿಶೇಷವಾಗಿ ದಾಖಲಿಸಿದ್ದಾರೆ.

### ೬೫. ಕೌಶಲ್ಯ ಮರೆತು ಕಲ್ಪನೆಯೇ ಮೆರೆವ ಮಾದರಿಗಳು[೬೫]

ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ 'ಭಾವ ಚಿತ್ರಗಳು' ಎಂಬ ಶೀರ್ಷಿಕೆಯಲ್ಲಿ ನಡೆದ ಅವಿನಾಶ್ ವೀರರಾಘವನ್ ಅವರ ಛಾಯಾಚಿತ್ರ ಪ್ರದರ್ಶನದ ವೈಶಿಷ್ಟ್ಯತೆ ಕುರಿತು ಕೃ.ಸೆ.ಯವರು ೧೮/೧೧/೨೦೦೦ರಂದು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ಈ ಲೇಖನ ಪ್ರಕಟಿಸಿದ್ದಾರೆ. ಆ ವಿವರ ಈ ಮುಂದಿದೆ. ಗ್ಯಾಲರಿಯ ಗೊಡೆಯ ಮೇಲೆ ಕೆಳಗಿನಿಂದ ಮೇಲಿನವರೆಗೆ ಒಂದರ ಪಕ್ಕ ಇನ್ನೊಂದರಂತೆ ಸಾವಿರಾರು ವರ್ಣ ಛಾಯಾಚಿತ್ರಗಳನ್ನು ಹಚ್ಚಿರುವ ಈ ಪ್ರದರ್ಶನವನ್ನು ಕಲಾವಿದ 'ಇದು ಆರ್ಟ್ ಫೋಟೋಗ್ರಫಿಯ ಪ್ರದರ್ಶನವಲ್ಲ. ಬದಲಿಗೆ ಒಂದು ಕಲ್ಪನೆಯನ್ನು ದಾಖಲಿಸುವುದು' ಎಂದಿದ್ದಾರೆ. ಈ ಛಾಯಾಚಿತ್ರಗಳು ನಾಗರಿಕ ಬದುಕಿನ ಎಲ್ಲ ಮಜಲುಗಳನ್ನು ಮುಟ್ಟುತ್ತವೆ. ಜೊತೆಗೆ ನೋಡುಗರು ಅಲ್ಲಿರುವ ಛಾಯಾಚಿತ್ರವನ್ನು ತೆಗೆದು ಅದೇ ಅಳತೆಯ ತಮಗಿಷ್ಟವಾದ ಛಾಯಾಚಿತ್ರವೊಂದನ್ನು ತಾವೇ ತಂದೂ ಹಚ್ಚಬಹುದಾಗಿದೆ. ಹೀಗೆ ನೋಡುಗರನ್ನು ವಿವಿಧ ನೆಲೆಗಳಲ್ಲಿ ಕ್ರಿಯಾತ್ಮಕವಾಗಿ ಒಳಗೊಳ್ಳುವ ಆಶಯವೂ ಇಲ್ಲಿದೆ.

ಇಲ್ಲಿನ ಒಂದೆರಡು ಕೃತಿಗಳಲ್ಲಿ ದೃಶ್ಯಗಳೇ ಇಲ್ಲ. ಬದಲಿಗೆ ಅನ್‌ಎಕ್ಸ್‌ಪೋಸ್ಡ್ ಫಿಲ್ಮ್‌ನಿಂದ ಮುದ್ರಿಸಿದ ಖಾಲಿ ಕಾಗದಗಳ ಸಾಲುಗಳಿವೆ. ಮತ್ತೆ ಕೆಲವೆಡೆ ಕೇವಲ ಅದೇ ಅಳತೆಯ ಕನ್ನಡಿಗಳನ್ನು

---

೬೫. ಕೌಶಲ್ಯ ಮರೆತು ಕಲ್ಪನೆಯೇ ಮೆರೆವ ಮಾದರಿಗಳು, ಕರ್ನಾಟಕದರ್ಶನ, ಪ್ರಜಾವಾಣಿ, ೧೮, ನವಂಬರ್, ೨೦೦೦

ವಿಶಿಷ್ಟ ರೀತಿಯಲ್ಲಿ ಅಂಟಿಸಲಾಗಿದೆ. ಇಲ್ಲಿರುವ ಇನ್‌ಸ್ಟಲೇಶನ್‌ಗಳಂತಹ ಈ ಜೋಡಣೆಗಳು ಪಾಶ್ಚಾತ್ಯ ದೇಶಗಳಲ್ಲಿ ಹೆಚ್ಚಾಗಿ ಚಲಾವಣೆಯಲ್ಲಿರುವಂಥವೇ. ಹೀಗೆ ಅವಿನಾಶ್ ಅವರು ಪಾಶ್ಚಾತ್ಯ ಪ್ರೇರಿ ಕಲೆಗೆ ಇಲ್ಲಿನ ದೃಶ್ಯಗಳನ್ನು ಬಳಸಿಕೊಂಡಿದ್ದಾರೆ. ಈ ಬಗೆಯ ಪ್ರಯೋಗಗಳು ಒಂದು ಹೊಸ ಅನುಭವ ನೀಡಬಹುದೇ ಹೊರತು ಅರ್ಥ ಸಾಧ್ಯತೆಗಳ ದೃಷ್ಟಿಯಿಂದ ಇಲ್ಲಿ ಸಾಕಷ್ಟು ಅಸ್ಪಷ್ಟತೆಯಿದೆ. ಜೊತೆಗೆ ಕೌಶಲ್ಯವನ್ನು, ಕಲಾತ್ಮಕತೆಯನ್ನು ಉದ್ದಿಶ್ಯಪೂರ್ವಕವಾಗಿ ನಿರಾಕರಿಸಿರುವುದರಿಂದ ಇವು ಸಾಮಾನ್ಯ ಪರಿಣಾಮ ಉಂಟುಮಾಡುತ್ತದೆಯೇ ಹೊರತು ಕಲಾತ್ಮಕ ಮನಸ್ಸುಗಳನ್ನು ತಣಿಸುವಂತಿಲ್ಲ. ಹಾಗಾಗಿ ಇದೊಂದು ಸೆರೆಬ್ರಲ್ ಆದ ಪ್ರಯೋಗವಾಗಿಯಷ್ಟೇ ಗಮನ ಸೆಳೆಯಬಲ್ಲದು ಎನ್ನುವುದನ್ನು ಲೇಖಕರು ಪ್ರಸ್ತಾಪಿಸಿದ್ದಾರೆ.

**೬೬. ಹೂವಿನೊಡನೆ ನಾರು**[೬೬]

ಕೇಂದ್ರ ಮಾನವ ಸಂಪನ್ಮೂಲ ಸಚಿವ ಡಾ.ಮುರಳೀಮನೋಹರ ಜೋಶಿಯವರ ಪುತ್ರಿ ನಿವೇದಿತಾ ಜೋಶಿಯವರು ರಚಿಸಿ ವಾಚಿಸಿದ 'ನಂಗೆ ಪಾಂವ್' (ಬರಿಗಾಲು) ಕವನಗಳಿಗೆ ಚಂಡೀಗಢದ ನಿರ್ಮಲಾ ಸಿಂಗ್ ಅವರು ಚಿತ್ರರೂಪ ನೀಡಿದ ಕಲಾಕೃತಿಗಳ ಪ್ರದರ್ಶನವನ್ನು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಏರ್ಪಡಿಸಲಾಗಿತ್ತು.

ಈ ಪ್ರದರ್ಶನ ಕುರಿತಂತೆ ಕೃ.ಸೆ.ಯವರು ಪ್ರಸಕ್ತ ಲೇಖನದಲ್ಲಿ ಈ ರೀತಿ ಅಭಿಪ್ರಾಯವ್ಯಕ್ತಪಡಿಸಿದ್ದಾರೆ. "ಇವು ಕವನದ ಸತ್ವವನ್ನು ಹಿಡಿದಿಡುವ ಯಥಾವತ್ ರೂಪಗಳಲ್ಲ. ನಿರೂಪಣಾ ಚಿತ್ರಗಳೂ ಅಲ್ಲ. ಕಲಾವಿದೆ ತಮಗನಿಸಿದಂತೆ ಹಲವಾರು ಬದಲಾವಣೆ ಮಾಡಿಕೊಂಡಿದ್ದಾರೆ. ನಿವೇದಿತಾ ಅವರ ಕೃತಿಗಳು ಆ ಭಾವನೆಗಳನ್ನು ಮುಂದಿಡುವಂತಿಲ್ಲ. ನಿರ್ಮಲಾ ಅವರು ಇಲ್ಲಿ ಹಲವಾರು ತಂತ್ರಗಳನ್ನು ಬಳಸಿಕೊಂಡಿದ್ದಾರಾದರೂ ಪುರಾತನ ಎನ್‌ಕಾಸ್ಟಿಂಗ್‌ಗೆ ಒತ್ತಾಸೆ ನೀಡಿ ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ". ಅವುಗಳಲ್ಲಿ ಅನ್‌ಜಾನ್ ರಸ್ತೆ', 'ರಿಶ್ತೆ ಕಿ ಗರಿಮಾ' ಗಳಂತಹ ಕೆಲವು ಕೃತಿಗಳು ಉತ್ತಮ ಉದಾಹರಣೆಗಳಾಗಿವೆ. ಅಲ್ಲದೆ ರೇತಿಲಿ ರಿಶ್ತೆ, ಜಿಂದಗಿ, ದರ್ದ್ ಕಾ ಪೀಡಾ, ಆದಿನಾಥ್, ಲಹರೆ, ಯಾದೊಂಕಿ ಧೂಲ್, ನಾವಿಕ್ ಬನನೇಸೆ, ಹಸೆ ದೂರ್ ರಹಕೆ, ಅಪನಾ ಗಾಂವ್‌ನಂತಹ ಹಲವಾರು ಕೃತಿಗಳಲ್ಲಿನ ನಿರ್ವಹಣೆ ಸೊರಗಿದೆ. ಪ್ರದರ್ಶನದಲ್ಲಿ ಹೆಚ್ಚಿನೆಡೆ ಕಲಾಕೃತಿಗಳಿಗಿಂತಲೂ ಅದರ ಕೆಳಗೆ ಹಾಕಿದ್ದ ಶೀರ್ಷಿಕಾ ಫಲಕಗಳೇ ಕಲಾತ್ಮಕವಾಗಿ ಗಮನ ಸೆಳೆಯುವಂತಿದ್ದವು. ಹೀಗೆ ಈ ಪ್ರದರ್ಶನದಲ್ಲಿ ಕೆಲವು ಉತ್ತಮ ಕೃತಿಗಳಿದ್ದರೆ, ಹೆಚ್ಚಿನವುಗಳ ಸಾಮಾನ್ಯ ನೆಲೆಯಿಂದಾಗಿ ಮಿಶ್ರ ಅನುಭವ ನೀಡುತ್ತದೆ.

---

೬೬. ಹೂವಿನೊಡನೆ ನಾರು, ಕರ್ನಾಟಕ ದರ್ಶನ,ಪ್ರಜಾವಾಣಿ ೧೮ ನವಂಬರ್, ೨೦೦೦

**೬೭. ಬೆಳಕಿನ ರೇಖೆಗಳು**

ವಿಜಿ ವರ್ಗಿಸ್ ಪಣಿಕ್ಕರ್ ಅವರು ಕುತೂಹಲಕರವಾದ, ವಿಶಿಷ್ಟ ತಂತ್ರದ ಮೂಲಕ ಸೃಷ್ಟಿಸಿದ ಛಾಯಾಚಿತ್ರಗಳನ್ನು ಚಿತ್ರಕಲಾ ಪರಿಷತ್ತಿನಲ್ಲಿ ಪ್ರದರ್ಶಿಸಲಾಯಿತು. ಮಹಾತ್ವಾಕಾಂಕ್ಷೆಯ ತಂತ್ರದ ಮೂಲಕ ರಚಿಸಿದ ಈ ಬೆಳಕಿನ ರೇಖಾಚಿತ್ರಗಳಲ್ಲಿ ಹಲವೆಡೆ ಕುದುರೆಮುಖ, ಹೆಣ್ಣು ಮುಂತಾದ ಪರಿಚಿತ ಪ್ರಪಂಚದ ರೂಪಗಳನ್ನು ತಂದಿದ್ದಾರೆ. ಕಷ್ಟ ಸಾಧ್ಯವಾದ ತಂತ್ರದಲ್ಲಿನ ಇವು ಒಂದು ತಂತ್ರವಾಗಿ ಗಮನ ಸೆಳೆಯುತ್ತದೆಯೇ ಹೊರತು ಅದನ್ನು ಕಲಾತ್ಮಕವಾಗಿ ದಕ್ಕಿಸಿಕೊಳ್ಳುವಲ್ಲಿ ವಿಜಿ ಅವರು ಯಶಸ್ವಿಯಾಗಿಲ್ಲ. ಅನವಶ್ಯವಾಗಿ ಪರಿಚಿತ ಪ್ರಪಂಚದ ರೂಪಗಳನ್ನು ಸಾಮಾನ್ಯ ನೆಲೆಯಲ್ಲಿ ತಂದಿದ್ದೇ ಇದಕ್ಕೆ ಕಾರಣ. ಇದಕ್ಕೆ ಬದಲಾಗಿ ಪರಿಚಿತ ಪ್ರಪಂಚದಿಂದ ಹೊರತಾದ ಅಮೂರ್ತ ರೂಪಗಳನ್ನು ತಂದ ಕಡೆಗಳಲ್ಲಿ ಕೃತಿಗಳು ಪರಿಣಾಮಕಾರಿಯಾಗಿವೆ ಎಂಬುದನ್ನು ಈ ಲೇಖನದ ಮುಖಾಂತರ ಕೃ.ಸೆ.ಯವರು ಸ್ಪಷ್ಟಪಡಿಸಿದ್ದಾರೆ.

**೬೮. ಬಾಲವೇ ಆನೆಯನ್ನು ಆಡಿಸುವ ಪರಿ ಹಳೆಯದಕ್ಕೆ ಹೊಸತನದ ಗರಿ**[೬೭]

ದೇಶದ ಹೆಸಾರಾಂತ ಕಂಪ್ಯೂಟರ್ ಕಲಾವಿದ ಅಕ್ಬರ್ ಪದಮ್‌ಸೀ ಅವರ ಕಲಾ ನೈಪುಣ್ಯತೆಯನ್ನು ಕೃ.ಸೆ.ಯವರು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ(೨೫/೧೧/೨೦೦೦)ಪ್ರಕಟವಾದ ತಮ್ಮ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ. ಮುಂಬೈನ 'ಪುಂಡೋಲ್ ಆರ್ಟ ಗ್ಯಾಲರಿ'ಯ ಸಹಯೋಗದೊಂದಿಗೆ ಬೆಂಗಳೂರಿನ 'ಸುಮುಖ ಗ್ಯಾಲರಿ'ಯಲ್ಲಿ ಇವರು ಹಲವು ಕಂಪ್ಯೂಟರ್ ಗ್ರಾಫಿಕ್ಸ್‌ಗಳನ್ನು ಪ್ರದರ್ಶಿಸಿದ್ದರು.

ಕಂಪ್ಯೂಟರ್‌ನಲ್ಲಿ ಕೋರಲ್ ಡ್ರಾ ಪ್ಯಾಕೇಜ್ ಅಭ್ಯಾಸ ಮಾಡಿದ ಈ ಹಿರಿಯ ಕಲಾವಿದ ಅದರ ಫಲವಾಗಿ ಹೊಸ ಬಗೆಯ ಕೃತಿಗಳನ್ನು ಸೃಷ್ಟಿಸಿದ್ದಾರೆ. ಪರಿಚಿತ ಪ್ರಪಂಚದ ವ್ಯಕ್ತಿಗಳು, ಪ್ರಾಣಿಗಳು ಈ ಮುಂತಾದುವುಗಳಿಂದ ಹೊರತಾಗಿ ಜ್ಯಾಮಿತೀಯ ನೆಲೆಯಲ್ಲಿ ಆಮೂರ್ತ ಆಕೃತಿಗಳನ್ನು ಇಲ್ಲಿ ತಂದಿದ್ದಾರೆ. ಹಾಗಿದ್ದರೂ ಇವು ಸಿಮಿಟ್ರಿ ಇರುವಂತಹ, ಆಕೃತಿಗಳಲ್ಲ. ಬದಲಿಗೆ ಯಾಂತ್ರೀಕೃತವೆನಿಸುವಂತಹ ವೈವಿಧ್ಯಮಯ ಆಕೃತಿಗಳು ಇಲ್ಲಿವೆ.

ಇಲ್ಲಿರುವ ಛಾಯಾಂತರ ವರ್ಣಮೇಳ ನಿರ್ವಹಣೆ ಈ ಎಲ್ಲವೂ ಬೇರೆಯದೇ. ಆದುದರಿಂದ ಇಲ್ಲೆಲ್ಲೂ ಎಂದಿನ ಪದಮ್‌ಸೀ ಅವರು ಕಾಣುವುದಿಲ್ಲ. ಕಂಪ್ಯೂಟರ್ ಸಾಧ್ಯತೆಗಳನ್ನು ಅನುಸರಿಸಿ ವೈವಿಧ್ಯಮಯ ಛಾಯಾಂತರವನ್ನು ಇಲ್ಲಿ ತಂದಿದ್ದಾರೆ. ಯಾಂತ್ರೀಕೃತ ಎನಿಸುವ ಇಲ್ಲಿನ ಗ್ರೇಡೇಶನ್

---

೬೭. ಬಾಲವೇ ಆನೆಯನ್ನು ಆಡಿಸುವ ಪರಿ ಹಳೆಯದಕ್ಕೆ ಹೊಸತನದ ಗರಿ, ಕರ್ನಾಟಕದರ್ಶನ, ಪ್ರಜಾವಾಣಿ, ೨೫, ನವಂಬರ್, ೨೦೦೦

ಒಂದು ಕಡೆಯಿಂದ ಆರಂಭವಾಗಿ ನಿಧಾನವಾಗಿ ಛಾಯೆ ಬದಲಿಸುತ್ತಾ ಇನ್ನೊಂದು ಭಾಗವನ್ನು ತಲುಪುತ್ತದೆ. ವಾಣಿಜ್ಯ ಕಲೆಯಲ್ಲಿರುವಂತಹ ಈ ಲೆಕ್ಕಾಚಾರಕ್ಕೆ ಅನುಗುಣವಾದ ತಂತ್ರವು ಕೃತಕ ವಾತಾವರಣವನ್ನೆ ಸೃಷ್ಟಿಸಿದೆ. ಜೊತೆಗೆ ಅದೇಕೋ ಬದಲಾಗುವ ಆತುರದಲ್ಲಿ ಇವರು ತಮ್ಮ ಎಂದಿನ ಕಲಾ ಸೂಕ್ಷ್ಮಗಳನ್ನು ಮರೆತು ವಾಣಿಜ್ಯ ನೆಲೆಯ, ಗಾಢವಾದ ವರ್ಣ ಮೇಳವನ್ನು ಅಲಂಕರಿಸಿದ್ದಾರೆ. ಅಲಂಕರಣದ ಸೆಳಕುಗಳುಳ್ಳ ಈ ಪ್ರಾಥಮಿಕ ವರ್ಣಗಳು ಜಡತೆಯ ಅನುಭವ ನೀಡುತ್ತದೆ. ಸಾಮಾನ್ಯವಾಗಿ ತಂತ್ರದ, ಯಂತ್ರದ ಸಾಧ್ಯತೆಗಳನ್ನು ಕಲಾವಿದರು ತಮ್ಮ ನಿಯಂತ್ರಣಕ್ಕೆ ತಂದುಕೊಳ್ಳುವುದು ಅಪೇಕ್ಷಣೀಯ. ಹೀಗೆ ಯಾವುದೇ ಸಮರ್ಥ ಕಲಾವಿದರು ಉಪಕರಣವನ್ನು ತಾವು ಹೇಳಿದಂತೆ ಕೇಳಿಸುತ್ತಾರೆ.

**೬೯. ಹಳೆಯದರ ನಡುವೆಯೂ ಹೊಸ ಆವರಣ**[೬೮]

ಹೈದರಾಬಾದ್ ಯೂನಿವರ್ಸಿಟಿಯಲ್ಲಿ ಉಪನ್ಯಾಸಕರಾಗಿರುವ ಬೆಂಗಳೂರಿನ ಶಾಮಸುಂದರ್ ಮೂಲತ: ಗ್ರಾಫಿಕ್ ಕಲಾವಿದರರಾಗಿದ್ದು, ಶಿಲ್ಪ ಮಾಧ್ಯಮದಲ್ಲಿ ಸಹಾ ಗಮನಾರ್ಹರಾಗಿದ್ದಾರೆ. ಇವರು ರಚಿಸಿದ ಶಿಲ್ಪಗಳ ಪ್ರದರ್ಶನವು ಬೆಂಗಳೂರಿನ 'ಸಾಕ್ಷಿ ಗ್ಯಾಲರಿ'ಯಲ್ಲಿ ನಡೆಯಿತು. ಈ ಕುರಿತಂತೆ ಕೃ.ಸೆ.ಯವರು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೬/೯/೨೦೦೦ರ ಲೇಖನ ಪ್ರಕಟಿಸಿದ್ದಾರೆ. ಈ ಕುರಿತ ವಿವರ ಇಂತಿದೆ.

ಇವರಿಂದ ರಚಿತವಾದ ವಿವಿಧ ತಂತ್ರಗಳ, ವಿವಿಧ ಶೈಲಿಗಳ ಕೃತಿಗಳಿವೆ. ಚಿಕ್ಕ ಪುಟ್ಟವೂ ಸೇರಿದಂತೆ ಇಲ್ಲಿ ನೂರಾರು ಶಿಲ್ಪಗಳಿದ್ದರೂ ಅವು ಒಂದೊಂದು ಮುಖ್ಯ ಶಿಲ್ಪದ ಭಾಗವಾಗಿವೆ. ಹೀಗೆ ಇಲ್ಲಿ ಮುಖ್ಯವಾಗಿ ಶೆಲ್ಟರ್ ಸರಣಿ, ಮುಖವಾಡಗಳೂ ಹಾಗು ಉಳಿದವು ಎಂದು ಪ್ರತ್ಯೇಕಿಸಿ ನೋಡಬಹುದು. ಇಲ್ಲಿನ ಮುಖವಾಡಗಳು ಪರಿಣಾಮಕಾರಿಯಾಗಿವೆ. ಸಾಮಾನ್ಯವಾಗಿ ಹಾಳೆಯನ್ನು ಬಗ್ಗಿಸಿ ಮುಖಾಕಾರಕ್ಕೆ ಒಗ್ಗಿಸಿದ ಇವುಗಳಲ್ಲಿ ಇತರರ ಪ್ರಭಾವ ಇಲ್ಲದಿಲ್ಲ. ಆದರೆ ವ್ಯಂಗ್ಯಚಿತ್ರದಲ್ಲಿರುವಂತೆ ಸರಳ ಭಾವನೆಗಳ ವೈವಿಧ್ಯದಿಂದಲೇ ಹಲವು ಮುಖಭಾವಗಳನ್ನು ತಂದಿದ್ದಾರೆ. ಇವುಗಳನ್ನೆಲ್ಲಾ ಸಾಲಾಗಿ ಜೋಡಿಸಿ ಮತ್ತೊಂದು ದೊಡ್ಡ ಫಲಕದ ಮೇಲೆ ಪ್ರದರ್ಶಿಸಿರುವ ಪರಿ ಕುತೂಹಲಕಾರಿಯಾಗಿದೆ. ಈ ಬೃಹತ್ ಶಿಲ್ಪದ ಕೆಳಗೆ ನಮ್ಮ ಸಾಮಾನ್ಯ ಮುಖಗಳನ್ನು ಹೋಲುವಂತಹ ದಾರು ಶಿಲ್ಪಗಳಿದ್ದು ಅಲ್ಲಿಯೂ ವಿಡಂಬನೆಯಿದೆ, ಶೆಲ್ಟರ್ ಸರಣಿಯಲ್ಲಿ ಆರ್ಕಿಟೆಕ್ಟೋನಿಕ್ ಶಿಲ್ಪಗಳನ್ನು ನೆನಪಿಸುವಂತಹ ದೇವಾಲಯಗಳ ನೋಟಗಳಿವೆ, ಮರದ ಕಾಂಡವನ್ನು ಮೂಲವಾಗಿಟ್ಟುಕೊಂಡು ಲಂಬವಾಗಿ ರೂಪಿಸಿದ ಈ ಶಿಲ್ಪಗಳಲ್ಲಿ ವಿವಿಧ ರೂಪಗಳಿದ್ದು, ಹಲವು

೬೮. ಹಳೆಯದರ ನಡುವೆಯೂ ಹೊಸ ಆವರಣ, ಅದೇ

ವೈವಿಧ್ಯಗಳಿವೆ. ಇಲ್ಲಿನ ಸಾಂಪ್ರದಾಯಿಕ ರೂಪದಲ್ಲಿರುವ 'ದೇವೀ' ಶಿಲ್ಪವು ಗಮನಾರ್ಹವಾಗಿದ್ದು, ಇದು ಹಳೆಯದು ಮತ್ತು ಹೊಸತರ ನಡುವಿನ ಸೇತುವೆಯಂತಿದೆ.

ಪ್ರದರ್ಶನದಲ್ಲಿ ಎಲ್ಲರ ಮನ ಸೆಳೆಯುವ ಮತ್ತೊಂದು ಕೃತಿಯೆಂದರೆ 'ಸಪ್ಪರ್' ನೆನಪಿಸುವ ಊಟದ ಟೇಬಲ್. ವಾಸ್ತವದಲ್ಲಿಯಂತಹ ಊಟದ ಟೇಬಲ್ಲಿನ ಮೇಲೆ ಮರದಲ್ಲಿ ಮಾಡಿದ ಪಾತ್ರೆಗಳು, ಆಹಾರ ಪದಾರ್ಥಗಳು ವಿಶಿಷ್ಟವಾಗಿ ಜೋಡಣೆಯಾಗಿವೆ. ಹಲವು ವರ್ಷಗಳ ಹಿಂದೆ ಮಾನವ ರುಂಡಗಳನ್ನು ಬಳಸಿ ಅವರು ರಚಿಸಿದ ಕಬಾಬ್ ಇಲ್ಲಿ ಮಿನಿಯೇಚರ್ ರೂಪ ತಳೆದಿದೆ. ಹೀಗೆ ಶಾಮಸುಂದರ್ ಅವರ ಈ ಪ್ರದರ್ಶನವು ಹಲವು ಪ್ರಭಾವಗಳ ನಡುವೆಯೂ ನಮ್ಮ ಮನಸ್ಸಿನಲ್ಲಿ ಆಳವಾಗಿ ಉಳಿಯುವಂತಿದೆ.

### ೭೦. ಸಾಮಾನ್ಯತೆಗಿಳಿದ ವೈವಿಧ್ಯ[೬೯]

ನವದೆಹಲಿಯ ಆಲ್ ಇಂಡಿಯಾ ಫೈನ್ ಆರ್ಟ್ಸ್ ಅಂಡ್ ಕ್ರಾಫ್ಟ್ 'ಸೊಸೈಟಿ'ಯು ಕರ್ನಾಟಕ ಲಲಿತಕಲಾ ಅಕಾಡೆಮಿಯ ಸಹಯೋಗದೊಂದಿಗೆ ರಾಜ್ಯ ಮಟ್ಟದ 'ಮಿಲೇನಿಯಮ್ ಕಲಾ ಪ್ರದರ್ಶನವನ್ನು ಬೆಂಗಳೂರಿನ ಕನ್ನಡ ಭವನದ ಚಿತ್ರಾ ಗ್ಯಾಲರಿಯಲ್ಲಿ ಏರ್ಪಡಿಸಿತ್ತು. ಈ ಪ್ರದರ್ಶನದಲ್ಲಿ ಚಿತ್ರ, ಶಿಲ್ಪ, ಗ್ರಾಫಿಕ್ ಕೃತಿಗಳಿವೆ. ಸರ್ಕಾರಿ ಕೃಪಾ ಪೋಷಿತ ಚಟುವಟಿಕೆಗಳಲ್ಲಿ ಸಾಮಾನ್ಯವಾಗಿರುವಂತೆ ಕರ್ನಾಟಕದ ಪ್ರಸಿದ್ಧ, ಗಮನಾರ್ಹ ಕಲಾವಿದರ ಕೃತಿಗಳು ಇಲ್ಲಿ ತುಂಬಾ ವಿರಳವಾಗಿವೆ, ಹೆಚ್ಚಿನವರ ಕೃತಿಗಳು ಸದ್ಯದ ಸಮಕಾಲೀನ ಚೈತನ್ಯವನ್ನು ತುಂಬಿಕೊಂಡಿಲ್ಲ. ಆದರೆ ಈ ನಡುವೆ ಹಲವು ಯುವ ಕಲಾವಿದರು ವಿಶಿಷ್ಟ ಪ್ರತಿಭೆಯನ್ನು ಮೆರೆದಿದ್ದಾರೆ. ಆದರೆ ಬಹುಮಾನದ ಸಂದರ್ಭದಲ್ಲಿ ಹಲವಾರು ಉತ್ತಮ ಕೃತಿಗಳು ತೀರ್ಪುಗಾರರ ಕಣ್ಣಿಗೆ ಬಿದ್ದಿಲ್ಲ. ಅಂತೆಯೇ ಹಲವು ಸಾಮಾನ್ಯ ಕೃತಿಗಳಲ್ಲಿ ಬಹುಮಾನದ ಹಣೆಪಟ್ಟಿಯೊಂದಿಗೆ ಮೆರೆಯುತ್ತಿವೆ. ಹೀಗೆ ಬಹುತೇಕ ಸಾಮಾನ್ಯ ನೆಲೆಯ ಪ್ರದರ್ಶನವಿದು ಎಂಬುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಪ್ರಕಟಿಸಿದ್ದಾರೆ.

### ೭೧. ಪಾಶ್ಚಾತ್ಯ-ಪೌರ್ವಾತ್ಯಗಳ ಮುಖಾಮುಖಿ[೭೦]

ಇಂಗ್ಲೆಂಡಿನಲ್ಲಿ ಅಭ್ಯಾಸ ಮಾಡಿ ಬಂದ ಸುಮನಾ ಚೌಧರಿ ಹಾಗು ಅಲ್ಲಿ ಅವರಿಗೆ ಶಿಕ್ಷಕರಾಗಿದ್ದ ಸ್ಯೂ ಕರ್ಣಿ ಮತ್ತು ಮರಿಯಾ ಫ್ರೆಡ್ರಿಕ್ಸನ್, ರುಹೆನಾ ಅಜೀಜ್ ಅವರ ಕೃತಿಗಳ ಪ್ರದರ್ಶನವು ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ಇವರಲ್ಲಿ ಸುಮನಾ ಅವರನ್ನು

---

೬೯. ಸಾಮಾನ್ಯತೆಗಿಳಿದ ವೈವಿಧ್ಯ, ಅದೇ

೭೦. ಪಾಶ್ಚಾತ್ಯ-ಪೌರ್ವಾತ್ಯಗಳ ಮುಖಾಮುಖಿ, ಕರ್ನಾಟಕದರ್ಶನ, ಪ್ರಜಾವಾಣಿ, ೨, ಡಿಸೆಂಬರ್, ೨೦೦೦

ಹೊರತುಪಡಿಸಿದರೆ ಉಳಿದ ಮೂವರು ವಿದೇಶಿಯರು. ಹೀಗೆ ವಿಭಿನ್ನ ಪ್ರದೇಶಗಳ, ವಿಭಿನ್ನ ಸಂಸ್ಕೃತಿಗಳ ಕಲಾವಿದರು ತಮ್ಮ ಮೂಲ ಸಂಸ್ಕೃತಿಯನ್ನು ಮುಂದಿಟ್ಟುಕೊಂಡೇ ಮುಖಾಮುಖಿ ಯಾಗಿದ್ದಾರೆ. ಕೃಸೆ.ಯವರಿಂದ ರಚಿತವಾಗಿರುವ(ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨/೧೨/೨೦೦೦ರ ಲೇಖನ) ಈ ಲೇಖನದಲ್ಲಿ ಕಲಾಕೃತಿಗಳನ್ನು ಯೋಗ್ಯ ರೀತಿಯಲ್ಲಿ ಸುತ್ತಲೂ ಮೌಂಟ್ ಮಾಡಿ, ಸೂಕ್ತ ಚೌಕಟ್ಟು ಹಾಕಿಯೇ ಪ್ರದರ್ಶಿಸಬೇಕೆಂಬ ಹಿಂದಿನ ತಲೆಮಾರಿನ ಕಲಾವಿದರ ಅಭಿಪ್ರಾಯಕ್ಕೆ ವಿರುದ್ಧವಾಗಿ ಪೇಮ್ ಇಲ್ಲದ, ಮೌಂಟ್ ಇಲ್ಲದ ಕೃತಿಗಳನ್ನು ಪ್ರದರ್ಶಿಸಲು ಸ್ಪರ್ಧೆಗಳಲ್ಲಿ ನಿರಾಕರಿಸುತ್ತಿದ್ದ ಉದಾಹರಣೆಗಳನ್ನು ಅವರು ದಾಖಲಿಸಿದ್ದಾರೆ. ಅಲ್ಲದೆ ಈಗ ಪಾಶ್ಚಾತ್ಯ ದೇಶಗಳಲ್ಲಿ ಪ್ರದರ್ಶನದ ಕಲ್ಪನೆಗಳು ಬದಲಾಗಿವೆ ಎಂಬುದನ್ನು ಈ ಲೇಖನದಲ್ಲಿ ವಿಶೇಷವಾಗಿ ಚರ್ಚಿಸಿದ್ದಾರೆ.

ಸುಮನಾ ಚೌಧರಿಯವರು ಸಮಕಾಲೀನ ಧೋರಣೆಯಿಂದ ಕೂಡಿದ್ದರೂ ಪೌರಾತ್ಯದ ಜನಪದೀಯ ಚೈತನ್ಯವುಳ್ಳ ಕೃತಿಗಳನ್ನು ಪ್ರಸ್ತುತ ಪಡಿಸಿದ್ದಾರೆ. ಅವುಗಳಲ್ಲಿ ಕಾರುಗೇಟೆಡ್ ಹಾಳೆ, ಬೆಂಕಿಕಡ್ಡಿ, ಬಟ್ಟೆ ಇತ್ಯಾದಿ ವಿವಿಧ ವಸ್ತುಗಳನ್ನು ಅಂಟಿಸಿದ ಕೊಲಾಜ್ ಕೃತಿಗಳೂ ಮುಖ್ಯವಾಗಿವೆ. ಅನಿಯತ ಅಂಚುಗಳುಳ್ಳ ಈ ಕೃತಿಗಳಲ್ಲಿ ಕೆಲವು ರೀಲೀಫ್ ಶಿಲ್ಪಗಳಂತಿದ್ದು, ಮೈವಳಿಕೆಗಳ ನಿರ್ಮಾಣವೂ ಕುತೂಹಲಕರವಾಗಿದೆ. ಇಲ್ಲಿನ ನಿರ್ವಹಣಾ ವಿಧಾನ, ರೂಪ ಇತ್ಯಾದಿಗಳು ಸಾಕಷ್ಟು ಹಳೆಯದಾದರೂ ಹೊಸದೆನಿಸುವಂತೆ ಮುಂದಿಟ್ಟಿರುವುದು ಇಲ್ಲಿನ ಹೆಗ್ಗಳಿಕೆ, ಜೊತೆಗೆ ವರ್ಣಮೇಳ, ನಿರ್ವಹಣೆ ಇತ್ಯಾದಿಗಳಲ್ಲೂ ಕಲಾವಿದೆಯ ಮುಗ್ದತೆ, ಮುಕ್ತತೆ ಕಂಡು ಬರುತ್ತದೆ, ಆಕಾಡೆಮಿಕ್ ನಿಲುವುಗಳನ್ನು ನಿರಾಕರಿಸಿ ಕೆಲಸ ಮಾಡಿರುವ ಈ ಮುಗ್ದತೆಯೇ ಇವುಗಳನ್ನು ಪ್ರಾಮಾಣಿಕ ಕೃತಿಗಳನ್ನಾಗಿಸಿದೆ. ಕೆಲವು ಸರೂಪ ಚಿತ್ರಣವುಳ್ಳ ಮೂರ್ತ ಕೃತಿಗಳಾದರೆ, ಮತ್ತೆ ಕೆಲವು ಅಮೂರ್ತ ಕೃತಿಗಳಾದರೂ ಅವುಗಳ ನಡುವೆ ಏಕಸೂತ್ರತೆ ಕಾಯ್ದುಕೊಂಡಿರುವುದು ಇಲ್ಲಿನ ವೈಶಿಷ್ಟ್ಯ. ಇಲ್ಲಿನ ಕ್ಯಾನ್ವಾಸ್ ಅಂಚಿನ ಇನ್ನೊಂದು ಅಯಾಮದಲ್ಲೂ ಕೃತಿಯನ್ನು ಮುಂದುವರೆಸುವ ತಂತ್ರವಿದೆ. ಹೀಗೆ ಒಂದೆಡೆ ಹಿಂದಿನ ಕೆಲವು ಅಂಶಗಳನ್ನು ಇಟ್ಟುಕೊಂಡೇ ಮತ್ತೆ ಕೆಲವನ್ನು ನಿರಾಕರಿಸುವ ಮೂಲಕ ಹೊಸತನದ ಸೆಳಕು ತಂದಿದ್ದು ಕೃತಿಗಳು ಪರಿಣಾಮಕಾರಿ ಯಾಗಿವೆ. ಸುಮನಾ ಅವರದ್ದು ಮುಗ್ಧತೆಯ ಪೌರ್ವಾತ್ಯ ಅಭಿವ್ಯಕ್ತಿಯಾದರೆ ಉಳಿದ ಮೂವರದ್ದು ಅಪ್ಪಟ ಆಧುನಿಕ ಪಾಶ್ಚಾತ್ಯ ಕಲೆಯದು.

ಮರಿಯಾ ಅವರು ತಮ್ಮ 'ಬ್ಯಾಂಕಾಕ್ ಲಳ' ಶೀರ್ಷಿಕೆಯಲ್ಲಿ ಮಿನಿಮಲಿಸ್ಕ್ ಧೋರಣೆಯನ್ನು ಪ್ರಕಟಿಸಿದ್ದಾರೆ. ಕಾಗದದಲ್ಲಿ ಸಾಕಷ್ಟು ಖಾಲಿ ಸ್ಥಳವನ್ನು ಹಾಗೆಯೇ ಬಿಟ್ಟು ಒಂದು ಭಾಗವನ್ನು ಮಾತ್ರ ಕ್ರೀಯಾತ್ಮಕವಾಗಿಸುವ ತಂತ್ರ ಇವರದು. ಈ ಚಿಕ್ಕ ಕ್ರಿಯಾತ್ಮಕ ಸ್ಥಳದಲ್ಲಿ ವರ್ಣ ಛಾಯ

ಚಿತ್ರವೊಂದನ್ನು ನಾಲ್ಕು ವರ್ಣಗಳ ಸಾಮಾನ್ಯ ಮುದ್ರಣ ತಂತ್ರದಂತೆ ಮುದ್ರಿಸಿದ್ದಾರೆ. ಆದರೂ ಒಂದು ನಿರ್ಧಿಷ್ಟ ಭಾಗವನ್ನು ಮಾತ್ರ ಪ್ರತಿಯೊಂದರಲ್ಲೂ ಪ್ರೋಗ್ರೆಸಿವ್ ಪ್ರೂಫ್‌ನಂತೆ ಪ್ರದರ್ಶಿಸಿದ್ದಾರೆ. ಕಲೆಯಲ್ಲಿ ಈಚೆಗೆ ವಿರಳವೆನಿಸುತ್ತಿರುವ ನೀಟಾದ, ಸೂಕ್ಷ್ಮ ನಿರ್ವಹಣೆ ಇಲ್ಲಿದೆ.

ರುಹೆನಾ ಅಜೀಜ್ ಅವರು ಸಹಾ ಚಿಕ್ಕ ಅಳತೆಯ ನಾಲ್ಕು ಕೃತಿಗಳಲ್ಲಿ ಕಾನ್ಸೆಪ್ಚುಯಲ್ ಧೋರಣೆಗೆ ಒಲಿದಿದ್ದಾರೆ. ಕಲಾತ್ಮಕತೆಗಿಂತ ಕಲ್ಪನೆಯೇ ಇಲ್ಲಿ ಮೆರೆದಿದೆ. ಸ್ಯೂ ಕರ್ಣಿ ಅವರು ಪ್ರದರ್ಶಿಸುವ ರೀತಿಯಲ್ಲಿ ಹೊಸತನವನ್ನು ಇಲ್ಲಿ ತಂದಿದ್ದಾರೆ. ಒಂದೇ ಅಳತೆಯ ಚಿಕ್ಕ ಅಳತೆಯ ಹಲವಾರು ಕಾಗದಗಳಲ್ಲಿ ಅಮೂರ್ತ ಆಕೃತಿಗಳನ್ನು(ಡಿಸೈನ್‌ನಂತೆ) ರಚಿಸಿ, ಅವುಗಳನ್ನು ಚೌಕವೊಂದರಂತೆ ಸಮಾನ ದೂರಗಳಲ್ಲಿ ಸಾಲು ಸಾಲಾಗಿ ಗೋಡೆಯ ಮೇಲೆ ಅಂಟಿಸಿದ್ದಾರೆ. ಇನ್ನೊಂದು ಕೃತಿಯಲ್ಲಿ ಸಮಾನ ದೂರುಗಳಲ್ಲಿ ಜೇಬುಗಳಂತಿರುವ ತೆಳುವಾದ ತೆರೆಯೊಳಗೆ ಈ ಕಾಗದದ ಆಕೃತಿಗಳನ್ನು ಇಟ್ಟು ಪ್ರದರ್ಶಿಸಿದ್ದಾರೆ. ಈ ಅಮೂರ್ತ ಕೃತಿಗಳು ಸರಳವಾದರೂ ಪ್ರದರ್ಶನದ ರೀತಿಯಿಂದಾಗಿ ಕುತೂಹಲಕಾರಿಯಾಗಿವೆ.

**೭೨. ಗ್ರಾಮ್ಯ, ಆದಿಮ ನೆಲೆ**[೭೧]

ಕೃ.ಸೆ.ಯವರಿಂದ ರಚಿತವಾಗಿರುವ ಈ ಲೇಖನದಲ್ಲಿ ಕಲೆಯಲ್ಲಿ ಹೊಸ ಪ್ರಯೋಗದಲ್ಲಿ ತಲ್ಲೀನರಾಗಿರುವ ಕೆಲ ಕಲಾವಿದರ ಕುರಿತು ಪ್ರಸ್ತಾಪಿಸಿದ್ದಾರೆ. ಕಲಾವಿದ ಪ್ರಕಾಶ್ ಅವರು ಕರಾವಳಿ ಪ್ರದೇಶದ ಜನಪದೀಯ ದೈವೀ ಆರಾದನೆಯ ವಸ್ತುವನ್ನು ತಮ್ಮ ಕೃತಿಯಲ್ಲಿ ತಂದಿದ್ದಾರೆ. ವಾಸ್ತವಕ್ಕಿಂತಲೂ ಪ್ಯಾಂಟಸಿಯ ನೆಲೆಯಲ್ಲಿ ರೂಪಗೊಂಡ ಇವುಗಳಲ್ಲಿ ಉತ್ತಮ ಶೈಲೀಕರಣದ ಪ್ರಯತ್ನವಿದೆ. ಇಲ್ಲಸ್ಟ್ರೇಷನ್‌ನಂತೆ ಸರಳ ನಿರೂಪಣಾತ್ಮಕವಾಗಬಹುದಾಗಿದ್ದು, ಇಲ್ಲಿನ ವಸ್ತುವನ್ನು ಕಲಾಕೃತಿಯಾಗಿಸುವ ದಿಸೆಯಲ್ಲಿ ಸಾಕಷ್ಟು ಎಚ್ಚರಿಕೆ ವಹಿಸಿದ್ದಾರೆ. ಕೃತಿಯೊಳಗೆ ಮೂರ್ತ ಮತ್ತು ಅಮೂರ್ತ ರೂಪಗಳ ಹೊಂದಾಣಿಕೆಯಲ್ಲೂ ಉತ್ತಮ ಪ್ರಯತ್ನವಿದೆ. ಈಗಷ್ಟೇ ಗಂಭೀರ ಕಲೆಯ ವಲಯದಲ್ಲಿ ಪಾದಾರ್ಪಣೆ ಮಾಡುತ್ತಿರುವ ಈ ಯುವ ಕಲಾವಿದ ಭರವಸೆಯ ಹೆಜ್ಜೆಗಳನ್ನು ಮೂಡಿಸಿದ್ದಾರೆ.

ಅದೇ ರೀತಿ ಕಲಾವಿದ ರಾಜಾನಂದ ದೇಶಳ್ಳಿಯವರು ಆದಿಮಾನವ ಕಲೆಯ ರೂಪಗಳನ್ನು ಸಮಕಾಲೀನವಾಗಿ ಪ್ರಸ್ತುತಗೊಳಿಸುವ ಪ್ರಯತ್ನ ಮಾಡಿದ್ದಾರೆ. ಬಹುತೇಕ ಗಂಡು-ಹೆಣ್ಣಿನ ದಾಂಪತ್ಯದ ಸುತ್ತ ವಸ್ತು ಹರಡಿದ್ದರೂ ಇಲ್ಲಿ ವಿಶಿಷ್ಟವಾದ ಆದಿಮ ಚೈತನ್ಯವನ್ನು, ಗಡಸುತನವನ್ನು, ಜೊತೆಗೆ ಗಂಡಸುತನವನ್ನು ಕೃತಿಗಳಲ್ಲಿ ತಂದಿದ್ದಾರೆ. ಜನಪದ ಕಲೆಗಳಲ್ಲಿನ ರೇಖಾಚಿತ್ರ ವಿಧಾನವನ್ನು ಬಳಸಿಕೊಂಡು ಕತೂಹಲ ನಿರ್ಮಿಸಿದ್ದಾರೆ. ಚಿತ್ರಗಳಲ್ಲಿ ನೆಗೆಟಿವ್ ಸ್ಪೇಸನ್ನು ಪೂರ್ತಿಯಾಗಿ

೭೧. ಗ್ರಾಮ್ಯ, ಆದಿಮ ನೆಲೆ, ಕರ್ನಾಟಕ ದರ್ಶನ,ಪ್ರಜಾವಾಣಿ ೨ ಡಿಸೆಂಬರ್, ೨೦೦೦

ನಿರಾಕರಿಸುವ ಮೂಲಕ ಚಿತ್ರಗಳಿಗೆ ಶಿಲ್ಪದಂತಹ ಭ್ರಮಾತ್ಮಕ ಆವರಣವನ್ನು ನೀಡಿದ್ದಾರೆ. ಆದರೆ ಆಕೃತಿಗಳು ಸ್ತಬ್ದಗೊಂಡತೆ, ಜಡತೆಯಿಂದ ಕೂಡಿರುವುದೇ ಇಲ್ಲಿನ ಹಿನ್ನಡೆ. ಆದರೆ ರಾಜಾನಂದ ಅವರು ತಮ್ಮದೇ ಆದ ಶೈಲಿಯನ್ನು ಪ್ರತಿಷ್ಠಾಪಿಸುವ ದಿಸೆಯಲ್ಲಿ ಸಾಕಷ್ಟು ಮುಂದುವರೆದಿದ್ದಾರೆ.

**೭೩. ತೊಟ್ಟ ಬಾಣ ತೊಡಬಾರದ ರಾಜ್ಯದಲ್ಲಿ, ಕೊಟ್ಟ ರೂಪ ಬಿಡಲಾಗದ ದಾಸ್ಯವೆಲ್ಲಿ?**[೭೨]

ಸಾರಾ ಅರಕ್ಕಲ್ ನೇತೃತ್ವದ ಬೆಂಗಳೂರಿನ 'ಆರ್ಟ್ ಇನ್ ಕ್ರಾಫ್ಟ್ಸ್' ಸಂಸ್ಥೆಯ 'ಗ್ಯಾಲರಿ ಸಮುಖ'ದ ಸಹಯೋಗದೊಂದಿಗೆ 'ದಕ್ಷಿಣದ ಕಣ್ಣು(ಐ ಆಫ್ ದಿ ಸೌತ್)' ಶೀರ್ಷಿಕೆಯಲ್ಲಿ ಪ್ರದರ್ಶನವೊಂದನ್ನು ಸಂಘಟಿಸಿದೆ. ಇದರಲ್ಲಿ ದಕ್ಷಿಣ ಭಾರತದ ಹೆಸರಾಂತ ೨೬ ಕಲಾವಿದರು ಭಾಗವಹಿಸಿದ್ದರು. ಕೃ.ಸೆ.ಯವರು ಈ ತಲೆಬರಹದಲ್ಲಿ ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೯-೧೨-೨೦೦೦ರಂದು ಲೇಖನ ಪ್ರಕಟಿಸಿದ್ದು ಇದರಲ್ಲಿ ಒಬ್ಬರು ರಚಿಸಿದ ಒಂದು ಕೃತಿಯನ್ನು ತಾವೇ ಆಗಲೀ, ಮತ್ತೊಬ್ಬರಾಗಲೀ ನಕಲು ಮಾಡಬಾರದು. ಪುನ: ಸೃಷ್ಟಿಸಬಾರದು ಎನ್ನುವ ನಿಯಮವನ್ನು ಪ್ರತಿಪಾದಿಸಿದ್ದಾರೆ. ಚಿತ್ರಕಲೆಯ ಕ್ಷೇತ್ರದಲ್ಲಿ ಪ್ರತಿಷ್ಠಿತ ಕಲಾವಿದರನೇಕರು ತಾವೇ ನೀಡಿದ ಹೊಸ ರೂಪವನ್ನು ಪರ್ಮ್ಯುಟೇಶನ್ ಅಂಡ್ ಕಾಂಬಿನೇಶನ್‌ಗಳಂತೆ ಅದೇ ರೂಪಗಳ ವೈವಿಧ್ಯವನ್ನಷ್ಟೇ ನೀಡುತ್ತಿದ್ದಾರೆ. ಆ ರೂಪಗಳು ಕಲಾತ್ಮಕವಾಗಿ ಮೇಲಿನ ಸ್ತರದಲ್ಲಿದ್ದರೂ ಅತಿಯಾದ ಎಕ್ಸ್‌ಪೋಶರ್‌ನಿಂದಾಗಿ ಅವು ತಮ್ಮ ಎಂದಿನ ಕುತೂಹಲದಿಂದ ವಂಚಿತವಾಗುತ್ತಿವೆ.

ಪಾಶ್ಚಾತ್ಯ ಪ್ರಭಾವಗಳ ನಡುವೆಯೂ ಅಚ್ಯುತನ್ ಕಿಡಲೂರು, ಟಿಎಂ ಅಜಿಸ್, ಅಸ್ಮಾ ಮೆನನ್, ಭಾಸ್ಕರನ್, ಸಿ.ಎಫ್.ಜಾನ್, ಮುರಳೀಧರನ್, ರಾಘವೇಂದ್ರರಾವ್, ವೈಕುಂಠಮ್, ಸುರೇಶ್ ಜಯರಾಂ ಅವರಲ್ಲಿ ದೇಸಿ ಸೆಳಕುಗಳು ವಿಜೃಂಭಿಸುತ್ತಿವೆ. ಎಂದಿನಂತೆ ಬಾಬು ಈಶ್ವರ ಪ್ರಸಾದ್, ಕೃಷ್ಣರಾಜ ಜೋನಟ್ ಬಾಬು ಕ್ಸೇವಿಯರ್ ಅವರ ಕೃತಿಗಳನ್ನು ಕಾಣಬಹುದು. ಅಚ್ಯುತನ್, ಆದಿಮೂಲಂ ಹಾಗು ರವಿಕಾಶಿ(ಮೂರ್ತದ ನಡುವೆಯೂ) ಅವರುಗಳು ಪರಿಣಾಮಕಾರಿಯಾದ ಅಮೂರ್ತ ರೂಪಗಳನ್ನು ಮುಂದಿಟ್ಟಿದ್ದಾರೆ.

ಶಾಂತಾಮಣಿ, ಮಹಮದ್, ಕಾಜ್ವಾನ್, ಸತೀಶ್ ಶೋಲಾಪುರ್ ಅವರ ನಗರೀಕರಣದ ಪರಿಣಾಮಗಳನ್ನು ಎಕ್ಸ್‌ಪ್ರೆಶನಿಸ್ಟ್ ಆಶಯಗಳೊಂದಿಗೆ ಸಮೀಕರಿಸಿದ್ದಾರೆ. ವಾಸುದೇವ್, ಯೂಸುಫ್ ಅರಕ್ಕಲ್ ಅವರು ತಮ್ಮ ವಿಶಿಷ್ಟ ತಂತ್ರಪ್ರದಾನ ಕೃತಿಗಳಲ್ಲಿ ವೈವಿಧ್ಯ ತಂದಿದ್ದಾರೆ. ವೈಕುಂಠಮ್ ಅವರು ಎಂದಿನಂತೆ ಆಂಧ್ರದ ಗ್ರಾಮೀಣ ಮಹಿಳೆಯರ ಗಂಡು-ಸೊಗಡನ್ನು ಹಿಡಿದಿಟ್ಟಿದ್ದಾರೆ. ಸುರೇಶ್ ಜಯರಾಂ ಅವರು ಜೈವಿಕ ಹಾಗು ಅಮೂರ್ತ ಆಕೃತಿಗಳ ಮೂಲಕ ಕೃತಿಯಲ್ಲಿ

---

೭೨. ತೊಟ್ಟ ಬಾಣ ತೊಡಬಾರದ ರಾಜ್ಯದಲ್ಲಿ, ಕೊಟ್ಟ ರೂಪ ಬಿಡಲಾಗದ ದಾಸ್ಯವೆಲ್ಲಿ?, ಕರ್ನಾಟಕದರ್ಶನ, ಪ್ರಜಾವಾಣಿ, ೯, ಡಿಸೆಂಬರ್, ೨೦೦೦

ಆಧ್ಯಾತ್ಮಿಕ ಆವರಣ ತಂದಿದ್ದಾರೆ. ಲಿಂಗಭೇದದ ದನಿಯುಳ್ಳ ಸುರೇಖ ಅವರು ಕೃತಿಯ ಡಿಜಿಟಲ್ ಛಾಯಾಚಿತ್ರಣಕ್ಕೆ ಮಾರುಹೋಗಿದ್ದಾರೆ. ಅದೇ ಅಶಯದ ಇನ್ನೊಂದು ರೂಪವನ್ನು ಮುಂದಿಟ್ಟಿರುವ ಉಮಾ ಗೌತಮ್ ಅವರು ತಮ್ಮ ಹಿಂದಿನ ಕೃತಿಗಳಿಗಿಂತಲೂ ಕುತೂಹಲಕಾರಿಯಾದ ಬೆಳವಣಿಗೆ ಪಡೆದುಕೊಂಡಿದ್ದಾರೆ ಎನ್ನುವುದನ್ನು ವಿಶೇಷವಾಗಿ ಲೇಖಕರು ದಾಖಲಿಸಿದ್ದಾರೆ.

### ೭೪. ಆಧ್ಯಾತ್ಮಿಕ ಅನುಭವದ ಅಮೂರ್ತತೆ[೭೩]

ಮುಂಬಯಿಯ ಪ್ರಭಾಕರ ಕೋಲತೆ ಅವರ ಕಲಾ ಕೃತಿಗಳ ಪ್ರದರ್ಶನವು ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ನಡೆಯಿತು. ಅಮೂರ್ತ ರೂಪಗಳಲ್ಲಿಯೇ ತಮ್ಮ ಕಲಾ ವೈಶಿಷ್ಟ್ಯತೆ ಉಳಿಸಿಕೊಂಡಿರುವ ಕೋಲತೆಯವರ ಈ ರೂಪಗಳು ಕಾಗದದ ಅವಕಾಶದಲ್ಲಿ ಮಧ್ಯಭಾಗದಲ್ಲಿ ಸಮತಟ್ಟಾದ ದೊಡ್ಡ ಅನಿಯತ ಚೌಕಾಕೃತಿಯಂತಿದ್ದು ಅಂಚುಗಳಲ್ಲಿ ಹೆಚ್ಚಿನ ಬಣ್ಣ ಸೋರಿದಂತಿದೆ. ಸಾಮಾನ್ಯವಾಗಿ ಹೆಚ್ಚಿನ ಕಲಾವಿದರಲ್ಲಿ ಕೃತಿಯ ಮಧ್ಯಭಾಗಗಳು ಕ್ರೀಯಾತ್ಮಕವಾಗಿದ್ದರೆ, ಬಹುತೇಕ ಅಂಚುಗಳ ಭಾಗಗಳನ್ನೆ ಕ್ರಿಯಾತ್ಮಕವಾಗಿಸುವುದು ಇವರ ವೈಶಿಷ್ಟ್ಯ. ಹೀಗೆ ಮಧ್ಯದ ದೊಡ್ಡ ಚೌಕಾಕೃತಿಯು ಬಹುತೇಕ ಗಾಢ ನಿಶಬ್ದದಿಂದ ಕೂಡಿದ್ದರೆ ಅಂಚಿನ ಭಾಗದಲ್ಲಿರುವ ಚಿಕ್ಕ ಆಕೃತಿಗಳು ಚಿಕ್ಕ ಚಿಲಿಪಿಲಿ ಗಂಟೆಗಳ ನಾದ ನಿನಾದಿಸುವಂತಿದೆ. ಕೆಲವೆಡೆ ಈ ಅಂಚಿನ ಭಾಗಗಳು ಎಸ್.ಎಚ್.ರಜಾ ಅವರ ಕೃತಿಗಳ ನೆನಪು ತರುವಂತಿದೆ. ಕೆಲವೆಡೆ ಕೊಲಾಜನಂತೆ ಹಚ್ಚಿರುವ ಹಿನ್ನೆಲೆಯಿದ್ದು ಮೈವಳಿಕೆಗಳನ್ನು ಗಮನಾರ್ಹವಾಗಿ ದುಡಿಸಿಕೊಳ್ಳುವ ಆಶಯ ಇಲ್ಲಿದೆ. ಬಹುತೇಕ ಬಣ್ಣಗಳನ್ನು ಪದರ ಪದರಗಳಾಗಿಯೇ ಹಚ್ಚಿ ಕೃತಿಯನ್ನು ಬೆಳೆಸುತ್ತ ಹೋಗುವುದು ಇದರ ರಚನಾ ವಿಧಾನ. ಉತ್ಸಾಹ, ಆನಂದ, ಉಲ್ಲಾಸಗಳಿಗಿಂತಲೂ ಗಂಭೀರ ಆಧ್ಯಾತ್ಮಿಕ ಅನುಭವ ಮುಟ್ಟಿಸುವ ಈ ಕೃತಿಗಳಲ್ಲಿರುವ ಮುಖ್ಯ ಬಂಡವಾಳ ಎಂದರೆ ಘನ ಗಂಭೀರ ವರ್ಣ ಮೇಳ, ಎಲ್ಲೆಡೆ ಗಾಢ ಮಸುಕಿನ ಸಾಮರಸ್ಯದ ವರ್ಣಗಳ ಮೂಲಕವೇ ಇವು ಆಧ್ಯಾತ್ಮಿಕ ಆವರಣವನ್ನು ಪಡೆದುಕೊಳ್ಳುತ್ತವೆ ಎಂಬುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಚರ್ಚಿಸಿದ್ದಾರೆ.

### ೭೫. ನಿನ್ನೆಯಲ್ಲೇ ನಿಂತಿರುವ ಬಂಗಾಳದ ನೋಟ, ಹಳತು– ಹೊಸತರ ಸುತ್ತಲಿನ ಹುಡುಕಾಟ[೭೪]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೬/೧೨/೨೦೦೦ರಂದು ಕೃ.ಸೆ.ಯವರ ಲೇಖನ ಪ್ರಕಟವಾಗಿದೆ. ಇದರಲ್ಲಿ ಸುಮಾರು ೧೦೦ ಬಂಗಾಲಿ ಕಲಾವಿದರ ಕಲಾ ಕೃತಿಗಳ ವೈಶಿಷ್ಟ್ಯತೆಗಳನ್ನು ದಾಖಲಿಸಿದ್ದಾರೆ.

---

೭೩. ಆಧ್ಯಾತ್ಮಿಕ ಅನುಭವದ ಅಮೂರ್ತತೆ

೭೪. ನಿನ್ನೆಯಲ್ಲೇ ನಿಂತಿರುವ ಬಂಗಾಳದ ನೋಟ, ಹಳತು– ಹೊಸತರ ಸುತ್ತಲಿನ ಹುಡುಕಾಟ, ಕರ್ನಾಟಕದರ್ಶನ, ಪ್ರಜಾವಾಣಿ, ೧೬, ಡಿಸೆಂಬರ್,೨೦೦೦

ದೇಶದ ಇತರೆ ಕಲಾವಿದರು ಬಹುತೇಕ ತಮ್ಮ ಮುಂದಿನ ದಾರಿಗಳನ್ನು ಯುರೋಪ್, ಅಮೆರಿಕಗಳಿಂದ ಹುಡುಕಿಕೊಂಡರೆ, ಬಂಗಾಲಿಗಳು ಆ ಕಡೆ ಅಷ್ಟಾಗಿ ತಿರುಗಿಲ್ಲ. ಉಳಿದೆಡೆಗಳವರು ಈಚೆಗೆ ಕೌಶಲ್ಯ, ತಾಂತ್ರಿಕತೆಗೆ ನೀಟುಗಾರಿಕೆಗಳಿಗೆ ಅಷ್ಟಾಗಿ ಗಮನ ಕೊಡದಿದ್ದರೆ ಇಲ್ಲಿನವರ ಕಲೆಯಲ್ಲಿ ಅದಕ್ಕೇ ಅಗ್ರಸ್ಥಾನ ನೀಡಿದ್ದಾರೆ. ಹಾಗಾಗಿ ಇಲ್ಲಿನ ಸತ್ವವನ್ನು ಮೈಗೂಡಿಸಿಕೊಂಡಿರುವ ಕಲಾವಿದರಲ್ಲಿ ಹಸ್ತ ಕೌಶಲ್ಯ, ಸೂಕ್ಷ್ಮ ನಿರ್ವಹಣೆಗಳು ಸ್ವಾಭಾವಿಕವಾಗಿಯೇ ಮೈಗೂಡಿರುತ್ತದೆ. ಅದು ಸಾಂಪ್ರದಾಯಿಕ ರೂಪವಿರಲಿ, ಆಕಾಡೆಮಿಕ್‌ಇರಲೀ, ನವ್ಯವಿರಲಿ, ಮತ್ತೇನೇ ಆಗಿರಲಿ, ಅದರ ಗರ್ಭದಲ್ಲಿ ಹಸ್ತ ಕೌಶಲ್ಯ ಅವಿತುಕೊಂಡಿರುತ್ತದೆ.

ಪರಾಗ್ ಸೀಮಾ ಬರುವಾ, ಆದಿತ್ಯ ಬಸಕ್, ದಿಲೀಪ್ ಡೇ, ದಿಂಡಾ ಸನಾತನ್, ಅನಿಮೇಶ್ ದತ್ತಾ, ಪ್ರಕಾಶ್ ಕೋಲೆ, ಶಮೀಂದ್ರ ನಾಥ್ ಮಜುಂದಾರ್, ಬಿಸ್ವಪತಿ ಮೈಟಿ, ಚಂಚಲ್ ಮುಖರ್ಜಿ, ಹಿರಣ್ ಮಿತ್ರ ಅವರ ಕೃತಿಗಳು ಮನದ ಆಳದಲ್ಲಿ ಪ್ರಭವಿಸುವಂತಿವೆ. ಆದರೆ ಚಿತ್ರ ವಿಭಾಗಕ್ಕೆ ಹೋಲಿಸಿದರೆ ಶಿಲ್ಪ ವಿಭಾಗವು ಸಾಕಷ್ಟು ಸೊರಗಿದೆಯೆಂದರೆ ತಪ್ಪಲ್ಲ. ಬಹುತೇಕ ಅಕಾಡೆಮಿಕ್–ನವ್ಯದ ಶಿಲ್ಪಗಳೇ ಇಲ್ಲಿ ಮೇಲುಗೈ ಪಡೆದಿವೆ. ಇವುಗಳ ನಡುವೆ ಗೋಪಿನಾಥ್ ರಾಯ್, ಸಂದೀಪ್ ಚಕ್ರವರ್ತಿ, ಚಂದನ್ ಭಂಡಾರಿ ಅವರ ಕೃತಿಗಳು ಹೊಸತನದ ಸೆಳಕುಗಳಿಂದಾಗಿ ಗಮನ ಸೆಳೆಯುತ್ತವೆ. ಒಟ್ಟಾರೆಯಾಗಿ ಬಂಗಾಳದ ಚೈತನ್ಯವನ್ನು ಪ್ರಕಟಪಡಿಸುವಂತಹ ಹೃದಯಸ್ಪರ್ಶಿ ಪ್ರದರ್ಶನವಿದು ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ಈ ಲೇಖನದ ಮೂಲಕ ವ್ಯಕ್ತಪಡಿಸಿದ್ದಾರೆ.

**೭೬. ಮೂರು ಹಂತಗಳ ನೋಟ**[೭೫]

ಈ ಲೇಖನದಲ್ಲಿ ಕೃ.ಸೆ.ಯವರು ವಿವಿಧ ಕಲಾವಿದರ ಕಲಾ ವೈಶಿಷ್ಟ್ಯತೆಯನ್ನು ಈ ಮುಂದಿನಂತೆ ದಾಖಲಿಸಿದ್ದಾರೆ. ರಾಜಸ್ತಾನದ ಕಲಾವಿದ ಪ್ರದೀಪ್ ವರ್ಮಾ ಅವರು ಅಲ್ಲಿನ ಸ್ಥಳೀಯ ಕಲಾ ಶೈಲಿಯಿಂದ ಪ್ರಭಾವಿತರಾದವರು. ಅವರ 'ಲಾಸ್ಟ್ ಎಂಪೈರ್' ಕೃತಿ ಗಮನಾರ್ಹವಾಗಿದ್ದು, ಅದು ಪುರಾತನವಾದುದನ್ನು ನಿತ್ಯ ನೂತನವಾಗಿಸುವ ಆಶಯವನ್ನು ಹೊಂದಿದೆ. ಇವರು ಚಿಕಣಿ ಚಿತ್ರಗಳು ಹಾಗೂ ಭಿತ್ತಿ ಚಿತ್ರಗಳಲ್ಲಿನ ರೂಪಗಳನ್ನೇ ಯಥಾವತ್ತಾಗಿ ಅನುಕರಿಸಿದ್ದರೂ, ಅವುಗಳ ಪುನರ್ಯೋಜನೆ ಮಾಡಿದ್ದಾರೆ. ಆದರೆ ಇವರಲ್ಲಿ ಸ್ಥಾಯಿಯಾಗಿರುವ ಒಂದು ಪ್ರತಿಮೆಯೆಂದರೆ ಅಲ್ಲಿನ ಅಲಂಕರಣದ ಭಾಗಗಳದ್ದು. ವಿಶಿಷ್ಟ ಮೈವಳಿಕೆಯ ಕಾಗದ ಬಳಸಿ ಹಳೆಯ ಗೋಡೆಯಂತಹ ಭಾವನೆ ನಿರ್ಮಿಸಿರುವುದಷ್ಟೇ ಅಲ್ಲ. ಅವುಗಳ ಅಂಚುಗಳನ್ನೂ ಹರಿದಂತೆ ಅಡ್ಡಾದಿಡ್ಡಿಯಾಗಿಸಿ ಹಳೆಯದೆನ್ನುವ ಭಾವನೆ ನಿರ್ಮಿಸಿದ್ದಾರೆ.

---

೭೫. ಮೂರು ಹಂತಗಳ ನೋಟ, ಕರ್ನಾಟಕದರ್ಶನ, ಪ್ರಜಾವಾಣಿ, ೧೬, ಡಿಸೆಂಬರ್,೨೦೦೦

ಅದೇ ರೀತಿ ಸಫ್ದರ್ ಶಮೀ ಅವರು ಅಲಂಕರಣದ ನೆಲೆಯಲ್ಲಿ ಜನಸಾಮಾನ್ಯರ ದೈನಂದಿನ ಸರಳ ಜೀವನದ ದೃಶ್ಯಗಳನ್ನು ರಚಿಸಿದ್ದಾರೆ. ಶೈಲೀಕೃತಗೊಂಡ ಇಲ್ಲಿನ ರೂಪಗಳಲ್ಲಿ ಕಡ್ಡಿಗಳ ರಾಶಿ ಹಾಕಿದಾಗ ಕಂಡುಬರುವಂತಹ ರೀತಿಯಲ್ಲಿ ಕುಂಚದ ಬೀಸುಗಳ ಮೂಲಕ ಮೈವಳಿಕೆಗಳನ್ನು ಜೊತೆಗೆ ಪ್ಯಾಟರ್ನ್‌ನ್ನೂ ರಚಿಸಿದ್ದಾರೆ. ಅಷ್ಟೇನೂ ಸಂಕೀರ್ಣವಲ್ಲದ ಈ ಸರಳ ಕೃತಿಗಳು ಅಷ್ಟಾಗಿ ಪರಿಣಾಮಕಾರಿಯಾಗಿರುವಂತಹ ಶಕ್ತಿಯನ್ನು ಪಡೆದುಕೊಂಡಿಲ್ಲ.

ಅಲ್ಲದೆ ಅಫ್ಜಲ್ ಅವರದ್ದು ಅಮೂರ್ತ ಪ್ರಪಂಚ. ವಸ್ತುರಹಿತವಾದ ಈ ಕೃತಿಗಳಲ್ಲಿ ಕೆಲವೆಡೆ ಪರಿಚಿತ ಪ್ರಪಂಚದ ಸುಳಿವುಗಳೂ ಇಲ್ಲದಿಲ್ಲ. ಬಹುತೇಕ ಇಂದು ಕ್ಲೀಷೆಗೊಳಗಾಗುತ್ತಿರುವ ಅಮೂರ್ತ ಕೃತಿಗಳ ವಲಯದಲ್ಲಿ ಅಷ್ಟಾಗಿ ಶೋಧಿಸಲ್ಪಡದ ಹೊಸ ಆಕೃತಿಗಳನ್ನು ಮುಂದಿಟ್ಟಿರುವುದು ಇಲ್ಲಿನ ವೈಶಿಷ್ಟ್ಯ. ಕೆಲವೆಡೆ ವಿಶಿಷ್ಟ ಮೈವಳಿಕೆಗಳಿಂದ ಕೃತಿಗಳು ಗಮನ ಸೆಳೆಯುತ್ತವೆ. ಹೀಗೆ ಈ ಪ್ರದರ್ಶನವು ನವ್ಯದ ಮೂರು ತಲೆಮಾರುಗಳ ಮೂರು ಮುಖಗಳನ್ನು ಮುಂದಿಡುವಂತಿದೆ ಎಂಬುದನ್ನು ಲೇಖಕರು ವಿಶ್ಲೇಷಿಸಿದ್ದಾರೆ.

**೭೭. ಮೂಲ ತಂತ್ರವಿಲ್ಲಿ ಭಗ್ನ, ವಿಭಿನ್ನ ಸಂಸ್ಕೃತಿಗಳ ಸಂಲಗ್ನ**[೭೭]

ಬೆಂಗಳೂರಿನಲ್ಲಿ ಕನ್ನಡ ಭವನದ ಚಿತ್ರ ಗ್ಯಾಲರಿಯಲ್ಲಿ ನಡೆದ ಫೋಟೋ ಎಚ್ಚಿಂಗ್ ಕಲಾ ಪ್ರದರ್ಶನದ ಕುರಿತಂತೆ ಕೃ.ಸೆ.ಯವರು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ (೨೩/೧೨/೨೦೦೦) ಲೇಖನ ಪ್ರಕಟಿಸಿದ್ದು, ಆ ಕುರಿತ ವಿವರ ಇಂತಿದೆ. ದೃಶ್ಯ ಕಲಾಮಾಧ್ಯಮದಲ್ಲಿ ಫೋಟೋ ಎಚ್ಚಿಂಗ್ ಒಂದು. ಇದರಲ್ಲಿ ಕಲಾವಿದರು ತಮ್ಮ ಎಂದಿನ ಗ್ರಾಫಿಕ್ ಮಾಧ್ಯಮದ ತಂತ್ರದಲ್ಲಿಯೇ ಛಾಯಾಚಿತ್ರವನ್ನು ಬಳಸಿಕೊಳ್ಳುತ್ತಾರೆ.

ಇದು ವಾಸ್ತವದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಕಾರ್ಯಾಗಾರ ನಡೆಸಿ ಶಿಬಿರಾರ್ಥಿಗಳಿಂದ ಸೃಷ್ಟಿಯಾದ ಕಲಾಕೃತಿಗಳ ಪ್ರದರ್ಶನವಾಗಿತ್ತು. ಇದರಲ್ಲಿ ಮುಖ್ಯವಾಗಿ ಮೂರು ವಿಭಾಗಗಳಿವೆ. ಛಾಯಾಚಿತ್ರ ಬಳಸಿದ ಎಚ್ಚಿಂಗ್‌ಗಳು, ಎಂದಿನಂತಹ ಎಚ್ಚಿಂಗ್‌ಗಳು ಹಾಗೂ ಪ್ರತ್ಯೇಕವಾದ ಛಾಯಾಚಿತ್ರಗಳು. ಇಲ್ಲಿ ಕೇವಲ ಚಿಕ್ಕ ಅಳತೆಯ ಮುದ್ರಣಗಳಲ್ಲಷ್ಟೇ ಛಾಯಾಚಿತ್ರಗಳನ್ನು ಗಂಭೀರವಾಗಿ ದುಡಿಸಿಕೊಳ್ಳಲಾಗಿದೆ. ಅದನ್ನು ಹೊರತುಪಡಿಸಿದರೆ ಹೆಚ್ಚಿನ ಕೃತಿಗಳಲ್ಲಿ ಛಾಯಾಚಿತ್ರವನ್ನು ನೆಪ ಮಾತ್ರಕ್ಕೆ ಎಂಬಂತೆ ಬಳಸಿಕೊಳ್ಳಲಾಗಿದೆ. ಸ್ವಲ್ಪ ದೊಡ್ಡ ಅಳತೆಯ ಕೃತಿಗಳಲ್ಲಂತೂ ಛಾಯಾಚಿತ್ರಗಳ ಸುಳಿವು ಸಿಗುವುದೆ ಕಷ್ಟವೆನಿಸುವಂತಿದೆ. ಪ್ರದರ್ಶನದಲ್ಲಿ ಪ್ರತ್ಯೇಕವಾಗಿ ದೊಡ್ಡ ಅಳತೆಯ ಛಾಯಾಚಿತ್ರಗಳನ್ನು ಪ್ರದರ್ಶಿಸಲಾಗಿದ್ದರೂ ಸ್ವತಃ ಗ್ರಾಫಿಕ್ ಕೃತಿಗಳಲ್ಲಿ ಅವುಗಳ

---

೭೭. ಮೂಲ ತಂತ್ರವಿಲ್ಲಿ ಭಗ್ನ, ವಿಭಿನ್ನ ಸಂಸ್ಕೃತಿಗಳ ಸಂಲಗ್ನ, ಕರ್ನಾಟಕದರ್ಶನ, ಪ್ರಜಾವಾಣಿ ೨೩, ಡಿಸೆಂಬರ್, ೨೦೦೦

ಬಳಕೆಯಾಗಿಲ್ಲ. ಛಾಯಾಚಿತ್ರವಾಗಿ ನೋಡಿದಾಗ ಅವುಗಳಲ್ಲಿ ಕೆಲವು ಉತ್ತಮ ನೆಲೆಯಲ್ಲಿವೆಯಾದರೂ ಅವು ಈ ಕಾರ್ಯಾಗಾರದೊಂದಿಗೆ ಅಷ್ಟಾಗಿ ಸಂಬಂಧ ಕಲ್ಪಿಸಿಕೊಳ್ಳುವುದಿಲ್ಲ ಎಂಬುವುದನ್ನು ಲೇಖಕರು ವಿಶ್ಲೇಷಿಸಿದ್ದಾರೆ.

**೭೮. ಬಂಗಾಳದ ಚೈತನ್ಯದ ಲಗ್ಗೆ**[೭೭]

ಬಂಗಾಳದ ಕಲಾವಿದ ರಜನಿ ಜುಂಜುನ್‌ವಾಲಾ ಅವರ ಕೃತಿಗಳ ಪ್ರದರ್ಶನವು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ 'ಪರಿವೇಶ್ ೨೦೦೦' ಶೀರ್ಷಿಕೆಯಲ್ಲಿ ನಡೆಯಿತು. ಇಲ್ಲಿ ರಜನಿ ಅವರ ತೈಲ, ಜಲವರ್ಣ ಚಿತ್ರಗಳು ಹಾಗೂ ಡ್ರಾಯಿಂಗ್‌ಗಳನ್ನು ಪ್ರದರ್ಶಿಸಲಾಗಿತ್ತು. ಔಪಚಾರಿಕ ಕಲಾಶಿಕ್ಷಣ ಪಡೆಯದ ಈ ಕಲಾವಿದೆ ಕುತೂಹಲವೆನಿಸುವಂತೆ ಪರಿಣಾಮಕಾರಿ ಕೃತಿಗಳನ್ನು ಪ್ರದರ್ಶಿಸಿದ್ದಾರೆಂಬುದನ್ನು ಕೃ.ಸೆ.ಯವರು ಈ ಲೇಖನದಲ್ಲಿ ಚರ್ಚಿಸಿದ್ದಾರೆ.

ಇವರದ್ದು ಮೂಲತಃ ಸಸ್ಯ ಹಾಗೂ ಪಕ್ಷಿ ಸಂಕುಲಗಳ ಜಗತ್ತು. ತೈಲವರ್ಣದಲ್ಲಿ ಕೃತಿ ರಚಿಸಿ ಅದು ಒಣಗುವ ಮೊದಲೇ ಕೆಲವೆಡೆ ಮಾತ್ರ ನೀರಿನ ಹನಿ ಚಿಮುಕಿಸಿದಾಗ ಕುತೂಹಲಕಾರಿಯಾದ ಪ್ಯಾಟರ್ನ್ ನಿರ್ಮಾಣವಾಗುತ್ತದೆ. ಅದರಲ್ಲಿ ಕೆಲವನ್ನು ಉಳಿಸಿಕೊಂಡು ಮತ್ತೆ ಪದರ ಪದರಗಳಾಗಿ ಬಣ್ಣ ಹಚ್ಚಿ ಕೃತಿ ರಚಿಸುವುದು ಇವರ ವೈಶಿಷ್ಟ್ಯ. ಹೀಗೆ ಈ ತಂತ್ರವು ಪರಿಣಾಮಕಾರಿಯಾಗಿದೆ. ಜೊತೆಗೆ ತೈಲ ವರ್ಣದೊಂದಿಗೆ ಅಲ್ಲಲ್ಲಿ ನೀರು ಬೆರೆತಿರುವುದರಿಂದ ಹಳೆಯದೆನ್ನುವಂತಹ ಆವರಣವೂ ನಿರ್ಮಾಣವಾಗಿದೆ. ಜೊತೆಗೆ ವಿಶಿಷ್ಟ ಬಗೆಯ ವರ್ಣಮೇಳವನ್ನು ಇವರು ಎಕ್ಸ್‌ಪ್ರೆಶನಿಸ್ಟರ ಹಾದಿ ಹಿಡಿದಿದ್ದಾರೆ. ಜೊತೆಗೆ ಆಕೃತಿಗಳ ಅಂಚುಗಳಲ್ಲೂ ಅಸ್ಪಷ್ಟತೆ ಇದ್ದು ಅದು ಒಂದು ಬಗೆಯ ಚಲನೆಯ ಅನುಭವ ನೀಡುವಂತಿವೆ.

ಇವರ ಡ್ರಾಯಿಂಗ್‌ಗಳಲ್ಲಿ ನೀರು ಹಚ್ಚಿದ ಭಾಗಗಳು ಕೆಲವೆಡೆ ಕಾಗದ ಕಿತ್ತುಬಂದಂತೆ ಕಂಡುಬರುತ್ತದೆ. ಹಾಗೆ ಕೂಡಾ ಇವುಗಳಲ್ಲಿ ಹಳೆಯದೆನ್ನುವಂತಹ ಭಾವನೆ ಮೂಡಿಸಿದ್ದಾರೆ. ಒಟ್ಟಾರೆಯಾಗಿ ಬಂಗಾಳದ ಹಳೆಯ ಚೈತನ್ಯವನ್ನು ಸಮಕಾಲೀನ ಧೋರಣೆಗೆ ಹೊಂದಿಸುವ ವಿಶಿಷ್ಟ ಪ್ರಯತ್ನ ಇಲ್ಲಿದೆಯೆಂಬುದನ್ನು ಲೇಖಕರು ದಾಖಲಿಸಿದ್ದಾರೆ.

**೭೯. ಇಂಡೊ-ಜರ್ಮನ್ ಸಂಲಗ್ನತೆ**[೭೮]

ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ಜರ್ಮನ್ ಕಲಾವಿದೆ ಆ್ಯಗ್ನೆಸ್ ವ್ಯಾನ್ ರಾಸೆನ್ ಅವರ ಕಲಾ ಕೃತಿಗಳ ಪ್ರದರ್ಶನದ ಕುರಿತು ಕೃ.ಸೆ.ಯವರು ಪ್ರಸಕ್ತ ಲೇಖನ ರಚಿಸಿದ್ದು,

೭೭. ಬಂಗಾಳದ ಚೈತನ್ಯದ ಲಗ್ಗೆ, ಕರ್ನಾಟಕದರ್ಶನ, ಪ್ರಜಾವಾಣಿ, ೨೩ ಡಿಸೆಂಬರ್,೨೦೦೦

೭೮. ಇಂಡೊ-ಜರ್ಮನ್ ಸಂಲಗ್ನತೆ, ಅದೇ

ಆ ವಿವರ ಈ ಮುಂದಿನಂತಿದೆ. ಭಾರತೀಯ ತಾಂತ್ರಿಕ ಸಂಪ್ರದಾಯದಲ್ಲಿನ ಮಂಡಲಗಳು, ಚಕ್ರಗಳು, ಯಂತ್ರಗಳಿಂದ ಪ್ರಭಾವಿತವಾಗಿರುವ ಈ ಕಲಾವಿದೆ ಅವುಗಳನ್ನು ಜರ್ಮನ್ ಕಲೆಯೊಂದಿಗೆ ಕಸಿ ಮಾಡುವ ಪ್ರಯತ್ನ ಮಾಡಿದ್ದಾರೆ. ಸಾಮಾನ್ಯವಾಗಿ ಭಾರತೀಯ ಸಾಂಪ್ರದಾಯಿಕ ಕಲೆಯಲ್ಲಿ ಸೌಮ್ಯದ, ಸಾತ್ವಿಕ ವರ್ಣಗಳಿಗೆ ಆದ್ಯತೆಯಿದ್ದರೆ ಜರ್ಮನ್ ಫಾವಿಸ್ಟರಲ್ಲಿ ಅಬ್ಬರದ, ಕಣ್ಣಿಗೆ ರಾಚುವ ವರ್ಣಗಳಿಗೇ ಆದ್ಯತೆ. ಆದರೆ ಈ ಕಲಾವಿದ ಫಾವಿಸ್ಟರ ವರ್ಣಗಳನ್ನು ತಿಳಿಗೊಳಿಸಿ ಅದನ್ನು ಭಾರತೀಯ ಆಕೃತಿಗಳಿಗೆ ಜೋಡಿಸಿದ್ದಾರೆ. ಹೀಗೆ ಆಕೃತಿ ಭಾರತೀಯವೆನಿಸಿದರೂ ವರ್ಣಮೇಳ ಹಾಗೂ ನಿರ್ವಹಣೆಯಲ್ಲಿ ಪಾಶ್ಚಾತ್ಯ ಸತ್ವವಿದೆ. ಇಲ್ಲಿರುವ ಆಕೃತಿಗಳು ತನ್ನದೇ ಅದ ಚೈತನ್ಯದಿಂದ ಕೂಡಿರುವುದರಿಂದ ಇವುಗಳನ್ನು ಎನರ್ಜಿ ಡಯಾಗ್ರಾಮ್‌ಗಳೆನ್ನಬಹುದು. ಈ ಕಲಾವಿದೆ 'ಕಲಾಕೃತಿಗಳ ಮೂಲಕ ಚಿಕಿತ್ಸೆ' (ಹೀಲಿಂಗ್ ಥ್ರೂ ಪೇಂಟಿಂಗ್ಸ್) ನೀಡುವ ಆಶಯ ಹೊಂದಿದ್ದಾರೆ. ಬಹುತೇಕ ಸರಳ ನೆಲೆಯ ಈ ಕೃತಿಗಳಲ್ಲಿ ಸಾಂಕೇತಿಕತೆಗೇ ಆದ್ಯತೆ ನೀಡಿದ್ದಾರೆಂಬುದನ್ನು ಲೇಖಕರು ಇಲ್ಲಿ ವಿವರಿಸಿದ್ದಾರೆ.

**೮೦. ಒಂದೆಡೆ ಬದಲಾಗಿದೆ ಶೈಲಿ, ಇನ್ನೊಂದೆಡೆ ನಕಲಿಗೆ ಬಲಿ**[೭೯]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೩೦/೧೨/೨೦೦೦ರಂದು ಪ್ರಕಟಗೊಂಡ ಈ ವಿಮರ್ಶಾ ಲೇಖನದಲ್ಲಿ ಕೃ.ಸೆ.ಯವರು ಕಲ್ಕತ್ತದ ಹಿರಿಯ ಕಲಾವಿದ ಶುಭಪ್ರಸನ್ನ ಅವರ ಈಚಿನ ಕೃತಿಗಳ ಕುರಿತು ವಿಶ್ಲೇಷಿಸಿದ್ದಾರೆ. ಇದರಲ್ಲಿ ಬೆಂಗಳೂರಿನ ಸುಮುಖ ಗ್ಯಾಲರಿಯಲ್ಲಿ ನಡೆದ 'ರೀಪೆಂಟ್ ಅಂಡ್ ಪಾಸ್ಟ್' ಎನ್ನುವ ಶೀರ್ಷಿಕೆಯಲ್ಲಿ ನಡೆದ ಈ ಪ್ರದರ್ಶನದಲ್ಲಿ ಪ್ರಸಕ್ತ ಕಲಾವಿದರ ಹಿಂದಿನ ಹಾಗೂ ಈಚಿನ ಕೃತಿಗಳ ಮಹತ್ವ ಕುರಿತು ವಿಶೇಷವಾಗಿ ಚರ್ಚಿಸಿದ್ದಾರೆ.

ಈ ಪ್ರದರ್ಶನದಲ್ಲಿ ಮುಖ್ಯವಾಗಿ ಮೂರು ಬಗೆಯ ಕೃತಿಗಳಿವೆ. ವರ್ಣಚಿತ್ರಗಳು, ರೇಖಾಚಿತ್ರಗಳು ಹಾಗೂ ಗ್ರಾಫಿಕ್ ಕೃತಿಗಳು. ಹೂವುಗಳನ್ನು ವಸ್ತುವಾಗಿಟ್ಟುಕೊಂಡ ಕೃತಿಗಳಲ್ಲಿ ಅವರು ಆ ವಸ್ತುವನ್ನು ಎದುರಿಸುವ ರೀತಿ ವಿಶಿಷ್ಟವಾದುದು. ಜಲವರ್ಣದಂತೆ ವರ್ಣದ ಹರಿಯುವ ಗುಣವನ್ನು ದುಡಿಸಿಕೊಂಡ ಈ ಕೃತಿಗಳಲ್ಲಿ ಅಂಗಾಂಗ, ಅವಯವಗಳಿಗೆ ವಿಶಿಷ್ಟ ಚಲನೆಯನ್ನು ನೀಡಿದ್ದಾರೆ. ಹೀಗಾಗಿ ಇಲ್ಲಿ ಹೂವುಗಳು, ಅವುಗಳಲ್ಲಿನ ಒಂದೊಂದು ಭಾಗಗಳೂ ಹುಳುಗಳಂತೆ ಜೀವಂತಿಕೆಯಿಂದ ಚಲಿಸುತ್ತಿರುವಂತೆ ಭಾಸವಾಗುತ್ತದೆ. ಈ ಹೂಗಳ ನಡುವೆ ಕವಡೆಯಂತಹ ಆಕೃತಿಯನ್ನು ಮಧ್ಯದಲ್ಲಿ ಸೃಜಿಸಿದ್ದು ಅದು ಈ ಹೂವುಗಳಿಗೆ ಕಾಮದ ವಾಸನೆ ನೀಡಿದೆ. ಇವುಗಳೊಂದಿಗೆ ಕೆಲವು ವಿಶಿಷ್ಟ ಮೈವಳಿಕೆಗಳುಳ್ಳ ಅಮೂರ್ತ ಸಂಯೋಜನೆಗಳಿದ್ದು ಅದು ವಾಸ್ತುಶಿಲ್ಪಿಯ ಆಕೃತಿಗಳನ್ನು ಬಳಸಿಕೊಂಡಿದೆ.

೭೯. ಒಂದೆಡೆ ಬದಲಾಗಿದೆ ಶೈಲಿ, ಇನ್ನೊಂದೆಡೆ ನಕಲಿಗೆ ಬಲಿ, ಕರ್ನಾಟಕದರ್ಶನ, ಪ್ರಜಾವಾಣಿ, ೩೦, ಡಿಸೆಂಬರ್, ೨೦೦೦

ಈ ಕಲಾವಿದ ತಮ್ಮ ಎಂದಿನ ದಾರಿಯಿಂದ ಭಿನ್ನವಾದ ರೊಮ್ಯಾಂಟಿಕ್ ಆಶಯಗಳನ್ನೂ ಇಲ್ಲಿ ಮುಂದಿಟ್ಟಿದ್ದಾರೆ(ಅವರ ಹಿಂದಿನ ಕೃತಿಗಳಲ್ಲಿ ಹೆಚ್ಚಾಗಿ ಸ್ಥಾಯಿಯಾಗಿರುವುದು ಬೀಭತ್ಸವೇ ಆಗಿದೆ). ಆದರೆ ಈ ಪಲ್ಲಟ ಪಡೆದುಕೊಂಡಿರುವುದು ಪೌರಾಣಿಕ ನೆಲೆಯ ವಸ್ತುಗಳು. ಕೃಷ್ಣ, ಗಣಪತಿ, ದುರ್ಗ ಈ ಮುಂತಾದ ದೇವತೆಗಳನ್ನು ಇಲ್ಲಿ ತಂದಿದ್ದಾರೆ. ಆದರೂ ಅವುಗಳ ಆಧ್ಯಾತ್ಮಿಕ ರೂಪ ಕಳಚಿ ಅವರಿಗೆ ರೊಮ್ಯಾಂಟಿಕ್ ಉಡುಗೆ ತೊಡಿಸಿದ್ದಾರೆ. ಬಹುತೇಕ ಅಲಂಕಾರದ ಆಶಯವನ್ನು ತಮ್ಮೊಳಗೆ ತುಂಬಿಕೊಂಡ ಇವುಗಳಲ್ಲಿ ಶೈಲಿಯ ಬದಲಾವಣೆಯಿದೆಯಾದರೂ ಅಲಂಕರಣದ ಆಶಯವು ಅವುಗಳ ಕಲಾತ್ಮಕ ಓಟಕ್ಕೆ ತಡೆಯುಂಟುಮಾಡುತ್ತವೆ. ಕೃತಿಗಳಲ್ಲಿ ಕುತೂಹಲ ನಿರ್ಮಿಸಲೋ ಎಂಬಂತೆ ಅವರು ಕೇವಲ ಕೆಲವೆಡೆ ಹಚ್ಚಿದ ಬಣ್ಣದ ಹೊಳೆಯುವ ಕಾಗದವೂ ಅಲ್ಲಿಗೆ ಹೊಂದಿಕೊಳ್ಳುವುದಿಲ್ಲ.

ಶುಭಪ್ರಸನ್ನ ಅವರು ಈ ಪ್ರದರ್ಶನದಲ್ಲಿ ನಿಜಕ್ಕೂ ಮಿಂಚಿರುವುದು ಗ್ರಾಫಿಕ್ ಕೃತಿಗಳಲ್ಲಿ. ವಿಶೇಷತಃ 'ವಿಂಗ್ಸ್' ಕೃತಿಯು ಅವರ ಈ ಮಾಧ್ಯಮದಲ್ಲಿನ ಅತ್ಯುತ್ತಮ ನಿರ್ವಹಣೆಗೆ ನಿದರ್ಶನವಾಗಿದೆ. ಇಲ್ಲಿ ಲಿಥೊ, ಎಚ್ಚಿಂಗ್ ತಂತ್ರಗಳನ್ನಾಧರಿಸಿದ್ದರೂ ತಮ್ಮ ಎಂದಿನ ವಸ್ತುವಿಗೇ ಅವುಗಳನ್ನು ಸೀಮಿತಗೊಳಿಸಿದ್ದಾರೆ. ಇವರು ತುಂಬ ಪ್ರಸಿದ್ಧವೆನಿಸಿರುವ ಗೂಬೆ, ಹಕ್ಕಿ ಈ ಮುಂತಾದ ವಸ್ತುಗಳ ನಿಜವಾದ ಬೀಭತ್ಸ ರೂಪ ಪ್ರಕಟಗೊಂಡಿರುವ ಇವುಗಳಲ್ಲಿ ತಾಂತ್ರಿಕವಾಗಿಯೂ ಉತ್ತಮ ಸಾಧನೆಯಿದೆ. ಒಟ್ಟಾರೆಯಾಗಿ ಈ ಪ್ರದರ್ಶನವು ಶುಭಪ್ರಸನ್ನ ಅವರ ವೈವಿಧ್ಯವನ್ನು ಹಾಗೂ ಬಹುಮುಖತೆಯನ್ನು ತೆರೆದಿಡುತ್ತದೆ ಎಂದು ಲೇಖಕರು ಹೇಳುತ್ತಾರೆ.

**೮೧. ಪ್ರಸಿದ್ಧರ ಕೃತಿಗಳ ನಕಲು**[೮೦]

ನಕಲು ಮಾಡುವ ಕಲಾವಿದರು ಎಷ್ಟೇ ಉತ್ತಮ ಹಸ್ತಕೌಶಲ್ಯ ಹೊಂದಿದ್ದರೂ ಸಹಾ ಅವರು ಕೃತಿಯ ಒಟ್ಟಾರೆಯಾದ ರೂಪವನ್ನು ಹಿಡಿದಿಡಬಹುದೇ ಹೊರತು, ಒಳ ಸೂಕ್ಷ್ಮಗಳನ್ನು ಹಿಡಿದಿಡಲಾಗುವುದಿಲ್ಲ ಎಂಬ ಅಭಿಪ್ರಾಯವನ್ನು ಕೃ.ಸೆ.ಯವರು ಈ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ. ಬೆಂಗಳೂರಿನ ಮಂಜುಳಾ ವಿಜಯ ಕುಮಾರ್ ಹಾಗೂ ಪೂರ್ಣಿಮಾ ಸಂಜಯ್ ಅವರು ಕಲಾಕೃತಿಗಳನ್ನು ನಕಲು ಮಾಡಿದ್ದಾರಾದರೂ ಇವು ಹಲವು ದೃಶ್ಯಗಳಿಂದ ಮೂಲದ ಚೈತನ್ಯವನ್ನು ಕಳೆದುಕೊಂಡಿವೆ. ಆದರೆ ಈ ಸಹೋದರಿಯರಲ್ಲಿ ಹಸ್ತ ಕೌಶಲ್ಯ ಇಲ್ಲವೆಂದಲ್ಲ. ಆ ಬಗೆಯ ಕೃತಿಗಳನ್ನು ನಕಲು ಮಾಡುವ ಸಾಮರ್ಥ್ಯ ಇವರಿಗೆ ಲಭ್ಯವಿಲ್ಲ. ಹಾಗಾಗಿ ಅವುಗಳೆಲ್ಲ ತಮ್ಮ ಜೀವ ಕಳೆದುಕೊಂಡಂತಿವೆ. ಇವರು ತಮ್ಮ ಹಸ್ತ ಕೌಶಲ್ಯವನ್ನೇ ಬಳಸಿಕೊಂಡು ಸೃಜನಶೀಲ

---

೮೦. ಪ್ರಸಿದ್ಧರ ಕೃತಿಗಳ ನಕಲು, ಕರ್ನಾಟಕ ದರ್ಶನ, ಪ್ರಜಾವಾಣಿ, ೩೦, ಡಿಸೆಂಬರ್, ೨೦೦೦

ಕೃತಿಗಳನ್ನು ರಚಿಸಿದಾಗ ಮಾತ್ರ ನಿಜವಾದ ಮನ್ನಣೆ ಇವರಿಗೆ ದೊರೆಯಬಲ್ಲದು ಎನ್ನುವ ಅಂಶಗಳನ್ನು ಪ್ರಾಸಂಗಿಕವಾಗಿ ಲೇಖಕರು ಇಲ್ಲಿ ದಾಖಲಿಸಿದ್ದಾರೆ.

**೮೨. ಕಲ್ಪನೆ ಮತ್ತು ಕಲಾತ್ಮಕತೆಗಳ ನಡುವಿನ ತೂಗಾಟ**[೮೧]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೫-೧-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ನಡೆದ ಅಖಿಲ ಭಾರತ ಮಟ್ಟದ ಕಲಾ ಶಿಬಿರದ ವೈಶಿಷ್ಟ್ಯತೆಗಳನ್ನು ಕೃ.ಸೆ.ದಾಖಲಿಸಿದ್ದಾರೆ. ಈ ಶಿಬಿರದಲ್ಲಿ ಕರ್ನಾಟಕವೂ ಸೇರಿದಂತೆ ದೇಶದ ವಿವಿಧ ಭಾಗಗಳಿಂದ ೩೫ ಕಲಾವಿದರು, ಕಲಾ ವಿಮರ್ಶಕರೂ, ವಿದ್ಯಾರ್ಥಿಗಳೂ ಹಾಜರಿದ್ದರು. ಅವರಲ್ಲಿ ಪ್ರೊ.ಶಂಖೊ ಚೌದರಿ, ಅಂಜಲಿ ಇಳಾ ಮೆನನ್, ಹಿಮ್ಮತ್ ಷಹಾ, ಜೆರಾಮ್ ಪಟೇಲ್, ಲಕ್ಷ್ಮಾಗೌಡ್ ಮುಖ್ಯರಾಗಿದ್ದರು. ಹೀಗೆ ದೇಶದ ಸಮಕಾಲೀನ ಕಲೆಯ ವಿವಿಧ ತಲೆಮಾರುಗಳ, ವಿವಿಧ ಧೋರಣೆಗಳ ಪ್ರಾತಿನಿಧ್ಯ ಇಲ್ಲಿತ್ತು. ಶಿಬಿರಗಳಲ್ಲೇ ದೊಡ್ಡದಾದ ಇದನ್ನು 'ಜಂಭೋ ಕಲಾ ಶಿಬಿರ' ಎಂದರೆ ತಪ್ಪಿಲ್ಲ.

ಕಲಾವಿದ ಉಮೇಶ್ ಅವರು ನಮ್ಮ ಮೆದುಳಿಗೆ ಕೈಹಾಕುವಂತಹ ಇನ್‌ಸ್ಟಲೇಶನ್‌ಗಳನ್ನು ರಚಿಸಿದ್ದಾರೆ (ಸಾಮಾನ್ಯವಾಗಿ ಸಂಗ್ರಹಿಸಿಡಲು ಕಷ್ಟವಾಗಬಹುದಾದ ಇನ್‌ಸ್ಟಲೇಶನ್‌ಗಳಿಗೆ ಈ ಬಗೆಯ ಶಿಬಿರಗಳಲ್ಲಿ ಅಷ್ಟಾಗಿ ಉತ್ತೇಜನ ಸಿಗುವುದಿಲ್ಲ. ಹಾಗಿದ್ದರೂ ಇಲ್ಲಿ ಈ ಕುರಿತು ಮಹತ್ವ ನೀಡಿರುವುದು ಅಭಿನಂದನೀಯ). ಈಚೆಗೆ ನಮ್ಮಲ್ಲಿ ಕಲಾಸಕ್ತರನ್ನು ಅಷ್ಟಾಗಿ ತಟ್ಟದ, ಶುಷ್ಕ ನೆಲೆಯ ಇನ್‌ಸ್ಟಲೇಶನ್‌ಗಳೇ ಬರುತ್ತಿದ್ದು, ಇಲ್ಲಿ ರಚನೆಯಾದ ಇನ್‌ಸ್ಟಲೇಶನ್‌ಗಳು ನಿಜಕ್ಕೂ ಪರಿಣಾಮಕಾರಿಯಾಗಿದ್ದವು.

ಈ ಶಿಬಿರದಲ್ಲಿ ಪ್ರಾದೇಶಿಕ ಲಕ್ಷಣಗಳಿಗೆ ಒತ್ತಾಸೆ ನೀಡಿಲ್ಲ. ಎಂದಿನ ಶಿಬಿರಗಳಲ್ಲಿಯಂತೆಯೇ ಇಲ್ಲಿಯೂ ಸಿಂಹ ಪಾಲು ಪಡೆದಿರುವುದು ವರ್ಣಚಿತ್ರ ಮಾಧ್ಯಮವೇ, ಅಂಜನಾ ಮೆಹ್ರಾ ಬೈಜು ಪಾರ್ಥನ್, ಆದಿತ್ಯ ಬಸಕ್ ಜೈ ಝುರೋಟಿಯಾ ಅಂಜಲಿ ಇಳಾ ಮೆನನ್, ಶೈಲ್ ಚೋಯಲ್, ಶ್ರೀನಿಧಿ ಶೇಷಾದ್ರಿಯವರ ಕೃತಿಗಳು ಈ ದೃಷ್ಟಿಯಿಂದ ಗಮನಾರ್ಹ, ಶಿಲ್ಪಿಗಳಲ್ಲಿ ತೇಜೇಂದ್ರಸಿಂಗ್ ಬಾವೊನಿ ಹಾಗು ಗೋಪಿನಾಥ್ ನಿಜಕ್ಕೂ ಮಿಂಚುತ್ತಾರೆ. ಬಸವರಾಜ್ ಮುಸವಳಿಗಿಯವರು ಡಿಜಿಟಲ್ ಪ್ರಿಂಟ್‌ಗಳು ಇಂಗ್ಲೆಂಡಿನ ಸೋಫಿ ಪ್ಯಾಟ್ಸನ್ ಹಾಗೂ ಎ, ಬಾಲಸುಬ್ರಹ್ಮಣ್ಯನ್ ಅವರ ಸೃಷ್ಟಿಗಳೂ ಕುತೂಹಲಕಾರಿಯಾಗಿವೆ ಹೀಗೆ ಹಲವು ದೃಷ್ಟಿಗಳಿಂದ ಈ ಅಖಿಲ ಭಾರತ ಕಲಾ ಶಿಬಿರವು ವಿಶಿಷ್ಟವಾಗಿದ್ದು, ಈ ಶಿಬಿರ ಕರ್ನಾಟಕ ಕಲಾ ಚರಿತ್ರೆಯಲ್ಲಿ ಒಂದು ಮಹತ್ವದ ಮೈಲುಗಲ್ಲಾಗಿದೆ ಎನ್ನುತ್ತಾರೆ.

---

೮೧. ಕಲ್ಪನೆ ಮತ್ತು ಕಲಾತ್ಮಕತೆಗಳ ನಡುವಿನ ತೂಗಾಟ, ಕ ದರ್ಶನ, ಪ್ರಜಾವಾಣಿ ೫, ಜನವರಿ, ೨೦೦೨

## ೮೩. ಅತ್ತ ಸಂಪ್ರದಾಯವನ್ನೂ ಮಿಂಚಿಸದ, ಇತ್ತ ಸಮಕಾಲೀನತೆಗೂ ಒಲ್ಲದ ದ್ವಂದ್ವ[೮೨]

ಕರ್ನಾಟಕ ಶಿಲ್ಪಕಲಾ ಅಕಾಡೆಮಿ ತನ್ನ ೨ನೇ ವಾರ್ಷಿಕ ಶಿಲ್ಪಕಲಾ ಪ್ರದರ್ಶನವನ್ನು ಬೆಂಗಳೂರಿನ ಕನ್ನಡ ಭವನದಲ್ಲಿರುವ ಚಿತ್ರ ಗ್ಯಾಲರಿಯಲ್ಲಿ ಏರ್ಪಡಿಸಿತ್ತು, ಇದರ ವೈಶಿಷ್ಟ್ಯತೆಗಳನ್ನು ಕೃ.ಸೆ.ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ (೧೨-೧-೨೦೦೨ರಂದು) ಪ್ರಕಟಗೊಂಡ ಈ ಲೇಖನದಲ್ಲಿ ದಾಖಲಿಸಿದ್ದು, ಅದರ ಸಂಕ್ಷಿಪ್ತ ವಿವರ ಇಂತಿದೆ.

ಇಲ್ಲಿ ಪ್ರದರ್ಶಿತವಾದ ಸಂಪ್ರದಾಯ ನೆಲೆಯ ಶಿಲ್ಪಗಳಲ್ಲಿ ಡಿ, ಜನಾರ್ದನಾಚಾರ್ಯ (ತ್ರಿಲೋಕೇಶ್ವರ), ಎಂ ವಿಶ್ವನಾಥ್ (ಶ್ರೀ ವೇಣುಗೋಪಾಲ), ಪ್ರಭು ಎಸ್ ಆಚಾರ್ಯ (ಗಣಪತಿ) ಅವರಂತಹ ಕೆಲವು ಉತ್ತಮ ಶಿಲ್ಪಗಳನ್ನು ಹೊರತುಪಡಿಸಿದರೆ ಉಳಿದ ಹೆಚ್ಚಿನವು ಸಾಂಪ್ರದಾಯಿಕ ತಾಳಮಾನಗಳಲ್ಲಿ, ಸೂಕ್ಷ್ಮಗಳಲ್ಲಿ ಲಾವಣ್ಯದಲ್ಲಿ, ಶೈಲಿಯ ಬೆಡಗಿನಲ್ಲಿ ಸಾಕಷ್ಟು ಹಿಂದುಳಿದಿವೆ. ಆಕಾಡೆಮಿಯ ಸದಸ್ಯೆ ಸಾವಿತ್ರಮ್ಮ ಶಿಲ್ಪಿಯವರ 'ಭಗವದ್ಗೀತಾ' ಶಿಲ್ಪವಂತೂ ತುಂಬ ಬಾಲಿಶವಾಗಿದೆ. ಇಲ್ಲಿರುವ ಶಿಲ್ಪಗಳಲ್ಲಿ ಜನಾರ್ದನಾಚಾರ್ಯ ಅವರ 'ತ್ರಿಲೋಕೇಶ್ವರ' ಕೃತಿ ಹೊರತುಪಡಿಸಿದರೆ ಹೆಚ್ಚಿನವುಗಳಲ್ಲಿ ಅದು ಕಂಡುಬರುವುದಿಲ್ಲ. ಈ ದಿಸೆಯಲ್ಲಿನ ಹಿನ್ನಡೆಯು ನಿಜಕ್ಕೂ ಕಳವಳಕಾರಿಯಾದುದು. ಶಿಲ್ಪಕಲೆಗೇ ಮೀಸಲಾದ ಶಿಲ್ಪಕಲಾ ಆಕಾಡೆಮಿಯು ಇತ್ತ ಗಂಭೀರ ಗಮನ ಹರಿಸಿ ಕಾಯಕಲ್ಪ ನೀಡುವ ಅಗತ್ಯವಿದೆ. ಹಾಗಾಗಿದ್ದರೆ ಈ ನೆಲೆಯ ಗಂಭೀರ ಕೃತಿಗಳು ಕೇವಲ ಮ್ಯೂಸಿಯಂಗಳಲ್ಲಿ ಮಾತ್ರ ಉಳಿಯುವ ದಿನಗಳು ದೂರವಿಲ್ಲವೆನಿಸುತ್ತಿದೆ.

ಈ ಪ್ರದರ್ಶನದಲ್ಲಿ ನಮ್ಮ ಮನದಾಳವನ್ನು ಗಂಭೀರವಾಗಿ ವ್ಯಾಪಿಸುವಂಹ ಒಂದೇ ಒಂದು ಸಮಕಾಲೀನ ಕೃತಿಯೂ ಇಲ್ಲಿಲ್ಲ ಎನ್ನುವುದು ನಿಜಕ್ಕೂ ವಿಷಾದನೀಯ. ಸಮಕಾಲೀನ ಧೋರಣೆಯ ಶಿಲ್ಪಗಳಲ್ಲಿ ಸ್ವಲ್ಪವಾದರೂ ಗಮನಸೆಳೆಯುವ ಕೃತಿಗಳಲ್ಲಿ ಎಂ ವೆಂಕಟೇಶ್ (ಈ ಸ್ಟೋರಿ– ಎಂಸಿ, ಚೆಟ್ಟಿ ಬೀದಿಗೆ ಬಿದ್ದ ರೈತರು ಕರ್ನಾಟಕ). ವಿಜಯ ರಾವ್ (ಬಾಳಿಗೊನೆ). ಕೆ, ಸುಧಾಕರ(ಕೆ ಮಿಲಿಯನ್), ಕೆ, ರಾಘವೇಂದ್ರ(ಬರ), ಶಿಲ್ಪಿಗಳು ಮುಖ್ಯವಾದವು. ಉಳಿದಂತೆ ರವಿ ಷಾ, ರಾಘವೇಂದ್ರ ಹೆಗಡೆ, ಶ್ರೀನಾಥ್ ಆರ್ ಜಾಧವ್, ಶಂಭು ಶಾಸ್ತ್ರಿ, ಸುಭಾಷ್ ಕಮ್ಮಾರ್ (ಕಮ್ಮಾರ್ ಕೃತಿಯಲ್ಲಿ ಭಾಸ್ಕರ್ ರಾವ್ ಕೃತಿಗಳ ನೆನಪು ಬರುತ್ತದೆ) ಅವರ ಕೃತಿಗಳು ಉತ್ತಮ ನೆಲೆಯಲ್ಲಿವೆ. ಈ ಬಗೆಯ ವಾರ್ಷಿಕ ಕಲಾಪ್ರದರ್ಶನಗಳು ನಿಜವಾದ ಅರ್ಥದಲ್ಲಿ ರಾಜ್ಯದ ಅಂದಂದಿನ ಕಲಾಸತ್ವವನ್ನು ಬಿಂಬಿಸುವ ಪ್ರದರ್ಶನಗಳಾಗಿವೆ ಎನ್ನುತ್ತಾರೆ ಲೇಖಕರು.

---

೮೨. ಅತ್ತ ಸಂಪ್ರದಾಯವನ್ನೂ ಮಿಂಚಿಸದ, ಇತ್ತ ಸಮಕಾಲೀನತೆಗೂ ಒಲ್ಲದ ದ್ವಂದ್ವ, ಪ್ರಜಾವಾಣಿ, ಕರ್ನಾಟಕದರ್ಶನ, ೧೨, ಜನವರಿ, ೨೦೦೨

## ೮೪. ವಿಭಿನ್ನ ರೂಪಾಂಶಗಳು ಬೆಸೆದ ಹೊಸ ರೂಪಾವಳಿ[೮೩]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೯-೦೧-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕೃ.ಸೆ.ಯವರು ಕಲಾವಿದ ಬಾಬು ಈಶ್ವರ ಪ್ರಸಾದ್ ಅವರ ಇತ್ತೀಚಿನ ಕೃತಿಗಳ ಮಹತ್ವವನ್ನು ದಾಖಲಿಸಿದ್ದಾರೆ. ಇದರಲ್ಲಿ ಸಾಕ್ಷಿ ಗ್ಯಾಲರಿಯಲ್ಲಿ ನಡೆದ ಇವರ ಕಲಾ ಪ್ರದರ್ಶನದ ಶೀರ್ಷಿಕೆ 'ಮುಗುಳ್ನಗೆಗಳು ಮತ್ತು ನೆರಳುಗಳು' ಕುರಿತು ವಿಶೇಷವಾಗಿ ಚರ್ಚಿಸಿದ್ದಾರೆ.

ಬೆಂಗಳೂರಿನ ಚಿತ್ರಕಲಾ ಪರಿಷತ್ತು ಹಾಗು ಬರೋಡಾ ಕಲಾಶಾಲೆಗಳಲ್ಲಿ ಕಲಾಭ್ಯಾಸ ಮಾಡಿರುವ ಬಾಬು ಈಶ್ವರ್ ಪ್ರಸಾದ್ ಅವರು ವಿಶೇಷ ಕಲಾರೂಪವನ್ನು ಪರಿಚಯಿಸಿದ್ದಾರೆ. ಈ ಹೊಸ ರೂಪವು ಒಂದೆಡೆ ಪುರಾತನ ಕಲೆಯ ಅಂಶಗಳನ್ನು ದುಡಿಸಿಕೊಂಡರೆ ಇನ್ನೊಂದೆಡೆ ಆದುನಿಕ ಇಮೇಜ್‌ಗಳನ್ನು ಬಳಸಿಕೊಳ್ಳುವ ಮೂಲಕ ಸಮಕಾಲೀನವಾಗಿಯೂ ಸಲ್ಲುವಂತಿದೆ. ಬಾಬು ಅವರು ಹಲವು ವಿಜಾತೀಯ ಅಂಶಗಳನ್ನು ಬೆಸೆಯುವ ಮೂಲಕವೇ ಅಪರಿಚಿತ ಪ್ರಪಂಚವೊಂದನ್ನು ಸೃಷ್ಟಿಸುತ್ತಾರೆ. ನೋಡಲು ತುಂಬಾ ಸರಳವೆಂಬಂತೆ ಭಾಸವಾದರೂ ಇವರ ಜಾಣತನವಿರುವುದೇ ಹಲವಾರು ಅಂಶಗಳನ್ನು ಕರ್ಕಶವಿಲ್ಲದಂತೆ ಬೆಸೆಯುವಲ್ಲಿ ವಾಸ್ತವ ಮತ್ತು ವಾಸ್ತವೇತರವಾದವುಗಳನ್ನು ಜೋಡಿಸುವ ಫ್ಯಾಂಟಸಿ ನಿರ್ಮಿಸುವಲ್ಲಿ ಇವರ ಈ ಕ್ರಮವು ವಿಶಾಲಾರ್ಥದಲ್ಲಿ ಸರ್‍ರಿಯಲಿಸ್ಟರನ್ನು ನೆನಪಿಸುತ್ತದೆ. ಅವರ ಈ ಕೃತಕ ವಾತಾವರಣವು ಆಧುನಿಕ ಅಸಂಗತ ನಾಟಕವೊಂದರ ಸೆಟಿಂಗ್‌ನಂತೆ ಕಂಡರೆ ಆಶ್ಚರ್ಯವಿಲ್ಲ. ಒಂದೇ ಫ್ರೇಮಿನಲ್ಲಿ ಎರಡು ಅಥವಾ ಮೂರು ವಿವಿಧ ಸನ್ನಿವೇಶಗಳನ್ನು ಒಂದರ ಪಕ್ಕದಲ್ಲೊಂದರಂತೆ ಜೋಡಿಸಿಟ್ಟಂತಹ ದೃಶ್ಯವು ಇಲ್ಲಿ ಸಂಭವಿಸುತ್ತದೆ. ಕೆಲವೆಡೆ ಇವು ವಾಸ್ತವದ ದೃಶ್ಯವೇ ಎನಿಸಿದರೆ, ಮತ್ತೆ ಕೆಲವೊಮ್ಮೆ ನಾಟಕದ ಚಿತ್ರಿತ ಪರದೆ ಇರಬಹುದೇನೋ ಎನ್ನುವ ಭ್ರಮೆ ಇಲ್ಲಿ ಉಂಟಾಗುತ್ತದೆ. ಈ ಬಗೆಯ ಕೃತಿಗಳ ಆಕರ್ಷಣೆ ಹೆಚ್ಚುವದಕ್ಕೆ ಇಲ್ಲಿ ಉಂಟಾಗುವ ಈ ಬಗೆಯ ಟೆನ್ಷನ್‌ಗಳೂ ಕಾರಣವಾಗುತ್ತವೆ.

ಇವರ ರಚನೆಗಳಲ್ಲಿ ಬಳಕೆಯಾಗಿರುವ ವಿಮಾನ, ಟಿ.ವಿ, ಕುರ್ಚಿ ಈ ಬಗೆಯ ಇಮೇಜ್‌ಗಳು ಅಮೆರಿಕನ್ ಪಾಪ್ ಕಲಾವಲಯದ್ದಾದರೆ ಇವರು ತಮ್ಮ ಆಕೃತಿಗಳಿಗೆ ನೀಡುವ ವಿಚಿತ್ರ ನೆರಳು ಸರ್‍ರಿಯಲಿಸ್ಟ ಕಲಾವಿದ ಚಿರಿಕೊ ಕೃತಿಗಳನ್ನು ನೆನಪಿಸುತ್ತವೆ. ಅದರೆ ಅವರ ಕೃತಿಗಳಲ್ಲಿ ಕಳವಳಕಾರಿಯಾದ ಖಿನ್ನತೆ, ವಿಷಾದಗಳಿದ್ದರೆ ಬಾಬು ಅವರ ಕೃತಿಗಳಲ್ಲಿ ಉತ್ಸಾಹ ಮನೆ ಮಾಡಿದೆ. ಇವುಗಳೊಂದಿಗೆ ಇವರು ದ್ವಿ ಆಯಾಮ ಹಾಗು ತ್ರಿ ಅಯಾಮಗಳನ್ನು ಒಂದೆಡೆ ಕಸಿ ಮಾಡುತ್ತಾರೆ.

---

೮೩. ವಿಭಿನ್ನ ರೂಪಾಂಶಗಳು ಬೆಸೆದ ಹೊಸ ರೂಪಾವಳಿ, ಪ್ರಜಾವಾಣಿ, ಕರ್ನಾಟಕದರ್ಶನ, ೧೯, ಜನವರಿ, ೨೦೦೨

ಸರಳ ರೇಖೆಗಳುಳ್ಳ ಕೋನಾಕೃತಿಗಳನ್ನು ಜಾಮಿತೀಯ ಆಕೃತಿಗಳನ್ನು ಇವರು ಬಳಸುವುದರಿಂದಲೂ ಇವುಗಳಿಗೆ ಆಧುನಿಕತೆಯ ಲೇಪನವಾಗುತ್ತದೆ. ಇವು ಈ ಮಣ್ಣಿಗೆ ಹತ್ತಿರವೆನಿಸುವಲ್ಲಿ ಇದರೊಳಗೆ ಬಚ್ಚಿಟ್ಟುಕೊಂಡ ಮಿನಿಯೇಚರ್‌ನ ಹಾಗು ನಿರೂಪಣಾ ನೆಲೆಗಳು ಕಾರಣವೆಂದರೆ ತಪ್ಪಲ್ಲ. ಒಟ್ಟಾರೆಯಾಗಿ ಇವು ಕುರುಡರು ಕಂಡ ಆನೆಯಂತೆ ಅಥವಾ ಇಂದಿನ ಸಂದರ್ಭಕ್ಕೆ ಅನ್ವಯಿಸಿ ಹೇಳುವುದಾದರೆ ವರ್ಚುಯಲ್ ರಿಯಾಲಿಟಿಯಂತೆ, ಇಂದಿನ ಸಂದರ್ಭದಲ್ಲಿ ಅಪರೂಪದ್ದಾದ ಈ ರೂಪಾವಳಿಯ ಮೂಲಕ ಸದ್ಯಕ್ಕಂತೂ ಬಾಬು ಈಶ್ವರ್ ಪ್ರಸಾದ್ ಅವರ ಕೃತಿಗಳು ಹೊಸ ಅನುಭವ ರೂಪಿಸುವಲ್ಲಿ ಯಶಸ್ವಿಯಾಗಿವೆ. ಅದೇ ರೀತಿ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ಅನಾವರಣಗೊಂಡ ಸಿ.ಆರ್.ನಾಣಯ್ಯ ಅವರ ಕಲಾ ಕೃತಿಗಳ ಪ್ರದರ್ಶನದ ವೈಶಿಷ್ಟ್ಯತೆ ಕುರಿತು ಇಲ್ಲಿಯೇ ವಿವರಿಸಿದ್ದಾರೆ.

**೮೫. ವಿಶ್ವಾತ್ಮಕ ರೂಪಕ್ಕೆ ಪ್ರಾದೇಶಿಕ ಅಂಶಗಳ ಬೆಸುಗೆ**[೮೪]

ಮೈಸೂರ್ ಸೇಲ್ಸ್ ಇಂಟರ್‌ನ್ಯಾಷನಲ್ ಸಂಸ್ಥೆಯು ತನ್ನ ಎರಡನೆಯ ಅಖಿಲ ಭಾರತ ಕಲಾ ಶಿಬಿರವನ್ನು ಈಚೆಗೆ ಹಂಪಿಯಲ್ಲಿ ನಡೆಸಿತು. ಹಲವು ಬಗೆಯ ಚರ್ಚೆಗೆ ಗ್ರಾಸ ಒದಗಿಸಿದ ಈ ಶಿಬಿರದಲ್ಲಿ ಆದಿಮೂಲಂ ಆದಿತ್ಯ ಬಸಕ್, ಅಖಿಲೇಶ್, ಅರ್ಪಣಾ ಕೌರ್, ಬಿವಿ ಸುರೇಶ್, ಭಾಸ್ಕರ್‌ರಾವ್, ದೀಪಕ್ ಶಿಂದೆ, ಗಾಯತ್ರಿ ದೇಸಾಯಿ, ಜಯಶ್ರೀ ಚಕ್ರವರ್ತಿ, ಕಾಶ್ಮೀಕಿ ಖೋಸಾ, ಜೆ ಎಮ್, ಎಸ್, ಮಣಿ, ಪೀಟರ್ ಲೂಯಿಸ್, ಸುರೇಖ ಥೋಟಾ ವೈಕುಂಠಮ್ ಹಾಗು ವಿಜಯ ಹಾಗರಗುಂಡಗಿ ಭಾಗವಹಿಸಿದ್ದರು. ಈ ಶಿಬಿರದಲ್ಲಿ ರಚಿಸಿದ ಕೃತಿಗಳ ಪ್ರದರ್ಶನವು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ಈ ಕುರಿತಂತೆ ಕೃ.ಸೆ. ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ದಿ.೧೯-೦೧-೨೦೦೨ರಂದು ಲೇಖನ ಪ್ರಕಟಿಸಿದ್ದು, ಅದರ ಸಂಕ್ಷಿಪ್ತ ವಿವರ ಈ ಮುಂದಿದೆ.

ಆದಿ ಮೂಲಂ, ಪೀಟರ್ ಲೂಯಿಸ್, ಬಿ.ವಿ.ಸುರೇಶ್, ವೈಕುಂಠಮ್ ಅಂತಹ ಕೆಲವರು ತಮ್ಮ ಎಂದಿನ ಪರಿಚಿತ ವಸ್ತುಗಳನ್ನೇ ಮುಂದುವರೆಸಿದ್ದಾರೆ. ಹೀಗೆ ಹಲವು ವೈವಿಧ್ಯಗಳ ಮೂಲಕ ಗಮನಾರ್ಹವಾದ ಪ್ರದರ್ಶನವಿದು. ಈ ಅಖಿಲ ಭಾರತ ಕಲಾ ಶಿಬಿರದಲ್ಲಿ ಸಾಕಷ್ಟು ಪ್ರತಿಷ್ಠಿತ, ಪ್ರಸಿದ್ಧ ಕಲಾವಿದರು ಭಾಗವಹಿಸಿದರೂ ಜಯಶ್ರೀ ಚಕ್ರವರ್ತಿ, ಆದಿತ್ಯ ಬಸಕ್, ಕಾಶ್ಮೀರಿ ಖೋಸಾ, ಪೀಟರ್ ಲೂಯಿಸ್ ಅವರಂತಹ ಕೆಲವರನ್ನು ಹೊರತುಪಡಿಸಿದರೆ ಹೆಚ್ಚಿನವರ ಕೃತಿಗಳು ನಿರೀಕ್ಷಿಸಿದಷ್ಟು ಪರಿಣಾಮಕಾರಿಯಾಗಿಲ್ಲ. ಹಾಗಾಗಿ ಈ ಸಂಸ್ಥೆಯು ಚಿಕ್ಕಮಗಳೂರಿನಲ್ಲಿ ನಡೆಸಿದ ಮೊದಲ ಶಿಬಿರಕ್ಕೆ ಹೋಲಿಸಿದರೆ ಈ ಶಿಬಿರದ, ಪ್ರದರ್ಶನದ ಪ್ರಭಾವಳಿಯ ವ್ಯಾಪ್ತಿ ಕಡಿಮೆಯಾಗಿದೆ.

೮೪. ವಿಶ್ವಾತ್ಮಕ ರೂಪಕ್ಕೆ ಪ್ರಾದೇಶಿಕ ಅಂಶಗಳ ಬೆಸುಗೆ, ಪ್ರಜಾವಾಣಿ, ಕರ್ನಾಟಕದರ್ಶನ, ೧೯, ಜನವರಿ, ೨೦೦೨

ಏಕೆಂದರೆ ಹಂಪಿಯ ಶಿಬಿರದಲ್ಲಿನ ವ್ಯವಸ್ಥೆ ಖರ್ಚು ವೆಚ್ಚಗಳು ಅಲ್ಲಿನ ಸಂಭ್ರಮವನ್ನು ನೋಡಿದವರಿಗೆ, ಈ ಪ್ರದರ್ಶನವನ್ನು ನೋಡಿದಾಗ ಆ ಸಂಭ್ರಮವಾಗಲೀ, ವಿಜೃಂಭಣೆಯನ್ನಾಗಲೀ ಕಟ್ಟಿ ಕೊಡುವುದು ಇಲ್ಲಿನ ಬಹುತೇಕ ಕೃತಿಗಳಿಗೆ ಸಾಧ್ಯವಾಗುವುದಿಲ್ಲ. ಹಾಗಿದ್ದರೂ ಮೂಡಾ ಕಾರ್ಪೋರೇಟ್ ಸಂಸ್ಥೆಗಳು ಈ ಬಗೆಯ ಚಟುವಟಿಕೆಗಳನ್ನು ನಡೆಸುವುದು ಕಲೆಯ ದೃಷ್ಟಿಯಿಂದ ಆರೋಗ್ಯಕರ ಬೆಳವಣಿಗೆ ಎನ್ನುವುದನ್ನು ಲೇಖಕರು ಉಲ್ಲೇಖಿಸಿದ್ದಾರೆ.

**೮೬. ಹಂಪಿಯ ಭಾವಮುದ್ರೆ**[೮೫]

ಹಂಪಿಯ ದೃಶ್ಯ ವೈಭವವನ್ನು ಡಿ,ಎ, ಉಪಾಧ್ಯ ಅವರು ಸೆರೆ ಹಿಡಿದಿದ್ದಾರೆ. ದಾವಣಗೆರೆ ಕಲಾಶಾಲೆಯಲ್ಲಿ ಶಿಕ್ಷಣ ಪಡೆದ ಉಪಾಧ್ಯ ಅವರು ಪ್ರಸ್ತುತ ಮೈಸೂರಿನ ಕಾವಾದಲ್ಲಿ ಉಪನ್ಯಾಸಕರಾಗಿದ್ದಾರೆ. ಇವರ ಛಾಯಚಿತ್ರ ಪ್ರದರ್ಶನದ ಕುರಿತು ಕೃ.ಸೆ.ಯವರು ಲೇಖನ ಪ್ರಕಟಿಸಿದ್ದು, ಅದರ ವಿವರ ಈ ಮುಂದಿದೆ. ಆದರೆ ಇಲ್ಲಿನ ನೆರಳು–ಬೆಳಕಿನ ಅತಿಯಾದ ವೈದೃಶ್ಯವು ಕೆಲವೆಡೆ ಕೃತಕ ಆವರಣವನ್ನು ನಿರ್ಮಿಸಿದೆ. ಕೆಲವೆಡೆ ಇವರು ಬಳಸಿರುವ ವಾಸ್ತವೇತರ ಬಣ್ಣಗಳು ಕೂಡಾ ಈ ಕೃತಕ ಅವರಣಕ್ಕೆ ಇಂಬು ಕೊಟ್ಟಿವೆ. ಹಾಗಿದ್ದರೂ ಈ ನೆರಳು ಬೆಳಕಿನ ಯೋಜನೆಗೆ ಅಷ್ಟಾಗಿ ಪ್ರಾಮುಖ್ಯತೆ ನೀಡದ ಕೆಲವು ಕೃತಿಗಳು ಹೃದಯಂಗಮವಾಗಿವೆ. ಪ್ರದರ್ಶನದಲ್ಲಿ ನಿಜಕ್ಕೂ ಮಿಂಚುವುದು ಕೃತಕ ಆವರಣವಿಲ್ಲದ ಈ ಬಗೆಯ ಕೃತಿಗಳೇ. ಪ್ರದರ್ಶನದಲ್ಲಿ ಆಶಾದಾಯಕ ಬೆಳವಣಿಗೆಯೆಂದರೆ ಇಂದು ನಮ್ಮ ನಡುವೆ ವಿರಳವಾಗುತ್ತಿರುವ ಆಕಾಡೆಮಿಕ್‌ರೂಪವೊಂದನ್ನು ಮತ್ತೆ ಜೀವಂತಗೊಳಿಸುವ ಪ್ರಯತ್ನ ಮಾಡಿರುವುದು. ಒಟ್ಟಾರೆಯಾಗಿ ಈ ಪ್ರದರ್ಶನವು ಆಳದಲ್ಲಿ ಪ್ರಭಾವಿಸದಿದ್ದರೂ ಆಕಾಡೆಮಿಕ್‌ಅಭ್ಯಾಸ ಒಂದು ವಿಧಾನವನ್ನು ವೈಭವೀಕರಿಸುವಲ್ಲಿ ಯಶಸ್ವಿಯಾಗಿವೆ.

**೮೭. ಒಂದು ಗುರಿ, ಮೂರು ದಾರಿ**[೮೬]

ಕೋಲ್ಕತ್ತಾದ ಬೇಲಾ ಕರಮಕರ್, ಸ್ವಪನ್‌ಕುಮಾರ್ ಹಾಗು ಶುಕ್ಲಾ ಭಟ್ಟಾಚಾರ್‌ಜೀ ಅವರ ಕೃತಿಗಳ ಪ್ರದರ್ಶನವು ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ಈ ಮೂವರ ಕಲಾತ್ಮಕ ಗುರಿ ಒಂದೇ ಆದರೂ ಹಿಡಿದಿರುವುದು ವಿಭಿನ್ನ ದಾರಿಗಳು ಎನ್ನುವುದನ್ನು ಕೃ.ಸೆ.ಯವರು ಈ ಲೇಖನದಲ್ಲಿ ಉಲ್ಲೇಖಿಸಿದ್ದಾರೆ. ಬೇಲಾ ಕರಮಕರ್ ಅವರು ವಿಶೇಷತಃ ಸ್ಟಿಲ್‌ಲೈಫ್‌ಗಳನ್ನಾಧರಿಸಿದ ಕೃತಿಗಳನ್ನು ರಚಿಸಿದ್ದಾದರೂ ಅದರ ಪರಿಣಾಮಕಾರಿಯಾದ ನಿರ್ವಹಣೆಯ ಮೂಲಕ ಅವುಗಳನ್ನು ಮೇಲಕ್ಕೆತ್ತಿದ್ದಾರೆ. ಇಲ್ಲಿನ ವರ್ಣಮೇಳ, ನಿರ್ವಹಣಾ ವಿಧಾನ ಗಮನಾರ್ಹವಾಗಿದೆ. ಸ್ವಪನ್‌ಕುಮಾರ್ ಅವರೂ ನಿರ್ವಹಣೆಯಲ್ಲಿ ಬೇಲಾ ಅವರ ಹತ್ತಿರದ ಹಾದಿಯನ್ನೇ ಹಿಡಿದಿದ್ದಾರಾದರೂ ಪ್ರಖರ

---

೮೫. ಹಂಪಿಯ ಭಾವಮುದ್ರೆ, ಕರ್ನಾಟಕದರ್ಶನ, ಪ್ರಜಾವಾಣಿ, ೧೯, ಜನವರಿ, ೨೦೦೦

೮೬. ಒಂದು ಗುರಿ, ಮೂರು ದಾರಿ, ಅದೇ

ವರ್ಣಗಳ ನಿರಾಕರಣೆಯ ಮೂಲಕ ಹಾಗು ವಿಭಿನ್ನ ವಸ್ತುವಿನಿಂದಾಗಿ ಉತ್ತಮ ಪರಿಣಾಮ ನಿರ್ಮಿಸಿದ್ದಾರೆ. ಶುಕ್ಲಾ ಭಟ್ಟಾಚಾರ್‌ಜೀ ಗ್ರಾಫಿಕ್ ಮಾಧ್ಯಮದ ಮೂಲಕ ಅಮೂರ್ತ ಹಾದಿ ಹಿಡಿದಿದ್ದಾರೆ. ಮೇಲ್ನೋಟಕ್ಕೆ ಸಾಮಾನ್ಯವೆನಿಸಿದರೂ ಆಳದಲ್ಲಿ ಪರಿಣಾಮಕಾರಿ ಎನಿಸುವಂತಹ ಸೂಕ್ಷ್ಮಗಳುಳ್ಳ ಕೃತಿಗಳಿವು. ಹೀಗೆ ಒಟ್ಟಾರೆಯಾಗಿ ಈ ಮೂವರು ಎಂದಿನ ಬಂಗಾಳಿ ಚೈತನ್ಯವನ್ನು ಬಚ್ಚಿಟ್ಟುಕೊಂಡೇ ನಮ್ಮ ಮನದಾಳವನ್ನು ವ್ಯಾಪಿಸುವಂತಹ ಕೃತಿಗಳನ್ನು ಪ್ರದರ್ಶಿಸಿದ್ದಾರೆ.

**೮೮. ನೈಜತೆಯ ನಿರಾಕರಿಸಿ, ಹೊಸ ನೈಜತೆಯ ಸೃಷ್ಟಿಗೆ ನೈಜತೆಯೇ ಆಧಾರ**[೮೭]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೨-೦೨-೨೦೦೨ರಂದು ಪ್ರಕಟಗೊಂಡ ಕೃ.ಸೆ.ಯವರ ಈ ಲೇಖನದಲ್ಲಿ ರತ್ನದೀಪ್ ಆಡಿವ್ರೇಕರ್ ಅವರ ಕಲಾ ಕೃತಿಗಳ ಕುರಿತು ವಿಶ್ಲೇಷಿಸಿದ್ದಾರೆ.

ಮುಂಬಯಿ ವಾಸಿಯಾದ ಪ್ರಸಿದ್ದ ಕಲಾವಿದ ಗೋಬಾಲ್ ಅಡಿವ್ರೇಕರ್ ಅವರ ಪುತ್ರ ರತ್ನದೀಪ್ ಅವರು ಜೆಜೆ.ಕಲಾಶಾಲೆಯಲ್ಲಿ ಕಲಾಭ್ಯಾಸ ಮಾಡಿದವರು,

ಮುಂಬಯಿ ನಗರಕ್ಕೆ ಸಂಬಂಧಿಸಿದ ಹಲವಾರು ಹಳೆಯ ಛಾಯಾಚಿತ್ರಗಳನ್ನು ಬಳಸಿ ಅಲ್ಲಿನ ಜೀವನ ವೈವಿಧ್ಯತೆಯನ್ನು ತಮ್ಮ ರಚನೆಗಳಲ್ಲಿ ಬಳಸಿಕೊಂಡಿದ್ದಾರೆ. ಅದರೊಂದಿಗೆ ವರ್ತಮಾನದ ಇತರ ದೃಶ್ಯಗಳನ್ನು ಪೋಟೋ ಮಾಂಟಾಜ್‌ನಂತೆ ಬೆಸೆಯುವುದರಿಂದ ಅವು ಹೊಸ ಅನುಭವ ನೀಡುವ ದೃಶ್ಯಗಳಾಗಿ ಮಾರ್ಪಡುತ್ತವೆ. ಇವರು ಯಥಾವತ್ತಾಗಿ ಛಾಯಾಚಿತ್ರದಲ್ಲಿನ ಒಟ್ಟಾರೆಯಾದ ರೂಪವನ್ನು ದಾಖಲಿಸುತ್ತರಾದರೂ ಅದು ರಿಯಲಿಸ್ಟರ ಹಾಗೆ ಅತಿವಾಸ್ತವವಾದಿ ಯಾದುದಲ್ಲ. ಬದಲಿಗೆ ಗ್ರಾಫಿಕ್ ಆರ್ಟ್ಸ್‌ನ ಲಿಥ್ ಪ್ರಿಂಟಗಳಲ್ಲಿ ಟೋನ್ ಡೌನ್ ಮಾಡುವಂತೆ ಸೌಮ್ಯ ಛಾಯಾಂತರಗಳನ್ನು ನಿರಾಕರಿಸುತ್ತಾರೆ. ಹೀಗೆ ಕೇವಲ ಓಂದೆರಡು ಅಥವಾ ಮೂರು ಖಚಿತ ಟೋನ್‌ಗಳನ್ನಷ್ಟೇ ಕ್ಯಾನ್ವಾಸಿನ ಮೇಲೆ ಪುನರ್‌ಚಿತ್ರಿಸುವುದರಿಂದಾಗಿ ಇವು ಕಲೆಯಾಗಿ ರೂಪಾಂತರಗೊಳ್ಳುತ್ತವೆ. ಪದರಗಳಂತೆ ಇತರ ದೃಶ್ಯಗಳನ್ನು ಬೆಸೆಯುವುದರಿಂದ ಅವು ಕಲೆಯೆಡೆಗೆ ಇನ್ನಷ್ಟು ವೇಗವಾಗಿ ತಿರುಗುತ್ತವೆ. ಜೊತೆಗೆ ಅದಕ್ಕೆ ದ್ವಂದ್ವ ವಾಸ್ತವವೂ ಪ್ರಾಪ್ತವಾಗುತ್ತದೆ. ಆದ್ದರಿಂದ ನಾವು ಇವುಗಳನ್ನು 'ನೈಜತೆಯ ತ್ರಿಶಂಕು' ಎನ್ನಬಹುದಾಗಿದೆ.

ಕುತೂಹಲದ ಅಂಶವೆಂದರೆ ಈ ಕಲಾವಿದ ವಾಸ್ತವದ, ನೈಜ ಛಾಯಾಚಿತ್ರಗಳನ್ನು ಆಧರಿಸಿದ್ದರೂ ಇದಕ್ಕೆ 'ನೈಜವಲ್ಲದ ನಗರದ ವೃತ್ತಾಂತ' ಎಂಬ ಶೀರ್ಷಿಕೆ ಕೊಡುವ ಮೂಲಕ ಇವುಗಳಿಗೆ ಹೊಸ ಅಯಾಮ ನೀಡುತ್ತಾರೆ. ರತ್ನದೀಪ್ ಅವರು ರಾಫೇಲ್ ಸೇರಿದಂತೆ ವಿಶ್ವದ ಕೆಲವು ಪ್ರಸಿದ್ದ ಕಲಾವಿದರ ಕೃತಿಗಳನ್ನು ಯಥಾವತ್ತಾಗಿ ತಮ್ಮ ಕೃತಿಗಳಲ್ಲಿ ತಂದರೂ ಅವುಗಳಿಗೆ

೮೭. ನೈಜತೆಯ ನಿರಾಕರಿಸಿ, ಹೊಸ ನೈಜತೆಯ ಸೃಷ್ಟಿಗೆ ನೈಜತೆಯೇ ಆಧಾರ, ಪ್ರಜಾವಾಣಿ, ಕರ್ನಾಟಕದರ್ಶನ, ೨, ಫೆಬ್ರವರಿ, ೨೦೦೨

ಪುನರ್ ವ್ಯಾಖ್ಯಾನ ದೊರೆಯುವಂತೆ ಮಾಡುತ್ತಾರೆ. ಹೀಗಾಗಿ ಈ ಕೃತಿಗಳೆಲ್ಲ. ನೈಜತೆಯ ಎರಡು ಮುಖಗಳು ಏಕಕಾಲದಲ್ಲಿ ದಕ್ಕುತ್ತವೆ. ಕುತೂಹಲದ ಇನ್ನೊಂದು ಅಂಶವೆಂದರೆ ಇಂದಿನ ಹಲವಾರು ಸಮಕಾಲೀನ ಕಲಾವಿದರಂತೆ ಇವರೂ ತಮ್ಮ ಕೃತಿಗಳೂ ಒಂದೆ ನಿಶ್ಚಿತ ಅರ್ಥ ಹೊರಡಿಸಬೇಕೆಂದು ಬಯಸುವುದಿಲ್ಲ. ಬದಲಿಗೆ ತಮ್ಮ ಕ್ಯಾಟ್‌ಲಾಗ್‌ನಲ್ಲಿ ನೋಡುಗರೇ ತಮ್ಮ ಹೊಸ ಅರ್ಥಗಳನ್ನು ಕಂಡುಕೊಳ್ಳಬೇಕೆಂದು ಬಯಸುತ್ತಾರೆ. ಇಷ್ಟೆಲ್ಲದರ ನಡುವೆಯೂ ತಮ್ಮ ತಂದೆಯ ಪ್ರಭಾವದಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ ಎನ್ನುವುದನ್ನು ಇವರ ಹಲವೆಡೆಯ ಹಿನ್ನೆಲೆಗಳು ಸ್ಪಷ್ಟಪಡಿಸುತ್ತವೆ. ಅದೇನೇ ಇದ್ದರೂ, ಕೆಲವೊಮ್ಮೆ ಇವರ ಕೃತಿಗಳಲ್ಲಿನ ನಿರ್ವಹಣಾ ವಿಧಾನ ನೋಡಿದಾಗ ಕಲೆಯೂ ದಶಕಗಳ ಹಿಂದಕ್ಕೆ ಹೋಗುತ್ತಿದೆಯೇ ಎಂದೆನಿಸದಿರದು, ಹೀಗೆ ಹಲವಾರು ಮಿತಿಗಳ ನಡುವೆಯೂ ರತ್ನದೀಪ್ ಅವರು ನಿಜಕ್ಕೂ ನಮ್ಮ ನಡುವೆ ಮಿಂಚುತ್ತಾರೆ ಎಂಬುದನ್ನು ಲೇಖಕರು ಗುರುತಿಸಿದ್ದಾರೆ.

**೮೯. ಗುರುವಿಲ್ಲದ, ಗುರಿಯೂ ಇಲ್ಲದ ಹುಡುಕಾಟ**[೮೮]

ಔಪಚಾರಿಕ ಕಲಾ ಶಿಕ್ಷಣವಿಲ್ಲದೆ ರೂಪಗೊಂಡ ಓ. ವೆಂಕಟೇಶ್ ಲಲಿತ ಕಲಾ ಅಕಾಡೆಮಿಯಲ್ಲಿ ಉದ್ಯೋಗಿಯಾಗಿದ್ದು, ಅಲ್ಲಿರುವ ಕೃತಿಗಳ ಸಾನಿಧ್ಯದಿಂದ, ಕಲಾವಿದರ ನಡುವಿನ ಒಡನಾಟದಿಂದ ಅವರು ಉತ್ತಮ ಕಲಾವಿದರಾದ ಬಗೆಯನ್ನು ಹಾಗೂ ಅವರ ಕಲಾಕೃತಿಗಳ ವಿಶೇಷತೆ ಕುರಿತು ಈ ಪ್ರಸಕ್ತ ಲೇಖನವನ್ನು ಕೃ.ಸೆ.ರಚಿಸಿದ್ದಾರೆ. ಇವರು ಆಲ್ ಇಂಡಿಯಾ ಫೈನ್ ಆರ್ಟ್ಸ್ ಅಂಡ್ ಕ್ರಾಫ್ಟ್ ಹಾಗೂ ಮೈಸೂರು ದಸರಾ ಪ್ರದರ್ಶನಗಳಲ್ಲಿ ಪ್ರಶಸ್ತಿಗಳನ್ನು ಗಳಿಸಿದ್ದು, ಅವರ ಈಚಿನ ಕೃತಿಗಳ ಪ್ರದರ್ಶನವೂ ಬೆಂಗಳೂರಿನ ಕಮರ್ಷಿಯಲ್ ಸ್ಟ್ರೀಟ್ನಲ್ಲಿರುವ ಕೆಫೆ ಕಾಫಿ ಡೇಯಲ್ಲಿ ನಡೆಯಿತು.

ಇವರು ವರ್ಣಮೇಳದಲ್ಲಿ ಕುಂಚಗಳ ಬೀಸುವಿಕೆಯಲ್ಲಿ ತುಂಬ ಗಮನಾರ್ಹರೆನಿಸುತ್ತಾ ಅಮೂರ್ತ ಕೃತಿಗಳಲ್ಲಿ ನಿಜಕ್ಕೂ ಉತ್ತಮರೆನಿಸುತ್ತಾರೆ. ಆದರೆ ವ್ಯಕ್ತಿಗಳನ್ನು ಚಿತ್ರಿಸುವಲ್ಲಿ ಅವರ ದೌರ್ಬಲ್ಯಗಳು ಇಣುಕುತ್ತವೆ. ಹಾಗಿದ್ದರೂ ಅದರ ಶೈಲೀಕರಣದ ಹೆಸರಿನಲ್ಲಿ ಬಚಾವಾಗುವ ವಿದ್ಯೆಯನ್ನು ಅವರು ಬಲ್ಲರು. ಇವರ ಒಂದೊಂದೇ ಕೃತಿಯನ್ನು ನೋಡಿದಾಗ ಇತರ ಹಲವು ಕಲಾವಿದರ ಪ್ರಭಾವಗಳು ಗಮನಕ್ಕೆ ಬರುತ್ತವೆ. ಭವಿಷ್ಯದಲ್ಲಿ ಇವರೂ ಈ ದಿಸೆಯಲ್ಲಿ ಗಮನಿಸಿ, ಶೈಲಿಯ ಬದ್ಧತೆಗೆ ಒಳಗಾದರೆ ಇನ್ನಷ್ಟು ಹಿರಿಯ ಕಲಾವಿದರ ಕಣ್ಣುಗಳನ್ನು ಕೆಂಪಾಗಿಸಬಲ್ಲರು ಎಂದು ಲೇಖಕರು ವಿಶ್ಲೇಷಿಸಿದ್ದಾರೆ.

---

೮೮. ಗುರುವಿಲ್ಲದ, ಗುರಿಯೂ ಇಲ್ಲದ ಹುಡುಕಾಟ, ಕ ದರ್ಶನ, ಪ್ರಜಾವಾಣಿ ೨, ಫೆಬ್ರವರಿ, ೨೦೦೨

**೯೦. ಪರಿಣಾಮದಲ್ಲಿ ಮಸುಕಾಗುವ ಬೆಳಕಿನ ಮುಸುಕು**[೮೯]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೬-೦೨-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕಲಾವಿದ ಮೈಖೇಲ್ ಆಮ್ಲಿನ್ ಅವರ ಕಲಾ ಕೃತಿಗಳ ವಿಶೇಷತೆ ಕುರಿತು ಚರ್ಚಿಸಿದ್ದಾರೆ.

ಸ್ವಿಟ್ಜರ್ಲೆಂಡಿನ ಮೈಖೇಲ್ ಆಮ್ಲಿನ್ ಅವರ ಮಿಶ್ರ ಮಾಧ್ಯಮದ ಕೃತಿಗಳ ಪ್ರದರ್ಶನವು ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ನಡೆಯಿತು. 'ಬೆಳಕಿನಿಂದಲೇ ನಾನು ಪೈಂಟ್ ಮಾಡುತ್ತೇನೆ' ಎನ್ನುವ ಈ ಕಲಾವಿದ ವಿದ್ಯುಚ್ಛಕ್ತಿಯಲ್ಲಿ ಬಳಸುವ ಕೇಬಲ್ ವೈರ್ ಹಾಗು ಟಿವಿ ಬಲ್ಬುಗಳನ್ನು ಬಳಸಿ ತಮ್ಮ ಈ ಸರಳ ಕೃತಿಗಳನ್ನು ಗ್ಯಾಲರಿಯ ಗೋಡೆಗಳ ಮೇಲೆ ವಿಶೇಷವಾಗಿ ಪ್ರತಿಷ್ಠಾಪಿಸುತ್ತಾರೆ.

ಕೃತಿಯಲ್ಲಿ ತುಂಬ ಕ್ರಿಯಾತ್ಮಕವಾದ ಬಿಂದುಗಳಲ್ಲಿ ವಿದ್ಯುತ್ ಬಲ್ಬುಗಳನ್ನು ಬೆಳಗಿಸುವ ಮೂಲಕ ಹಾಗು ಉಳಿದೆಡೆಗಳಲ್ಲಿ ರೇಖಾಕೃತಿಗಳನ್ನು ಕೇಬಲ್ ವೈರ್‌ನಿಂದ ರೂಪಿಸುವುದು ಇವರ ಇಲ್ಲಿನ ಕ್ರಮ. ಅಂತೆಯೇ ಈ ಪ್ರದರ್ಶನದಲ್ಲಿ 'ವುಮನ್ ಬಾಡಿ' ಕೃತಿಯಲ್ಲಿ ಸ್ತನಗಳ ಕೇಂದ್ರಗಳನ್ನು ಈ ಬಗೆಯ ಎರಡು ಬಲ್ಬುಗಳಿಂದ ಬೆಳಗಿಸಿದ್ದಾರೆ. ಬಾವಚಿತ್ರವೊಂದರಲ್ಲಿ ಎರಡು ಕಣ್ಣುಗಳ ಸ್ಥಳದಲ್ಲಿ ಬಲ್ಬುಗಳನ್ನು ಬೆಳಗಿಸಿದ್ದಾರೆ. ಅದನ್ನು ಹೊರತುಪಡಿಸಿ ಉಳಿದ ಭಾಗಗಳಲ್ಲಿ ಕೇಬಲ್ ವೈರ್‌ನಿಂದ ರೇಖಾಚಿತ್ರಗಳಂತೆ ರೂಪಿಸಿದ್ದಾರೆ. ಇಲ್ಲಿ ಬಳಸಿರುವ ಬಲ್ಬುಗಳು ವಿಶಿಷ್ಟವಾದ್ದರಿಂದ ಬೆಳಕಿನ ಅಲೆಗಳ ನೀರಿನ ಅಲೆಗಳಂತೆಯೇ ಗೋಡೆಯೆಡೆಗೆ ಬೆಳಕಿನ ಗ್ರೇಡೇಶನ್ ನಿರ್ಮಿಸುತ್ತದೆ.

ಹೀಗೆ ಕಲ್ಪನೆಯ ದೃಷ್ಟಿಯಿಂದ ಇವು ಗಮನಾರ್ಹವಾದವುಗಳಾದರೂ ಕಲಾತ್ಮಕ ಪರಿಣಾಮದ ನೆಲೆಯಲ್ಲಿ ತುಂಬ ಸಾಮಾನ್ಯದ್ದೆನಿಸುತ್ತವೆ. ಸಂಕೀರ್ಣತೆಯಿಂದ ಸಂಪೂರ್ಣ ದೂರವಿರುವ ಇವು ಅವುಗಳಲ್ಲಿನ ಅತೀವ ಸರಳತೆಯಿಂದಾಗಿಯೂ ಪರಿಣಮಿಸುವಲ್ಲಿ ಸೋಲುತ್ತವೆ. ಈ ಕಲಾವಿದರ ಕರ ಪತ್ರದಲ್ಲಿ ಬೆಳಕು ಹಾಗು ತಮ್ಮ ಕೃತಿಗಳನ್ನು ಕುರಿತಂತೆ ಸಾಕಷ್ಟು ವಿಶ್ಲೇಷಿಸಿದ್ದರಾದರೂ ಆ ವಿವರಣೆಗಳು ಇವುಗಳ ಪ್ರಭಾವ ಹೆಚ್ಚು ಮಾಡುವಲ್ಲಿ ನೆರವಿಗೆ ಬರುವುದಿಲ್ಲ. ಹಾಗಾಗಿ ಒಂದು ಪ್ರಯೋಗವಾಗಿ ನಮ್ಮ ಕಲಾಪರಿಸರಕ್ಕೆ ಇದು ಹೊಸದೆನ್ನುವ ದೃಷ್ಟಿಯಿಂದ ಸ್ವಲ್ಪ ಇದನ್ನು ಗಮನಿಸಬಹುದೇ ಹೊರತು ಉಳಿದಂತೆ ಇವು ಮಕ್ಕಳಾಟದಂತೆ ಕಂಡುಬರುವುದೇ ಹೆಚ್ಚು ಎಂಬುದನ್ನು ಲೇಖಕರು ಪ್ರಸ್ತಾಪಿಸಿದ್ದಾರೆ.

---

೮೯. ಪರಿಣಾಮದಲ್ಲಿ ಮಸುಕಾಗುವ ಬೆಳಕಿನ ಮುಸುಕು, ಪ್ರಜಾವಾಣಿ, ಕರ್ನಾಟಕದರ್ಶನ, ೧೬, ಫೆಬ್ರವರಿ, ೨೦೦೨

**೯೧. ಸಮಕಾಲೀನಗೊಂಡ ಪುರಾತನ ತಂತ್ರ**[೯೦]

ಚಿತ್ರಕಲಾ ಪರಿಷತ್ತಿನ ಕಾಲೇಜಿನಲ್ಲಿ ಕಲಾಭ್ಯಾಸ ಮಾಡಿದ ಕೆ.ಕೃಷ್ಣಪ್ರಸಾದ್ ಅವರ ಈಚಿನ ಕೃತಿಗಳ ಪ್ರದರ್ಶನವು ಬೆಂಗಳೂರಿನ ಎಂ.ಜಿ.ರಸ್ತೆಯ ಪ್ರೆಸ್ಟೀಜ್ ಮೆರಿಡಿಯನ್ನಲ್ಲಿರುವ ಕೆಫೆ ಕಾಫಿಡೇಯಲ್ಲಿ ನಡೆಯಿತು. ಈ ಪ್ರದರ್ಶನದಲ್ಲಿನ ಒಂದು ವೈಶಿಷ್ಟ್ಯವೆಂದರೆ ಇಂದು ಬಹುತೇಕ ನಮ್ಮಿಂದ ಮರೆಯಾಗಿರುವ ಫ್ರೆಸ್ಕೊ ತಂತ್ರದಲ್ಲಿ ಕೃತಿರಚನೆ. ಸಾಕಷ್ಟು ಚಿಕ್ಕ ಅಳತೆಯಲ್ಲಿರುವ ಈ ಕೃತಿಗಳ ರಚನೆಗೆ ಕೃಷ್ಣಪ್ರಸಾದ್ ಅವರು ತುಂಬ ಕ್ಲಿಷ್ಟಕರದ್ದಾದ ಜೈಪುರ್ ವಿಶಿಷ್ಟ ಭಿತ್ತಿ ರಚಿಸಿಕೊಂಡು ಪದರ ಪದರಗಳಾಗಿ ಅದು ಒಣಗುವ ಮುನ್ನವೇ ಕೃತಿರಚಿಸುವ ವಿಧಾನದಿಂದಾಗಿ ಇವು ತುಂಬ ದೀರ್ಘಕಾಲ ಬಾಳುವಂತವು.

ಪ್ರದರ್ಶನದಲ್ಲಿ ಈ ಕಲಾವಿದ ಮುಖ್ಯವಾಗಿ ಎರಡು ಪ್ರಕಾರಗಳ ಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಒಂದೆರಡು ಸಮಕಾಲೀನ ಶೈಲಿಯವಾದರೆ ಮತ್ತೆ ಕೆಲವು ಪುರಾತನ ಭಿತ್ತಿಚಿತ್ರಗಳನ್ನೇ ಹೋಲುವಂತವು. ನಮ್ಮ ಪ್ರಾಚೀನ ಭಿತ್ತಿಚಿತ್ರಗಳಲ್ಲಿಯ ಶೈಲಿಯನ್ನೇ ಬಹುತೇಕ ಅನುಸರಿಸಿದ ಕೃತಿಗಳಿವು. ರಾಜ, ರಾಣಿಯರ ಚಿತ್ರಗಳಿರುವ ಇವು ಶೈಲಿಯಂತೆ ವಸ್ತುವೂ ಪುರಾತನವಾದುದು. ಇವುಗಳಲ್ಲಿನ ತಂತ್ರ ಶೈಲಿಗಳೆಲ್ಲವೂ ಪುರಾತನದ ನಕಲಿನಂತೆಯೇ ಇರುವುದರಿಂದ ಇವು ಹೊಸ ಪರಿಣಾಮ ಉಂಟುಮಾಡುವುದಿಲ್ಲ. ಇದ್ದುದರಲ್ಲಿ ಸೃಜನಶೀಲ ಕೃತಿಗಳೇ ಹೆಚ್ಚಿನ ಗಮನ ಸೆಳೆಯುತ್ತವೆ. ಇಂತಹ ಕಡೆಗಳಲ್ಲಿ ಪುರಾತನ ತಂತ್ರವನ್ನು ಸಮಕಾಲೀನವಾಗಿ ಪ್ರಸ್ತುತಪಡಿಸುವ ಗುಣದೊಂದಿಗೆ ಶೈಲಿಯೂ ಗಮನಾರ್ಹವಾಗಿದೆ. ಒಂದೆರಡು ಕೃತಿಗಳಲ್ಲಿನ ವಿಶಿಷ್ಟ ಮೈವಳಿಕೆಯೂ ಹೊಸ ಅನುಭವ ನೀಡುವಂತಿವೆ. ತುಂಬ ಗಾಢವಾದ ಪರಿಣಾಮ ಬೀರದಿದ್ದರೂ ಪುರಾತನ ತಂತ್ರ ಹಾಗು ಸಮಕಾಲೀನ ರೂಪಗಳ ಸಂಗಮದಿಂದಾಗಿ ಕೆಲವು ಕೃತಿಗಳಾದರೂ ಗಮನಾರ್ಹವಾದ ಸರಳ ಪ್ರದರ್ಶನವಿದು ಎನ್ನುವುದನ್ನು ಕೃಸೆ. ಈ ಲೇಖನದ ಮೂಲಕ ಪ್ರಸ್ತಾಪಿಸಿದ್ದಾರೆ.

**೯೨. ವಾಸ್ತವಿಕಕ್ಕೆ ವಿಲಕ್ಷಣ ಭಾವದ ಲೇಪನ**[೯೧]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೯-೦೨-೨೦೦೨ರಂದು ಪ್ರಕಟಗೊಂಡ ಲೇಖನದಲ್ಲಿ ಪ್ರತಿಷ್ಠಿತ ಹಾಗೂ ಪ್ರಸಿದ್ದ ಕಲಾವಿದರಲ್ಲಿ ಸ್ಥಾಯಿಯಾಗಿ ಕಂಡು ಬರುವಂತಹ ಹೆಗ್ಗುರುತು ಅಥವಾ ಐಡೆಂಟಿಟಿ ಹಾಗೂ ಕಲಾವಿದೆ ಅಂಜಲಿ ಇಳಾ ಮೆನನ್‌ರವರ ವಿಶೇಷತೆ ಕುರಿತು ಕೃ.ಸೆ.ಯವರು ಚರ್ಚಿಸಿದ್ದಾರೆ. ಅವರಲ್ಲಿ ಮುಸುಕಾದ ಕಣ್ಣು ಸ್ಥಾಯಿಯಾದ ಹೆಗ್ಗುರುತಾಗಿದೆ.

---

೯೦. ಸಮಕಾಲೀನಗೊಂಡ ಪುರಾತನ ತಂತ್ರ, ಪ್ರಜಾವಾಣಿ, ಕ ದರ್ಶನ ೨ ಫೆಬ್ರವರಿ, ೨೦೦೨

೯೧. ವಾಸ್ತವಿಕಕ್ಕೆ ವಿಲಕ್ಷಣ ಭಾವದ ಲೇಪನ, ಪ್ರಜಾವಾಣಿ, ಕರ್ನಾಟಕದರ್ಶನ, ೯, ಫೆಬ್ರವರಿ, ೨೦೦೨

ನಮ್ಮ ದೇಶದ ಪ್ರತಿಷ್ಠಿತ ಕಲಾವಿದೆಯರಲ್ಲಿ ಒಬ್ಬರಾದ ಅಂಜಲಿ ಇಳಾ ಮೆನನ್ ಅವರದು ಹಲವು ನೆಲೆಗಳಲ್ಲಿ ಅದ್ವಿತೀಯ ಹೆಸರು. ಬಂಗಾಳಿ ಹಾಗು ಅಮೆರಿಕನ್ ದಂಪತಿಯ ಪುತ್ರಿಯಾದ ಈ ಕಲಾವಿದೆ ವಿವಿಧ ಸಂಸ್ಕೃತಿಗಳಿಗೆ ಮುಕ್ತವಾಗಿ ತಮ್ಮನ್ನು ತೆರೆದುಕೊಂಡವರು. ಸುಮಾರು ಐದು ದಶಕಗಳಿಂದಲೂ ನಿರಂತರವಾಗಿ ಕ್ರಿಯಾಶೀಲರಾಗಿರುವ ಅವರ ನಾಲ್ಕು ದಶಕಗಳ ಅವಧಿಯ ಹಿನ್ನೋಟದ ಪ್ರದರ್ಶನವು ಈಗ ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ನಡೆದಿರುವ ಈ ಪ್ರದರ್ಶನದಲ್ಲಿ ಪಾಶ್ಚಾತ್ಯ ಮತ್ತು ಪೌರ್ವಾತ್ಯ ಕಲೆಯ ಹಲವು ಅಂಶಗಳನ್ನು ತುಂಬ ವಿಶಿಷ್ಟವಾಗಿ ಬೆಸೆದಿರುವುದನ್ನು ಕಾಣಬಹುದು. ಈ ಮೊದಲೇ ಹೇಳಿದಂತೆ ಅಂಜಲಿಯವರ ಕೃತಿಗಳಲ್ಲಿ ಟ್ರೇಡ್‌ಮಾರ್ಕ್‌ನಂತೆ ಮಸುಕಾದ ಕಣ್ಣು ಸುಮಾರು ೬೦ರ ದಶಕದಲ್ಲಿ ಆರಂಭವಾಗಿ ಈಗ ಅಲ್ಪ ಸ್ವಲ್ಪ ಬದಲಾವಣೆಗಳನ್ನು ಪಡೆದರೂ ತನ್ನ ಸಾತತ್ಯವನ್ನು ಉಳಿಸಿಕೊಂಡು ಬಂದಿದೆ. ಎನ್ನುವುದನ್ನು ಈ ಪ್ರದರ್ಶನ ಸ್ಪಷ್ಟಪಡಿಸುತ್ತದೆ.

ಹೆಂಗಸರನ್ನು ವಿವಸ್ತ್ರಗೊಳಿಸುವುದು ಚಿತ್ರಗಳಲ್ಲಿ ತುಂಬ ಸುಲಭ ನಗ್ನಹೆಣ್ಣನ್ನು ನೋಡುವ ಕಣ್ಣು ಗಂಡಿನದು ಎಂದು ಜಾನ್ ಬರ್ಜರ್ ಹೇಳಿದ ಹಾಗು ಸಾಮಾನ್ಯವಾಗಿ ಹೆಂಗಸರನ್ನು ಹೀಗೆ ವಿವಸ್ತ್ರಗೊಳಿಸಿದವರು  ಪುರುಷ ಕಲಾವಿದರೇ ಅಧಿಕ. ಅಮೃತಾ ಶೇರ್‌ಗಿಲ್ ಅವರಂತೆ ಕೆಲವು ಮಹಿಳೆಯರೂ ಈ ಹಾದಿ ಹಿಡಿದಿದ್ದಾರೆ. ಸ್ವತಃ ಹೆಣ್ಣಾಗಿರುವ ಅಂಜಲಿಯವರಂತೂ ಯಾವುದೇ ಸಂಕೋಚವಿಲ್ಲದೆ ಹೆಂಗಸರನ್ನು ವಿವಸ್ತ್ರಗೊಳಿಸುತ್ತಾರೆ. ಹಲವೊಮ್ಮೆ ಹೆಣ್ಣು ಬಟ್ಟೆಧರಿಸಿದ್ದರೂ ಹೆಣ್ತನದ ಭಾಗಗಳನ್ನಷ್ಟೇ ಉದ್ದೇಶಪೂರ್ವಕವಾಗಿ ಕಾಣಿಸುವಂತೆ ತೆರೆದಿಡುವ ಇವರ ಪರಿಯು ಹಲವರ ಹುಬ್ಬೇರಿಸುವಂತೆ ಮಾಡುತ್ತದೆ. ಈ ಎಲ್ಲದರ ನಡುವೆ ಇವರ ಕೃತಿಗಳು ಮುಖ್ಯ ಎಂದೆನಿಸುವುದು ಅವರ ಕುಂಚದ ನಿರ್ವಹಣೆಯಲ್ಲಿ. ಬಹುತೇಕ ಮೈವಳಿಕೆಗಳಂತೆ ಕಂಡು ಬರುವ ಪ್ಯಾಟರ್ನ್‌ಗಳನ್ನು ನಿರ್ಮಿಸುವ ರೀತಿಯೇ ಇವರ ಕೃತಿಗಳಿಗೆ ವಿಲಕ್ಷಣ ಆಯಾಮವನ್ನು ನೀಡುತ್ತವೆಂಬುದನ್ನು ಲೇಖಕರು ಇಲ್ಲಿ ದಾಖಲಿಸಿದ್ದಾರೆ.

**೯೩. ರಮ್ಯ ನೆಲೆಯಲ್ಲಿ ನಿರೂಪಣೆ**[೯೨]

ಮೂಲತಃ ಕೇರಳದ ವಿ.ಬಿ. ವೇಣು ಅವರ ಕೃತಿಗಳ ಪ್ರದರ್ಶನವು ಬೆಂಗಳೂರಿನ 'ಟೈಮ್ ಅಂಡ್ ಸ್ಪೇಸ್' ಗ್ಯಾಲರಿಯಲ್ಲಿ ನಡೆಯಿತು. ಈ ಪ್ರದರ್ಶನದಲ್ಲಿ ಇವರು ಚಿಕ್ಕ ಅಳತೆಯ ಜಲವರ್ಣದ ಕೃತಿಗಳನ್ನು ಪ್ರದರ್ಶಿಸಿದ್ದರು. ಆದರೆ ಇಲ್ಲಿ ಶೈಲಿಯ ದೃಷ್ಟಿಯಿಂದ ರೂಪದ ದೃಷ್ಟಿಯಿಂದ ವೈವಿಧ್ಯಮಯ ಕೃತಿಗಳಿದ್ದುದೂ ಗಮನಾರ್ಹ. ಸೌಮ್ಯ ನೆಲೆಯಲ್ಲಿ ಹಗುರದ ಭಾವನೆ ನಿರ್ಮಿಸುವಂತಿರುವ ಇವುಗಳಲ್ಲಿ ಹೆಂಗಸರನ್ನು ಅಗತ್ಯಕ್ಕಿಂತಲೂ ಅತಿಯಾಗಿ ನಗ್ನಗೊಳಿಸಿದ್ದಾರೆ.

---

೯೨. ರಮ್ಯ ನೆಲೆಯಲ್ಲಿ ನಿರೂಪಣೆ, ಕರ್ನಾಟಕ ದರ್ಶನ, ಪ್ರಜಾವಾಣಿ ೨ ಫೆಬ್ರವರಿ, ೨೦೦೨

ಸಾಮಾನ್ಯವಾಗಿ ಹೆಂಗಳೆಯರನ್ನು ದನದ ಮಂದೆಯ ನಡುವೆ ಘೋಸು ನೀಡಿದಂತೆ ನಿಲ್ಲಿಸುವ ಇವರ ಪರಿಯು ರೋಮ್ಯಾಂಟಿಕ್ ಮನಸ್ಸಿನವರಿಗೆ ನಿಜಕ್ಕೂ ಆಪ್ತವೆನಿಸುತ್ತದೆ. ಹಾಗಿದ್ದರೂ ಇವರ ಶೈಲಿಯಲ್ಲಿ ವೈವಿಧ್ಯವಿರುವಂತೆಯೇ ಕಲಾತ್ಮಕತೆಯಲ್ಲೂ ಏರಿಳಿತಗಳಿವೆ. ಹೀಗೆ ಮನಸ್ಸಿಗೆ ಸಾಂತ್ವನ ನೀಡುವಂತಹ ಲಾಲಿತ್ಯದ ಭಾವನೆಗಳನ್ನು ಇವು ನಿರ್ಮಿಸುತ್ತವೆ ಎಂಬುದನ್ನು ಈ ಲೇಖನದ ಮೂಲಕ ಕೃ.ಸೆ.ಯವರು ವಿಶ್ಲೇಷಿಸಿದ್ದಾರೆ.

**೯೪. ಚರ್ವಿತ ಚರ್ವಣದ, ಪುನರಾವರ್ತನೆಯ ಮನಸ್ಸು**[೯೩]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೬-೦೨-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಝೆನ್ ಗ್ಯಾಲರಿಯಲ್ಲಿ ನಡೆದ ಬಂಗಾಳದ ನಾಲ್ಕು ಕಲಾವಿದರ ಕಲಾ ಕೃತಿಗಳ ಮಹತ್ವವನ್ನು ಕೃ.ಸೆ.ಯವರು ದಾಖಲಿಸಿದ್ದಾರೆ.

ಈ ನಾಲ್ವರ ಪ್ರದರ್ಶನ ನೋಡಿದಾಗ ಹೊಸ ಅನುಭವವಾಗುವುದಕ್ಕಿಂತಲೂ ಹಳೆಯ ಅನುಭವಗಳ ಪುನಾರಾವರ್ತನೆಯಾಗುವಂತಿದೆ. ಇವರೆಲ್ಲರ ರೂಪಗಳು ಚರ್ವಿತ ಚರ್ವಣದ ಹಾದಿ ಹಿಡಿದಿರುವುದು ಇದಕ್ಕೆ ಕಾರಣ. ಈ ನಡುವೆಯೂ ಅರಿಂದಮ್ ಚಟರ್ಜಿಯವರು ಒಂದೆಡೆ ಗಮನ ಸೆಳೆದರೆ ಇನ್ನೊಂದೆಡೆ ಸ್ವಚ್ಛಂದ ರೂಪಗಳ ಮೂಲಕ ವೇದ್ ಸಂದೀಪ್ ಅವರು ವಿಭಿನ್ನರೆಸುತ್ತಾರೆ. ಆರಿಂದಮ್ ಅವರು ನಮ್ಮ ಮನಸ್ಸಿನ ಆಳದಲ್ಲಿ ಪ್ರಭಾವಿಸುವಂತಹ ಅಮೂರ್ತದ ಹೊಸ ಹಾದಿ ಹಿಡಿದಿದ್ದಾರೆ. ತಕ್ಷಣಕ್ಕೆ ಯಾವುದೋ ಹಳೆಯ ಗೋಡೆಗಳ ತುಣುಕುಗಳೋ ಅಥವಾ ತುಕ್ಕು ಹಿಡಿದ ತಗಡೋ ಎಂದೆನಿಸುವಂತೆ ಇರುವ ಇವುಗಳಲ್ಲಿ ಮೈವಳಿಕೆ ಹಾಗು ವರ್ಣಮೇಳಗಳೇ ಇವರ ಬಂಡವಾಳವಾಗಿದೆ. ಯಾವುದೋ ಪ್ರಖರ ವರ್ಣಗಳನ್ನು ಖಡಾಖಂಡಿತವಾಗಿ ನಿರಾಕರಿಸುವ ಇವುಗಳಲ್ಲಿ ದಟ್ಟವಾದ ಕಂದು, ಕಪ್ಪುಗಳಂತಹ ನಿಷೇಧಾತ್ಮಕ ವರ್ಣಗಳನ್ನು ಬಳಸಿರುವುದು ಗಮನಾರ್ಹ.

ಸಂಜಯ್ ಚಟರ್ಜಿಯವರ ಕೃತಿಗಳು ಆಧುನಿಕ ಡಿಸೈನ್‌ಗೆ ಹತ್ತಿರವಾಗಿದ್ದು, ಕೆಲವೆಡೆ ಗ್ರಾಫ್‌ನಂತಹ ಚೌಕಾಕೃತಿಗಳನ್ನು ಬಾಣದ ಗುರುತುಗಳನ್ನು ಬಳಸಿದ್ದಾರೆ. ವರ್ಣಮೇಳದಲ್ಲಿಯೂ ವಿಭಿನ್ನ ಪ್ರಾಥಮಿಕ ವರ್ಣಗಳನ್ನು ಯಥೇಚ್ಛವಾಗಿ ಬಳಸಿಕೊಂಡಿರುವುದರಿಂದ ಇವು ಕಲಾತ್ಮಕವಾಗಿ ಸ್ವಲ್ಪ ದಣಿಸುವಂತಿವೆ. ಜೊತೆಗೆ ನಿರ್ವಹಣೆಯಲ್ಲಿನ ದೌರ್ಬಲ್ಯದಿಂದಾಗಿ ಇವು ಅಷ್ಟಾಗಿ ಗಮನ ಸೆಳೆಯುವುದಿಲ್ಲ. ಈ ನಡುವೆ ತಪಸ್ ಘೋಷಾಲ್ ಅವರ ಕೃತಿಗಳು ಉತ್ತಮ ನಿರ್ವಹಣೆಯಿಂದಾಗಿ ಸ್ವಲ್ಪವಾದರೂ ಗಮನ ಸೆಳೆಯುತ್ತದೆ. ಬಂಗಾಳದ ಹಲವಾರು ಕಲಾವಿದರ ಹಾಗೆಯೇ ನಗರ

---

೯೩. ಚರ್ವಿತ ಚರ್ವಣದ, ಪುನರಾವರ್ತನೆಯ ಮನಸ್ಸು, ಪ್ರಜಾವಾಣಿ, ಕರ್ನಾಟಕದರ್ಶನ, ೧೬, ಫೆಬ್ರವರಿ, ೨೦೦೨

ಪ್ರದೇಶದ ಕಟ್ಟಡಗಳನ್ನು ವಾಸ್ತು ಶಿಲ್ಪಿಯ ನೆಲೆಯಲ್ಲಿ ಇವರು ಅಮೂರ್ತವೆನಿಸುವಂತೆ ಮಾಡಿದ್ದಾರೆ. ಕಂದು ವರ್ಣ ಪ್ರಧಾನದ ಇವು ಉತ್ತಮ ನೆಲೆಯಲ್ಲಿದ್ದರೂ ಚರ್ವಿತ ಚರ್ವಣವೇ ಇಲ್ಲಿನ ದೌರ್ಬಲ್ಯವೆನಿಸುತ್ತದೆ.

ಪ್ರದರ್ಶನದಲ್ಲಿ ವೇದ್ ಪಿ. ಸಂದೀಪ್ ಅವರು ಈ ಮೂವರಿಂದ ಭಿನ್ನವಾದ ನೆಲೆಯಲ್ಲಿ ನಿಲ್ಲುತ್ತಾರೆ. ದೇಶೀಯದೆನಿಸುವುದಕ್ಕಿಂತಲೂ ಪಾಶ್ಚಾತ್ಯವೆನಿಸುವಂತಹ ಆವರಣ ಇಲ್ಲಿದೆ. ನಿಯೊ ಎಕ್ಸಪ್ರೆಶನಿಸ್ಟರಂತೆ ಸಡಿಲವಾದ ಕುಂಚದ ಬೀಸುಗಳು ಹಾಗು ಸ್ವಚ್ಛಂದ ನಿರ್ವಹಣೆಯೇ ಇಲ್ಲಿ ಗಮನ ಸೆಳೆಯುವಂತಿದೆ. ಅದೇನೇ ಇರಲಿ, ನಮ್ಮ ಹಲವಾರು ಕಲಾವಿದರಂತೆಯೇ, ಯಂತ್ರವೊಂದು ನಿರ್ಮಿಸುವಂತೆ ಈ ಪ್ರದರ್ಶನದಲ್ಲಿ ಭಾಗವಹಿಸಿದವರು ಚರ್ವಿತ ಚರ್ವಣ ರೂಪಗಳ ದಾಸರಾಗಿದ್ದಾರೆ. ಹಾಗಾಗಿ ಉತ್ತಮ ನಿರ್ವಹಣೆಯ ನಡುವೆಯೂ ಇವು ಹೊಸ ಅನುಭವ ನೀಡುವಲ್ಲಿ ಸೋಲುತ್ತವೆ ಎನ್ನುತ್ತಾರೆ ಲೇಖಕರು.

**೯೫. ಸಹ್ಯವಲ್ಲದ್ದಕ್ಕೆ ಕಲಾತ್ಮಕ ರೂಪ**[೯೪]

ಕಲ್ಕತ್ತದ ಮಾಲಾ ಮುಖರ್ಜಿಯವರ ವರ್ಣ ಛಾಯಾಚಿತ್ರಗಳ ಪ್ರದರ್ಶನವು ಬೆಂಗಳೂರಿನ ಝೆನ್ ಗ್ಯಾಲರಿಯಲ್ಲಿ ನಡೆಯಿತು. ಇವರು ವಿಶೇಷತಃ ಹಳೆಯ ಕಟ್ಟಡಗಳ ಕಿಟಕಿ, ಬಾಗಿಲು, ಮೆಟ್ಟಿಲು ಇತ್ಯಾದಿಗಳನ್ನು ತಮ್ಮ ವಸ್ತುವಾಗಿಸಿಕೊಂಡಿದ್ದಾರೆ. ಛಾಯಾಚಿತ್ರ ಕಲೆಗಿರುವ ಒಂದು ವೈಶಿಷ್ಟ್ಯವೆಂದರೆ ಸಾಮಾನ್ಯ ಕಣ್ಣಿಗೆ ಸಹ್ಯವೆನಿಸದ ರೂಪಗಳನ್ನು ಕೂಡ ಒಂದು ಚೌಕಟ್ಟಿನೊಳಗೆ ಕತ್ತರಿಸಿ, ಇಟ್ಟಾಗ, ಅವುಗಳ ಆವರಣದಿಂದ ಪ್ರತ್ಯೇಕಪಡಿಸಿದಾಗ ಆಕರ್ಷಕವಾಗಿ ಕಾಣುವುದು. ಈ ಅಂಶವನ್ನು ನಮ್ಮ ಹಲವರಂತೆ ಮಾಲಾ ಅವರೂ ಮನಗಂಡಿದ್ದಾರೆ. ಅಂತೆಯೇ ಬಣ್ಣ ಕಿತ್ತು ಬಂದಿರುವಂತಹ, ಪದರಗಳು ಎದ್ದಿರುವಂತಹ ಹಳೆಯ ಕಿಟಕಿಗಳು, ಬಾಗಿಲುಗಳು ಸಾಮಾನ್ಯವಾಗಿ ನೋಡಲು ಇಷ್ಟವಾಗದಿದ್ದರೂ ಅವುಗಳಿಗೆ ಕಲೆಯ ಇಂಜಕ್ಷನ್ ನೀಡಲಾಗಿದೆಯೇ ಎಂಬಂತೆ ಕುತೂಹಲಕರ ರೀತಿಯಲ್ಲಿ ಇವರು ಸೆರೆ ಹಿಡಿದಿದ್ದಾರೆ. ಛಾಯಾ ಚಿತ್ರಗಳಲ್ಲಿ ಬಗೆಯ ಕೃತಿಗಳು ಸಾಮಾನ್ಯವಾದರೂ ಅವುಗಳಿಗೆ ಹೊಸ ಅನುಭವ ನೀಡುವಂತೆ ಸೆರೆ ಹಿಡಿದಿರುವುದು ಗಮನಾರ್ಹ. ಮಾಲಾ ಅವರು ಸಂಯೋಜಿಸುವಾಗಲೂ ವಾಸ್ತವದ ಕಣ್ಣಿಗೆ ಕಾಣುವುದಕ್ಕಿಂತಲೂ ಚೆನ್ನಾಗಿ ಕಾಣಿಸುವಂತೆ ಇವುಗಳ ಕಡೆಗೆ ಗಮನ ಹರಿಸಿದ್ದಾರೆ. ಉತ್ತಮ ನೆರಳು ಬೆಳಕಿನ ಯೋಜನೆ, ಆಕರ್ಷಕ ವರ್ಣಮೇಳ ಮುಂತಾದವೂ ಅವರ ನೆರವಿಗೆ ಬಂದಿದೆ, ಹೀಗೆ ಛಾಯಾಗ್ರಹಣಕ್ಕೆ ಸೂಕ್ತವೆನಿಸುವಂತಹ ಸ್ಥಳವನ್ನು ಆರಿಸಿಕೊಳ್ಳುವಲ್ಲಿ ಈ ಕಲಾವಿದೆಯ ಜಾಣತನ ಅಡಗಿದೆ. ಅಂತೆಯೇ ತುಂಬ ಸಾಮಾನ್ಯ, ದೃಶ್ಯಗಳಲ್ಲಿ ಕಲೆಯು ಅವಾಹಿಸುವಂತೆ ಪ್ರಸ್ತುತಪಡಿಸುವ ಇವರ

೯೪. ಸಹ್ಯವಲ್ಲದ್ದಕ್ಕೆ ಕಲಾತ್ಮಕ ರೂಪ, ಕರ್ನಾಟಕ ದರ್ಶನ, ಪ್ರಜಾವಾಣಿ, ೧೬, ಫೆಬ್ರವರಿ ೨೦೦೨

ಕ್ರಮವೂ ಕುತೂಹಲಕರವೆನಿಸುತ್ತದೆ ಎನ್ನುವುದನ್ನು ಲೇಖಕರಾದ ಕೃ.ಸೆ.ಯವರು ಪ್ರಸಕ್ತ ಲೇಖನದಲ್ಲಿ ದಾಖಲಿಸಿದ್ದಾರೆ.

**೯೬. ಲಾಲಿತ್ಯ, ಭಾವಗೀತೆಗಳ ಲಕ್ಷಣಗಳಿಗೆ ಮರುಜೀವ**[೯೫]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ದಿ:೨೩-೦೨-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಲಕ್ಷಣ ಅಟರ್ ಗ್ಯಾಲರಿಯಲ್ಲಿನ ಇಳಂಗೊ ಅವರ ಕಲಾ ಪ್ರದರ್ಶನದ ವಿಶೇಷತೆಗಳನ್ನು ಕೃ.ಸೆ.ಯವರು ಈ ಮುಂದಿನಂತೆ ಚರ್ಚಿಸಿದ್ದಾರೆ.

ಇಳಂಗೊ ಅವರು ಜನಪದ ಆಚರಣೆಗಳಲ್ಲಿನ ನೃತ್ಯ ಸಂಗೀತಗಳ ಸುತ್ತಲೂ ಕೇಂದ್ರಿತ ವಾದಂತಹ ಉಲ್ಲಾಸ, ಉತ್ಸಾಹಗಳ ವಸ್ತು ಅವರದ್ದು, ತಮಿಳುನಾಡಿನ ಗ್ರಾಮೀಣ ಪರಿಸರದ ಜನಪದ ನೃತ್ಯಗಳನ್ನು ಕುರಿತು ಇವುಗಳಲ್ಲಿ ನೃತ್ಯದ ಭಾವ ಹಿಡಿದಿಡುವುದೇ ಇಲ್ಲಿನ ಅಂತಿಮ ಗುರಿಯಾಗಿದೆ. ನೃತ್ಯದ ಸರಳೀಕೃತ. ಆದರೆ ಶೈಲೀಕೃತ ಭಂಗಿಗಳಲ್ಲಿ ಅದರ ಚಲನೆಯ ತೀವ್ರತೆ, ಬಿರುಸು, ಲಯಗಳ ಮೂಲಕ ಭಾವಾವೇಶವನ್ನು ಕಣ್ಣಿಗೆ ಕಾಣುವಂತೆ ಹಿಡಿದಿಟ್ಟಿರುವುದು ಶ್ಲಾಘನೀಯ. ಈ ಭಾವಾವೇಶವು ಇಲ್ಲಿನ ವರ್ಣಚಿತ್ರಗಳಲ್ಲಿ ಗುರಿಯಾಗಿದೆ. ನೃತ್ಯದ ಸರಳೀಕೃತ ಆದರೆ ಶೈಲೀಕೃತ ಭಂಗಿಗಳಲ್ಲಿ ಅದರ ಚಲನೆಯ ತೀವ್ರತೆ ಬಿರುಸು, ಲಯಗಳ ಮೂಲಕ ಭಾವವೇಶವನ್ನು ಕಣ್ಣಿಗೆ ಕಾಣುವಂತೆ ಹಿಡಿದಿಟ್ಟಿರುವುದು ಶ್ಲಾಘನೀಯ, ಈ ಭಾವವೇಶವು ಇಲ್ಲಿನ ವರ್ಣಚಿತ್ರಗಳಲ್ಲಿ ಮಾತ್ರವಲ್ಲ. ಏಕವರ್ಣದ ರೇಖಾಚಿತ್ರಗಳಲ್ಲಿಯೂ ದಕ್ಕಿದೆ. ಕೆಲವೆಡೆ ನೈಫ್ ಪೈಂಟಿಂಗ್, ಮೈವಳಿಕೆ ಇತ್ಯಾದಿಗಳ ಮೂಲಕವೂ ಅದರ ಉನ್ಮತ್ತತೆಯನ್ನು ಹೆಚ್ಚಿಸಿದರೆ ಬಳಸಿದ ವರ್ಣಗಳು ಕೂಡಾ ಇವುಗಳಿಗೆ ದೇಸಿ ಪರದೆಯನ್ನು ಹೊದಿಸುತ್ತಲೇ ಪ್ರಾದೇಶಿಕ ಪ್ರಾತಿನಿಧ್ಯವನ್ನು ಒದಗಿಸುತ್ತದೆ. ಹೀಗೆ ದೇಸೀಯತೆಯನ್ನು ಪಾಶ್ಚಾತ್ಯ ರೂಪಕ್ಕೆ ಕಸಿ ಮಾಡುವ ಮೂಲಕ ಈ ಎರಡೂ ಅಲ್ಲದ ಮೂರನೆಯ ಹೊಸದೊಂದು ಇಲ್ಲಿ ಅನಾವರಣಗೊಳ್ಳುತ್ತವೆ.

ಇಳಂಗೊ ಅವರ ನಿರ್ವಹಣೆ ಸ್ವಂತದ್ದಾದರೂ ಅವರು ಚಾವ್ಡಾ, ಹೆಬ್ಬಾರ್ ಅಷ್ಟೇಕೆ ಹೆನ್ರಿ ಮಾತಿಸ್ ಅವರಂತಹ ಪಾಶ್ಚಾತ್ಯ ಕಲಾವಿದರಿಂದಲೂ ಸಾಕಷ್ಟು ಎರವಲು ಪಡೆದಿದ್ದಾರೆ. ಈ ಎರವಲುಗಳನ್ನು ಚೆನ್ನಾಗಿಯೇ ನಿರ್ವಹಿಸುವಂತಹ ಹಸ್ತ ಕೌಶಲ್ಯ ಇವರಲ್ಲಿ ಇರುವುದರಿಂದ ಈ ಕೃತಿಗಳನ್ನು ಪೂರ್ಣ ನಿರಾಕರಣೆಯ ದೃಷ್ಟಿಯಿಂದ ನೋಡಲಾಗದು, ಅದೇನೇ ಇರಲಿ, ಬೌದ್ಧಿಕತೆಯೇ ವಿಜೃಂಭಿಸಬಯಸುವ ನಮ್ಮ ಇಂದಿನ ಕಲೆಯಲ್ಲಿ ವಿರಳವಾಗಿರುವ ಲಯ ಲಾಲಿತ್ಯ ಭಾವಗೀತಾತ್ಮಕ ಅಂಶಗಳಿಗೆ ಮರುಜೀವ ನೀಡುವ ಇವರ ಕ್ರಮವು ಸ್ವಾಗತಾರ್ಹವಾದುದೇ ಆದುದೆನ್ನುವುದನ್ನು ಈ ಮೂಲಕ ಕೃ.ಸೆ.ಗುರುತಿಸಿದ್ದಾರೆ.

---

೯೫. ಲಾಲಿತ್ಯ, ಭಾವಗೀತೆಗಳ ಲಕ್ಷಣಗಳಿಗೆ ಮರುಜೀವ, ಪ್ರಜಾವಾಣಿ, ಕರ್ನಾಟಕ ದರ್ಶನ, ೨೩, ಫೆಬ್ರವರಿ, ೨೦೦೨

**೯೭. ಪುರಾತತ್ವಕ್ಕೆ ಆಧುನಿಕತೆಯ ಕಸಿ[೯೬]**

ಗದಗಿನ ಕಲಾಶಾಲೆಯಲ್ಲಿ ಈಚೆಗೆ ಕಲಾಭ್ಯಾಸ ಪೂರೈಸಿದ ಅಪ್ಪಣ್ಣ ಪೂಜಾರಿಯವರ ಕಲಾ ಕೃತಿಗಳ ಪ್ರದರ್ಶನ ಬೆಂಗಳೂರಿನ ಕನ್ನಡ ಭವನದಲ್ಲಿರುವ ಚಿತ್ರ ಗ್ಯಾಲರಿಯಲ್ಲಿ ನಡೆಯಿತು. ಇವರು ಪುರಾತನ ಚಿಕಣಿ ಚಿತ್ರಗಳನ್ನು ಆಧುನಿಕ ಕನ್ನಡಕದಲ್ಲಿ ನೋಡುವಂತೆ ಪರಿವರ್ತಿಸಿದ್ದಾರೆ. ಇವುಗಳಲ್ಲಿನ ವಸ್ತುವು ಪುರಾಣಗಳಲ್ಲಿನದೇ ಆದರೂ ಕೃತಿಗಳನ್ನು ಆಧುನಿಕ ಕಾಮಿಕ್ ಸ್ಟ್ರಿಪ್‌ಗಳಲ್ಲಿಯಂತೆ ರೂಪಾಂತರಿಸಿದ್ದಾರೆ. ಹೀಗೆ ರೂಪಾಂತರಿಸುವಾಗ ಆಧುನಿಕ ಕಲೆಯ ಅಂಶ ಗಳಿಗಿಂತಲೂ ವ್ಯಂಗ್ಯ ಚಿತ್ರಗಳ ಧಾಟಿ ಇವರ ನೆರವಿಗೆ ಬಂದಿದೆ. ಚಿಕಣಿ ಚಿತ್ರಗಳಲ್ಲಿನ ಅಲಂಕಾರಿಕ ಕಟ್ಟಡಗಳನ್ನು ನಿರಾಕರಿಸಿ ಚೌಕ ಅಯತಾಕೃತಿಗಳ ಬಣ್ಣದ ಪಟ್ಟಿಗಳ ಹಿನ್ನೆಲೆಯಲ್ಲಿರುವ ಇಲ್ಲಿನ ವ್ಯಕ್ತಿರೂಪಗಳು ಅತಿಶಯಗೊಂಡಿವೆ. ಜೆಸ್ಸೊ ಕೆಲಸವನ್ನು ಬಿಟ್ಟಿರುವ ಇಲ್ಲಿನ ವರ್ಣಗಳು ಆಧುನಿಕ ನಿರೂಪಣಾ ಚಿತ್ರಗಳಲ್ಲಿ ಸ್ವಾಭಾವಿಕವಾಗಿರುವಂಥದ್ದು. ಇವರ ಕೃತಿಗಳಲ್ಲಿ ಸ್ಥಾಯಿಯಾಗಿರುವ ಒಂದು ಅಂಶವೆಂದರೆ ಕಾಮಿಕ್ ಸ್ಟ್ರಿಪ್‌ಗಳಲ್ಲಿಯಂತೆ ಅನುಕ್ರಮವಾದ ಮೂರು ದೃಶ್ಯಗಳನ್ನು ಒಂದೇ ಕೃತಿಯಲ್ಲಿ ತರುವುದು, ಶೈಲಿಯೂ ಸೇರಿದಂತೆ ಇಲ್ಲಿ ಹಲವು ಆಧುನಿಕ ಮಾರ್ಪಾಟುಗಳಿವೆ ಯಾದರೂ ರಂಜಕ ಗುಣ, ಅಲಂಕಾರಿಕತೆ, ಅತಿಯಾದ ಸಿಹಿತನ ಈ ಮುಂತಾದವುಗಳು ಇವರ ಮಹತ್ವಾಕಾಂಕ್ಷೆಯ ಪ್ರಯತ್ನಗಳನ್ನು ಮಸುಕಾಗಿಸುತ್ತವೆ. ಹೀಗೆ ಅಪ್ಪಣ್ಣ ಅವರ ಕೃತಿಗಳು ಆಭಿವ್ಯಕ್ತಿಯ ತುಡಿತಕ್ಕಿಂಲೂ ನೆಪಮಾತ್ರಕ್ಕೆ ಪುರಾತನವಾದುದನ್ನು ಆಧುನಿಕವಾಗಿ ರೂಪಾಂತರಿಸಿ ನೋಡುವಷ್ಟಕ್ಕೆ ತೃಪ್ತಿ ಪಡುವುದರಿಂದ ಇವು ಅಪೇಕ್ಷಿತ ಆಳವನ್ನಾಗಲೀ ವಿಸ್ತಾರವನ್ನಾಗಲೀ ಗಿಟ್ಟಿಸಿಕೊಳ್ಳುವುದಿಲ್ಲ ಎನ್ನುವುದನ್ನು ಕೃ.ಸೆ.ಯವರು ಪ್ರಸಕ್ತ ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ.

**೯೮. ನೆರಳಿನೊಂದಿಗೆ ಝಳದ ಜಗಳ[೯೭]**

ಉತ್ತಮ ಛಾಯಾಚಿತ್ರ ತೆಗೆಯಬೇಕಾದರೆ ಮುಂಜಾವಿನ ಎಳೆ ಬೆಳಕು ಇಲ್ಲವೆ ಸಂಜೆಯ ಇಳಿ ಬೆಳಕು ಬೇಕೇ ಬೇಕೆಂದು ಈ ಅಂಕಣದಲ್ಲಿ ಪದೇ ಪದೇ ಹೇಳುತ್ತ ಬಂದಿದ್ದೇವಲ್ಲ? ಮಟಮಟ ಮಧ್ಯಾಹ್ನದ ಸುಡುಬೆಳಕಿನಲ್ಲೂ ಉತ್ತಮ ಚಿತ್ರವನ್ನು ಎಳೆ ಬಿಸಿಲಿನಲ್ಲಿ ತೆಗೆದಿದ್ದರೆ ಸಮಾನಾಂತರ ಪಟ್ಟಿಗಳು ಈಗಿನಂತೆ ಎದ್ದು ಕಾಣುತ್ತಿರಲಿಲ್ಲ. ಫ್ಲಾಶ್ ಹೊಡೆದಿದ್ದರೆ ಎಷ್ಟು ಪೇಲವ ಆಗಬಹುದಿತ್ತೆಂದು ಊಹಿಸಿ, ಉತ್ತಮ ಚಿತ್ರಗಳನ್ನು ಸೆರೆಹಿಡಿಯಬಯಸುವವನಿಗೆ ಆ ಚಿತ್ರಗಳಲ್ಲಿ ಬರುವ 'ಪಾತ್ರ'ಗಳ ಬಗ್ಗೆ ವ್ಯಾಮೋಹ ಇರಬಾರದು, ಚಿತ್ರ ಒಂದು ಕಲಾಕೃತಿಯಾಗಬೇಕಾದರೆ,

---

೯೬. ಪುರಾತತ್ವಕ್ಕೆ ಆಧುನಿಕತೆಯ ಕಸಿ, ೨೩,ಪ್ರಜಾವಾಣಿ, ಕರ್ನಾಟಕ ದರ್ಶನ, ಫೆಬ್ರವರಿ, ೨೦೦೨

೯೭. ನೆರಳಿನೊಂದಿಗೆ ಝಳದ ಜಗಳ, ಅದೇ

ಅಲ್ಲಿ ವ್ಯಕ್ತಿಗಳ ಮುಖಕ್ಕೆ ಪ್ರಾಶಸ್ತ್ಯ ಇರಬಾರದು. ಬಹಳಷ್ಟು ಛಾಯಾಗ್ರಾಹಕರು ತಮ್ಮ ಚಿತ್ರಗಳಲ್ಲಿನ ವ್ಯಕ್ತಿಗಳ ಮುಖ ಚೆನ್ನಾಗಿ ಕಾಣುವಂತಾದರೆ ಅದೇ ಸಾಧನೆ ಎಂದುಕೊಳ್ಳುತ್ತಾರೆ ಎನ್ನುವುದನ್ನು ಕೃ.ಸೆ.ಯವರು ಈ ಲೇಖನದಲ್ಲಿ ವಿಶ್ಲೇಷಿಸಿದ್ದಾರೆ.

**೯೯. ತೀರ್ಪುಗಾರರ ಒಳಮನಸ್ಸುಗಳ ಅನಾವರಣ**[೯೮]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೩-೦೨-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕರ್ನಾಟಕದ ಲಲಿತಕಲಾ ಆಕಾಡೆಮಿಯು ಏರ್ಪಡಿಸಿದ ವಾರ್ಷಿಕ ಸ್ಪರ್ಧೆ ಮತ್ತು ಕಲಾಪ್ರದರ್ಶನದಲ್ಲಿ ಪಾಲ್ಗೊಂಡ ವಿವಿಧ ಕಲಾವಿದರ ಕಲಾಕೃತಿಗಳ ವಿಶೇಷತೆಗಳನ್ನು ಹಾಗೂ ತಿರ್ಪುಗಾರರ ವಿವಿಧ ಮನಸ್ಥಿತಿಗಳ ಕುರಿತು ಕೃ.ಸೆ.ಯವರು ವಿಶ್ಲೇಷಿಸಿದ್ದಾರೆ.

ಪ್ರಸ್ತುತ ಪ್ರದರ್ಶನದಲ್ಲಿ ಎಂದಿನಂತೆ ವರ್ಣ ಚಿತ್ರಗಳೇ ವಿಜೃಂಭಿಸಿವೆಯಾದರೂ ಕೆಲವು ಕೃತಿಗಳನ್ನು ಹೊರತುಪಡಿಸಿದರೆ ಹೆಚ್ಚಿನವು ಪರವಾಗಿಲ್ಲ ಎನ್ನುವಂತಿವೆ. ಎಂದಿನಂತೆ ಈ ಬಾರಿಯೂ ನಮ್ಮ ಪ್ರಜ್ಞೆಯನ್ನೇ ಅಲ್ಲಾಡಿಸುವಂತಹ ಯಾವೊಂದು ಕೃತಿಯೂ ಇಲ್ಲಿಲ್ಲ. ಇದ್ದುದರಲ್ಲಿ ಗದಗದ ಬಸವರಾಜ ಕುಟ್ನಿ ಅವರ ಶೀರ್ಷಿಕೆ ರಹಿತ ಕೃತಿಯೊಂದು ಆ ಸಾಮಾರ್ಥ್ಯ ಹೊಂದಿದೆ, ಉಳಿದಂತೆ ಗುಲ್ಬರ್ಗದ ಭೋಜರಾಜ ಬಡಿಗೇರ, ಗೌತಮ್ ಅಂದಾನಿ ರಹಮಾನ್ ಪಟೇಲ್, ಎ.ಎಸ್, ವಿಶ್ವನಾಥ್, ರವೀಂದ್ರ ಕಮ್ಮಾರ್, ಮೈಸೂರಿನ ಬಿಂದೂರಾಯಿ ಬಿರದಾರ, ಕೆ.ವೈ.ಕೈಲಾಸ್, ವಿಠಲರೆಡ್ಡಿ ಚುಳಕಿ ಗದಗದ ಸದಾನಂದ ಹೆಗಡೆ, ಮಂಗಳೂರಿನ ದೇವಿ ಪ್ರಸಾದ್, ನಮಿತಾ ರಾಘವ್, ಪ್ರೀತಮ್ ಕಿಶೋರ್, ಸಿಧೀರ್ ಬಾಳೆಪುಣೆ ಕೃಷ್ಣ ಕೆದಿಲಾಯ, ಬೆಂಗಳೂರಿನ ವಿ.ಜಿ.ವೇಣು ಪಿ.ಬಿ.ಕುರ್ಚಗಿ, ಎಂವಿ. ಕಂಬಾರ, ಸುರೇಶ್ ಟಿ.ಡಿ.ಆರ್, ಸುಬ್ರಹ್ಮಣ್ಯಂ ವಿಷ್ಣುಕುಮಾರ್, ತುಮಕೂರಿನ ಬ್ಯುಲಾ ನರಸಿಂಹಮೂರ್ತಿ ಹುನಗುಂದದ ಎಸ್.ಎಸ್. ಗದ್ದಿ ಧಾರವಾಡದ ಕೀರ್ತಿಕುಮಾರ ಹೆಗಡೆ, ಕೊಪ್ಪಳದ ರಾಜು ತೇರದಾಳ, ಸಿಂಧನೂರಿನ ಶಿವಾನಂದ ಬಸವಂತಪ್ಪ, ಹಾಸನದ ಬಿ.ಆರ್. ರೂಪಾ ಅವರ ಕೃತಿಗಳು ನಿಜಕ್ಕೂ ಗಮನಾರ್ಹವಾಗಿವೆ. ಆದರೆ ತುಂಬ ಸಾಮಾನ್ಯ ನೆಲೆಯ ಬಿ.ಲಿಂಗರಾಜು ಅವರ ಪೆನ್ಸಿಲ್ ಮಾಧ್ಯಮದ ಕೃತಿ ಹಾಗು ದೇವರಾಜು ಅವರ ಕೃತಿಯು ಪ್ರಶಸ್ತಿ ಪಡೆದಿರುವುದು ನಿಜಕ್ಕೂ ಆಶ್ಚರ್ಯವೆನಿಸುತ್ತದೆ. ಕುತೂಹಲದ ಒಂದು ಅಂಶವೆಂದರೆ ಇಲ್ಲಿ ತಿರ್ಪುಗಾರರು ನಿರ್ಧಿಷ್ಟ ಮಾನದಂಡಗಳನ್ನು ಅನುಸರಿಸದೇ ಇರುವುದು ತೀರಾ ದುರಾದೃಷ್ಟಕರೆಂಬುದನ್ನು ಇಲ್ಲಿ ಲೇಖಕರು ಪ್ರಸ್ತಾಪಿಸಿದ್ದಾರೆ.

---

೯೮. ತೀರ್ಪುಗಾರರ ಒಳಮನಸ್ಸುಗಳ ಅನಾವರಣ, ಪ್ರಜಾವಾಣಿ, ಕರ್ನಾಟಕ ದರ್ಶನ, ೨೩, ಫೆಬ್ರವರಿ, ೨೦೦೨

## ೧೦೦. ಮುದ ನೀಡದ ಕಾಮದ ಮದಕ್ಕೆ ಹೊಸ ಆಯಾಮ[೯೯]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ದಿ: ೯–೦೩–೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕಾಮ ಸಂಬಂಧಿತ ವಸ್ತುವನ್ನು ಆಧರಿಸಿ ಕಲಾಕೃತಿಗಳನ್ನು ರಚಿಸಿದ ಕೆ.ಟಿ.ಶಿವಪ್ರಸಾದ್ ಅವರ ಕುರಿತು ಕೃ.ಸೆ.ಯವರು ವಿಶೇಷವಾಗಿ ಚರ್ಚಿಸಿದ್ದಾರೆ. ಬೆಂಗಳೂರಿನ ಬ್ರಿಗೇಡ್ ರಸ್ತೆಯಲ್ಲಿರುವ ಯೂನಿವರ್ಸಲ್ ಆರ್ಟ್ ಗ್ಯಾಲರಿಯಲ್ಲಿ ಇವರ ಕಲಾಕೃತಿಗಳ ಪ್ರದರ್ಶನದಲ್ಲಿ ಕೆಲ ಗಮನಾರ್ಹ ಕಲಾಕೃತಿಗಳಿವೆ.

ದಲಿತ ಹಾಗೂ ದಕ್ಷ ಚಳವಳಿಗಳ ಜೊತೆಗೆ ತಮ್ಮನ್ನು ಗಾಢವಾಗಿ ಗುರುತಿಸಿಕೊಂಡ ಶಿವಪ್ರಸಾದ್ ಅವರ ಕೃತಿಗಳಲ್ಲಿ ಈವರೆಗೆ ಶ್ರೀಸಾಮಾನ್ಯನೇ ಕೇಂದ್ರ ಬಿಂದುವಾಗಿದ್ದಾನೆ. ಇವರ ಕೃತಿಗಳಲ್ಲಿ ಮೇಲ್ನೋಟಕ್ಕೆ ಕಾಣುವ ಒಂದು ಅಂಶವೆಂದರೆ ರಿಯಲಿಸ್ಟಿಕ್ ರೂಪಗಳು ಹಾಗೂ ಪ್ರಾಚೀನ ತೊಗಲು ಬೊಂಬೆಗಳ ಬೆಸುಗೆ. ವರ್ತಮಾನಕ್ಕೆ ಪ್ರಾಚೀನತೆಯನ್ನು ಹೊಲಿದಂತಿರುವ ಈ ರೂಪಗಳಲ್ಲಿ ವಾಸ್ತವಕ್ಕೆ ಅವಾಸ್ತವವನ್ನು ಸೇರಿಸಿದಂತಿದೆ. ನಮ್ಮ ಪುರಾತನ ತೊಗಲು ಬೊಂಬೆಗಳಲ್ಲೂ ಕಾಮ ಸಂಬಂಧೀ ರೂಪಗಳು ವಿಪುಲವಾಗಿರುವುದು ನಿಜಕ್ಕೂ ಕುತೂಹಲಕರ. ಕಾಗದದ ಮೇಲೆ ಅಕ್ರಾಲಿಕ್ ಮಾಧ್ಯಮದಲ್ಲಿ ರಚಿತವಾದ ಈ ಕೃತಿಗಳಲ್ಲಿ ತ್ರಿಮಾನದ ರಿಯಲಿಸ್ಟಿಕ್ ಆಧುನಿಕ ವ್ಯಕ್ತಿಗಳ ಮೇಲೆ ತೊಗಲು ಬೊಂಬೆಗಳ ರೂಪಗಳು ಮೇಲಿಟ್ಟ ಪದರದಂತೆ ಸೇರಿಸಲ್ಪಟ್ಟಿವೆ.

ಈ ಕಲಾವಿದರು ಹಿನ್ನೆಲೆಯ ರಿಯಲಿಸ್ಟಿಕ್ ರೂಪಕ್ಕೆ ಅಕ್ರಾಲಿಕ್ ವರ್ಣಗಳನ್ನು ಜಲವರ್ಣದಂತೆ ನಿರ್ವಹಿಸಿದರೆ, ತೊಗಲು ಬೊಂಬೆಗಳಿಗೆ ಟೆಂಪರಾದಂತೆ ನಿರ್ವಹಿಸುತ್ತಾರೆ. ಹೀಗೆ ವಿವಿಧ ನೆಲೆಗಳಲ್ಲಿ ರೂಪೈಕ್ಯ, ಕಾಲೈಕ್ಯಗಳನ್ನು ಕಾಣಬಯಸುವ ಇವುಗಳನ್ನು ಕಲ್ಪಿಸಿದ ಪರಿಯು ನಿಜಕ್ಕೂ ಗಮನಾರ್ಹವಾದುದು. ಆದರೆ ರಿಯಲಿಸ್ಟಿಕ್ ರೂಪಗಳ ಮೇಲೆ ತೊಗಲು ಬೊಂಬೆಯ ರೂಪಗಳನ್ನು ಕೃತಕವಾಗಿ ಕತ್ತರಿಸಿ ಅಂಟಿಸಿದಂತೆ ಕಂಡುಬರುವುದರಿಂದಾಗಿ ಚಿತ್ರ ಯೋಜನೆಯ ದೃಷ್ಟಿಯಿಂದ ಈ ಬೆಸುಗೆ ಇನ್ನೂ ಯಶಸ್ವಿಯಾಗಿಲ್ಲವೆಂದೇ ನನ್ನ ಭಾವನೆ. ಈ ಕೃತಕ ಬೆಸುಗೆಯನ್ನು ಸ್ವಾಭಾವಿಕವೆನ್ನುವಂತೆ ಮಾರ್ಪಡಿಸುವಲ್ಲಿಯೇ ಜಾಣತನವಿದೆ. ಆದರೂ ಹೊಸ ರೂಪವನ್ನು ಕಂಡುಕೊಂಡ ಕಾರಣದಿಂದಾಗಿ ಈ ಪ್ರದರ್ಶನವು ನಿಜಕ್ಕೂ ಮಹತ್ವದ್ದೆನಿಸುತ್ತದೆ ಎಂಬುದನ್ನು ಲೇಖಕರು ಗುರುತಿಸುವ ಪ್ರಯತ್ನಮಾಡಿದ್ದಾರೆ.

---

೯೯. ಮುದ ನೀಡದ ಕಾಮದ ಮದಕ್ಕೆ ಹೊಸ ಆಯಾಮ, ಪ್ರಜಾವಾಣಿ, ಕರ್ನಾಟಕದರ್ಶನ, ೯, ಫೆಬ್ರವರಿ, ೨೦೦೨

**೧೦೧. ಶಿಲೆಗೊಂಡ ಉಪಕರಣಗಳು**[೧೦೦]

ಬರೋಡಾದ ಹೆಸರಾಂತ ಶಿಲ್ಪಿ ನಾಣ್‌ಜೀ ಪಟೇಲ್ ಅವರ ಶಿಲ್ಪಗಳ ಪ್ರದರ್ಶನವು ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ನಡೆಯಿತು. ಈ ಹಿಂದೆ ಬೀಜಗಳು, ಹಕ್ಕಿಗಳು ಇತ್ಯಾದಿಗಳನ್ನು ತಮ್ಮ ಮುಖ್ಯ ವಸ್ತುವಾಗಿಸಿಕೊಂಡ ಇವರು ಇದೀಗ ಸಾಮಾನ್ಯ ಬೇಸಾಯದ ಉಪಕರಣಗಳನ್ನು ಶೈಲೀಕೃತ ರೂಪದಲ್ಲಿ ಮುಂದಿಟ್ಟಿದ್ದಾರೆ. ಒಂದೇ ಶಿಲೆಯಲ್ಲಿ ವಿವಿಧ ಬಗೆಯ ಹೊಳಪು, ಮೈವಳಿಕೆಗಳನ್ನು ಬಳಸುವ ಹಾಗೂ ಶೈಲಿಯಲ್ಲಿ ಅವರ ಹಿಂದಿನ ಕ್ರಮವೇ ಇಲ್ಲಿಯೂ ಮುಂದುವರೆದಿದೆ. ಶಿಲೆಯೊಂದಿಗೆ ಲೋಹವನ್ನು, ಮರವನ್ನು ಬೆಸೆಯುವ ವಿಧಾನವು ಹೊಸದಾಗಿ ಸೇರಿಕೊಂಡಿದೆ. ಎಂದಿನ ವ್ಯವಸಾಯದ ಉಪಕರಣಗಳನ್ನು ಜೈವಿಕ ಆಕೃತಿಗಳಂತೆ ಶೈಲೀಕೃತಗೊಳಿಸಿ ಶಿಲೆಯಲ್ಲಿ ಅರಳಿಸಿದ ಕ್ರಮವು ಕುತೂಹಲಕರ. ಜೊತೆಗೆ ಉಪಕರಣವೊಂದಕ್ಕೆ ಸಹಜವಾದ 'ಉಪಯೋಗಿತನ'ವನ್ನು ನಿರಾಕರಿಸುವ ಮೂಲಕ ಅದನ್ನು ಕಲೆಯಾಗಿಸುವ ಕ್ರಮವು ಖುಷಿಕೊಡುತ್ತದೆ ಎಂಬ ಕುತೂಹಲಕರ ಅಂಶವನ್ನು ಕೃ.ಸೆ.ಯವರು ಈ ಲೇಖನದ ಮೂಲಕ ವಿವರಿಸಿದ್ದಾರೆ.

**೧೦೨. ಹಗುರ ಭಾವನೆಗಳ ಹೊರುವ ಜಲವರ್ಣಕ್ಕೆ ಭಾರದ ಆವರಣ**[೧೦೧]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೬-೦೩-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕೋಲ್ಕತ್ತ ಹಾಗು ಮುಂಬಯಿಗಳ ಕೆಲವು ಕಲಾವಿದರನ್ನು ಹೊರತುಪಡಿಸಿದರೆ ಗಂಭೀರ ಕಲಾಭಿವ್ಯಕ್ತಿಯಲ್ಲಿ ಜಲವರ್ಣವನ್ನೇ ತಮ್ಮ ಪ್ರಾತಿನಿಧಿಕ ಮಾಧ್ಯಮವಾಗಿಸಿಕೊಂಡವರು ಅತಿ ವಿರಳ. ಅಂತೆಯೇ ಜಲವರ್ಣಕ್ಕೆ ಪ್ರಾಮುಖ್ಯ ದೊರಕಿಸುವ ದೃಷ್ಟಿಯಿಂದ ಬೆಂಗಳೂರಿನ ಗ್ಯಾಲರಿ 'ಲಕ್ಷಣ'ವು 'ಕಲರ್ ಆಫ್ ದಿ ವಾಟರ್' ಶೀರ್ಷಿಕೆಯಲ್ಲಿ ಜಲವರ್ಣ ಕೃತಿಗಳ ಮಹತ್ವದ ಪ್ರದರ್ಶನದಲ್ಲಿ ಅನಾವರಣವಾದ ಕಲಾಕೃತಿಗಳ ಮಹತ್ವ ಕುರಿತು ಕೃ.ಸೆ.ವಿಶ್ಲೇಷಿಸಿದ್ದಾರೆ.

ಕಲಾವಿದ ಎಂ,ಎಸ್ ಮೂರ್ತಿಯವರು ಕ್ಯುರೇಟ್ ಮಾಡಿದ ಈ ಪ್ರದರ್ಶನದಲ್ಲಿ ದಿವಂಗತ ರುಮಾಲೆ ಚನ್ನಬಸವಯ್ಯನವರಿಂದ ಹಿಡಿದು ಇತ್ತೀಚಿನ ವಿಷ್ಣುಕುಮಾರ್‌ವರೆಗೆ ವಿವಿಧ ಧೋರಣೆಗಳ, ಒಲವು ನಿಲವುಗಳ ಇಪ್ಪತ್ತು ಕಲಾವಿದರು ಭಾಗವಹಿಸಿದ್ದರು. ಇಲ್ಲಿ ಕೇವಲ ನಿಸರ್ಗ ದೃಶ್ಯ ಭಾವಚಿತ್ರಗಳಿಗಷ್ಟೇ ಸೀಮಿತಗೊಳ್ಳುತ್ತಿರುವ ಜಲವರ್ಣವನ್ನು ಗಂಭೀರ ಕಲಾಭಿವ್ಯಕ್ತಿಗೆ, ಭಾರದ ಭಾವಗಳಿಗೆ ಅಷ್ಟಾಗಿ ಪರಿಗಣಿಸಲಾಗುತ್ತಿಲ್ಲ. ಇಲ್ಲಿರುವ ಇಪ್ಪತ್ತು ಕಲಾವಿದರಲ್ಲಿ ಕೆಲವರು ಮಾತ್ರವೇ ನಿರಂತರವಾಗಿ ಜಲವರ್ಣವನ್ನು ತಮ್ಮ ಪ್ರಾತಿನಿಧಿಕ ಮಾಧ್ಯಮವಾಗಿಸಿಕೊಂಡರು. ಕೆಲವರಂತೂ

---

೧೦೦. ಶಿಲೆಗೊಂಡ ಉಪಕರಣಗಳು, ಅದೇ

೧೦೧. ಹಗುರ ಭಾವನೆಗಳ ಹೊರುವ ಜಲವರ್ಣಕ್ಕೆ ಭಾರದ ಆವರಣ, ಪ್ರಜಾವಾಣಿ, ಕರ್ನಾಟಕದರ್ಶನ, ೧೬ ಮಾರ್ಚ್ ೨೦೦೨

ಹಲವು ವರ್ಷಗಳ ನಂತರ ಮತ್ತೆ ಮುಟ್ಟಿದವರು, ಇಡೀ ಪ್ರದರ್ಶನ ನೋಡಿದಾಗ ಏರಿಳಿತಗಳಿಂದಾಗಿ ಇದರ ಅನುಭವ ಆಗದಿರದು.

ಹಿರಿಯ ಕಲಾವಿದರಿಂದ ಪ್ರದರ್ಶನಗೊಂಡ ಕಲಾಕೃತಿಗಳು ಮನಸೂರೆಗೊಳ್ಳುತ್ತವೆ. ಅಲ್ಲದೆ ಸ್ವತಃ ನಿರೂಪಣಾ ಚಿತ್ರಕಾರಕರಾದ ಚಂದ್ರನಾಥ ಆಚಾರ್ಯ ಹಾಗು ಪ,ಸ, ಕುಮಾರ್ ಅವರ ಕೃತಿಗಳು ನಿರೂಪಣಾ ಚಿತ್ರಗಳ ಸೆಳಕುಗಳೊಂದಿಗೆ ಮುಂದೆ ಸಂಕೀರ್ಣತೆಯೆಡೆಗೆ ಸಾಗುತ್ತದೆ. ಲೀಲಾ ತ್ಯಾಗಿಯವರದ್ದೂ ಕೂಡಾ ಇದೇ ನೆಲೆ. ಸಂಕೀರ್ಣತೆಯ ಮೂಲಕ ಆಧುನಿಕೋತ್ತರ ಒಲವುಗಳನ್ನು ಬಿಂಬಿಸುವ ವಿಷ್ಣುಕುಮಾರ್ ಅವರಿಗೆ ಈ ಹಳೆಯ ಮಾಧ್ಯಮ ಇನ್ನೂ ಒಗ್ಗಿಲ್ಲ ಎನ್ನುವುದು ಇವುಗಳ ಮೂಲಕ ಅರಿವಾಗುತ್ತದೆ. ಹೀಗೆ ಈ ಮಹತ್ವಾಕಾಂಕ್ಷೆಯ ಪ್ರದರ್ಶನದಲ್ಲಿ ಒಂದೆರಡು ಕೃತಿಗಳನ್ನು ಹೊರತು ಪಡಿಸಿದರೆ ಹೆಚ್ಚಿನವು ನಮ್ಮ ನಿರೀಕ್ಷೆಗಳಿಗೆ ತಕ್ಕ ಹಾಗೆಯೇ ಇವೆ. ಒಟ್ಟಾರೆಯಾಗಿ ನಮ್ಮ ನಡುವೆ ಸಡಿಲಗೊಳ್ಳುತ್ತಿರುವ ಈ ಮಾಧ್ಯಮವನ್ನು ಇಂದಿನ ಕಲಾವಿದರು ಆಪ್ತವಾಗಿಸಿಕೊಳ್ಳುವ ದಿಸೆಯಲ್ಲಿ ಇದೊಂದು ಮಾರ್ಗದರ್ಶಿ ಪ್ರದರ್ಶನವೆಂದರೆ ತಪ್ಪಲ್ಲ ಎಂಬುದನ್ನು ಲೇಖಕರು ದಾಖಲಿಸಿದ್ದಾರೆ.

**೧೦೩. ಪುರಾತನ ರೂಪಕ್ಕೆ ಈಗಿನ ಹಿನ್ನೆಲೆ**[೧೦೨]

ಉತ್ತರ ಕರ್ನಾಟಕದ ಕೆ,ಎಸ್, ನಾಗೂರೆಯವರ ಕಲಾಕೃತಿಗಳ ಪ್ರದರ್ಶನವು ಬೆಂಗಳೂರಿನ ವಿಂಡ್ಸರ್ ಮ್ಯಾನರ್ ಹೋಟೆಲ್‌ನಲ್ಲಿ ನಡೆಯಿತು. ವೆಸ್ಟ್ ಮಿನಿಸ್ಟರ್‌ಗ್ಯಾಲರಿಯಲ್ಲಿ 'ಟೈಮ್ ಅಂಡ್ ಸ್ಪೇಸ್' ಗ್ಯಾಲರಿ ಏರ್ಪಡಿಸಿದ ಈ ಪ್ರದರ್ಶನದಲ್ಲಿ, ಪುರಾತನ ಚಿಕಣಿ ಚಿತ್ರಗಳನ್ನು ವರ್ತಮಾನದ ಅಮೂರ್ತ ಹಿನ್ನೆಲೆಯೊಂದಿಗೆ ಬೆಸೆದಿರುವುದು ವೈಶಿಷ್ಟ್ಯ. ಉತ್ತರ ಕರ್ನಾಟಕದ ಬಹುತೇಕ ಚಿಕಣಿ ಚಿತ್ರ ಕಲಾವಿದರಂತೆ ನಾಗೂರೆಯವರು ವಿಜಯನಗರೋತ್ತರ ಚಿಕಣಿ ಚಿತ್ರಶೈಲಿಯನ್ನು ಅನುಸರಿಸಿದ್ದಾರೆ. ಇಲ್ಲಿ ಆ ಪುರಾತನ ರೂಪಗಳನ್ನು ಅಲ್ಪ-ಸ್ವಲ್ಪ ಬದಲಾವಣೆಗಳೊಂದಿಗೆ ಇಂದಿಗೆ ಒಗ್ಗುವಂತಹ ಅಮೂರ್ತ ಹಿನ್ನೆಲೆಯಲ್ಲಿ ಇಟ್ಟಿದ್ದಾರೆ. ಹೀಗೆ ಎಂದಿನ ಹಿನ್ನೆಲೆಯಿಂದ ಹೊರತಾದ ಹೊಸತಾದ ಆವರಣ ಇಲ್ಲಿರುವುದರಿಂದ ಇವುಗಳಲ್ಲಿ ಹೊಸ ಪ್ರಭಾವಳಿ ನಿರ್ಮಾಣವಾಗಿದೆ.

ಸಾಂಪ್ರದಾಯಿಕ ರೂಪಗಳನ್ನು ವರ್ತಮಾನಕ್ಕೆ ಒಗ್ಗುವಂತೆ ಪರಿವರ್ತಿಸಬೇಕೆಂಬ ಕೂಗು ದಟ್ಟಗೊಳ್ಳುತ್ತಿರುವ ಈ ಸಂದರ್ಭದಲ್ಲಿ ನಾಗೂರೆಯವರ ಯತ್ನವು ಸಫಲತೆಯ ಹಾದಿಯಲ್ಲಿದೆ ಇವರ ಕೃತಿಗಳಲ್ಲಿನ ಟ್ರಂಪ್ ಕಾರ್ಡ್ ಎಂದರೆ ಅವರ ಹಸ್ತ ಕೌಶಲ್ಯ ಹಾಗು ನೈಪುಣ್ಯಗಳೇ ಆಗಿವೆ. ಈ ಅಂಶಗಳ ಪ್ರಖರತೆಯಲ್ಲಿ ಪ್ರಖರ ವರ್ಣಗಳನ್ನು ನಿರಾಕರಿಸಿ ತಂಪಾದ ತಟಸ್ಥ ವರ್ಣಗಳಿಗೆ ಆದ್ಯತೆ ನೀಡಿರುವುದರಿಂದ ಕೃತಿಗಳ ಕಲಾತ್ಮಕ ಗಾಂಭೀರ್ಯ ಹೆಚ್ಚಿದೆ. ಹಾಗಿದ್ದರೂ

---

೧೦೨. ಪುರಾತನ ರೂಪಕ್ಕೆ ಈಗಿನ ಹಿನ್ನೆಲೆ, ಪ್ರಜಾವಾಣಿ, ಕರ್ನಾಟಕ ದರ್ಶನ, ೧೬ ಮಾರ್ಚ್ ೨೦೦೨

ಅಲಂಕರಣದ ರಮ್ಯ ಭಾವನೆಗಳಿಂದ ಇವುಗಳಿಗೆ ಬಿಡುಗಡೆ ದೊರೆತಿಲ್ಲ. ಇವರ ಎಕ್ಸಪೆಶನಿಸ್ಟ ನೆಲೆಯ ಕೆಲವು ಬಗೆಯ ಗಣಪತಿಗಳು ಈಗಾಗಲೇ ನಮಗೆ ಪರಿಚಿತವಾದವುಗಳೇ, ಒಟ್ಟಾರೆಯಾಗಿ ನಾಗೂರೆಯವರ ಈ ಕೃತಿಗಳು ಅಹ್ಲಾದಕರ ಅನುಭವವನ್ನು ನೀಡುತ್ತದೆ ಎಂಬುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ಪ್ರಸ್ತಾಪಿಸಿದ್ದಾರೆ.

### ೧೦೪. ಪ್ರತಿಭಾನ್ವಿತರನ್ನೂ ಜಗ್ಗಿ ಹಿಂದಕ್ಕೆಳೆದ ತಂತ್ರಜ್ಞಾನ[೧೦೩]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೬-೦೩-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಸಾಕ್ಷಿ ಗ್ಯಾಲರಿಯಲ್ಲಿ ನಡೆದ ಬರೋಡಾದ ೨೨ ಕಲಾವಿದರ ಡಿಜಿಟಲ್ ಕಲಾಕೃತಿಗಳ ಪ್ರದರ್ಶನದ ಕುರಿತು ಕೃ.ಸೆ.ಯವರು ವಿಶ್ಲೇಷಿಸಿದ್ದಾರೆ.

ಕಾಗದದ ಮೇಲೆ ಇಂಕ್‌ಜೆಟ್ ಮುದ್ರಣಗಳ ಮೂಲಕ ಮುದ್ರಿಸಲ್ಪಟ್ಟ ಈ ಕೃತಿಗಳನ್ನು ರೇಖಾ ರಾದ್ವಿತಿಯ, ಸುರೇಂದ್ರ ಪಟೇಲ್, ನವಜೋತ್ ಈ ಮುಂತಾದ ೨೨ ಕಲಾವಿದರು ಪ್ರತ್ಯೇಕವಾಗಿ ರಚಿಸಿದ್ದಾರೆ. ಈ ಹೊಸ ತಂತ್ರಜ್ಞಾನವನ್ನು ತಾವು ಬಯಸಿದಂತೆ ಮಣಿಸುವುದಕ್ಕಿಂತಲೂ ಅದು ಹೇಳದಂತೆ, ಅದು ಮುನ್ನಡೆಸಿದಂತೆ ಸಾಗುವ ಸಂದರ್ಭವೂ ಬರುತ್ತದೆ. ಈ ಹೊಸ ತಂತ್ರಜ್ಞಾನದಲ್ಲಿ ಅನಂತ ಸಾಧ್ಯತೆಗಳಿರುವಂತೆಯೇ ಹಲವಾರು ಮಿತಿಗಳು ಇವೆ. ಈ ಮಿತಿಗಳನ್ನು ಪಾಸಿಟಿವ್ ಆಗಿ ಬಳಸಿಕೊಳ್ಳುವಲ್ಲಿಯೇ ಕಲಾವಿದರ ಜಾಣ್ಮೆ ಅಡಗಿರುತ್ತದೆ. ಆದರೆ ಬರೋಡಾದ ಈ ಕಲಾವಿದರ ಕೃತಿಗಳನ್ನು ಪರೀಶೀಲಿಸಿದಾಗ ತಮ್ಮ ಎಂದಿನ ಕೃತಿಗಳಿಗಿಂತಲೂ ಒಂದು ಹೆಜ್ಜೆ ಮುಂದಿಟ್ಟವರು ನಮಗೆ ಕಾಣಿಸುವುದಿಲ್ಲ. ಇದ್ದುದರಲ್ಲಿ ದಶರಥ ಪಟೇಲ್, ರಾಹುಲ್ ಗಜ್ಜರ್ ಅವರ ಕೃತಿಗಳು ಉತ್ತಮ ಪರಿಣಾಮ ಬೀರುವಂತಿವೆ.

ಉಳಿದಂತೆ ಹೆಚ್ಚಿನವರ ಕೃತಿಗಳು ಹೊಸ ಅನುಭವವನ್ನು ನೀಡುವಲ್ಲಿ ಅಷ್ಟಾಗಿ ಯಶಸ್ವಿಯಾಗಿಲ್ಲ. ಇಷ್ಟಾಗಿಯೂ ಸಾಮಾನ್ಯ ವರ್ಣ ಚಿತ್ರಕಲೆಯಲ್ಲಿ ಮೈವಳಿಕೆಗಳು, ಇಂಪಾಸ್ಟೊ, ಕುಂಚದ ಬೀಸುಗಳು, ವೇಗ, ಪ್ಯಾಟರ್ನ್‌ಗಳು ಮುಖ್ಯವಾಗಿ ಕಲಾ ಸೂಕ್ಷ್ಮಗಳನ್ನು ಮರೆಸುತ್ತವೆ ಈ ಡಿಜಿಟಲ್ ಮಾಧ್ಯಮದಲ್ಲಿ ಅವುಗಳೆಲ್ಲ ಕಳೆದು ಹೋಗಿ ಕೇವಲ ಸಾಮಾನ್ಯ ಇಮೇಜ್ ಮಾತ್ರವೇ ಬಂದಿರುವುದರಿಂದ ಇವು ಭಿನ್ನ ಅನುಭವ ನೀಡುವುದಿಲ್ಲ, (ಎಚ್ಚಿಂಗ್,ಲಿಥೊ ಮುದ್ರಣ ಗಳಲ್ಲಿ ಕಂಡುಬರುವ ಕಲಾ ಸೂಕ್ಷ್ಮಗಳೂ ಇಲ್ಲಿ ಹಿಡಿಯಲಾಗಿಲ್ಲ) ಹೀಗೆ ಕೆಲವು ಕೃತಿಗಳನ್ನು ಹೊರತುಪಡಿಸಿದರೆ, ಬಹುತೇಕ ನಮ್ಮ ಹೊಸ ನಿರೀಕ್ಷೆಗಳಿಗೆ ತಣ್ಣೀರೆರಚುವಂತಿವೆ ಎನ್ನುವ ಅಭಿಪ್ರಾಯ ಲೇಖಕರದು.

---

೧೦೩. ಪ್ರತಿಭಾನ್ವಿತರನ್ನೂ ಜಗ್ಗಿ ಹಿಂದಕ್ಕೆಳೆದ ತಂತ್ರಜ್ಞಾನ, ಪ್ರಜಾವಾಣಿ, ಕರ್ನಾಟಕ ದರ್ಶನ, ೧೬ ಮಾರ್ಚ್ ೨೦೦೨

### ೧೦೫. ಸಿಹಿ ಮತ್ತು ಅಲಂಕರಣಗಳ ಮುಸುಕಿನಲ್ಲಿ[೧೦೪]

ಶಾಂತಿನಿಕೇತನದಲ್ಲಿ ಶಿಕ್ಷಣ ಪಡೆದು ಇದೀಗ ಹೈದರಾಬಾದ್‌ನಲ್ಲಿರುವ ಶಿಶಿರ್ ಸಹನಾ ಅವರ ವಿಶಿಷ್ಟ ಗಾಜಿನ ಶಿಲ್ಪಗಳು ಹಾಗೂ ವರ್ಣಚಿತ್ರಗಳ ಪ್ರದರ್ಶನವು ಬೆಂಗಳೂರಿನ ಸುಮುಖಿ ಗ್ಯಾಲರಿಯಲ್ಲಿ 'ಫ್ರೋರ್ಝನ್ ಟೈಮ್' ಶೀರ್ಷಿಕೆಯ ಹೆಸರಿನಲ್ಲಿ ನಡೆಯಿತು. ಈ ಪ್ರದರ್ಶನದಲ್ಲಿ ಗಾಜಿನ ವಿವಿಧ ತಂತ್ರಗಳ ಮೂಲಕ ರಚಿಸಿದ ಶಿಲ್ಪಗಳು ಮೊದಲ ನೋಟಕ್ಕೆ ಕಣ್ಣಿಗೆ ಹಬ್ಬವನ್ನುಂಟು ಮಾಡುವಂತಿವೆ. ಶಿಶಿರ್ ತಮ್ಮ ಕೃತಿಗಳಲ್ಲಿ ವರ್ತಮಾನದ ಜೀವನವನ್ನು ಪಳೆಯುಳಿಕೆಗಳಂತಾಗಿಸಿ. ಹೆಪ್ಪುಗಟ್ಟಿಸುತ್ತಾರೆ. ಹೀಗೆ ಹೆಪ್ಪುಗಟ್ಟಿಸುವಾಗ ಜನಪದೀಯ ಸೆಳಕುಗಳನ್ನು, ಶೈಲಿಗಳನ್ನು ಅಪ್ಪಿಕೊಳ್ಳುತ್ತಾರೆ. ಅವರ ಈ ಶೈಲಿಯು ಅಜಿತ್ ದುಬೆಯವರ ಶೈಲಿಯ ನೆನಪು ತರುವಂತಿದೆ. ಇವರ ಕೆಲವು ದೃಶ್ಯಗಳು ಗಾಜಿನ ಮುದ್ದೆಯೊಳಗೆ ಬಂಧಿಸುವಂತಿದ್ದು ಮತ್ತೆ ಕೆಲವು ಗಾಜಿನ ಮುದ್ದೆಯ ಮೇಲೆ ಕೆತ್ತಿದ ರಿಲೀಫ್‌ಗಳಂತಿವೆ. ಹೀಗಾಗಿ ಇವುಗಳನ್ನು ಪೂರ್ಣ ಪ್ರಮಾಣದ ತ್ರಿಮಾನದ ಶಿಲ್ಪಗಳೆಂದು ಕರೆಯುವುದು ಕಷ್ಟವೇ.

ಮೊದಲ ನೋಟಕ್ಕೆ ತುಂಬ ವಿಶಿಷ್ಟವೆನಿಸುವ ಈ ಶಿಲ್ಪಗಳು ಆ ಕುತೂಹಲವನ್ನು ಬಹಳ ಕಾಲ ಹಿಡಿದಿಡುವುದಿಲ್ಲ. ಇವು ತಮ್ಮೊಳಗೆ ಬಚ್ಚಿಟ್ಟುಕೊಂಡಿರುವ ಅತಿಯಾದ ಸಿಹಿತನವೇ ಇದಕ್ಕೆ ಕಾರಣ. ವಿದ್ಯುತ್ ಬೆಳಕು, ಗಾಜಿನ ನಿರ್ವಹಣೆ, ಸುಕುಮಾರ ಬಣ್ಣಗಳು ಇವುಗಳೆಲ್ಲ ಇವುಗಳನ್ನು ಅಲಂಕರಣದೆಡೆಗೆ ಕೊಂಡೊಯ್ಯುತ್ತವೆ. ಇಲ್ಲಿ ಶೈಲೀಕರಣದ. ಹೊಸತನದ ಉತ್ತಮ ಪ್ರಯತ್ನವಿದೆಯಾದರೂ ಇತರ ಹಲವಾರು ಅಂಶಗಳು ಅದಕ್ಕೆ ಗಾಂಭೀರ್ಯದ ಆವರಣ ಬರಲು ಬಿಡುವುದಿಲ್ಲ. ಹೀಗೆ ಇವುಗಳಲ್ಲಿ ಅಡಗಿದ, ಅಲಂಕರಣದ ಸಿಹಿತನದ ಅಂಶಗಳೇ ಇವುಗಳನ್ನು ನಿಯಂತ್ರಿಸುತ್ತವೆ. ಇದೇ ರೀತಿ ನಮ್ಮ ಹಲವಾರು ಗಂಭೀರ ಕಲಾವಿದರು ತಮ್ಮ ಕೃತಿಗಳ ಮಾರುಕಟ್ಟೆಗಾಗಿ ತಮ್ಮ ಕೃತಿಗಳಲ್ಲಿ ಸಿಹಿತನವನ್ನು, ರೋಮ್ಯಾಂಟಿಕ್ ಅಂಶಗಳನ್ನು ಮುಚ್ಚಿಡುತ್ತಾರೆ. ಈ ದಾರಿಯೇ ಶಿಶಿರ್ ಅವರ ಗಾಂಭೀರ್ಯಕ್ಕೆ ಕೌಶಲ್ಯಕ್ಕೆ ಮುಸುಕು ಹೊದಿಸುತ್ತವೆ. ಇವರ ವರ್ಣಚಿತ್ರಗಳಲ್ಲಿಯೂ ಇದೇ ವಸ್ತು ಶೈಲೀಕೃತ ರೂಪಗಳಿವೆಯಾದರೂ ಸಿಹಿತನದ ನಿರಾಕರಣೆ ಯಿಂದಾಗಿ. ಈ ವರ್ಣಚಿತ್ರಗಳೇ ಇವರ ಶಿಲ್ಪಗಳಿಗಿಂತಲೂ ಕಲಾತ್ಮಕ ಓಟದಲ್ಲಿ ಮುಂದೆ ಸಾಗುವ ಶಕ್ತಿ ಪಡೆದಿದೆ ಎನ್ನುವ ಅಂಶವನ್ನು ಕೃ.ಸೆ.ಯವರು ಪ್ರಸಕ್ತ ಲೇಖನದ ಮೂಲಕ ಗುರುತಿಸಿದ್ದಾರೆ.

### ೧೦೬. ರಂಜನೆಗೆ ಸೋಲು, ಬೌದ್ಧಿಕತೆಗೆ ಗೆಲವು[೧೦೫]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೩-೦೩-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಲೇಖಕರು ಇತ್ತೀಚಿನ ದಿನಗಳಲ್ಲಿ ಪಾಶ್ಚಾತ್ಯ ದೇಶಗಳ ಸಮಕಾಲೀನ ಕಲೆಯಲ್ಲಿ

---

೧೦೪. ಸಿಹಿ ಮತ್ತು ಅಲಂಕರಣಗಳ ಮುಸುಕಿನಲ್ಲಿ,ಪ್ರಜಾವಾಣಿ, ಕರ್ನಾಟಕ ದರ್ಶನ, ೧೬ ಮಾರ್ಚ್ ೨೦೦೨

೧೦೫. ರಂಜನೆಗೆ ಸೋಲು, ಬೌದ್ಧಿಕತೆಗೆ ಗೆಲವು, ಪ್ರಜಾವಾಣಿ,ಕರ್ನಾಟಕದರ್ಶನ, ೨೩ ಮಾರ್ಚ್ ೨೦೦೨

ಸಾಮಾನ್ಯರ ನಿರೀಕ್ಷೆಗಳನ್ನು ಮೀರಿ ಭಾರೀ ಬದಲಾವಣೆಗಳಾಗುತ್ತಿವೆ. ಚಿತ್ರ, ಶಿಲ್ಪ, ವೀಡಿಯೊ, ನಿರ್ಮಾಣಗಳು ಇವುಗಳ ನಡುವಿದ್ದ ವ್ಯತ್ಯಾಸಗಳು ಮಾಯವಾಗಿ ಇವುಗಳೆಲ್ಲ ಒಂದರೊಳಗೆ ಮತ್ತೊಂದು ಸೇರಿಕೊಂಡಂತಾಗಿವೆ. ಇವುಗಳೊಳಗೆ ಇನ್ನಷ್ಟು ಹೊಸ ಅಂಶಗಳೂ ಸೇರಿ ಅದು ತುಂಬ ಸಂಕೀರ್ಣವೆನಿಸಿದೆ. ಸಾಕ್ಷಿ ಗ್ಯಾಲರಿಯಲ್ಲಿ ನಡೆದ ಪ್ರದರ್ಶನದಲ್ಲಿ ಹಲವಾರು ಕಲಾವಿದರು ಭಾಗವಹಿಸಿದ್ದರು. ಅವರಲ್ಲಿ ರವೀಂದ್ರರೆಡ್ಡಿ ಹಾಗು ಅನಿತಾ ದುಬೆ, ಕಾಲಿಘಾಟ್ ಕಲೆಯ ಕಲಾವಿದ ಕಲಮ್ ಪಟುವಾ ಹಾಗು ವರ್ಲಿ ಕಲೆಯ ಕಲಾವಿದ ಜಿವ್ಯಾ ಸೋಮಾ ಮಾಶೆಯವರು ಮುಖ್ಯವಾಗಿದ್ದು, ಅವರ ಕಲಾಕೃತಿಗಳ ಕುರಿತು ಈ ಲೇಖನದ ಮೂಲಕ ಕೃ.ಸೆ.ಯವರು ಗುರುತಿಸಿದ್ದಾರೆ.

ಟೊಮಾಕೊ ಟಕಹಾಶಿಯವರು ವಿವಿಧ ಬಗೆಯ ಸೈಟ್ ಸ್ಪೆಸಿಫಿಕ್ ಇನ್‌ಸ್ಟಲೇಶನ್‌ಗಳನ್ನು ರಚಿಸಿದ್ದಾರಾದರೂ ಅವು ಯಾವುವೂ ಇಲ್ಲಿಗೆ ಬಂದಿಲ್ಲ. ಬದಲಿಗೆ ಇಲ್ಲಿ ನಿರಂತರವಾಗಿ ನಡೆಯುವ ಎರಡು ಸ್ಲೈಡ್ ಪ್ರೊಜೆಕ್ಟರುಗಳ ಮೂಲಕ ಅದರ ತುಣುಕುಗಳ ಪರಿಚಯ ಮಾಡಿಕೊಡುತ್ತಾರೆ. ಇವಾ ರಾತ್ಸೆಚೈಲ್ಡ್ ಅವರು ಚಾಪೆಯಂತೆ ಪ್ಲಾಸ್ಟಿಕ್ ಪಟ್ಟಿಗಳನ್ನು ಹೆಣೆಯುವ ಮೂಲಕ ಕುತೂಹಲಕರವಾದ ಕೃತಿಗಳನ್ನು ರಚಿಸಿದ್ದಾರೆ. ಹಾಗೆ ಮಾಡಿದ ಬುದ್ದನ ರೂಪವೊಂದು ನಮ್ಮ ಗಮನ ಸೆಳೆಯುತ್ತದೆ. ಎನ್ರಿಕೊ ಡೇವಿಡ್ ಒಂದು ಗ್ರಾಮ್ಯ ನೆಲೆಯ ಇನ್‌ಸ್ಟಲೇಶನ್ ಹಾಗು ಗೊಂಬೆಗಳ ಸಮೂಹದ ಇನ್ನೊಂದು ಇನ್‌ಸ್ಟಲೇಶನ್ ರಚಿಸಿದ್ದಾರೆ. ಜನಪದೀಯ ನೆಲೆಯಲ್ಲಿ ಅತ್ಯಂತ ಆಪ್ತವೆನಿಸುವ ಕೃತಿಗಳಿವು, ಬ್ರಿಟನ್ನಿನ ಮೂವರು ಕಲಾವಿದರು ಇಲ್ಲಿನ ಮಣ್ಣಿಗೆ ತುಂಬ ಪರಿಣಾಮಕಾರಿಯಾಗಿ ಸ್ಪಂದಿಸಿದರೆ, ನಮ್ಮವರಲ್ಲಿ ಅದೇ ನೆಲೆಯ ಸ್ಪಂದನ ಕಾಣಿಸುವುದಿಲ್ಲ.

ವಲ್ಸನ್ ಕೊಲೇರಿಯವರು ಲೋಹದ ತಗಡಿನಲ್ಲಿ ಕುತೂಹಲಕರ ಶಿಲ್ಪವೊಂದನ್ನು ರಚಿಸಿದ್ದಾರೆ. ಇವರ ಗೋಡೆಯ ಮೂಲೆಗೆ ಜೋಡಿಸಿದ ಇನ್ನೊಂದು ಬೃಹತ್ ಡ್ರಾಯಿಂಗ್ ತನ್ನ ಅಳತೆ ಯಿಂದಾಗಿಯೇ ಪರಿಣಾಮ ಬೀರುವಂತಿದೆ. ಹೀಗೆ ಹೊಸ ಬಗೆಯ, ಪ್ರಯೋಗಶೀಲ ಮನಸ್ಸುಗಳಿಗೆ ತಟ್ಟುವಂತಿದೆ ಈ ಪ್ರದರ್ಶನ, ಹಾಗಿದ್ದರೂ ಪ್ರದರ್ಶನಾಂಗಣದ ಸೀಮಿತ ಅವಕಾಶಗಳು ಹಾಗು ಎಲ್ಲ ಕೃತಿಗಳು ಇಲ್ಲಿಗೆ ಬರದಿರುವುದು ಈ ಮುಂತಾದ ಕಾರಣಗಳಿಂದಾಗಿ ಪ್ರದರ್ಶನ ಪರಿಣಾಮವೂ ಸೀಮಿತಗೊಂಡಿದೆ ಎಂದರೆ ತಪ್ಪಾಗಲಾರದು ಎನ್ನುವುದನ್ನು ಇಲ್ಲಿ ಲೇಖಕರು ಉಲ್ಲೇಖಿಸಿದ್ದಾರೆ.

### ೧೦೭. ದೇಸೀಯತೆಗೆ ಆನುಭಾವಿಕ ಸ್ಪರ್ಶ[೧೦೬]

ಮಂಗಳೂರಿನ ಮಹಾಲಸಾ ಕಲಾಶಾಲೆಯ ಜಗನ್ನಾಥ ಪಿ.ಅರಿಯಡ್ಕ ಅವರ ಕೃತಿಗಳ ಪ್ರದರ್ಶನವು ಮೈಸೂರಿನ ಕಲಾಮಂದಿರದಲ್ಲಿರುವ ಸುಚಿತ್ರಾ ಗ್ಯಾಲರಿಯಲ್ಲಿ ನಡೆಯಿತು. ಇಲ್ಲಿ

---

೧೦೬. ದೇಸೀಯತೆಗೆ ಆನುಭಾವಿಕ ಸ್ಪರ್ಶ, ಪ್ರಜಾವಾಣಿ, ಕರ್ನಾಟಕ ದರ್ಶನ, ೨೩ ಮಾರ್ಚ್ ೨೦೦೨

ಪ್ರದರ್ಶನಗೊಂಡ ಕಲಾಕೃತಿಗಳು ವಿವಿಧ ವಸ್ತು, ವಿವಿಧ ಶೈಲಿಗಳ ಕೃತಿಗಳಿವೆ. ಅವುಗಳನ್ನು ಏಕಸೂತ್ರದಲ್ಲಿ ಹೆಣೆಯುವಂತಹ ಆವರಣವಿದ್ದುದು ಇಲ್ಲಿ ವಿಶೇಷ. ಪಾಶ್ಚಾತ್ಯ ಪ್ರಭಾವಗಳನ್ನು ನಿರಾಕರಿಸಿ ಗಮನಾರ್ಹವೆನಿಸುವಂತೆ ಇವು ದೇಸಿ ಒಲವುಗಳನ್ನು ಗರ್ಭೀಕರಿಸಿಕೊಂಡಿವೆ. ಇಲ್ಲಿರುವ ವರ್ಣಮೇಳ ಹಾಗು ಆವರಣ ಇವುಗಳಿಗೆ ಅನುಭಾವಿಕ, ಆಧ್ಯಾತ್ಮಿಕ ಸೆಳಕುಗಳನ್ನು ನೀಡಿದೆ. ಕೃತಿಗಳಲ್ಲಿರುವ ಕಲ್ಪನೆಗಳು, ಇಮೇಜ್‌ಗಳು ನಿಜಕ್ಕೂ ಗಮನಾರ್ಹವಾಗಿವೆ. ಹಲವಾರು ಉತ್ತಮ ಅಂಶಗಳ ನಡುವೆಯೂ ಇಲ್ಲಿರುವ ಕೊರತೆಯೆಂದರೆ ನಿರ್ದಿಷ್ಟ ಶೈಲಿಯನ್ನು ಹುಡುಕಿಕೊಂಡಿಲ್ಲದಿರುವುದು ಹಾಗು ನಿರ್ವಹಣೆಯಲ್ಲಿನ ಜಡತನ, ರೂಪ ನಿರ್ಮಾಣದಲ್ಲಿ ನಿಯಂತ್ರಣವುಳ್ಳಂತಹ ಜಗನ್ನಾಥ ಅವರು ಈ ಕೆಲವು ಕೊರತೆಗಳನ್ನು ನೀಗಿಸಿಕೊಂಡು ಮುಂದುವರೆದರೆ, ಇವರಲ್ಲಿ ನಿಜಕ್ಕೂ ಭವಿಷ್ಯದಲ್ಲಿ ಉತ್ತಮ ಕಲಾವಿದರನ್ನು ನಿರೀಕ್ಷಿಸಬಹುದಾಗಿದೆ ಎನ್ನುವುದನ್ನು ಕೃ.ಸೆ.ಯವರು ವಿಶೇಷವಾಗಿ ಈ ಲೇಖನದಲ್ಲಿ ಗುರುತಿಸಿದ್ದಾರೆ.

**೧೦೮. ಭವ್ಯತೆಯ ಅನುಭವ ನೀಡುವ ವೈವಿಧ್ಯ**[೧೦೭]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೩೦–೦೩–೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕೃ.ಸೆ.ಯವರು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ನಡೆದ ಅಖಿಲ ಭಾರತ ಕಲಾ ಶಿಬಿರದ ಕುರಿತು ವಿಶೇಷವಾಗಿ ಚರ್ಚಿಸಿದ್ದಾರೆ. ಈ ಶಿಬಿರದಲ್ಲಿ ತಯಾರಾದ ವರ್ಣಚಿತ್ರಗಳೂ, ಗ್ರಾಫಿಕ್, ಶಿಲ್ಪಗಳು ಇತ್ಯಾದಿಗಳನ್ನೆಲ್ಲ ಇದೀಗ ಒಂದೇ ಸಮಗ್ರ ನೋಟಕ್ಕೆ ದಕ್ಕುವಂತೆ ಪ್ರದರ್ಶಿಸಲಾಗಿದೆ. ಹೀಗೆ ಈ ಪ್ರದರ್ಶನವು ವರ್ತಮಾನದ್ದೂ ಸೇರಿದಂತೆ ವಿವಿಧ ಕಾಲಘಟ್ಟಗಳ ಕಲಾ ರೂಪಗಳ ಭವ್ಯದರ್ಶನ ನೀಡುತ್ತದೆ. ತಮ್ಮ ಕೃತಿಗಳು ಒಂದರಿಂದ ಇನ್ನೊಂದು ಭಿನ್ನವಾಗಿರುವಂತೆ ರಚಿಸಿದ ಕೆಲವು ಕಲಾವಿದರಿದ್ದು, ಅವರಲ್ಲಿ ಅಂಜಲಿ ಇಳಾಮೆನನ್, ನವಜ್ಯೋತ್ ಅಲ್ತಾಫ್, ಹಿಮ್ಮತ್ ಷಾ, ಆದಿತ್ಯ ಬಸಕ್, ವಿಶ್ವಂಭರ, ಬಸವರಾಜ ಮುಸವಳಗಿ, ಬಾಲಸುಬ್ರಹ್ಮಣ್ಯನ್, ಉಮಾಪಾಟೀಲ್, ಬೈಜು ಪಾರ್ಥನ್ ಮುಖ್ಯರಾಗಿದ್ದಾರೆ. ಇಲ್ಲಿ ಒಂದೆರಡು ಕಲಾವಿದರ ಸಾಮಾನ್ಯ ನೆಲೆಯ ಕೃತಿಗಳನ್ನು ಹೊರತುಪಡಿಸಿದರೆ ಹೆಚ್ಚಿನವು ಪರಿಣಾಮಕಾರಿಯಾಗಿವೆ. ಈ ದೃಷ್ಟಿಯಿಂದಾಗಿಯೇ ಇದನ್ನು ಯಶಸ್ವಿಯಾದ ಕಲಾಶಿಬಿರವೆಂದರೆ ತಪ್ಪಲ್ಲ.

ವರ್ತಮಾನಕ್ಕೆ ಸ್ಪಂದಿಸುವಂತೆ ಎಂ.ಎಸ್.ಉಮೇಶ್ ಅವರು ಸೂಕ್ಷ್ಮವಾಗಿ ಸೃಷ್ಟಿಸಿದ ಇನ್‌ಸ್ಟಲೇಶನ್ ನಿಜಕ್ಕೂ ಕುತೂಹಲಕಾರಿ ಮತ್ತು ಹೊಸ ಪ್ರಯೋಗವೆನಿಸಿತ್ತು. ಬಸವರಾಜ ಮುಸವಳಗಿ ಹಾಗು ನಾಗಪ್ಪ ಪ್ರಧಾನಿಯವರು ನೇರವಾಗಿ ಈ ಘಟನೆಗೆ ಪ್ರತಿಕ್ರಿಯಿಸಿದ್ದಾರಾದರೂ ಅವು ವಾಚ್ಯನೆಲೆಯಲ್ಲಿವೆ.

---

೧೦೭. ಭವ್ಯತೆಯ ಅನುಭವ ನೀಡುವ ವೈವಿಧ್ಯ, ಪ್ರಜಾವಾಣಿ, ಕರ್ನಾಟಕದರ್ಶನ, ೩೦ ಮಾರ್ಚ್ ೨೦೦೨

ಇಲ್ಲಿನ ಕೃತಿಗಳಲ್ಲಿ ಲಕ್ಷ್ಮಾ ಗೌಡ್, ವಿಶ್ವಂಭರ, ಶ್ರೀಧರ ಮೂರ್ತಿಯವರ ಗ್ರಾಫಿಕ್ ಕೃತಿಗಳು ಗಂಭೀರವಾಗಿವೆ, ಅದರೆ ಉಳಿದ ಹಲವರು ಆ ಮಟ್ಟ ಮುಟ್ಟುವುದಿಲ್ಲ. ನಟರಾಜ ಶರ್ಮ ಅವರಂತೂ ನಮ್ಮ ಉತ್ಸಾಹಕ್ಕೆ, ನಿರೀಕ್ಷೆಗೆ ತಣ್ಣೀರೆರಚುತ್ತಾರೆ. ಇಂದು ಬಹುಜನರ ಆಕರ್ಷಣೆಯ ಸಂಗತಿಯಾಗಿರುವ ಇನ್‌ಸ್ಟಲೇಶನ್ ಪ್ರಕಾರದಲ್ಲಿ ನವಜ್ಯೋತ್ ಅಲ್ತಾಫ್ ಅವರ, ವಿದ್ಯಾರ್ಥಿಗಳಿಂದ ರಚಿತವಾದ "ಫ್ರಂ ೭೧ ಸೈಟ್ಸ್" ಅತ್ಯಂತ ಗಮನಾರ್ಹವೆನಿಸಿದರೆ. ಅವರ ಇನ್ನೊಂದು ಕೃತಿ ಅದರ ಸಂಪೂರ್ಣ ವಿರುದ್ದ ದಿಕ್ಕಿನಲ್ಲಿ ನಿಲ್ಲುತ್ತದೆ. ಬಹುತೇಕ ಯಾವಾಗಲೂ ಶುಷ್ಕನೆಲೆಯ ಕೃತಿಗಳನ್ನೇ ರಚಿಸುವ ಹಿಮ್ಮತ್ ಷಾ ಅವರು ಇಲ್ಲಿಯೂ ಅದೇ ನೆಲೆಯಲ್ಲಿ ಶುಷ್ಕವೆನಿಸುವ ಇನ್‌ಸ್ಟಲೇಶನ್ ರಚಿಸಿದ್ದಾರೆ.

ವರ್ಣಚಿತ್ರಗಳಲ್ಲಿ ಅಂಜಲಿ ಇಳಾಮೆನನ್ ಅವರ ಶೀರ್ಷಿಕೆ ರಹಿತ ಕೃತಿ ಗಾಢ ಪರಿಣಾಮ ಬೀರಿದರೆ, ಇನ್ನೊಂದು ಕೃತಿಯಲ್ಲಿ ಅವರಿಗಿಂತಲೂ ಅಕ್ಬರ್ ಪದಮ್‌ಸೀ ಕಂಡುಬರುತ್ತಾರೆ. ವರ್ಣಚಿತ್ರಗಳಲ್ಲಿ ಶ್ರೀನಿಧಿ ಶೇಷಾದ್ರಿ ಜಿ.ಆರ್. ಈರಣ್ಣ, ಸೋಫಿ ಪ್ಯಾಟಿನ್ಸನ್, ಬೈಜುಪಾರ್ಥನ್, ಕೆ.ಟಿ. ಶಿವಪ್ರಸಾದ್, ಜೈ ಝುರೋಟಿಯಾ, ಅಂದಾನಿ ಅಂಜನಾಮೆಹ್ರಾ, ಆದಿತ್ಯ ಬಸಕ್ ಅವರು ಮಿಂಚುತ್ತಾರೆ. ಆದರೆ ಉಮಾ ಪಾಟೀಲ್, ಡಿ.ರಾಜಗೋಪಾಲ್, ರಮಾಶರ್ಮ, ಜೆರಾಮ್ ಪಟೇಲರ ಕೃತಿಗಳು ಈ ಶಿಬಿರದ ಭವ್ಯ ಮಟ್ಟದಿಂದ ಸಾಕಷ್ಟು ದೂರದಲ್ಲಿ ನಿಂತು ನಿರಾಶೆಯುಂಟು ಮಾಡುತ್ತವೆ.

ಶಿಲ್ಪಗಳಲ್ಲಿ ತೇಜೇಂದ್ರಸಿಂಗ್ ಬಾವೊನಿ ಎಸ್ ಗೋಪಿನಾಥ್, ರಾಜಶೇಖರನ್ ನಾಯಕ್ ಅವರ ಕೃತಿಗಳು ನಿಜಕ್ಕೂ ಪರಿಣಾಮಕಾರಿಯಾಗಿವೆ. ಆದರೆ ಹಿರಿಯ ಕಲಾವಿದ ಶಂಖೋ ಚೌಧರಿಯವರು ನಮಗೆ ಈ ದಿಸೆಯಲ್ಲಿ ವಿಷಾದ ಹುಟ್ಟಿಸುತ್ತಾರೆ. ಹೀಗೆ ಈ ಜಂಭೋ ಕಲಾಶಿಬಿರದಲ್ಲಿ ಹೆಚ್ಚಿನವರ ಕೃತಿಗಳು ಸಾಮಾನ್ಯತೆಯಿಂದ ಮೇಲಿದ್ದು, ಅದರಲ್ಲೂ ಯುವಕರೇ ಹೆಚ್ಚಾಗಿ ಮಿಂಚುತ್ತಾರೆ. ಅನುಭವೀ ಕಲಾವಿದರು ಸೋಲುತ್ತಾರೆ. ಕ್ಲೀಷೆಗೊಂಡ ರೂಪಗಳು, ಪರಿಣಾಮ ಬೀರದ ತಂತ್ರ ಈ ಮುಂತಾದ ಹಲವಾರು ಕಾರಣಗಳಿಂದ ನಮ್ಮ ಹಿರಿಯರು ನಿರಾಶೆಯುಂಟು ಮಾಡಿದರೆ ಉಳಿದವರು ಆ ಕೊರತೆಯನ್ನು ತುಂಬುತ್ತಾರೆ. ಹೀಗೆ ಹಲವು ನೆಲೆಗಳಲ್ಲಿ ತುಂಬ ಪರಿಣಾಮಕಾರಿ ಯಾದ ಪ್ರದರ್ಶನವಿದು ಎನ್ನುತ್ತಾರೆ ಲೇಖಕರು.

**೧೦೯. ಪೂರ್ಣ ಬೆಳೆಯುವ ಮುನ್ನವೇ ಸ್ಥಗಿತಗೊಳ್ಳುವ ಆಕೃತಿಗಳು**[೧೦೮]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೩೦-೦೩-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಅಮರೇಶ ಬಿಜ್ಜಳ ಅವರ ಕಲಾಕೃತಿಗಳ ಪ್ರದರ್ಶನ ಬೆಂಗಳೂರಿನ ಚಿತ್ರಕಲಾ

೧೦೮. ಪೂರ್ಣ ಬೆಳೆಯುವ ಮುನ್ನವೇ ಸ್ಥಗಿತಗೊಳ್ಳುವ ಆಕೃತಿಗಳು, ಪ್ರಜಾವಾಣಿ, ಕರ್ನಾಟಕ ದರ್ಶನ,೩೦ ಮಾರ್ಚ್ ೨೦೦೨

ಪರಿಷತ್ತಿನಲ್ಲಿ ನಡೆಯಿತು. ಈ ಕಲಾವಿದರ ಆಶಯಗಳನ್ನು ಕೃ.ಸೆ.ಯವರು ಪ್ರಸಕ್ತ ಲೇಖನದ ಮೂಲಕ ಗುರುತಿಸುವ ವಿಶೇಷ ಪ್ರಯತ್ನ ಮಾಡಿದ್ದಾರೆ.

ನಿಯೊ ಎಕ್ಸ್‌ಪ್ರೆಶನಿಸ್ಟ್ ಶೈಲಿಯಲ್ಲಿರುವ ಇವರ ಕಲಾಕೃತಿಗಳು ವಿಶೇಷ ಅನುಭವ ನೀಡುತ್ತವೆ. ಇವರು ಯಾವುದೇ ವ್ಯಕ್ತಿಯ ದೇಹದ ಸಂಪೂರ್ಣ ವಿವರಗಳನ್ನು ತೆರೆದಿಡುವುದಕ್ಕಿಂತಲೂ, ಗೀಚಿದಂತಿರುವ ಕುಂಚದ ಬೀಸುಗಳಲ್ಲಿಯೇ ವ್ಯಕ್ತಿಯ ಭಾವನೆ ಮೂಡಿಸುತ್ತಾರೆ. ಹೀಗೆ ಪೂರ್ತಿಯಾಗಿ ಮೂಡುವ ಮುನ್ನವೇ ಸ್ಥಗಿತಗೊಂಡಂತಹ ಆಕೃತಿಗಳಿವು. ಹಾಗಾಗಿ ನೋಡುಗರಿಗೆ ಇಲ್ಲೊಬ್ಬ ವ್ಯಕ್ತಿಯಿದ್ದಾನೆಂದೆನಿಸಿದರೂ, ಅವನು ಯಾರೆಂಬುದು, ಹೇಗಿದ್ದಾನೆಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ, ಭಂಗಿಯ ಮೂಲಕ ಅವುಗಳ ಕ್ರಿಯೆಯ ಸೂಚನೆ ದೊರೆಯುತ್ತವೆ. ಬಹುತೇಕ ಕನ್‌ಸ್ಟ್ರಕ್ಟಿವಿಸ್ಟರ. ಕೈನೆಟಿಕ್ ಆರ್ಟ್ ಕಲಾವಿದರ ಧೋರಣೆಯೇ ಇಲ್ಲಿ ಬೇರೊಂದು ರೂಪ ತಳೆದಿದೆ. ಇನ್ನೊಂದೆಡೆ ಇವರು ಮಿನಿಮಲಿಸ್ಟರ್ ನೆನಪನ್ನೂ ತರುತ್ತಾರೆ. ತೆಳುವಾದ ಸೀಮಿತ ಬಣ್ಣಗಳ ಬಳಕೆ, ರೂಪಗಳಲ್ಲಿನ ಅತ್ಯಂತ ಸರಳತೆಯೇ ಇದಕ್ಕೆ ಕಾರಣ. ಡ್ರೈಬ್ರಶ್‌ನಂತಿರುವ ಸಡಿಲ ಕುಂಚದ ಬೀಸುಗಳು, ತೀವ್ರತೆ, ಪೌರುಷಮಯ ಫೀಲಿಂಗ್‌ಗಳಿಂದಾಗಿ ಇವು ಎಕ್ಸ್‌ಪ್ರೆಶನಿಸ್ಟರ್ ಹತ್ತಿರಕ್ಕೆ ಹೋಗುತ್ತವೆ. ಹೀಗೆ ಇವು ನೋಡಲು ತುಂಬ ಸರಳವೆನಿಸಿದರೂ ಹಲವು ಧೋರಣೆಗಳು ಮುಪ್ಪರಿಗೊಂಡ ರೂಪಗಳಾಗಿವೆ. ಇವು ಬಣ್ಣದಲ್ಲಿ ದೇಶೀಯವೆನಿಸಿದರೂ(ಕಂದು ಹಳದಿ ಇತ್ಯಾದಿಗಳ ಒತ್ತಾಸೆ ಯಿಂದಾಗಿ) ನಿರ್ವಹಣೆಯಲ್ಲಿ ಪಾಶ್ಚಾತ್ಯವೆನಿಸುತ್ತವೆ. ಅಮರೇಶ ಅವರ ಕೃತಿಗಳ ಇನ್ನೊಂದು ವೈಶಿಷ್ಟ್ಯವೆಂದರೆ ಆಕೃತಿಗಳು ಅಸ್ಪಷ್ಟವಾಗಿರುವ ಕೃತಿಗಳೇ ಕಲಾ ಸೂಕ್ಷ್ಮತೆಗಳಿಂದಾಗಿ ಆಳದಲ್ಲಿ ಪ್ರಭಾವಿಸುವಂತಿವೆ. ಆಕೃತಿಗಳು ಪರಿಚಿತ ಪ್ರಪಂಚಕ್ಕೆ ಹತ್ತಿರವಾದಷ್ಟೂ ಅವುಗಳಲ್ಲಿನ ಕಲಾ ಸೂಕ್ಷ್ಮಗಳು ಕಡಿಮೆಯಾಗುವುದು ಇವರ ಕೃತಿಗಳ ಗುಣ ಎಂಬುದನ್ನು ಕೃ.ಸೆ.ಉಲ್ಲೇಖಿಸಿದ್ದಾರೆ.

**೧೧೦. ಕೋಮಲವನ್ನು ಕಠೋರವಾಗಿಸುವ ಪರಿ**

ಚೆನ್ನೈನ ಆಲ್ಫಾನ್ಸೊ ಅವರ ಕಲಾಕೃತಿಗಳ ಪ್ರದರ್ಶನವು ಬೆಂಗಳೂರಿನ ಲಕ್ಷ್ಮಣಾ ಆರ್ಟ್ ಗ್ಯಾಲರಿಯಲ್ಲಿ ನಡೆಯಿತು. ತಮ್ಮ ಕೃತಿಗಳಲ್ಲಿ ಒಂದು ನಿರ್ದಿಷ್ಟ ಬಗೆಯ ಪ್ಯಾಚ್‌ಗಳಂತಹ ನಿರ್ವಹಣೆಯ ಮೂಲಕ ತಮ್ಮದೇ ಶೈಲಿ ರೂಪಿಸಿಕೊಂಡಿರುವ ಇವರು, ಈಚಿನ ಕೃತಿಗಳಲ್ಲಿ ಅದರೊಂದಿಗೇ ಇನ್ನಷ್ಟು ವಿವಿಧ ಬಗೆಯ ತಂತ್ರಗಳ ಮೂಲಕ ಮುನ್ನಡೆಯನ್ನು ಪ್ರಕಟಿಸಿದ್ದಾರೆ. ಬಹು ಹಿಂದಿನಿಂದಲೂ ಇವರ ಕೃತಿಗಳಲ್ಲಿ ಕಂಡು ಬರುವಂತಹ ಒಂದು ಅಂಶವೆಂದರೆ ವಿರುದ್ಧ ದಿಕ್ಕಿನಲ್ಲಿರುವ ಅಂಶಗಳನ್ನು ಒಂದರಲ್ಲಿ ಬೆಸೆಯುವ ಗುಣ, ಆಲ್ಫಾನ್ಸೊ ಅವರ ಕೃತಿಗಳ ವಸ್ತು ವಿಷಯದಲ್ಲಿ ವೈವಿಧ್ಯವಿದ್ದರೂ ಅವು ಹೆಚ್ಚಾಗಿ ಸುತ್ತುವುದು ರೊಮ್ಯಾಂಟಿಕ್ ಆವರಣದಲ್ಲಿಯೇ, ಹಿಂದಿನಿಂದಲೂ ಅವರಿಗೆ ಆಪ್ತವಾಗಿರುವ ಕಾಸ್ಮಿಕ್ ಡ್ಯಾನ್ಸ್‌ನಂತಹ ಕೃತಿಗಳ ಮೂಲಕ ಆಧ್ಯಾತ್ಮಿಕ

ಆಶಯವನ್ನು ಪ್ರಕಟಿಸುತ್ತಾರಾದರೂ ಅವು ಕೂಡಾ ರಂಜನೆಯ, ಅಲಂಕರಣದೆಡೆಗೆ ವಾಲುತ್ತವೆ. ಇತ್ತೀಚೆಗೆ ಅವರು ಹೆಚ್ಚಾಗಿ ಬಳಸುತ್ತಿರುವ ಪ್ರಮುಖವಾದ ಪ್ರಾಥಮಿಕ ನೆಲೆಯ ಢಾಳಾದ ಬಣ್ಣಗಳೂ ಇದಕ್ಕೆ ಕಾರಣ. ಹಾಗೆ ನೋಡಿದರೆ ಇವರ ವಸ್ತುವಿನಲ್ಲಿ ಶೈಲಿಯಲ್ಲಿ ಹಲವರು ವರ್ಷಗಳಿಂದ ಯವುದೇ ಹೇಳಿಕೊಳ್ಳುವಂತಹ ವ್ಯತ್ಯಾಸವಿಲ್ಲ. ಪುರಾತನ ಸಂಬಂಧೀ ವಸ್ತುವಿಗೆ (ಕೆಲವು ಅಪವಾದಗಳನ್ನು ಹೊರತುಪಡಿಸಿ,) ಆಧುನಿಕ ರೂಪವನ್ನು ಬೆಸೆಯುವುದು ಇವರ ವಿಧಾನ. ಹಾಗಿದ್ದರೂ ಇಲ್ಲಿ ಕೆಲವು ಹೊಸ ಅಂಶಗಳ ಸೇರ್ಪಡೆಯಾಗಿದ್ದರೂ ಇವು 'ಹೊಸ ಬಾಟಲಿಯಲ್ಲಿನ ಹಳೆಯ ಮದ್ಯವೇ' ಎಂದರೆ ತಪ್ಪಿಲ್ಲ.

ಇವರ ಈಚಿನ ಕೃತಿಗಳಲ್ಲಿ ದಟ್ಟವಾಗಿ ಕಾಣುವ ಒಂದು ಅಂಶವೆಂದರೆ ಫೋಟೋಗ್ರಫಿಯಲ್ಲಿನ ಮೊಂಟಾಜ್‌ನಂತೆ ವಿಭಿನ್ನ ಆಕೃತಿಗಳ ಜೋಡಣೆ, ಚಿತ್ರಿತ ರೂಪ ಹಾಗು ಶುದ್ಧ ಚಿತ್ರಭಾಷೆಗಳನ್ನು ಸಮರ್ಥವಾಗಿ ಬೆಸೆಯುವ ಜಾಣ್ಮೆ ಇವರಿಗಿರುವುದರಿಂದ ಇವು ಕಲಾತ್ಮಕವಾಗಿ ಗೆಲುವಿನೆಡೆಗೆ ಸಾಗುತ್ತವೆ ಅಲಂಕರಣದ ಸೆಳಕುಗಳನ್ನು ಹೊತ್ತಿದ್ದರೂ, ರಂಜನೆಯನ್ನು ಗರ್ಭೀಕರಿಸಿಕೊಂಡಿದ್ದರೂ, ಅವು ಸಿಂಹಪಾಲು ಪಡೆಯದಂತೆ ಎಚ್ಚರವಹಿಸುಂದರಿಂದಾಗಿ ಇವು ಅಷ್ಟಾಗಿ ಸೋಲುವುದಿಲ್ಲ, ಎಟರ್ನಲ್ ಹ್ಯಾಪಿನೆಸ್‌ನಂತಹ ಕೆಲವು ಕೃತಿಗಳಲ್ಲಿ ತೈಲವರ್ಣವನ್ನು ಜಲವರ್ಣದಂತೆ ನಿರ್ವಹಿಸಿರುವ ಇವರ ವಿಧಾನವು ತುಂಬಾ ಪರಿಣಾಮಕಾರಿಯಾಗಿದೆ. ಹೊಸ ಅನುಭವದೆಡೆಗೆ ಸಾಗುವ 'ಫಿಶ್' ಕೃತಿಯೂ ಗಮನಾರ್ಹವಾಗಿದೆ. ಹೀಗೆ ಇವರ ಹೆಚ್ಚಿನ ಕೃತಿಗಳು ಗಭೀರವಾಗಿವೆಯಾದರೂ ಇಲ್‌ಸ್ಟ್ರೇಷನ್‌ನ ಅಂಶಗಳು ಕೆಲವೆಡೆ ಸ್ವಲ್ಪವಾದರೂ ಹಿಂದಕ್ಕೆ ಜಗ್ಗುತ್ತವೆ. ಅಲಂಕರಣದ ಅಂಶಗಳೂ ಇದೇ ರೀತಿ ಕಲಾತ್ಮಕ ಓಟಕ್ಕೆ ಮೂಗುದಾಣ ಹಾಕುವಂತಿವೆ ಎನ್ನುವ ಅಂಶಗಳನ್ನು ಕೃ.ಸೆ.ಯವರು ವಿಶೇಷವಾಗಿ ಈ ಲೇಖನದ ಮೂಲಕ ಗುರುತಿಸಿದ್ದಾರೆ.

**೧೧೧. ಪರಿಣಾಮ ಬೀರುವಷ್ಟು ಮುನ್ನಡೆಯದ ಕಲ್ಪನೆಗಳು**[೧೦೯]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೦-೦೪-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕೃ.ಸೆ.ಯವರು ಬೆಂಗಳೂರಿನ ಕೆನ್ ಕಲಾ ಶಾಲೆಯಲ್ಲಿ ಶಿಕ್ಷಣ ಪಡೆದ ಸುನೀತಾ ಹಾಗು ಗೌರಿ ಅಡಿಗ ಅವರು ಚಾಮರಾಜಪೇಟೆಯ ಮರಾಠಾ ಹಾಸ್ಟೆಲ್ ಮೈದಾನದಲ್ಲಿ ಏರ್ಪಡಿಸಿದ್ದ ಕಲಾ ಪ್ರದರ್ಶನದ ಮಹತ್ವವನ್ನು ದಾಖಲಿಸಿದ್ದಾರೆ. ಈ ಸೈಟ್ ಸ್ಪೆಸಿಫಿಕ್ ಪ್ರದರ್ಶನದಲ್ಲಿ ಇಬ್ಬರೂ ವರ್ತಮಾನದ ಕೆಲವು ಸಂಗತಿಗಳಿಗೆ ಪ್ರತಿಕ್ರಿಯೆ ನೀಡಿದ್ದಾರೆ. ಇಲ್ಲಿ ಗ್ಯಾಲರಿಯಿಂದ ಬಿನ್ನವಾಗಿ, ಆ ನಿಶ್ಚಿತ ಸ್ಥಳಕ್ಕೆ ಹೊಂದುವಂತೆ ಕೃತಿಗಳನ್ನು ಹಾಗೂ ವಾತಾವರಣವನ್ನು ಬಳಸಿಕೊಂಡಿದ್ದುದು ಇಲ್ಲಿನ ವಿಶೇಷವಾಗಿದೆ.

---

೧೦೯. ಪರಿಣಾಮ ಬೀರುವಷ್ಟು ಮುನ್ನಡೆಯದ ಕಲ್ಪನೆಗಳು, ಪ್ರಜಾವಾಣಿ,ಕರ್ನಾಟಕದರ್ಶನ, ೨೦ ಏಪ್ರಿಲ್ ೨೦೦೨

ಮಹತ್ವಾಕಾಂಕ್ಷೆಯ ಈ ಪ್ರದರ್ಶನದಲ್ಲಿ ಗೌರಿ ಅಡಿಗ ಅವರು ಸ್ತ್ರೀ ಸಹಜ ನೆಲೆಯಲ್ಲಿ ವರ್ತಮಾನದ ಎರಡು ಆಂಶಗಳ ಸುತ್ತ ತಮ್ಮ ಕೃತಿಗಳನ್ನು ಬೆಳೆಸಿದ್ದಾರೆ. ವೈದೃಶ್ಯದ ರೂಪಗಳಾದ ಹಸು ಮತ್ತು ಹುಲಿಯನ್ನು ವಸ್ತುವಾಗಿರಿಸಿಕೊಂಡಿರುವುದು ಇಲ್ಲಿ ಕುತೂಹಲಕರವೆನಿಸುತ್ತದೆ. ನಂದಿನಿ ಹಾಲಿನ ಉತ್ಪಾದನೆಯನ್ನು, ಪವಿತ್ರ ಗೋವಿನ ಹಿನ್ನೆಲೆಯಲ್ಲಿ ಇಟ್ಟು ನೋಡುವ ವಿಶಿಷ್ಟ ಉದ್ದೇಶಕ್ಕಾಗಿ ಈ ಕಲಾವಿದೆ ದನದ ಕೊಟ್ಟಿಗೆಯಂತಹ ಆವರಣವಿರುವ ಆ ಮರಾಠಾ ಮೈದಾನವನ್ನು ಬಳಸಿಕೊಂಡಿದ್ದಾರೆ, ಅಂತೆಯೇ ಹಲವು ನೆಲೆಗಳಲ್ಲಿ ಹಾಲು ಮತ್ತು ಗೋವಿನ ನಡುವಿನ ಅಂಶಗಳನ್ನು ಪರಿಭಾವಿಸಿದ್ದಾರೆ. ಇಲ್ಲಿನ ಕೃತಿಗಳಲ್ಲಿ ಹಾಲಿನ ಬಾಟಲಿಗಳ ಮೂಲಕ ಹಸುವಿನ ಕೆಚ್ಚಲನ್ನು ರೂಪಿಸಿದ ತ್ರಿಮಾನದ ಸೃಷ್ಟಿಯು ಗಮನಾರ್ಹ. ಉಳಿದಂತೆ ಹಲವು ಕೃತಿಗಳಲ್ಲಿ ಕಲ್ಪನೆಗಳು ಪರಿಣಾಮಕಾರಿಯಾಗಿದೆಯಾದರೂ ಕಲಾ ಸೂಕ್ಷ್ಮಗಳು ನಷ್ಟಗೊಂಡ ಕೃತಿಗಳೇ ಹೆಚ್ಚು, ಮೃಗಾಲಯ ದಲ್ಲಿನ ಹುಲಿ ಮತ್ತಿತರ ಪ್ರಾಣಿಗಳ ಸುತ್ತ ಬೆಳೆದ ಕಲ್ಪನೆಗಳು ಇಲ್ಲಿವೆ. ಅಲ್ಲಿನ ಆವರಣವನ್ನು ನೆನಪಿಸಲು ತಂತಿಯ ಮೆಶ್‌ನಲ್ಲಿ ಬೋನಿನಂತಹ ಕೋಣೆಯೊಂದನ್ನು ರೂಪಿಸಿದ್ದಾರೆ. ಆದರೆ ಅದು ಕೂಡಾ ಇಲ್ಲಿನ ಕಲ್ಪನೆಗಳನ್ನು ಎತ್ತರಿಸುವಲ್ಲಿ ಅಷ್ಟಾಗಿ ಸಹಾಯ ಮಾಡುವುದಿಲ್ಲ. ಆದರೆ ಇವರ ಪ್ರಾಮಾಣಿಕ ಪ್ರಯತ್ನದ ಬಗ್ಗೆ ನೋಡುಗರಲ್ಲಿ ಸಹಾನುಭೂತಿ ಸಹಜವಾಗಿಯೆ ಉಂಟಾಗುತ್ತದೆ. ಕೆ.ಆರ್. ಸುನೀತಾ ಅವರು ಇತ್ತೀಚೆಗೆ ಬೆಂಗಳೂರಿನಲ್ಲಿ ವ್ಯಾಪಕವಾಗಿ ಹಾಕಿದ ಫೈಬರ್ ಆಪ್ಟಿಕ್ ಕೇಬಲ್ ಪರಿಣಾಮ ಕುರಿತಂತೆ ಒಂದು ಲ್ಯಾಂಡ್ ಆರ್ಟ್ ಸೃಷ್ಟಿಸಿದ್ದಾರೆ. ಚಿಕ್ಕ ಅಳತೆಯಾದರೂ ಇಲ್ಲಿ ನೆಲದಲ್ಲಿ ಕೆತ್ತಿರುವ ಸುರುಳಿಯಾಕಾರದಿಂದಾಗಿ ಇದು ತಕ್ಷಣಕ್ಕೆ ರಾಬರ್ಟ್ ಸ್ಮಿತ್‌ಸನ್‌ನ ಹೆಸರಾಂತ 'ಸ್ಪೈರಲ್ ಜೆಟ್ಟಿ' ಬೃಹತ್ ಕೃತಿಯ ನೆನಪು ತರುತ್ತದಾದರೂ ಇಲ್ಲಿನ ಆಶಯವೇ ಬೇರೆ, ಫೈಬರ್ ತಂತಿಯ ಎಂದಿಗೂ ಮುಗಿಯದ ನಿರಂತರತೆ ಸೂಚಿಸಲು ಈ ಸುರುಳಿಯಾಕಾರವನ್ನು ಕೆತ್ತಿದ್ದಾರಾದರೂ ಆಗಾಧತೆಯ ಕೊರತೆಯಿಂದಾಗಿಯೇ ಇದು ಮಹತ್ವ ಕಳೆದುಕೊಳ್ಳುತ್ತದೆ. ಈ ಬಗೆಯ ಲ್ಯಾಂಡ್ ಆರ್ಟ್ ಕೃತಿಗಳು ಸಾಕಷ್ಟು ದೊಡ್ಡವಾಗಿ ಇಲ್ಲದಿದ್ದರೆ ಏನಾಗಬಹುದೆಂಬುದಕ್ಕೆ ಇದೊಂದು ಉದಾಹರಣೆ. ಒಟ್ಟಾರೆ ಇವರ ಪ್ರಯತ್ನ 'ಬೆಟ್ಟ ಅಗೆದು ಇಲಿ ಹಿಡಿದಂತೆ' ಆಗಿದೆ ಎನ್ನುವ ಅಭಿಪ್ರಾಯವನ್ನು ಲೇಖಕರು ವ್ಯಕ್ತಪಡಿಸಿದ್ದಾರೆ.

### ೧೧೨. ನಗರ ದೃಶ್ಯಗಳ ವಿಭಿನ್ನ ಮಜಲುಗಳು[೧೧೦]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೪-೦೫-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಒಮ್ಮೆ ಪ್ರದರ್ಶಿತ ಕೃತಿಗಳು ಮತ್ತೊಮ್ಮೆ ಪ್ರದರ್ಶಿಸಬಾರದು ಎನ್ನುವ ಅಲಿಖಿತ ನಿಯಮಗಳಿವೆ. ಇವುಗಳನ್ನು ಮುರಿಯುತ್ತಿರುವ ಕೆಲ ಸಂಸ್ಥೆಗಳ ವಿಶೇಷತೆ ಮತ್ತು ಬೆಂಗಳೂರಿನ

೧೧೦. ನಗರ ದೃಶ್ಯಗಳ ವಿಭಿನ್ನ ಮಜಲುಗಳು, ಪ್ರಜಾವಾಣಿ, ಕರ್ನಾಟಕದರ್ಶನ, ೪ ಮೇ ೨೦೦೨

'ಸುಮುಖ' ಗ್ಯಾಲರಿಯಲ್ಲಿ ನಡೆದ ಕಲಾ ಪ್ರದರ್ಶನದ ಮಹತ್ವದ ಕುರಿತು ಕೃ.ಸೆ.ಯವರು ಈ ಲೇಖನದಲ್ಲಿ ವಿಶ್ಲೇಷಿಸಿದ್ದಾರೆ.

ಸೆರೆಬ್ರಲ್ ಕಲ್ಪನೆಗಳನ್ನು ಸಾಕಾರಗೊಳಿಸುವಂತಹ ಸಾಮರ್ಥ್ಯ ಇಲ್ಲಿನ ಬಹುತೇಕ ಈ ಕೃತಿಗಳಿಗೆ ಇಲ್ಲ. ಇಲ್ಲಿ ರವಿ ಕುಮಾರ ಕಾಶಿ, ಸುರೇಶ್ ಕುಮಾರ್ ಹಾಗು ನಾಣಯ್ಯನವರ ಕೃತಿಗಳು ಪರಿಣಾಮಕಾರಿಯಾಗಿದ್ದರೆ, ಉಳಿದವು ಶುಷ್ಕ ನೆಲೆಯಲ್ಲಿರುವುದೇ ಹೆಚ್ಚು. ನಾಣಯ್ಯನವರ ಕೃತಿಗಳು ವಾಚ್ಯ ನೆಲೆಗೆ ಹತ್ತಿರವಾಗಿದ್ದರೂ ಜಾಗತೀಕರಣದ ಪರಿಣಾಮಗಳನ್ನು ಮುಂದಿಡುತ್ತವೆ. ಸದಾ ಹೊಸತನವನ್ನು ಪ್ರಕಟಿಸುತ್ತಿರುವ ರವಿ ಕುಮಾರ ಕಾಶಿಯವರು ತಮ್ಮ ಹಳೆಯ ನೆಲೆಯನ್ನು ಹೊಸದರೊಂದಿಗೆ ಬೆಸೆದಿದ್ದಾರೆ.

ಅದೇ ರೀತಿ ರಂಗನಾಥ ಶರ್ಮಾ ಅವರು ನಗರ ದೃಶ್ಯಗಳಲ್ಲಿ ಕಲ್ಲು ಬೆಂಚನ್ನು ಕೇಂದ್ರವಾಗಿಟ್ಟುಕೊಂಡು ಹಲವಾರು ಛಾಯಾಚಿತ್ರಗಳನ್ನು ಪ್ರದರ್ಶಿಸಿದ್ದಾರೆಂದರೆ ಆಶ್ಚರ್ಯವೆನಿಸುತ್ತದೆ. ಈ. ರಾಘವ್ ಅವರು ಕೂಡಾ ನಗರ ಬದುಕಿನಲ್ಲಿ ಕಂಡು ಬರುವ ಕೆಲವು ಕುತೂಹಲಕರ ರೂಪಗಳನ್ನು ತಮ್ಮ ಛಾಯಾಚಿತ್ರಗಳಲ್ಲಿ ಸೆರೆಹಿಡಿದಿದ್ದಾರಾದರೂ ಕಲಾ ಸೌಂದರ್ಯದ ದೃಷ್ಟಿಯಿಂದ ಅವು ತುಂಬ ಸಾಮಾನ್ಯ ರೂಪಗಳೆಂದರೆ ತಪ್ಪಲ್ಲ. ಸುರೇಶ್ ಕುಮಾರ್ ಅವರು ತಮ್ಮ ಬರೋಡಾ ನಗರದಲ್ಲಿನ ಕಲಾಭ್ಯಾಸದ ಸಂದರ್ಭದಲ್ಲಿ ಗ್ರಹಿಸಿದ ಅನುಭವಗಳನ್ನು ವಿಶಿಷ್ಟ ಶಿಲ್ಪಗಳ ಮೂಲಕ ಪ್ರಕಟಿಸಿದ್ದು, ಹೊಸತನದಿಂದಾಗಿ ನಿಜಕ್ಕೂ ಕುತೂಹಲಕಾರಿಯಾಗಿವೆ, ಮಿಶ್ವಾ ರಾಯ್ ಅವರು ಜನಪದದ್ದು ಎನಿಸುವಂತಹ ತೋರ್ಕೆಯ ರೂಪಗಳನ್ನು ಆಧುನಿಕ ರೂಪಗಳೊಂದಿಗೆ ತಳಕು ಹಾಕಿದ್ದಾರಾದರೂ ಅವು ಆಳದಲ್ಲಿ ಪ್ರಭಾವಿಸುವಂತಿಲ್ಲ. ಹೀಗೆ ಈ ಮಹತ್ವಾಕಾಂಕ್ಷೆಯ ಪ್ರದರ್ಶನದಲ್ಲಿ ಇದ್ದುದರಲ್ಲಿ ಸೃಜನಶೀಲ ಕಲಾವಿದರು ಪ್ರಭಾವಶಾಲಿ ಎನಿಸಿದರೆ ಛಾಯಾಚಿತ್ರ ಕಲಾವಿದರು ಅದಕ್ಕೆ ತದ್ವಿರುದ್ಧದ ದಿಕ್ಕಿನಲ್ಲಿ ನಿಲ್ಲುತ್ತಾರೆಂದು ಅಭಿಪ್ರಾಯಪಟ್ಟಿದ್ದಾರೆ.

**೧೧೩. ರೋಮ್ಯಾಂಟಿಕ್ ಮುಸುಕಿನಲ್ಲಿ**[೧೧೧]

ಬೆಂಗಳೂರಿನ ಎಲ್. ಪ್ರಕಾಶ್ ಅವರ ಕಲಾಕೃತಿಗಳ ಪ್ರದರ್ಶನವು ಬೆಂಗಳೂರಿನ ಕೆಫೆ ಕಾಫಿ ಡೇಯ ಮೂರು ಮಳಿಗೆಗಳಲ್ಲಿ ಏಕಕಾಲದಲ್ಲಿ ನಡೆಯುತ್ತಿದೆ, ಪ್ರದರ್ಶನದಲ್ಲಿ ಚಿತ್ರಕ್ಷೇತ್ರವನ್ನು ಕುತೂಹಲಕರ ರೀತಿಯಲ್ಲಿ ವಿಭಜಿಸಿದ ಚಿತ್ರಯೋಜನೆಗೆ ಹೆಚ್ಚು ಗಮನ ಕೊಟ್ಟಿದ್ದಾರೆ ಇಲ್ಲಿ ಸರಳತೆಗೆ ತಿರುಗಿದ್ದಾರೆ. ಇವರ ಮೊಟಿಫ್ ಗೂಡು ದೀಪದಂತಹ ಆಕೃತಿಯ ಹಿಂದೆ ಪ್ರಧಾನ ಪಡೆದಿದ್ದರೆ, ಇಲ್ಲಿ ಗೌಣವೆನಿಸಿ ಅಮೂರ್ತದ ಹಾದಿ ಹಿಡಿದಿದೆ. ಈ ಹಿಂದೆ ಹರಸೂರ್ ಅವರ ಕೃತಿಗಳ ನೆನಪು ಹೆಚ್ಚಾಗಿ ಬರುತ್ತಿದ್ದರೆ, ಇಲ್ಲಿ ಆ ನೆನಪನ್ನು ಸಂಪೂರ್ಣ ಅಳಿಸುವಲ್ಲಿ ಇವರು

೧೧೧. ರೋಮ್ಯಾಂಟಿಕ್ ಮುಸುಕಿನಲ್ಲಿ, ಪ್ರಜಾವಾಣಿ, ಕರ್ನಾಟಕ ದರ್ಶನ, ೪ ಮೇ ೨೦೦೨

ಯಶಸ್ವಿಯಾಗಿದ್ದಾರೆ. ಮೊದಲಿನಿಂದಲೂ ಪ್ರಕಾಶ್ ಅವರ ಕೃತಿಗಳಲ್ಲಿ ಅಡಗಿರುವ ವಸ್ತು-ವಿಷಯವು ಸುಲಭವಾಗಿ ತಿಳಿಯುವಂತಿರುವುದಿಲ್ಲ. ಈ ಪ್ರದರ್ಶನದಲ್ಲಿಯೂ ಅದೇ ಸ್ಥಿತಿಯಲ್ಲಿದೆ, ಹಾಗಿದ್ದರೂ ಇವು 'ಅತೃಪ್ತ ಹೆಣ್ಣನ್ನು' ಕುರಿತದ್ದು ಎನ್ನುವ ಸೂಚನೆಯನ್ನು ಇವರ ಅಹ್ವಾನ ಪತ್ರಿಕೆಯು ನೀಡುತ್ತದೆ. ಅದರೆ ಇಲ್ಲಿನ ನಿರ್ವಹಣಾ ಕ್ರಮವಾಗಲೀ ರೋಮ್ಯಾಂಟಿಕ್ ರೂಪಗಳಾಗಲೀ ಆ ಭಾವನೆಗೆ ಪೂರಕವಾಗಿ ಕಂಡು ಬರುವುದಿಲ್ಲ. ಇವರ ಈಚಿನ ಕೃತಿಗಳ ಒಂದು ವೈಶಿಷ್ಟ್ಯವೆಂದರೆ ಹಿನ್ನೆಲೆಯಲ್ಲಿನ ವಿಶಿಷ್ಟ ನಿರ್ವಹಣೆಯಿಂದಾಗಿ ಅವರ ಕೃತಿಗಳೆಲ್ಲ ತೀವ್ರತೆಯಿಂದ ಕೂಡಿದಂತೆ, ಚಲನೆಯಲ್ಲಿರುವಂತೆ ಭಾಸವಾಗುತ್ತದೆ. ಇಲ್ಲಿನ ಕೃತಿಗಳೆಲ್ಲ ಕೆಂಪು ಪ್ರಧಾನ ವರ್ಣಮೇಳದ್ದಾಗಿದ್ದು, ಅದರೊಂದಿಗೆ ಇಲ್ಲಿನ ಆಕೃತಿಗಳ ಶೈಲೀಕರಣವೂ ಸೇರಿದಂತೆ ಇವು ಈ ಮಣ್ಣಿಗಿಂತಲೂ ಪಾಶ್ಚಾತ್ಯ ದೇಶಗಳಿಗೆ ಹತ್ತಿರದವು ಎನಿಸುತ್ತವೆ. ಹೀಗೆ ರೋಮ್ಯಾಂಟಿಕ್ ಮುಸುಕಿನಲ್ಲಿರುವ ಪ್ರಕಾಶ್ ಅವರ ಈ ಕೃತಿಗಳು ಸಾಮಾನ್ಯತೆಯಿಂದ ಸಾಕಷ್ಟು ಮೇಲಿವೆಯಾದರೂ ಆಳದಲ್ಲಿ ಪರಿಣಾಮಿಸುವಷ್ಟು ಪ್ರಭಾವಶಾಲಿಯಾಗಿಲ್ಲ ಎಂದರೆ ತಪ್ಪಲ್ಲ ಎಂದು ಕೃ.ಸೆ.ಯವರು ಈ ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ.

### ೧೧೪. ಸೋಲು-ಗೆಲುವುಗಳ ನಡುವಿನ ಎಲ್ಲವೂ ಇಲ್ಲಿವೆ[೧೧೨]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೮-೦೫-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಔಪಚಾರಿಕವಾಗಿ ಆಕಾಡೆಮಿಕ್‌ನೆಲೆಯಲ್ಲಿ ಕಲೆಯನ್ನು ಕಲಿತವರಿಗೂ, ಸ್ವಂತ ಅಭ್ಯಾಸದ ಹೊಸಬರಿಗೂ ಧೋರಣೆಗಳಲ್ಲಿ ಸಾಕಷ್ಟು ಭಿನ್ನತೆ ಇರುವುದನ್ನು ಗುರುತಿಸಬಹುದು. ವೃತ್ತಿಯಿಂದ ಭಾರತೀಯ ವಾಯುಸೇನೆಯಲ್ಲಿರುವ ಕೆ.ಪ್ರಭಾಕರ್ ಅವರ ಪ್ರದರ್ಶಿತ ಕಲಾಕೃತಿಗಳಲ್ಲಿ ಸಹಾ ಇದೇ ಅಂಶವನ್ನು ಗುರುತಿಸಬಹುದು. ಅವರು ರಚಿಸಿದ 'ಫೀಲಿಂಗ್ಸ್' ಹೆಸರಿನ ಕೃತಿಗಳ ಪ್ರದರ್ಶನವು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ಈ ಪ್ರದರ್ಶನದ ವಿಶೇಷತೆ ಎಂದರೆ ಬಹುಮುಖೀಯತೆ ಹಾಗೂ ವೈವಿಧ್ಯ. ಈ ವೈವಿಧ್ಯ ಹೊರತುಪಡಿಸಿದರೆ ರೂಪ ಸಾಕ್ಷಾತ್ಕಾರದಲ್ಲಿ, ಸಂಯೋಜನೆಯಲ್ಲಿ ಇವರು ಸಾಕಷ್ಟು ಎತ್ತರಕ್ಕೆ ಏರಿರುವ ಸೂಚನೆಯನ್ನು ಇಲ್ಲಿ ನೀಡಿದ್ದಾರೆ. ವಸ್ತುವಿನಂತೆಯೇ ಶೈಲಿಯಲ್ಲಿಯೂ ಇವರ ಆಸಕ್ತಿ ವೈವಿಧ್ಯಮಯವಾದುದು. ಅದರೊಂದಿಗೆ ಇಲ್ಲಿ ಕಂಡು ಬರುವ ಒಂದು ಲಕ್ಷಣವೆಂದರೆ ಕಲಾತ್ಮಕ ಏರಿಳಿತ, ಕೆಲವು ಕೃತಿಗಳಲ್ಲಿ ಪರಿಣಿತರ ಮಟ್ಟವನ್ನು ಇವರು ಮುಟ್ಟಿದ್ದಾರೆ ಸಾಮಾನ್ಯವಾಗಿ ಯಾವುದೇ ಕಲಾವಿದರಲ್ಲಿ ಈ ಬಗೆಯ ಏರಿಳಿತಗಳು ಈ ಪ್ರಮಾಣದಲ್ಲಿ ಕಂಡುಬರುವುದು ವಿರಳವೇ. ಬಹುತೇಕ ಎಲ್ಲೆಡೆ ಎಕ್ಸ್‌ಪ್ರೆಶನಿಸ್ಟರಿಗೆ ಹತ್ತಿರವಾದ ಒರಟು ನೆಲೆಯ ನಿರ್ವಹಣೆಯನ್ನು ಆರಿಸಿಕೊಂಡಿರುವುದು ನಿಜಕ್ಕೂ

---

೧೧೨. ಸೋಲು-ಗೆಲವುಗಳ ನಡುವಿನ ಎಲ್ಲವೂ ಇಲ್ಲಿವೆ, ಪ್ರಜಾವಾಣಿ, ಕರ್ನಾಟಕದರ್ಶನ, ೧೮ ಮೇ ೨೦೦೨

ಜಾಣತನದ ಲಕ್ಷಣವಾಗಿದೆ. ತಂತ್ರದಲ್ಲಿಯೂ ವೈವಿಧ್ಯವಿದ್ದರೂ ಹೆಚ್ಚಿನಡೆ ಪರಿಣಾಮಕಾರಿಯಾದ ಅನುಭವವನ್ನು ಇವರು ನೀಡುತ್ತಾರೆ.

ಆರಂಭದ ಬಹುತೇಕ ಕಲಾವಿದರಂತೆ ಇವರು ಕೂಡಾ ಸಾಮಾಜಿಕ ಬದ್ಧತೆಯನ್ನು ಅನಗತ್ಯವಾಗಿ, ಒತ್ತಾಯದಿಂದ ತರುವ ಪ್ರಯತ್ನ ಮಾಡುತ್ತಾರೆ. ಆದರೆ ಸಾಮಾಜಿಕ ಬದ್ಧತೆ ಶ್ರೀಸಾಮಾನ್ಯನ ಕುರಿತು ಕಳಕಳಿ, ಹಿಂಸೆ ಈ ಮುಂತಾದವು ಇರುವೆಡೆಯೆಲ್ಲ ಇವರ ಕೃತಿಗಳು ಬಹುತೇಕ ಸೊರಗಿವೆ, ಅಂದರೆ ಸಾಮಾಜಿಕ ಸಂದೇಶಗಳಲ್ಲಿ ಸೋಲುವ ಇವರು ದೈನಂದಿನ ಸಾಮಾನ್ಯ ದೃಶ್ಯಗಳಲ್ಲಿ ಗೆಲ್ಲುತ್ತಾರೆ. ಹೀಗೆ 'ಹೆದ್ದಾರಿಯೊಂದರಲ್ಲಿ ಚಳಿಗಾಲದ ರಾತ್ರಿ' 'ಲಕ್ನೊ ನಗರದ ಟೆಂಪೋಗಳು' ಡತ್ ಆಫ್' ಅವರ 'ಟೈಗರ್, ಗೋಧೂಳಿ'(ಇದರಲ್ಲಿ ಹೆಬ್ಬಾರರ ನೆನಪು ಬಂದರೂ ಕೂಡಾ) ಈ ಮುಂತಾದ ಕೃತಿಗಳಲ್ಲಿ ನಿಜಕ್ಕೂ ಮಿಂಚುತ್ತಾರೆಂಬುದನ್ನು ಕೃ.ಸೆ.ಯವರು ದಾಖಲಿಸಿದ್ದಾರೆ.

**೧೧೫. ಅತಿಯಾದ ರಂಜನೆ**[೧೧೩]

ಬೆಂಗಳೂರಿನ ಮಿಳಿಂದ್ ನಾಯಕ್ ಅವರ 'ಅರ್ಥ್‌ಸ್ಕೇಪ್' ಹೆಸರಿನ ಕಲಾಕೃತಿಗಳ ಪ್ರದರ್ಶನ 'ಗ್ಯಾಲರಿ ಝುನ್'ನಲ್ಲಿ ನಡೆಯಿತು. ಇವರ ನಿಸರ್ಗಾಧಾರಿತ ರಮ್ಯ, ರಂಜನೆಯ ಕೃತಿಗಳನ್ನು ಇಲ್ಲಿ ಪ್ರದರ್ಶಿಸಿದ್ದಾರೆ. ಕ್ಯಾನ್ವಾಸಿನ ಮೇಲೆ ತೈಲವರ್ಣಗಳು ಒಣಗುವ ಮೊದಲೇ ಕರೆದು ರೇಖೆಗಳನ್ನು, ಎಲೆಗಳನ್ನು ಸೃಷ್ಟಿಸುವ ತಂತ್ರದಿಂದ ಹಿಡಿದು ಪೇಸ್ಟಲ್-ಪೆನ್ಸಿಲ್‌ವರೆಗೆ ವೈವಿಧ್ಯತೆ ಇದೆ. ಕೆಲವು ಅಮೂರ್ತದ ಹಾದಿ ಹಿಡಿದಿವೆಯಾದರೂ ಅವು ಉಳಿದ ಕೃತಿಗಳ ಮುಂದುವರೆದ ರೂಪವಷ್ಟೇ ಆಗಿವೆ. ಆಕಾಡೆಮಿಕ್ ಶಿಕ್ಷಣ ಪಡೆದಿರದ ಮಿಲಿಂದ್ ಇಲ್ಲೆಲ್ಲ ಉತ್ತಮ ಆಕಾಡೆಮಿಕ್ ನಿರ್ವಹಣೆ ಸಾಧಿಸಿದ್ದಾರೆ.

ನೋಡುಗರ ಹೃದಯಾಳದಲ್ಲಿ ಸ್ಥಾನಗಳಿಸುವುದಕ್ಕಿಂತಲೂ ಸಾಮಾನ್ಯರ ಕಣ್ಣುಗಳಿಗೆ ರಂಜನೆಯನ್ನು ಒದಗಿಸುವ ದೃಷ್ಟಿಯಿಂದಲೇ ಮಿಲಿಂದ್ ಉತ್ತಮ ತಂತ್ರದ ನಡುವೆಯು ಪೆಪ್ಪರ್‌ಮಿಂಟ್‌ನಂತೆ ಸಿಹಿಯಾದ ಬಣ್ಣಗಳನ್ನು ಆರಿಸಿಕೊಳ್ಳುತ್ತಾರೆ. ಈ ಅತಿಯಾದ ಸಿಹಿತನವೇ ಈ ಕೃತಿಗಳ ಕಲಾತ್ಮಕ ಗಾಂಭೀರ್ಯಕ್ಕೆ ಮಿತಿ ಹಾಕುತ್ತವೆ. ಕೇವಲ ವರ್ಣಮೇಳವನ್ನು ಬದಲಾಯಿಸಿ ಇವುಗಳಿಗೆ ಕಲಾತ್ಮಕ ಆಳವನ್ನು ನೀಡುವ ಸಾಧ್ಯತೆ ಇದ್ದರೂ ಇವರು ನೋಡುಗರನ್ನು ಗಮನದಲ್ಲಿಟ್ಟುಕೊಂಡು ಸಿಹಿ ಹಂಚುವ ಕೆಲಸ ಮಾಡುತ್ತಾರೆ. ಹೀಗೆ ಅಲಂಕರಣದ ಆಶಯವುಳ್ಳವರಿಗೆ ಹಾಗು ಬರಿಯ ರೊಮ್ಯಾಂಟಿಕ್ ಮನಸುಗಳಿಗೆ ಇವು ಹಿಡಿಸಬಲ್ಲವೇ ಹೊರತು ಗಂಭೀರ

---

೧೧೩. ಅತಿಯಾದ ರಂಜನೆ, ಪ್ರಜಾವಾಣಿ, ಕರ್ನಾಟಕದರ್ಶನ, ೧೮ ಮೇ ೨೦೦೨

ಕಲಾಸಕ್ತರಿಗೆ ಅಷ್ಟಾಗಿ ಹಿಡಿಸುವುದಿಲ್ಲ ಎಂಬುದನ್ನು ಕೃ.ಸೆ.ಯವರು ಪ್ರಸಕ್ತ ಲೇಖನದ ಮೂಲಕ ವಿಶ್ಲೇಷಿಸಿದ್ದಾರೆ.

**೧೧೬. ಧಾರ್ಮಿಕ ಆಶಯಗಳ ನಡುವೆಯೂ ಕಲಾತ್ಮಕ ಒತ್ತಾಸೆ**[೧೧೪]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೧-೦೫-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಮೈಸೂರಿನ ಹಿರಿಯ ಕಲಾವಿದ ಜಿ,ಎಲ್,ಎನ್,ಸಿಂಹ ಅವರ ಕಲಾಕೃತಿಗಳ ಮಹತ್ವ ಕುರಿತು ಕೃ.ಸೆ.ಯವರು ಪ್ರಸ್ತುತಪಡಿಸಿದ್ದಾರೆ.

ಮೈಸೂರಿನ 'ರಾಮ್ಸ್‌ಸನ್ಸ್' ಕಲಾ ಪ್ರತಿಷ್ಠಾನ ಈಚೆಗೆ ಬೆಂಗಳೂರಿನಲ್ಲಿ ಪಾರಂಪರಿಕ ಕಲೆಗಳ ಬೃಹತ್ ಪ್ರದರ್ಶನವೊಂದನ್ನು ನಡೆಸಿತು. ಈ ಪ್ರದರ್ಶನದ ಹೈಲೈಟ್ ಎಂದರೆ ಪುರಾತನ ಋಗ್ವೇದ ಸಂಹಿತೆಯಲ್ಲಿನ 'ಶ್ರೀ ಸೂಕ್ತ'ವನ್ನು ಆಧರಿಸಿ, ಇದರಲ್ಲಿನ ಹದಿನೈದು ಶ್ಲೋಕಗಳಿಗೆ ಜಿ,ಎಲ್,ಎನ್,ಸಿಂಹ ಅವರ ದೃಶ್ಯ ರೂಪ ನೀಡಿದ್ದಾರೆ. ಇಡೀ ಸರಣಿಯನ್ನು ಏಕಸೂತ್ರದಲ್ಲಿ ಪೋಣಿಸುವಂತೆ ಇಲ್ಲಿನ ಆವರಣವನ್ನು ನಿರ್ವಹಿಸಲಾಗಿದೆ. ತಕ್ಷಣಕ್ಕೆ ಇವು ನಿರೂಪಣಾ ಚಿತ್ರಗಳೆಂದೇ ಅನಿಸಿದರೂ ಅವುಗಳನ್ನು ಮೀರಿದ ಹಲವಾರು ಕಲಾತ್ಮಕ ಅಂಶಗಳಿರುವುದು ಇವುಗಳ ವೈಶಿಷ್ಟ. ರೊಮ್ಯಾಂಟಿಕ್ ಕಲೆಯ ಅಂಶಗಳನ್ನು ಆಧ್ಯಾತ್ಮಿಕದೆಡೆಗೆ ತಿರುಗಿಸುವಲ್ಲಿಯೇ ಸಿಂಹ ಅವರ ಕೌಶಲ್ಯ ಅಡಗಿದೆ, ನಮ್ಮ ಹೆಸರಾಂತ ಕಲಾವಿದ ಶಂಕರ್‌ರಾವ್ ಆಳಂದಕರ್ ಅವರ ಕೃತಿಗಳ ನೆನಪನ್ನು ಇವು ತಂದರೂ ಇಲ್ಲಿ ಭಿನ್ನವಾದ ಹಲವಾರು ಅಂಶಗಳಿವೆ. ಈ ಕೃತಿಗಳಿಗೆ ಒಂದು ವಿಶಿಷ್ಟ ಪ್ರಭಾವಳಿಯನ್ನು ದೊರಕಿಸಿಕೊಡಲೋ ಎಂಬಂತೆ ಸಿಂಹ ಅವರು ತಮ್ಮೆಲ್ಲ ದೃಶ್ಯಗಳನ್ನು ಚಿನ್ನದ ದೂಳು ಹಾರುತ್ತಿರುವಂತೆ ಚಿತ್ರಿಸಿದ್ದಾರೆ. ಇವುಗಳನ್ನು ನೋಡಿದಾಗ ಕಾಳಿದಾಸ ತನ್ನ ಮೇಘದೂತದಲ್ಲಿ 'ಹೇಮಧೂಲೀ ಪರಿವೃತಃ' ಎಂದು ಹೇಳಿದ ಮಾತು ಇಲ್ಲಿಗೂ ಅನ್ವಯಿಸುವಂತೆ ಕಾಣುತ್ತದೆ. ಹಳದಿ ಪ್ರಧಾನವಾದ ಚಿನ್ನದ ದೂಳಿನಂತಹ ಆವರಣವೇ ಇವುಗಳನ್ನು ಧಾರ್ಮಿಕ ಆಯಾಮದೆಡೆಗೆ ತಿರುಗಿಸುತ್ತದೆ. ಇತ್ತೀಚಿನ ವರ್ಷಗಳಲ್ಲಿ ಈ ಬಗೆಯ ಆಧ್ಯಾತ್ಮಿಕ ಕೃತಿಗಳ ನಿರ್ಮಾಣವು ಸ್ಥಗಿತಗೊಂಡಂತಿರುವುದರಿಂದ ಹಲವಾರು ಮಿತಿಗಳ ನಡುವೆಯೂ ಸಿಂಹ ಅವರ ಈ ಕೃತಿಗಳು ಮನದಾಳದಲ್ಲಿ ನಿಲ್ಲುತ್ತವೆ.

ಪ್ರದರ್ಶನದಲ್ಲಿ ಪಾರಂಪರಿಕ ಪ್ರಕಾರಗಳಲ್ಲಿ ಎರಡನೆಯದಂತೆ ಮೈಸೂರು ಸಂಪ್ರದಾಯದ ಚಿತ್ರಗಳು ಮೈಸೂರಿನ ಬಿ,ಪಿ, ರಾಮಕೃಷ್ಣ ಅವರು ರಚಿಸಿದ ಈ ಕೃತಿಗಳಲ್ಲಿ ಎಂದಿನ ರೂಪಗಳೊಂದಿಗೆ, ಈ ಸಂಪ್ರದಾಯದಲ್ಲಿನ ಅಪರೂಪದ ವೈವಿಧ್ಯಗಳನ್ನು ಮುಂದಿಟ್ಟಿರುವುದು ಗಮನಾರ್ಹ, ಈ

---

೧೧೪. ಧಾರ್ಮಿಕ ಆಶಯಗಳ ನಡುವೆಯೂ ಕಲಾತ್ಮಕ ಒತ್ತಾಸೆ, ಪ್ರಜಾವಾಣಿ,ಕರ್ನಾಟಕದರ್ಶನ, ೧೧ ಮೇ ೨೦೦೨

ಸಂಪ್ರದಾಯದ ಒಂದೇ ಬಗೆಯ ಕೃತಿಗಳನ್ನು ನೋಡಿದ್ದವರಿಗೆ ಇಲ್ಲಿನ ವಿರಳ ರೂಪಗಳು ನಿಜಕ್ಕೂ ಕುತೂಹಲವುಂಟು ಮಾಡುತ್ತವೆ. ಪಾಯಿಂಟ್‌ಲಿಸ್ಟರಂತೆ ಹಿನ್ನೆಲೆಯಲ್ಲಿ ಚುಕ್ಕಿಗಳಂತಹ ನಿರ್ವಹಣೆ, ತಂಜಾವೂರು ಶೈಲಿಯಂತೆ ಹರಳುಗಳು, ಚಿನ್ನದ ತಗಡುರಹಿತವಾದ ಕೃತಿಗಳು, ಜೊತೆಗೆ ಈಶ್ವರನನ್ನು ಪ್ರಧಾನವಾಗುಳ್ಳ ಕೃತಿಗಳು ಸೇರಿದಂತೆ ಸಾಮಾನ್ಯೇತರ ಅಂಶಗಳು ಇರುವುದು ಇಲ್ಲಿನ ವಿಶೇಷ. ನಮ್ಮಲ್ಲಿ ಸಂಪ್ರದಾಯದ ನಿಜ ಚೈತನ್ಯವನ್ನು ಹಿಡಿದಿಡುವಂತಹವರು ತುಂಬ ವಿರಳವಾಗಿರುವ ಈ ದಿನಗಳಲ್ಲಿ ರಾಮಕೃಷ್ಣ ಅವರ ಕೃತಿಗಳು ಸಾಕಷ್ಟು ಸಾಂತ್ವನ ನೀಡುತ್ತವೆ ಎಂದು ಕೃ.ಸೆ. ಅಭಿಪ್ರಾಯಪಟ್ಟಿದ್ದಾರೆ.

### ೧೧೭. ಮಕ್ಕಳೊಳಗಿನ ಸೃಜನಶೀಲತೆ[೧೧೫]

ಕಲಾವಿದ ಆರ್ ರಾಜಾ ಅವರ ನೇತೃತ್ವದ ವಿಶುಯಲ್ ಆರ್ಟ್ ಟ್ರಸ್ಟ್ ಮಕ್ಕಳಿಗಾಗಿ ಬೆಂಗಳೂರಿನ ಎನ್, ಆರ್, ಕಾಲೋನಿಯ ಗೋಖಲೆ ಇನ್‌ಸ್ಟಿಟ್ಯೂಟ್‌ನಲ್ಲಿ ನಡೆಸಿದ ವಾರ್ಷಿಕ ಕಾರ್ಯಾಗಾರದಲ್ಲಿ ರಚಿತವಾದ ಕೃತಿಗಳ ಪ್ರದರ್ಶನವನ್ನು ಏರ್ಪಡಿಸಿತ್ತು. ಪ್ರತಿ ಬಾರಿಯೂ ನಮ್ಮ ಪುರಾಣದಲ್ಲಿನ ಘಟನೆಯೊಂದನ್ನು ಆರಿಸಿಕೊಂಡು ಅದನ್ನು ಮಕ್ಕಳು ಸ್ವಚ್ಛಂದವಾಗಿ ಅಭಿವ್ಯಕ್ತಿಸಲು ಅವಕಾಶ ನೀಡಿರುವುದು ಈ ಶಿಬಿರದ ಹೆಗ್ಗಳಿಕೆ. ಈ ಬಾರಿ 'ಅಶೋಕ ವನದಲ್ಲಿ ಸೀತೆ'ಯ ಕಥೆ ಕೇಳಿದ ಈ ಮಕ್ಕಳು ಪ್ಲಾಸ್ಟರ್ ಆಪ್ ಪ್ಯಾರಿಸ್‌ನಲ್ಲಿ ರಿಲೀಫ್ ಶಿಲ್ಪಗಳನ್ನು ಹಾಗು ಆಯಿಲ್ ಪೇಸ್ಟಲ್ಸಗಳನ್ನು ವರ್ಣ ಚಿತ್ರಗಳನ್ನು ರಚಿಸಿದ್ದಾರೆ. ದೊಡ್ಡವರ 'ನಿಯಂತ್ರಣ'ವಿಲ್ಲದೆ ಸೃಷ್ಟಿಗೊಂಡ ಇವುಗಳಲ್ಲಿ ಮಕ್ಕಳ ಅಭಿವ್ಯಕ್ತಿ ಸಾಮರ್ಥ್ಯ ನಿಜಕ್ಕೂ ನಮ್ಮನ್ನು ದಂಗುಬಡಿಸುತ್ತದೆ. 'ದೊಡ್ಡವರ' ಮಾಧ್ಯಮವನ್ನು ಈ ಮಕ್ಕಳು ನಿರ್ವಹಿಸಿ, ನಿಯಂತ್ರಿಸಿದ ರೀತಿ ನಮಗೆ ನಿಜಕ್ಕೂ ಇಷ್ಟವಾಗುತ್ತದೆ. ಮಕ್ಕಳಲ್ಲಿ ಹುದುಗಿರುವ ಅಭಿವ್ಯಕ್ತಿ ಸಾಮರ್ಥ್ಯವನ್ನು ಹೇಗೆ ಹೊರತರಬಹುದೆಂಬುದಕ್ಕೆ ಈ ಶಿಬಿರವೊಂದು ಸಮರ್ಥ ಉದಾಹರಣೆ ಎಂಬುದನ್ನು ಕೃ.ಸೆ.ಯವರು ಈ ಲೇಖನದಲ್ಲಿ ಚರ್ಚಿಸಿದ್ದಾರೆ.

### ೧೧೮. ವಿಭಿನ್ನ ಪೌರ್ವಾತ್ಯ ರೂಪಗಳು ಕಸಿಗೊಂಡ ಹೊಸ ರೂಪ[೧೧೬]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೮-೦೫-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಜಪಾನಿನ ಕಲಾವಿದ ಯೂರಿಕೊ ಲೋಚನ ಅವರ ಕಲಾ ಕೃತಿಗಳ ಕಲಾ ಪ್ರದರ್ಶನ ವಿಂಡ್ಸರ್ ಮ್ಯಾನರ್ ಹೋಟೆಲ್‌ನ ವೆಸ್ಟ್ ಮಿನಿಸ್ಟರ್ ಆರ್ಟ್ ಗ್ಯಾಲರಿಯಲ್ಲಿ ನಡೆದ ಪ್ರದರ್ಶನದ ವಿಶೇಷತೆಯನ್ನು ಕೃ.ಸೆ.ಯವರು ದಾಖಲಿಸಿದ್ದಾರೆ.

---

೧೧೫. ಮಕ್ಕಳೊಳಗಿನ ಸೃಜನಶೀಲತೆ, ಅದೇ

೧೧೬. ವಿಭಿನ್ನ ಪೌರ್ವಾತ್ಯ ರೂಪಗಳು ಕಸಿಗೊಂಡ ಹೊಸ ರೂಪ, ಪ್ರಜಾವಾಣಿ, ಕರ್ನಾಟಕದರ್ಶನ, ೧೮ ಮೇ ೨೦೦೨

ಜಪಾನಿನ ಒಸಕಾದ ಯುರಿಕೊ ಅವರು ಕೋಟೋದ ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಕಲಾ ಪದವಿ ಪಡೆದಿದ್ದಾರೆ. ಪ್ರಸ್ತುತ ದೆಹಲಿಯ ಕಲಾವಿದರೊಬ್ಬರನ್ನು ವಿವಾಹವಾಗಿ ಕಳೆದ ಹನ್ನೊಂದು ವರ್ಷಗಳಿಂದ ದೆಹಲಿಯಲ್ಲಿ ನೆಲೆಸಿದ್ದಾರೆ, ಈ ಅವಧಿಯಲ್ಲಿ ಭಾರತೀಯ ಸಾಂಪ್ರದಾಯಿಕ ಕಲೆಗಳ ಬಗ್ಗೆ ಆಸಕ್ತಿ ವಹಿಸಿ ತಮ್ಮ ಮೂಲದ ಜಪಾನಿ ಹಾಗು ಭಾರತೀಯ ಕಲೆಗಳ ಅಂಶಗಳನ್ನು ಕಸಿ ಮಾಡುವ ಪ್ರಯತ್ನ ಮಾಡಿದ್ದಾರೆ. ಇವರ ಕೃತಿಗಳ ರೂಪ ಜಪಾನಿನದ್ದಾದರೂ ವಸ್ತು ಮಾತ್ರ ಭಾರತೀಯದ್ದೇ ಆಗಿದೆ. ಹೀಗೆ ಜಪಾನಿ ರೂಪಗಳ ಮೂಲಕ ಭಾರತೀಯ ಸಂಪ್ರದಾಯ ಕಲೆಯನ್ನು ಪುನರ್‌ರೂಪಿಸುವ ಮನಸ್ಸು ಇಲ್ಲಿದೆ.

ಇವರು ದೇವ–ದೇವತೆಯರು, ಗಂಗಾ, ಕಾಳಿ, ಭಕ್ತರು ಈ ಮುಂತಾದುವುಗಳೊಂದಿಗೆ ಆಧ್ಯಾತ್ಮಿಕ ನೆಲೆಯ ಹಲವು ವಸ್ತುಗಳನ್ನು ಕೃತಿಗಳಲ್ಲಿ ಪರಿಭಾವಿಸಿದ್ದಾರೆ. ಇವುಗಳ ನಿರ್ಮಾಣಕ್ಕಾಗಿ ವಿಶಿಷ್ಟವಾದ ಜಪಾನಿನ ಶಿಕಿಶಿ ಹಾಳೆಯನ್ನು ಬಳಸಿಕೊಂಡಿದ್ದಾರೆ. ಒಂದು ನಿರ್ಧಿಷ್ಟವಾದ ಚಿಕ್ಕ ಅಳತೆಯಲ್ಲಿ ಚಿನ್ನದ ಬಣ್ಣದ ಅಂಚಿನೊಂದಿಗೆ, ಹೊಳೆಯುವ ಹಿನ್ನೆಲೆಯಲ್ಲಿ ಬರುವ ಹಾಳೆಗಳ ಮೇಲೆ ಕೃತಿ ರಚಿಸಿದ್ದು ವಿಸ್ತಾರಕ್ಕೆ ಬೇಕೆನಿಸಿದೆಡೆ ಹೆಚ್ಚಿನ ಹಾಳೆಗಳನ್ನು ಜೋಡಿಸಿದ್ದಾರೆ. ಈ ಹಾಳೆಗಳ ಮೇಲೆ ಜಲವರ್ಣ ಮತ್ತು ಗ್ವಾಸ್ ತಂತ್ರದಲ್ಲಿ ಕೃತಿಗಳನ್ನು ರೂಪಿಸಿದ್ದಾರೆ. ಪೌರ್ವಾತ್ಯ ಕಲೆಯ ಮುಖ್ಯ ಅಂಶಗಳಾದ ರೇಖೆಗಳು, ಸಮತಟ್ಟಾದ ವರ್ಣಗಳು ಇವುಗಳೊಂದಿಗೆ ಸಮಕಾಲೀನ ವೆನಿಸುವಂತಹ ನಿರ್ವಹಣೆ ಇದೆ. ಹಲವೆಡೆ ಹಿನ್ನೆಲೆಯಲ್ಲಿ ಅಮೂರ್ತವೆನಿಸುವಂತಹ ಕುಂಚದ ಬೀಸುಗಳಿವೆ.

ಯುರಿಕೊ ಅವರ ಕಸಿ ಮಾಡಿದ ಈ ರೂಪಗಳು ಕೆಲವೆಡೆ ದೆಹಲಿಯ ಎ. ರಾಮಚಂದ್ರನ್ ಅವರ ಈಚಿನ ಕೃತಿಗಳ ನೆನಪು ತರುತ್ತದೆ. ಹಾಗಿದ್ದರೂ ಇವರ ಕೃತಿಗಳಲ್ಲಿ ತಂತ್ರ ರೂಪಗಳೆರಡರ ದೃಷ್ಟಿಯಿಂದಲೂ ಹೊಸತನವನ್ನು ಕಾಣಬಹುದು. ಹೊಳೆಯುವ ಹಿನ್ನೆಲೆಯ ಹಾಳೆಯು ಅಲ್ಲಲ್ಲಿ ತೆಳುವಾಗಿ ಮಿಂಚುವ ಮೂಲಕವೂ ಇವುಗಳಿಗೆ ಆಧ್ಯಾತ್ಮಿಕ ಆವರಣವನ್ನು ನಿರ್ಮಿಸಿದೆ. ಜೊತೆಗೆ ಈ ಕಲಾವಿದೆ ನಮ್ಮ ಸಾಂಪ್ರದಾಯಿಕ ಕೃತಿಗಳಲ್ಲಿ ಬಳಸುವ ಚಿನ್ನದ ತಗಡುಗಳನ್ನು ಅಲ್ಲಲ್ಲಿ ಬಳಸಿದ್ದಾರೆ. ಕೆಲವೆಡೆಯಂತೂ ಇವರ ನಿರ್ವಹಣೆಯ ವಿಧಾನದಲ್ಲಿ ನೋಡುಗರು ಶೂನ್ಯದಲ್ಲಿಯೇ ಆಕೃತಿಗಳನ್ನು ಕಲ್ಪಿಸಿಕೊಳ್ಳಬೇಕಾದ ಪರಿಯೂ ಇಲ್ಲಿದೆ. ಉದಾಹರಣೆ ಅಗಲವಾದ ಹರವಿನಲ್ಲಿ ರಚಿಸಿರುವ 'ಗಂಗಾ' ಕೃತಿಯಲ್ಲಿ ಹಾಳೆಗಳನ್ನು ಒಂದೆರಡು ಕಡೆ ದೂರದಲ್ಲಿ ಅಂಟಿಸಿ ಖಾಲಿ ಸ್ಥಳ ಬಿಟ್ಟಿದ್ದಾರೆ. ಆದರೆ ಪಕ್ಕದ ಹಾಳೆಯೊಂದಿಗೆ ಅದರ ಸಂಬಂಧ ಮುಂದುವರೆದಿರುವುದರಿಂದ ಆ ಖಾಲಿ ಸ್ಥಳದಲ್ಲಿಯೂ ಆಕೃತಿಗಳನ್ನು ಕಲ್ಪಿಸಿಕೊಳ್ಳಬೇಕಾದ ಈ ವಿಧಾನವು ಹೆನ್ರಿ ಮೂರನ ಶಿಲ್ಪಗಳಲ್ಲಿಯೂ ಇದ್ದಂತಹ ವಿಧಾನವೇ ಆಗಿದೆ ಎಂಬುದನ್ನು ಲೇಖಕರು ಇಲ್ಲಿ ಗುರುತಿಸಿದ್ದಾರೆ.

### ೧೧೯. ಬಹುರೂಪಿ ಹೆಣ್ಣು[೧೧೭]

ದೆಹಲಿಯ ಮಲ್ಟಿಪಲ್ ರಿಸರ್ಚ್ ಗ್ರೂಪ್ ಸಂಘಟಿಸಿದ ಕಲಾವಿದೆ ಗಾಯತ್ರಿ ಸಿನ್ಹಾ ಮತ್ತು ದೇಶದ ಹೆಸರಾಂತ ೨೭ ಛಾಯಾಗ್ರಾಹಕರ ಛಾಯಾಚಿತ್ರಗಳ ಪ್ರದರ್ಶನ ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. 'ವುಮೆನ್ ಗಾಡ್ಡೆಸ್' ಹೆಸರಿನ ಈ ಪ್ರದರ್ಶನದಲ್ಲಿ ಹೆಣ್ಣನ್ನು ವಿವಿಧ ನೆಲೆಗಳಲ್ಲಿ ನೋಡುವ ಪ್ರಯತ್ನವಿದ್ದರೂ, ಮುಖ್ಯವಾಗಿ ಕೆಲವು ಚೌಕಟ್ಟುಗಳನ್ನು ಹಾಕಿಕೊಂಡು ಅದರೊಳಗೆ ಪರಿಭಾವಿಸುವ ಆಶಯವಿದೆ. ಇವುಗಳೆಲ್ಲ ಕಳೆದ ಐದು ದಶಕಗಳ ಅವಧಿಯಲ್ಲಿ ದೇಶಾದ್ಯಂತ ತೆಗೆದಂಥವು. ಸ್ವಾತಂತ್ರ್ಯೋತ್ತರ ಭಾರತದ ಸಂದರ್ಭದಲ್ಲಿ ಹೆಣ್ಣಿನ ಸ್ಥಾನಮಾನ ಇತ್ಯಾದಿಗಳನ್ನು ಸೂಕ್ಷ್ಮವಾಗಿ ನಿರೂಪಿಸುವ ಈ ಪ್ರದರ್ಶನದಲ್ಲಿ ಹೆಣ್ಣನ್ನು ವೈಭವೀಕರಿಸುವ ಸುಪ್ತ ಆಶಯವಿದೆ. 'ದೇವತೆಯಾಗಿ ಮಹಿಳೆ' ಎನ್ನುವ ಪ್ರದರ್ಶನದ ಶೀರ್ಷಿಕೆಯೂ ಇದನ್ನೇ ಸಮರ್ಥಿಸುತ್ತದೆ. ಡಾಕ್ಯುಮೆಂಟರಿಯ ಚಿತ್ರಗಳ ಮೂಲಕವೇ ಹೆಣ್ಣಿನ ಸ್ಥಿತಿಗತಿಗಳನ್ನು ಅರ್ಥಮಾಡಿಸುವ ಈ ಪ್ರಯತ್ನ ವಿಶಿಷ್ಟವಾದುದು. ಇಲ್ಲಿನ ಛಾಯಾಗ್ರಾಹಕರೆಲ್ಲ ಸಾಕಷ್ಟು ಗಮನಾರ್ಹರಾದ್ದರಿಂದ ಎಲ್ಲ ಮಿತಿಗಳ ನಡುವೆಯೂ ಕಲಾತ್ಮಕತೆಯೆಡೆಗೆ ಗಮನ ಹರಿಸಿದ್ದಾರೆ. ಕೆಲವು ಸಾಮಾನ್ಯದ್ದೆನಿಸಿದರೂ ಹೆಚ್ಚಿನವು ಕಲಾತ್ಮಕವಾಗಿವೆ. ವಿಶೇಷತಃ ಕಪ್ಪು ಬಿಳುಪಿನ ಛಾಯಾಚಿತ್ರಗಳಲ್ಲೇ ಈ ಕಲಾತ್ಮಕ ಅಂಶಗಳು ಹೆಚ್ಚಾಗಿವೆ. ವಾಸ್ತವದ ಘಟನಾ ಚಿತ್ರಗಳ ಮೂಲಕವೇ ನಮ್ಮ ಮೇಲೆ ನೇರ ಪರಿಣಾಮ ಬೀರುತ್ತವೆಂಬುದನ್ನು ಕೃ.ಸೆ.ಈ ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ.

### ೧೨೦. ಹೊಸ ಹೆಜ್ಜೆಗೆ ವಿಶ್ವ ಶ್ರೇಷ್ಠರ ಕೃತಿಗಳ ಎರವಲು[೧೧೮]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೫-೦೫-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕೃ.ಸೆ.ಯವರು ಯೂಸುಫ್ ಅರಕ್ಕಲ್ ಅವರ ಕಲಾಕೃತಿಗಳ ವಿಶೇಷತೆಯನ್ನು ಪ್ರಸ್ತಾಪಿಸಿದ್ದಾರೆ. "ಮೈ ಬುಕ್ ಆಫ್ ರೆಫರೆನ್ಸಸ್" ಶೀರ್ಷಿಕೆಯ ಈ ಕಲಾಕೃತಿಗಳ ಈ ಪ್ರದರ್ಶನದಲ್ಲಿ ತಂತ್ರ ಹಾಗು ರೂಪಗಳು ಅವರ ಎಂದಿನವೇ ಆದರೂ ಅದಕ್ಕೆ ಸ್ವಲ್ಪ ಹೊಸ ಅಯಾಮ ತಂದಿರುವುದು ಪ್ರದರ್ಶನದ ವೈಶಿಷ್ಟ್ಯ. ಈ ಎಲ್ಲ ಕೃತಿಗಳಲ್ಲಿ ಯೂಸುಫ್ ಅವರ ನಿರಂತರ ಮೊಹರಾಗಿರುವ ಮೈವಳಿಕೆ ಪ್ರಧಾನವಾದ ಅಮೂರ್ತ ಹಿನ್ನೆಲೆಯು ಅದೇ ರೀತಿಯಲ್ಲಿ ಮುಂದುವರೆದಿದೆ. ಕುತೂಹಲದ ವಿಷಯವೆಂದರೆ ಈ ಕೃತಿಗಳಲ್ಲಿ ಹೆಸರಾಂತರ ರೂಪಗಳನ್ನು ಉತ್ತಮವಾಗಿ ನಕಲು ಮಾಡುವ ಮೂಲಕ ತಾವು ಉತ್ತಮ ಫಿಗರೆಟಿವ್ ಕಲಾವಿದರೂ ಹೌದೆಂಬುದನ್ನು ಇವರು ಸಾಬೀತುಗೊಳಿಸುತ್ತಾರೆ. ಜೊತೆಗೆ ಅವರಲ್ಲಿ ಸ್ವಲ್ಪ ಅಪರೂಪದ ಅಕ್ಷರ

---

೧೧೭. ಬಹುರೂಪಿ ಹೆಣ್ಣು, ಪ್ರಜಾವಾಣಿ, ಕರ್ನಾಟಕದರ್ಶನ, ೨೫ ಮೇ ೨೦೦೨

೧೧೮. ಹೊಸ ಹೆಜ್ಜೆಗೆ ವಿಶ್ವ ಶ್ರೇಷ್ಠರ ಕೃತಿಗಳ ಎರವಲು, ಪ್ರಜಾವಾಣಿ, ಕರ್ನಾಟಕ ದರ್ಶನ, ೨೫ ಮೇ ೨೦೦೨

ರೂಪದ ಹೇಳಿಕೆಗಳನ್ನು ಇಲ್ಲಿ ತಂದಿದ್ದಾರೆ. ಈ ಬಾರಿ ಸಂಯೋಜನೆಯ ವಿಭಜನೆಯಲ್ಲಿ ಇತರರ ಇಮೇಜ್‌ಗಳನ್ನು ಹೊಂದಿಸುವಲ್ಲಿಯೂ ವಿಶಿಷ್ಟ ಜಾಣ್ಮೆ ತೋರಿಸಿದ್ದಾರೆ.

ಕರ್ನಾಟಕದ ಸಂದರ್ಭದಲ್ಲಿ ಇಂದು ಉತ್ತುಂಗ ಶಿಖರದಲ್ಲಿರುವ ಯೂಸುಫ್ ಅವರಲ್ಲಿ ನಾರ್ಸಿಸಸ್ ಕಾಂಪ್ಲೆಕ್ಸ್ ಬೆಳೆದಿದೆಯೇನೋ ಎನ್ನುವುದು ಎಕೆಂದರೆ ವಿಶ್ವ ಶ್ರೇಷ್ಠರೊಂದಿಗೆ ತಮ್ಮನ್ನು ಸಮೀಕರಿಸಿಗೊಳ್ಳುವ ಹಿಡೆನ್ ಅಜೆಂಡಾ ಇಲ್ಲಿರುವ ಸೂಚನೆಯಿದೆ. ಇತರೆ ಕಲಾವಿದರ ಇಮೇಜ್ ಗಳನ್ನು ಅದರ ಕಾಂಟೆಸ್ಟ್‌ನಿಂದ ಹೊರತೆಗೆದರೆ ಅವುಗಳನ್ನು ವಿರೂಪಗೊಳಿಸಿದ ಹಾಗಾಗುವುದಿಲ್ಲವೇ ಎನ್ನುವ ಜಿಜ್ಞಾಸೆಯನ್ನು ಇವು ಮುಂದಿಡುತ್ತವೆ(ಹಾಗಿದ್ದರೂ ವಿಶ್ವದ ಕಲೆಯಲ್ಲಿ ಈ ಬಗೆಯ ಹಲವಾರು ಉದಾಹರಣೆಗಳಿವೆ ಎನ್ನುವ ಅರಿವಿದ್ದರೂ ಈ ಮಾತು ಹೇಳಬಹುದಾಗಿದೆ). ಈ ಪ್ರದರ್ಶನದಲ್ಲಿ ಈ ಬಗೆಯ ಕೃತಿಗಳಿಂದ ಹೊರತಾದ ಕಂಪ್ಯೂಗ್ರೇವ್ಯೂರ್ ತಂತ್ರದ ಕೆಲವು ಕೃತಿಗಳನ್ನು ಪ್ರದರ್ಶಿಸಿದ್ದಾರೆ. ಇವುಗಳಲ್ಲಿ ಉಳಿದ ಕೃತಿಗಳಂತೆ ಇವರ ಹಿನ್ನೆಲೆ ಮೈವಳಿಕೆಗಳೆಲ್ಲ ಬದಲಿಗೆ ಅಯಾ ಕಲಾವಿದರ ಕೃತಿಗಳನ್ನು ಕತ್ತರಿಸಿ ಕೊಲಾಜ್‌ನಂತೆ ಹೊಸಬಗೆಯಲ್ಲಿ ಜೋಡಿಸಿದ್ದರೆ. ಇದೂ ಕೂಡಾ ಇನ್ನೊಂದು ಬಗೆಯಲ್ಲಿ ವಿರೂಪವಲ್ಲವೇ ಇನ್ನೊಬ್ಬರ ಕೃತಿಗಳನ್ನು ಹೀಗೆ ಮಾಡುವುದು ಸರಿಯೇ. ಹೊಸತನದ ಸ್ಪರ್ಶಕ್ಕಾಗಿ ವಿಶ್ವಶ್ರೇಷ್ಠರ ಸಹಾಯ ಹಸ್ತ ಪಡೆದಿದ್ದರಾದರೂ ಅದು ಇವರಿಗೆ ಇಲ್ಲಿ ಅಷ್ಟಾಗಿ ಸಹಾಯ ಮಾಡುವುದಿಲ್ಲ. ಅದೇನೇ ಇರಲಿ. ಈ ಬಗೆಯ ಎಲ್ಲ ಪ್ರಯೋಗಗಳ ನಂತರವೂ ಹಳೆಯ ಆವರಣದಿಂದ ಇವರಿಗೆ ಹೊರಬರಲು ಆಗಿಲ್ಲ ಎನ್ನುವುದೇ ಈ ಪ್ರದರ್ಶನ ನೀಡುವ ಒಂದು ಸಂದೇಶ ಎನ್ನುವುದನ್ನು ಲೇಖಕರು ಮರೆಯದೇ ಇಲ್ಲಿ ಹೇಳಿದ್ದಾರೆ.

**೧೨೧. ಬದುಕಿನ ಸಂಭ್ರಮಕ್ಕೆ ಸಂಭ್ರಮಾತ್ಮಕ ಪ್ರತಿಕ್ರಿಯೆ**[೧೧೯]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೧-೦೬-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ದಾವಣಗೆರೆಯ ಕಲಾವಿದ ವಿ.ಬಿ. ಹೀರೇಗೌಡರ್ ರವರ ಕಲಾಕೃತಿಗಳ ಕುರಿತು ವಿಶ್ಲೇಷಿಸಿದ್ದಾರೆ.

ದಾವಣಗೆರೆ ವಿಶ್ವವಿದ್ಯಾಲಯದ ಲಲಿತಕಲಾ ಮಹಾವಿದ್ಯಾಲಯದ ಪ್ರಾಂಶುಪಾಲರಾದ ವಿ.ಬಿ.ಹೀರೇಗೌಡರ್ ಅವರ ಕಲಾಕೃತಿಗಳ ಪ್ರದರ್ಶನ ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. 'ನಾದವರ್ಣ' ಹೆಸರಿನ ಈ ಪ್ರದರ್ಶನದಲ್ಲಿ ವರ್ತಮಾನದ ಬದುಕಿನಲ್ಲಿನ ನೋವು ನಿರಾಶೆ. ಖಿನ್ನತೆ ಈ ಮುಂತಾದ ನೇತ್ಯಾತ್ಮಕ ಅಂಶಗಳು ತುಂಬಿದ್ದರೂ, ನವೋದಯ ಕಲಾವಿದರಲ್ಲಿಯಂತೆ

---

೧೧೯. ಬದುಕಿನ ಸಂಭ್ರಮಕ್ಕೆ ಸಂಭ್ರಮಾತ್ಮಕ ಪ್ರತಿಕ್ರಿಯೆ, ಪ್ರಜಾವಾಣಿ, ಕರ್ನಾಟಕದರ್ಶನ, ೧ ಜೂನ್ ೨೦೦೨

ಹಿರೇಗೌಡರ್ ಅವರು ಬದುಕಿನ ಸಂಭ್ರಮವನ್ನೆ ವಿಜೃಂಭಿಸುತ್ತಾರೆ. ದೈನಂದಿನ ಸಾಮಾನ್ಯ ಸಂಗತಿಗಳನ್ನೇ ತಮ್ಮ ಕೃತಿಗಳಲ್ಲಿ ಹೆಚ್ಚಾಗಿ ತರುವ ಇವರು ಆಕಾಡೆಮಿಕ್ ನವ್ಯದ ಕಲಾವಿದರಂತೆ ಚಿತ್ರಭಾಷೆಗೆ, ಆಕಾಡೆಮಿಕ್‌ಕಲಾವ್ಯಾಕರಣಕ್ಕೆ ಹೆಚ್ಚಿನ ಮಹತ್ವ ನೀಡುತ್ತಾರೆ. ಈ ಎಲ್ಲ ಕೃತಿಗಳಲ್ಲಿ ಸ್ಥಾಯಿಯಾಗಿ ಇರುವುದು ಒಂದು ಬಗೆಯ ತರಂಗಿತಾತ್ಮಕತೆ, ಇವರ ಹೆಚ್ಚಿನ ಆಕೃತಿಗಳು ಪಟಾಕಿ ಸಿಡಿಸಿದಾಗ ಸಿಡಿಯುವಂತೆ, ಒಡೆದ ಅಲೆಗಳಂತೆ ಚಲಿಸುತ್ತಿರುತ್ತವೆ. ಹೀಗೆ ಚಿತ್ರ ಕ್ಷೇತ್ರದ ಎಲ್ಲೆಡೆ ಚಲಿಸುವಂತಹ ಆಕೃತಿಗಳು ತುಂಬಿರುವುದರಿಂದ ಅದು ಕ್ರಿಯಾತ್ಮಕವಾಗಿರುತ್ತದೆ. ನವೋದಯದ ಧೋರಣೆಗೆ ಒಗ್ಗುವಂತೆ ಇವರ ವಸ್ತುವಾಗಲೀ, ದೃಶ್ಯಗಳಾಗಲೀ ವಾಸ್ತವದ ನೆಲೆಗಟ್ಟಿಗೆ ಇಳಿಯದೇ ಆದರ್ಶದ ಆಗಸದಲ್ಲಿ ತೇಲಾಡುವುದು ವಿವರಿಸುವುದೇ ಹೆಚ್ಚು.

ಸಾಂಗತ್ಯ ನಿರ್ಮಿಸುವ ಏಕವರ್ಣ ಪ್ರಧಾನ ಕೃತಿಗಳಿಗಿಂತಲೂ ಹಿರೇಗೌಡರ್ ಅವರು ಬಹು ವರ್ಣಗಳ ವರ್ಣಮೇಳವನ್ನೇ ಆರಿಸಿಕೊಳ್ಳುತ್ತಾರೆ. ತುಂಬ ಶುದ್ಧವಾಗಿ ತಾಜಾತನದಿಂದ ನಿರ್ವಹಿಸಿದಂತಹ ಈ ವರ್ಣಗಳು ಅವರ ಸಂಭ್ರಮದ, ಉತ್ಸಾಹದ ನಿಲುವಿಗೆ ಪೂರಕವಾಗಿವೆ. ಮೂರ್ತ ಚಿತ್ರಗಳಲ್ಲೂ ಅಮೂರ್ತವೇ ಮೆರೆಯುವಂತಹ ಆವರಣ ಸೃಷ್ಟಿಸುವುದು ಇವರ ವಿಧಾನ ಹಾಗಾಗಿ ಮೂರ್ತ ಆಕೃತಿಗಳೂ ಅಮೂರ್ತದಿಂದ ಆಗತಾನೇ ರೂಪಗೊಳ್ಳುತ್ತಿರು ವಂತಿರುತ್ತವೆ. ಒಟ್ಟಾರೆಯಾಗಿ ಇವರ ಕೃತಿಗಳು ಸಂಗೀತಕ್ಕೆ ಹತ್ತಿರವಾಗಿದ್ದು, ಅದರ ನಾದಮಯತೆ ಯನ್ನು ಕೃತಿಗಳಲ್ಲಿ ಅವಾಹಿಸುತ್ತದೆ. ಹಾಗಾಗಿ ಒಂದೆರಡು ದಶಕಗಳ ಹಿಂದೆ ಸಂಭ್ರಮಿಸಿದ ಪ್ರಕಾರದ ಈ ಕೃತಿಗಳು ಪೋಸ್ಟ್-ಮಾಡರ್ನ್ ನೆಲೆಯವರಿಗೆ ನಿರಾಸೆಯುಂಟು ಮಾಡುತ್ತವಾದರೂ ಸಂಭ್ರಮವನ್ನೂ ನಿರೀಕ್ಷಿಸುವ ಕಲಾಸಕ್ತರನ್ನು ನಿಜಕ್ಕೂ ತಣಿಸುವಂತಿವೆ ಎನ್ನುವದನ್ನು ದಾಖಲಿಸಿದ್ದಾರೆ.

**೧೨೨. ಮಾನವೀಯತೆಗೆ ಮಿಡಿದ ಕಲಾವಿದರು**[೧೨೦]

ಗುಜರಾತಿನ ಗೋಧ್ರಾ ಘಟನೆಯಲ್ಲಿ ನೊಂದ ಸಂತ್ರಸ್ತರ ನೆರವಿಗೆ ಹಣ ಸಂಗ್ರಹಿಸುವ ಉದ್ದೇಶದಿಂದ ಬೆಂಗಳೂರಿನ ಅರವತ್ತೊಂದು ಚಿತ್ರ ಕಲಾವಿದರು ಭಾಗವಹಿಸಿ ಗೋಧ್ರಾ ಘಟನೆಯ ವಿವಿಧ ಮುಖಗಳನ್ನು ಅನಾವರಣಗೊಳಿಸುವ ಹಲವು ಕಲಾಕೃತಿಗಳನ್ನು ರಚಿಸಿದ್ದರು. ಕಲಾಸಕ್ತರಿಂದ ತಲಾ ಐದು ಸಾವಿರ ರೂಪಾಯಿಗಳಂತೆ ಸಂಗ್ರಹಿಸಿ ಆ ಪ್ರತಿಯೊಬ್ಬರಿಗೆ ಲಾಟರಿಯಂತೆ ಚೀಟಿ ತೆಗೆದು ಇಲ್ಲಿ ರಚಿತವಾದ ಕಲಾಕೃತಿಗಳನ್ನು ನೀಡಲಾಯಿತು. ಹೀಗೆ ಸುಮಾರು ಮೂರು ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿ ಗುಜರಾತಿನ ಸ್ವಯಂ ಸೇವಾ ಸಂಸ್ಥೆಯೊಂದಕ್ಕೆ ಕಳಿಸಲಾಯಿತು. ಸಾಮಾನ್ಯವಾಗಿ ಈ ಬಗೆಯ ದೇಣಿಗೆಯ ಕಲಾಪ್ರದರ್ಶನಗಳಲ್ಲಿ ಗಂಭೀರ ಕೃತಿಗಳನ್ನು ಕಾಣುವುದು ಸ್ವಲ್ಪ ಅಪರೂಪ ಹಾಗಿದ್ದರೂ ಭಾಗವಹಿಸಿದ ಪ್ರತಿಯೊಬ್ಬರು ಉತ್ತಮ ಕೃತಿಗಳನ್ನು ನೀಡುವ

---

೧೨೦. ಮಾನವೀಯತೆಗೆ ಮಿಡಿದ ಕಲಾವಿದರು, ಪ್ರಜಾವಾಣಿ, ಕರ್ನಾಟಕದರ್ಶನ, ೧ ಜೂನ್ ೨೦೦೨

ಮೂಲಕ ಪ್ರದರ್ಶನದ ಗಾಂಭೀರ್ಯ ಹೆಚ್ಚಿಸಿದರೆನ್ನುವುದು ಶ್ಲಾಘನೀಯ ಎನ್ನುವ ಅಭಿಪ್ರಾಯವನ್ನು ಕೃ.ಸೆ.ಯವರು ಈ ಲೇಖನದ ಮೂಲಕ ದಾಖಲಿಸಿದ್ದಾರೆ.

**೧೨೩. ತೆರೆಯ ಮೂಲಕವೇ ತೆರೆದುಕೊಳ್ಳುವ ಮಹಿಳಾ ದನಿ**[೧೨೧]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೬-೦೭-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕೃ.ಸೆ.ಯವರು ದೆಹಲಿಯ ಕಲಾವಿದರಾದ ಕಂಚನ್ ಚಂದರ್ ಹಾಗು ಆಸ್ಟ್ರೇಲಿಯಾದ ಕ್ಯಾನ್‌ಬೆರಾದ ಹೆಲನ್ ಗೀಯರ್ ಅವರ ವಿಶೇಷತೆಗಳನ್ನು ದಾಖಲಿಸಿದ್ದಾರೆ. ಇವರಿಬ್ಬರೂ ಆಸ್ಟ್ರೇಲಿಯಾದಲ್ಲಿ ಒಂದೆಡೆ ಸೇರಿ ರಚಿಸಿದ ಕಲಾಕೃತಿಗಳ ಪ್ರದರ್ಶನವನ್ನು ಆಸ್ಟ್ರೇಲಿಯಾದ ಹೈ ಕಮೀಷನ್ ಪ್ರಾಯೋಜಕತ್ವದಲ್ಲಿ "ಕರೋಲ್ ಬಾಗ್ ಟು ಟ್ಯಾಸ್ಕಾಟ್" ಎನ್ನುವ ಶೀರ್ಷಿಕೆಯಲ್ಲಿ ಏರ್ಪಡಿಸಲಾಗಿತ್ತು. ಇವರ ಕಲಾಕೃತಿಗಳಲ್ಲಿ ಮುಖ್ಯವಾಗಿ ರಚಿತವಾಗಿರುವುದು ಮಹಿಳೆಯರು ಕಸೂತಿಗೆ ಬಳಸುವ ಅರೆ ಪಾರದರ್ಶಕ ವಸ್ತ್ರದ ಮೇಲು, ಕ್ಯಾನ್ವಾಸಿಗೆ ಬದಲಾಗಿ ಜವನಿಕೆಗಳನ್ನು (ತೆರೆ) ಬಳಸುವುದು ಸ್ವಾಭಾವಿಕವೆನಿಸಿರುವ ಈ ದಿನಗಳಲ್ಲಿ ಇವರೂ ಅದೇ ತಂತ್ರವನ್ನು ವಿಭಿನ್ನವಾಗಿ ಬಳಸಿಕೊಂಡಿದ್ದಾರೆ. ತಮ್ಮ ಟ್ರೇಡ್ ಮಾರ್ಕ್‌ನಂತಿರುವ ಇಮೇಜ್‌ಗಳನ್ನು ಒಂದಾಗಿ ಬೆಸೆದಿರುವ ಪರಿ ಕತೂಹಲಕರ, ಕುಂಭದಂತೆ ಸರಳೀಕೃತಗೊಂಡ ಹೆಣ್ಣಿನ ರೂಪವು ಕಂಚನ್ ಅವರದಾದರೆ, ಕಮಾನಿನಂತಹ ಬಾಗಿಲು ಹೆಲೆನ್ ಅವರದ್ದಾಗಿದೆ. ಈ ಇಬ್ಬರ ಅಭಿವ್ಯಕ್ತಿಯ ಅಂಶಗಳನ್ನು ಪ್ರತ್ಯೇಕಗೊಳಿಸಿ ನೋಡಿದರೆ ಕಂಡುಬರುವ ಇನ್ನೊಂದು ಅಂಶವೆಂದರೆ ಕಂಚನ್ ಅವರು ಅಕ್ಷರ, ನಾಗರಿಕ ಸಂಸ್ಕೃತಿಯ ಅಂಶಗಳನ್ನು ನಿರಾಕರಿಸಿ ಜನಪದೀಯ ದೇಸಿ, ಗ್ರಾಮ್ಯ ಅಂಶಗಳನ್ನು ದುಡಿಸಿಕೊಂಡರೆ ಹೆಲೆನ್ ಅವರು ನಗರ ಸಂಸ್ಕೃತಿಯ ಆಧುನಿಕ ರೂಪಗಳನ್ನು ಬಳಸುತ್ತಾರೆ. ಹೀಗೆ ಇವರು ಮಹಿಳೆಯರೆಂಬ ಸಾಮಾನ್ಯತೆಯನ್ನು ಹೊರತುಪಡಿಸಿದರೆ. ರೂಪದ ದೃಷ್ಟಿಯಿಂದ ಹಲವು ನೆಲೆಗಳಲ್ಲಿ ಬೇರಾಗುತ್ತಾರೆ ಆದರೆ ಈ ಬೇರೆಯಾಗಿರುವುದನ್ನು ಹೊಂದಿಸುವಲ್ಲಿ ಕೃತಕ ಜೋಡಣೆಯಂತೆ, ತೇಪೆಯಂತೆ ಕಂಡು ಬರದೆ ಹೊಂದಿಕೊಳ್ಳುತ್ತಿರುವುದು ಗಮನಾರ್ಹವಾಗಿದೆ.

ಪ್ರದರ್ಶನದಲ್ಲಿ ಇಬ್ಬರೂ ಪ್ರತ್ಯೇಕವಾಗಿ ರಚಿಸಿದ ಕೃತಿಗಳು ಇದ್ದು, ಅವುಗಳಲ್ಲಿ ಹೆಲೆನ್ ಅವರು ಕಾಗದದ ಮೇಲೆ ಮಿಶ್ರಮಾಧ್ಯಮದಲ್ಲಿ ರಚಿಸಿದ ವಿವಿಧ ತೆರೆಗಳು ಆಕರ್ಷಕವಾಗಿವೆ. ಕಂಚನ್ ಅವರು ಕೂಡಾ ಮಿಶ್ರಮಾಧ್ಯಮದಲ್ಲಿ ಕೆಲವು ಕೃತಿಗಳನ್ನು ರಚಿಸಿದ್ದು, ಅವು ಅವರ ಉಳಿದ ಕೃತಿಗಳಿಂದ ಹೊಸ ಹಾದಿಯಲ್ಲಿ ಸಾಗಿವೆ, ಒಟ್ಟಾರೆಯಾಗಿ ವಿಭಿನ್ನ ಸಂಸ್ಕೃತಿಗಳು ಸಂಲಗ್ನ ಗೊಂಡ ಈ ಪ್ರದರ್ಶನವು ಹೊಸದನ್ನು ಬಯಸುವವರಿಗೆ ಹೊಸ ಅನುಭವ ನೀಡುತ್ತದೆಂಬುದನ್ನು ಲೇಖಕರು ಗುರುತಿಸಿದ್ದಾರೆ.

---

೧೨೧. ತೆರೆಯ ಮೂಲಕವೇ ತೆರೆದುಕೊಳ್ಳುವ ಮಹಿಳಾ ದನಿ, ಪ್ರಜಾವಾಣಿ, ಕರ್ನಾಟಕದರ್ಶನ, ೬ ಜೂನ್ ೨೦೦೨

## ೧೨೪. ಸಾಮಾನ್ಯ ನೆಲೆಯ ಸಂಪ್ರದಾಯಿಕತೆ[೧೨೨]

ಕೆ.ಜೆ.ಅರುಳ್ ಮುರುಗನ್ ಹಾಗು ಅಯ್ಯಪ್ಪನ್ ಸಹೋದರರು ಸಂಯುಕ್ತವಾಗಿ ರಚಿಸಿದ ಸಾಂಪ್ರದಾಯಿಕ ತಂಜಾವೂರು ಕಲಾಕೃತಿಗಳ ಪ್ರದರ್ಶನ ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ಭಿನ್ನವಾದ ವಸ್ತು ಆಶಯಗಳನ್ನು, ಸಂಖ್ಯೆಯ ದೃಷ್ಟಿಯಿಂದಲೂ ಬಹಳಷ್ಟಿರುವ ಇಲ್ಲಿನ ಕೃತಿಗಳನ್ನು ಇಬ್ಬರಲ್ಲಿ ಯಾರು ರಚಿಸಿದ್ದಾರೆ ಎಂದು ಗುರುತಿಸಲು ಕಷ್ಟವೆನಿಸುವಷ್ಟು ಸಾಮ್ಯತೆ ಇವುಗಳಲ್ಲಿದೆ. ಇಲ್ಲಿ ಕೃತಿಗಳನ್ನು ಪ್ರದರ್ಶಿಸಿರುವ ರೀತಿಯೂ ಅಂಗಡಿಯೊಳಗಿನ ಜೋಡಣೆಯನ್ನು ನೆನಪಿಸುತ್ತದೆ. ಹೀಗೆ ಇಲ್ಲಿ ಕಲಾಭಿವ್ಯಕ್ತಿಗಿಂತಲೂ ಮಾರುಕಟ್ಟೆಯ ಶ್ರದ್ದೆಯೇ ಹೆಚ್ಚಾಗಿ ಕಾಣಿಸುತ್ತದೆ. ಸಾಮಾನ್ಯವಾಗಿ ಈ ಬಗೆಯ ಸಾಂಪ್ರದಾಯಿಕ ಕೃತಿಗಳು ತುಂಬ ತಾಳ್ಮೆಯ ನಿರ್ವಹಣೆಯನ್ನು ಬಯಸುತ್ತವಾದರೂ ಇವು ಸಂತೆಯ ಹೊತ್ತಿಗೆ ಮೂರು ಮೊಳ ನೇಯ್ದಂತೆ ತುಂಬ ಅತುರಾತುರವಾಗಿ, ತಾಳ್ಮೆಯಿಲ್ಲದೆ ರಚಿಸಲಾಗಿದೆ ಎಂಬುದನ್ನು ಕೃ.ಸೆ.ಯವರು ಈ ಲೇಖನದಲ್ಲಿ ದಾಖಲಿಸಿದ್ದಾರೆ.

## ೧೨೫. ಭಿತ್ತಿ ಪತ್ರಗಳ ಮೂಲಕ ಹೃದಯಸ್ಪರ್ಶಿ ಗೌರವಾರ್ಪಣೆ[೧೨೩]

ಪಾಶ್ಚಾತ್ಯ ದೇಶಗಳಲ್ಲಿ ಅದರಲ್ಲೂ ಯುರೋಪಿನಲ್ಲಿ ಪೋಸ್ಟರ್ ಕಲೆಗೆ ಹೊಸ ಅಯಾಮ ನೀಡಿದ ತೌಲಸ್ ಲಾತ್ರೆಕ್ ಮೂಲತಃ ಗಂಭೀರ ಕಲಾವಿದ. ಈ ಕಲಾವಿದ ತೀರಿಕೊಂಡು ನೂರು ವರ್ಷಗಳಾದ ಸಂದರ್ಭದಲ್ಲಿ ಅವನಿಗೆ ಗೌರವ ಸಲ್ಲಿಸಲು ವಿಶ್ವಾದ್ಯಂತ ಕಲಾವಿದರು ಸೃಷ್ಟಿಸಿದ ಭಿತ್ತಿಪತ್ರಗಳ ಪ್ರದರ್ಶನ ಅಲಯನ್ಸ್ ಫ್ರಾನ್ಸೈ ಇತರ ಸಂಸ್ಥೆಗಳ ಸಹಯೋಗದೊಂದಿಗೆ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ಇಲ್ಲಿ ನೂರು ವರ್ಷಗಳನ್ನು ಸಂಕೇತಿಸಲೊ ಎಂಬಂತೆ ಒಂದು ನೂರು ಪೋಸ್ಟರ್‌ಗಳನ್ನು ರಚಿಸಲಾಗಿತ್ತು.

ತೌಲಸ್ ಲಾತ್ರೆಕ್ (೧೮೬೪-೧೯೦೧) ಪಾಶ್ಚಾತ್ಯ ಕಲೆಯಲ್ಲಿ ತುಂಬ ಗಮನಾರ್ಹವಾದ ಪ್ಯಾರಿಸ್ಸಿನ ಕಲಾವಿದ. ವಿವಾದಾಸ್ಪದ ಕಲಾವಿದನಾಗಿದ್ದ ಈತ ತನ್ನ ದೈಹಿಕ ವಿಕೃತಿಯ ನಡುವೆಯೂ ಕಲೆಗೆ ಅಪೂರ್ವ ಕೊಡುಗೆಗಳನ್ನು ನೀಡಿದನು. ಹೆಚ್ಚಿನವರು ಅವನ ವ್ಯಕ್ತಿತ್ವವನ್ನು ಕೇಂದ್ರವಾಗಿಟ್ಟು ಕೊಂಡು ಪ್ರತಿಕ್ರಿಯೆ ನೀಡಿದ್ದಾರೆ. ವಿಕಾರ ವ್ಯಕ್ತಿತ್ವದ ನಡುವೆಯೂ ಅವನಿಗಿದ್ದ ವೇಶ್ಯಸಂಗ, ಸ್ತ್ರೀಲೋಲುಪತೆಯನ್ನು ಕುರಿತೇ ಬಹುತೇಕರು ಗಮನಿಸಿದ್ದಾರೆ. ಅದನ್ನು ಸೂಚ್ಯವಾಗಿ ಸಂವೇದನಾತ್ಮಕ ವಾಗಿ ನಿರ್ವಹಿಸಿರುವ ಇಲ್ಲಿನ ಕ್ರಮವು ನಮಗೆ ನಿಜಕ್ಕೂ ಇಷ್ಟವಾಗುತ್ತದೆ ಎಂಬುದನ್ನು ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೮-೦೬-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕೃ.ಸೆ.ಯವರು ಚರ್ಚಿಸಿದ್ದಾರೆ.

---

೧೨೨. ಸಾಮಾನ್ಯ ನೆಲೆಯ ಸಂಪ್ರದಾಯಿಕತೆ, ಪ್ರಜಾವಾಣಿ, ಕರ್ನಾಟಕದರ್ಶನ, ೬ ಜೂನ್ ೨೦೦೨

### ೧೨೬. ನಪುಂಸಕರ ಸಂಭ್ರಮ[೧೨೩]

ಸ್ವತಃ ಪತ್ರಕರ್ತರಾದ ವೆಂಕಟೇಶ್ ಅವರು ಅಲ್ಲಿ ನಡೆಯುವ ನಪುಂಸಕರ ಫ್ಯಾಷನ್ ಶೋ ಸೇರಿದಂತೆ ಆದರೆ ಈ ಅಪರೂಪದ ಹಲವಾರು ದೃಶ್ಯಗಳನ್ನು ಸೆರೆ ಹಿಡಿಯುವಾಗ ಅವರೊಳಗಿನ ಜರ್ನಲಿಸ್ಟ್ ಜಾಗೃತನಾಗಿದ್ದಾನೆಯೇ ಹೊರತು ಕಲಾವಿದ ಕಳೆದು ಹೋಗಿದ್ದಾನೆ. ಹಾಗಾಗಿ ಇವು ಸಾಮಾನ್ಯ ದಾಖಲಾತಿಯ ದೃಷ್ಟಿಯಿಂದ ಗಮನಾರ್ಹವಾಗುತ್ತದೆಯೇ ಹೊರತು ಆರ್ಟ್ ಫೋಟೋಗ್ರಫಿಯ ದೃಷ್ಟಿಯಿಂದಲ್ಲ. ಹೀಗೆ ಕುತೂಹಲಕರ ವಿಷಯವನ್ನು ಸೆರೆ ಹಿಡಿಯುವಾಗ ಕಲಾತ್ಮಕ ಸಂಯೋಜನೆಯ ದೃಷ್ಟಿಯಿಂದ ಗಮನ ಹರಿಸದೇ ಇರುವ ಕಾರಣದಿಂದಾಗಿ ಈ ಪ್ರದರ್ಶನವು ಕಲೆಯ ದೃಷ್ಟಿಯಿಂದ 'ಔಟ್ ಆಫ್ ಫೋಕಸ್' ಆಗಿದೆ ಎಂಬುದನ್ನು ಈ ಲೇಖನ ದಲ್ಲಿ ಕೃ.ಸೆ.ಯವರು ಚರ್ಚಿಸಿದ್ದಾರೆ.

### ೧೨೭. ಬರಿಯ ಕಣ್ಣಿಗೊಂದು, ಹೃದಯಾಳಕ್ಕೆ ಸಾಗುವುದು ಮತ್ತೊಂದು[೧೨೪]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೨-೦೬-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಮುಂಬಯಿಯ ಖ್ಯಾತ ಕಲಾವಿದ ಪ್ರೊ ಎಸ್.ಕೆ. ಲಾವಟೆ ಮತ್ತು ಅವರ ಪುತ್ರಿ ನೀನಾ ಅವರುಗಳ ಕಲಾಕೃತಿಗಳ ಪ್ರದರ್ಶನ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ಎರಡು ವಿಭಿನ್ನ ತಲೆಮಾರುಗಳಿಗೆ ಸೇರಿದ ಇವರಲ್ಲಿ ಧೋರಣೆಯ ಮತ್ತು ಕಾಣ್ಕೆಯ ದೃಷ್ಟಿಯಿಂದ ಭಾರಿ ವೈವಿಧ್ಯತೆ ಹಾಗೂ ವಿಭಿನ್ನತೆಗಳನ್ನು ಕಾಣಬಹುದಾಗಿದೆ. ಇಲ್ಲಿ ರೂಪ ಪ್ರಧಾನ (ಫಾರ್ಮಲ್) ಮತ್ತು ಆಧ್ಯಾತ್ಮಿಕತೆಗೆ(ಸ್ಪಿರಿಚುಯೆಲ್)ಒತ್ತು ನೀಡಲಾಗುತ್ತಿರುವುದನ್ನು ಗುರುತಿಸಬಹುದು. ಪ್ರೊ ಲಾವಟೆಯವರು ಬಹುತೇಕ ನವ್ಯ ಕಲಾ ಪ್ರಕಾರದ ಮಳೆ, ಚಳಿ, ಗಾಳಿಗಳಿಗೆ ತಮ್ಮನ್ನು ಒಡ್ಡಿಕೊಂಡು ಪಕ್ವಗೊಂಡವರು, ಅವರು ಕೆಲವೆಡೆ ಬಾಹ್ಯ ರೂಪಕ್ಕೆ ಒತ್ತಾಸೆ ನೀಡಿದರೂ ಅದರ ಮೂಲಕ ಹೃದಯದಾಳದಲ್ಲಿ ಆಧ್ಯಾತ್ಮಿಕತೆಯನ್ನು ಪ್ರಭಾವಿಸುವಂತಹ ಚೈತನ್ಯವುಳ್ಳವರು. ಇವರು 'ನ್ಯೂಡ್' ಪ್ರಕಾರಕ್ಕೆ ಸಾಕಷ್ಟು ಒತ್ತಾಸೆ ನೀಡಿದ್ದಾರೆ. ಕುತೂಹಲದ ಒಂದು ಅಂಶವೆಂದರೆ ಇವರು ಬಹುತೇಕ ಅಕಾಡೆಮಿಕ್ ಕಲಾವಿದರಂತೆಯೇ ತಮ್ಮ ಈ ಕೃತಿಗಳನ್ನು ನಿರ್ವಹಿಸಿದ್ದರಾದರೂ ಅದರಲ್ಲಿ ಸಾಮಾನ್ಯ ಅರ್ಥದಲ್ಲಿನ ಆನಂದವನ್ನು ನಿರಾಕರಿಸುತ್ತಾರೆ. ಉಳಿದ ಅಕಾಡೆಮಿಕ್ ಕಲಾವಿದರು ಇದೇ ವಸ್ತುವನ್ನು ನಿರ್ವಹಿಸಲು ಪ್ರಖರವಾದ, ತಾಜಾ ಬಣ್ಣಗಳನ್ನು ಬಳಸಿಕೊಂಡರೆ, ಲಾವಟೆಯವರು ಜಡವೆನಿಸುವ ನಿಶ್ಯಬ್ದದೆಡೆಗೆ ಸಾಗುವಂತಹ ತಟಸ್ಥ ವರ್ಣಗಳನ್ನು ಆರಿಸಿಕೊಳ್ಳುತ್ತಾರೆ.

---

೧೨೩. ಭಿತ್ತಿ ಪತ್ರಗಳ ಮೂಲಕ ಹೃದಯಸ್ಪರ್ಶಿ ಗೌರವಾರ್ಪಣೆ, ಪ್ರಜಾವಾಣಿ, ಕರ್ನಾಟಕ ದರ್ಶನ, ೦೮ ಜೂನ್ ೨೦೦೨

೧೨೪. ಬರಿಯ ಕಣ್ಣಿಗೊಂದು, ಹೃದಯಾಳಕ್ಕೆ ಸಾಗುವುದು ಮತ್ತೊಂದು, ಪ್ರಜಾವಾಣಿ, ಕರ್ನಾಟಕ ದರ್ಶನ, ೨೨ ಜೂನ್ ೨೦೦೨

ಆದರೆ ನೀನಾ ಅವರು ಬಹುತೇಕ ಛಾಯಾಚಿತ್ರವೊಂದರಂತೆ ಬಾಹ್ಯ ಆಕೃತಿಗಳ ದಾಖಲೆಗೆ ಗಮನ ಕೊಟ್ಟಿದ್ದಾರೆ. ತಮ್ಮ ಈ ನಿಸರ್ಗ ಚಿತ್ರಗಳಲ್ಲಿ ಬಣ್ಣ ಆಕೃತಿಗಳನ್ನು ದಾಖಲಿಸುವ ಇವರ ಪರಿಯು ಸಾಮಾನ್ಯ ನೆಲೆಯದೇ ಆಗಿದೆ. ಕಲೆಯ ವಲಯದಲ್ಲಿಯೇ ಇದ್ದರೂ ವಾಣಿಜ್ಯ ಕಲೆಯ ಹಿಡಿತಕ್ಕೆ ಸಿಕ್ಕ ಕಾರಣದಿಂದ ಹೀಗಾಗಿರಬಹುದು ಹಾಗಿದ್ದರೂ ಈ ನಡುವೆ ಸೃಜನಶೀಲವಾಗಿ ಯೋಜಿಸಿದ ಇವರ 'ಎ ಲಾಂಗ್ ವೇ ಟು ಗೋ ಎಲಿಗಂಟ್ ಇಂಟೀರಿಯರ್' ನಂತಹ ಒಂದೆರಡು ಕೃತಿಗಳು ಮಾತ್ರವೇ ಸ್ವಲ್ಪ ಗಂಭೀರವೆನಿಸುತ್ತದೆ. ಉಳಿದುದೆಲ್ಲ ಬರಿಯ ಕಣ್ಣಿನಲ್ಲಿಯೇ ನಿಂತು ಹೃದಯದೆಡೆಗೆ ಸಾಗುವುದಿಲ್ಲ ಎಂಬ ಅಭಿಪ್ರಾಯವನ್ನು ಕೃ.ಸೆ.ಯವರು ಈ ಲೇಖನದ ಮೂಲಕ ದಾಖಲಿಸಿದ್ದಾರೆ.

## ೧೨೮. ಪ್ರತ್ಯೇಕ ಪ್ರದರ್ಶನ[೧೨೫]

ಬೆಂಗಳೂರಿನ ಝೆನ್ ಗ್ಯಾಲರಿಯಲ್ಲಿ ಕಲಾವಿದ ಲಾವಟೆಯವರು ತಮ್ಮ ಕಲಾಕೃತಿಗಳ ಪ್ರದರ್ಶನಗಳನ್ನು ಏರ್ಪಡಿಸಿದ್ದರು. ಮೂಲತಃ ಸ್ವರೂಪ ಚಿತ್ರಣಕ್ಕೆ (ಫಿಗರೆಟಿವ್) ತಮ್ಮ ಒಲವು ತೋರಿಸಿದವರಾದರೂ ಇಲ್ಲಿ ಅಮೂರ್ತ ಕೃತಿಗಳನ್ನು ತಂದಿದ್ದಾರೆ. ಇಲ್ಲೆಲ್ಲ ಆಕಾಡೆಮಿಕ್‌ಕಲೆಯ ಮನಸ್ಸೇ ಮೆರೆದಿದೆಯಾದರೂ ಉತ್ಸಾಹಕ್ಕಿಂತ ವಿಷಾದವೇ ಪ್ರಾಧಾನ್ಯ ಪಡೆದಿದೆ. ಇತ್ತೀಚಿನ ವರ್ಷಗಳಲ್ಲಿ ಪ್ಲೈವುಡ್ ಮೇಲೆ ಕೃತಿ ರಚನೆ ಆರಂಭಿಸಿದ್ದು, ಮೈವಳಿಕೆಗಳ ದೃಷ್ಟಿಯಿಂದಲೂ ಅವು ಗಮನಾರ್ಹವಾಗಿವೆ. ಒಟ್ಟಾರೆಯಾಗಿ ಈ ಪ್ರದರ್ಶನದಲ್ಲಿ ವಿವಿಧ ಕಾಲ ಘಟ್ಟಗಳ ವೈವಿಧ್ಯಮಯ ಕೃತಿಗಳಿವೆಯಾದರೂ ಲಾವಟೆಯವರ ಬಹು ಹಿಂದಿನ ಆರಂಭಿಕ ಕೃತಿಗಳೇ ಹೆಚ್ಚು ಪರಿಣಾಮಕಾರಿ ಯಾಗಿವೆ ಎಂಬುದನ್ನು ಕೃ.ಸೆ.ಯವರು ಈ ಲೇಖನದ ಮೂಲಕ ದಾಖಲಿಸಿದ್ದಾರೆ.

## ೧೨೯. ವಿಕಾಸದಲ್ಲಿ ಸ್ಥಗಿತಗೊಂಡ ಸಿದ್ಧ-ಪ್ರಸಿದ್ಧರ ವೈವಿಧ್ಯ[೧೨೬]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೯-೦೬-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ 'ಪರಿಣಿತರಿಗಾಗಿ ಕಲೆ' ಎನ್ನುವ ಹೆಸರಿನಲ್ಲಿ ಬೆಂಗಳೂರಿನ ವಿಂಡ್ಸರ್ ಮ್ಯಾನರ್ ವೆಲ್‌ಕಂ ಆರ್ಟ್ ಗ್ಯಾಲರಿಯಲ್ಲಿ ನಡೆದ ಕಲಾವಿದರ ಕಲಾ ವೈಶಿಷ್ಟ್ಯತೆಗಳನ್ನು ಗುರುತಿಸುವ ಪ್ರಯತ್ನಮಾಡಿದ್ದಾರೆ.

ಇಲ್ಲಿ ಕೆಲ ಪರಿಣಾಮಕಾರಿ ಕೃತಿಗಳಿವೆ. ಅವರಲ್ಲಿ ಲಕ್ಷ್ಮಣ್ ಶ್ರೇಷ್ಠ, ರಾಮ್‌ಕುಮಾರ್, ಸೋಮನಾಥ್, ಹೋರ್, ಮನು ಪರೇಖ್, ಶಾಮಲದತ್ತ ರೇ ಅವರನ್ನು ಗುರುತಿಸಬಹುದು.

---

೧೨೫. ಪ್ರತ್ಯೇಕ ಪ್ರದರ್ಶನ, ಪ್ರಜಾವಾಣಿ, ಕರ್ನಾಟಕದರ್ಶನ, ೨೯ ಜೂನ್ ೨೦೦೨

೧೨೬. ವಿಕಾಸದಲ್ಲಿ ಸ್ಥಗಿತಗೊಂಡ ಸಿದ್ಧ-ಪ್ರಸಿದ್ಧರ ವೈವಿಧ್ಯ, ಪ್ರಜಾವಾಣಿ,ಕ ದರ್ಶನ,೨೯ ಜೂನ್ ೨೦೦೨

ಹೊಸ ನೆಲೆಯ ಕೃತಿಗಳಲ್ಲಿ ಆದಿತ್ಯ ಬಸಕ್, ಜಯಶ್ರೀ ಚಕ್ರವರ್ತಿ, ಧರ್ಮನಾರಾಯಣ ದಾಸ್ ಗುಪ್ತ ಅವರು ಮಿಂಚುತ್ತಾರೆ. ವಿಶ್ವದ ಗ್ರಾಫಿಕ್ ಕಲೆಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನ ಗಳಿಸಿರುವ ಕೃಷ್ಣ ರೆಡ್ಡಿಯವರ ಬಹುವರ್ಣದ ಗ್ರಾಫಿಕ್ ಕೃತಿಯಂತೂ ತಂತ್ರದ ದೃಷ್ಟಿಯಿಂದ ಅತ್ಯುತ್ತಮವಾಗಿದೆ. ಕೆಲವರನ್ನು ಹೊರತು ಪಡಿಸಿದರೆ ಹೆಚ್ಚಿನವರ ಕೃತಿಗಳು ಅಷ್ಟೇನು ಪರಿಣಾಮಕಾರಿಯಾಗಿಲ್ಲ. ಗಣಪತಿಯನ್ನು ವಸ್ತುವಾಗಿಸಿಕೊಂಡು ಎಂಎಫ್ ಹುಸೇನರು ಎರಡು ಕೃತಿಗಳನ್ನು ಪ್ರದರ್ಶಿಸಿದ್ದು ಸಾಮಾನ್ಯ ನೆಲೆಯಲ್ಲಿರುವ ಅವು ಅವರ 'ಮೆನೊಪಾಸ್' ಸ್ಥಿತಿಯನ್ನು ತಡವಾಗಿಯಾದರೂ ಘೋಷಿಸುವಂತಿವೆ. ಅಮೂರ್ತ ಕಲೆಯಲ್ಲಿ ಅಪ್ರತಿಮ ಸಾಧನೆ ಮಾಡಿದ ಪ್ರಭಾಕರ ಕೋಲತೆಯವರು ಕೂಡಾ ಇಲ್ಲಿ ನಿರಾಶೆಯುಂಟು ಮಾಡುತ್ತಾರೆ. ಭೂಪೆನ್ ಕಕ್ಕರ್, ಕೃಷ್ಣನ್ ಖನ್ನಾ ಅವರ ಕೃತಿಗಳೂ ಇದೇ ಹಾದಿಯಲ್ಲಿವೆ. ಗೋಗಿ ಸರೋಜ್‌ಪಾಲ್ ಅವರು ತಮ್ಮ ಹಿಂದಿನ ದಾರಿಯಿಂದ ಭಿನ್ನವಾಗಿ ಹೊಸ ಬಗೆಯ ರೀಲೀಫ್ ಕೃತಿಗಳನ್ನು ಮುಂದಿಟ್ಟಿದ್ದರಾದರೂ ಅದು ಕೂಡಾ ಅಷ್ಟಕಷ್ಟೇ, ಮಹತ್ವಾಕಾಂಕ್ಷೆಯ ಈ ಪ್ರದರ್ಶನವು ಚಿರಕಾಲ ನೆನಪಿನಲ್ಲಿ ಉಳಿಯುವಂತಹ ಯಾವುದೇ ಗಾಢ ಪರಿಣಾಮ ಉಂಟು ಮಾಡುವಲ್ಲಿ ಹಿಂದೆ ಬೀಳುತ್ತದೆ. ಆದ್ದರಿಂದ ಈ ಬಗೆಯ ಪ್ರದರ್ಶನಗಳನ್ನು ಯೋಜಿಸುವವರು ಕೇವಲ ಪ್ರಸಿದ್ಧ ಹೆಸರುಗಳನ್ನು ತಂದರಷ್ಟೇ ಸಾಲದು. ಅವರ ಉತ್ತಮ ಕೃತಿಗಳನ್ನು ತರುವಲ್ಲಿ ಗಮನಹರಿಸಬೇಕು ಎಂಬ ಸಂದೇಶವನ್ನು ಈ ಪ್ರದರ್ಶನ ನೀಡುತ್ತದೆ ಎಂದು ಲೇಖಕರಾದ ಕೃ.ಸೆ.ಯವರು ಅಭಿಪ್ರಾಯಪಟ್ಟಿದ್ದಾರೆ.

### ೧೩೦. ಸರಳತೆಯ ಸಮಕಾಲೀನತೆ[೧೨೭]

ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ನಡೆದ ಬರೋಡಾದ ಶಿಬು ನಟೇಶನ್ ಅವರ ಕೃತಿಗಳ ಪ್ರದರ್ಶನದ ವಿಶೇಷತೆಗಳನ್ನು ಕೃ.ಸೆ. ಈ ಮುಂದಿನಂತೆ ಗುರುತಿಸಿದ್ದಾರೆ. ಇವರು ಇಂಪ್ರೆಶನಿಸ್ಟರ ಹಾಗೆಯೇ ಸಾಮಾನ್ಯ ದೃಶ್ಯಗಳಿಗೆ ವಾಸ್ತವಿಕ ನೆಲೆಯಲ್ಲಿ ಸ್ವಲ್ಪ ಬದಲಾವಣೆಯ ಮೂಲಕ ಹೊಸ ಆಯಾಮ ನೀಡಿದ್ದಾರೆ. ಇವರು ಕಲಾಕೃತಿಗಳಿಗೆ ನೀಡುವ ಹೊಸ ಸ್ಪರ್ಶವು ಗಮನಾರ್ಹವಾಗಿವೆ.

ಬಹುತೇಕ ಆಕಾಡೆಮಿಕ್‌ಕಲಾವಿದರಂತೆ ನಿಸರ್ಗಕ್ಕೂ ಪ್ರಾಧಾನ್ಯ ನೀಡಿದ ಕೃತಿಗಳೊಂದಿಗೆ ಶೈಲಿಯಲ್ಲಿ ವೈವಿಧ್ಯವುಳ್ಳ ಕೃತಿಗಳೂ ಇಲ್ಲಿವೆ. ವಾಸ್ತವದ ಆಕೃತಿಗಳಗೆ ಇವರು ನೀಡುವ ಮಾಂತ್ರಿಕ ಸ್ಪರ್ಶವು ಸುಧೀರ್ ಪಟವರ್ಧನ್ ಅವರ ಈಚಿನ ಕೃತಿಗಳ ನೆನಪು ತರುವಂತಿವೆ. ಜೊತೆಗೆ ಅಲೈಸ್ ನೀಲ್, ಜಾನೆಟ್ ಫಿಕ್, ಎರಿಕ್ಸ ಫಿಶ್ತಿ ಅವರಂತಹ ಹೊಸ ರಿಯಲಿಸ್ಟರ ಕೃತಿಗಳ ಸೆಳಕು ಗಳು ಇಲ್ಲಿ ಸುಳಿಯುತ್ತವೆ. ಒಟ್ಟಾರೆಯಾಗಿ ತುಂಬ ಪರಿಣಾಮಕಾರಿಯಲ್ಲವಾದರೂ, ತುಂಬ

---

೧೨೭. ಸರಳತೆಯ ಸಮಕಾಲೀನತೆ, ಪ್ರಜಾವಾಣಿ, ಕರ್ನಾಟಕದರ್ಶನ, ೨೯ ಜೂನ್ ೨೦೦೨

ಸಂಕೀರ್ಣಗೊಂಡ ಇಂದಿನ ಕಲೆಯಲ್ಲಿ ಇವರು ತರುವ ಸರಳತೆಯ ಹೊಸ ಆಯಾಮವು ನಿಜಕ್ಕೂ ಗಮನಾರ್ಹವೆನಿಸುತ್ತದೆ ಎನ್ನುವ ಅಭಿಪ್ರಾಯ ಲೇಖಕರದು.

### ೧೩.೧ .ಕಲೆಯೊಳಗಿನ ತಾತ್ವಿಕ ಅಂಶಗಳೇ ಅಭಿವ್ಯಕ್ತಿಗೆ ವಸ್ತುವಾದಾಗ[೧೨೮]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೩-೦೭-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ವಿಭಿನ್ನ ನೆಲೆಯ ಕಲಾವಿದರಾದ ಪಿ ಆರ್. ಆರ್ಯ ಅವರ ಕಲಾ ವಿಶೇಷತೆಗಳನ್ನು ಕೃ.ಸೆ.ಚರ್ಚಿಸಿದ್ದಾರೆ. ಪಿ ಆರ್. ಆರ್ಯ ಆಚಾರ್ಯ ಅವರು ಬಹು ಹಿಂದೆ ಉಡುಪಿಯ ಪ್ರತಿಷ್ಠಿತ ಮಠವೊಂದರ ಸ್ವಾಮೀಜಿಯಾಗಿದ್ದು ಸನ್ಯಾಸವನ್ನು ತ್ಯಜಿಸಿ ಗೃಹಸ್ಥಾಶ್ರಮವನ್ನು ಸ್ವೀಕರಿಸುವ ಮೂಲಕ ಧಾರ್ಮಿಕ ವಲಯದಲ್ಲಿ ಅಲ್ಲೋಲ-ಕಲ್ಲೋಲ ಉಂಟು ಮಾಡಿದವರು. ಸ್ವತಃ ಸಂಸ್ಕೃತ ವಿದ್ವಾಂಸರಾದರೂ ಸ್ವಂತ ಪರಿಶ್ರಮದಿಂದ ಕಲಾಭ್ಯಾಸ ಮಾಡಿ ಸಮಕಾಲೀನ ಕಲಾ ಪ್ರಕಾರದಲ್ಲಿ ತೊಡಗಿಸಿಕೊಂಡ ಅವರು ನಮ್ಮಲ್ಲಿ ಯಾರ ಪ್ರಭಾವಕ್ಕೂ ಒಳಗಾಗದ ವಿಶಿಷ್ಟ ನೆಲೆಯಲ್ಲಿ ಕೃತಿಗಳನ್ನು ರಚಿಸಿದ್ದಾರೆ.

ಬಹು ಹಿಂದಿನ ರೆನೆಸಾನ್ಸ್ ಕಾಲದ ಹಾಗು ಮಾನವೀಯ ಮೌಲ್ಯಗಳುಳ್ಳ ಕಲೆಯೆಡೆಗೆ ಹಿಂತಿರುಗಬೇಕೆನ್ನುವ ಆರ್ಯ ಅವರು ಇಲ್ಲಿ ಮುಖ್ಯವಾಗಿ ಎರಡು ನೆಲೆಗಳಲ್ಲಿನ ಕೃತಿಗಳನ್ನು ಪ್ರದರ್ಶಿಸಿದ್ದಾರೆ. ದಟ್ಟವಾದ ವಸ್ತು ವಿಷಯಗಳು ತುಂಬಿಕೊಂಡ ಇವುಗಳಲ್ಲಿ ಒಂದು. ಅವರ ಎಂದಿನ ಅಮೂರ್ತ(?) ಪ್ರಕಾರದ್ದಾದರೆ, ಇನ್ನೊಂದು ಪೋಸ್ಟ್ ಮಾಡರ್ನ್ ಧೋರಣೆಗಳನ್ನು ಕುರಿತದ್ದು ಮೇಲ್ನೋಟಕ್ಕೆ ಅಮೂರ್ತದ್ದೆನಿಸುವ ಅವರ ಹಿಂದಿನ ಕೃತಿಗಳಲ್ಲಿ ಪಾಶ್ಚಾತ್ಯ ಕಲಾವಿದರಲ್ಲಿನ ಕೆಲವು ಸೆಳಕುಗಳು ಕಂಡುಬರುವುದಾದರೂ ಅವು ತುಂಬ ಗೌಣವೆನಿಸುವಂತಿವೆ, ವ್ಯಕ್ತಿಗಳ ರೂಪಕ್ಕಿಂತಲೂ ಚಿಹ್ನೆ ಸಂಕೇತಗಳ ಮೂಲಕವೇ ವಸ್ತುವನ್ನು ಪೋಷಿಸುವ ಕ್ರಮವು ಇವರನ್ನು ಕ್ಯಾಂಡಿನ್‌ಸ್ಕಿ, ಜೋನ್ ಮೈರೊ ಕೃತಿಗಳ ಸಾಮೀಪ್ಯಕ್ಕೆ ಕೊಂಡೊಯ್ಯುತ್ತವೆ. ಜೀವನೋತ್ಸಾಹದ ಒಂದು ಮುಖವನ್ನು ಪರಿಚಯಿಸುವಂತಹ ಮಿಶ್ರಮಾಧ್ಯಮದ ಈ ಕೃತಿಗಳು ಆರ್ಯರ ಕಲಾತ್ಮಕ ಕೌಶಲ್ಯವನ್ನು ಮುಂದಿಡುತ್ತವೆ,

ಆರ್ಯ ಅವರ ಎರಡನೆಯ ಹಾಗೂ ಇತ್ತೀಚಿನ ಕೃತಿಗಳು ಪೋಸ್ಟ್ ಕಾರ್ಡುಗಳನ್ನು ನೆನಪಿಸುವಂತಿವೆ. ಪೋಸ್ಟ್ ಕಾರ್ಡುಗಳಿಗಿಂತಲೂ ಸಾಕಷ್ಟು ದೊಡ್ಡ ಅಳತೆಯ ಈ ಕೃತಿಗಳು ವಿವಿಧ ಕಾಲ ಘಟ್ಟಗಳ ಕಲಾ ತತ್ವಗಳನ್ನು ಧೋರಣೆಗಳನ್ನು ಚರ್ಚೆಗಾಗಿ ಒಂದೆಡೆ ತಂದಂತಿವೆ. ಕುತೂಹಲದ ಒಂದು ಅಂಶವೆಂದರೆ, ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವಂತಿವೆ. ಪೋಸ್ಟ್

---

೧೨೮. ಕಲೆಯೊಳಗಿನ ತಾತ್ವಿಕ ಅಂಶಗಳೇ ಅಭಿವ್ಯಕ್ತಿಗೆ ವಸ್ತುವಾದಾಗ, ಪ್ರಜಾವಾಣಿ, ಕರ್ನಾಟಕ ದರ್ಶನ, ೧೩ ಜುಲೈ ೨೦೦೨

ಮಾಡರ್ನ್ ರೂಪವನ್ನೇ ಆಧರಿಸಿರುವುದು. ಈ ಪ್ರತಿಯೊಂದರಲ್ಲೂ ವಿವಿಧ ಕಾಲಗಳ ಚಿತ್ರಗಳನ್ನು ಯಥಾವತ್ತಾಗಿ ತರುವುದರೊಂದಿಗೆ ( ಅಳತೆ,ತಂತ್ರ ಬೇರೆಯದೇ) ಇಂಗ್ಲೀಷ್ ಭಾಷೆಯ ವಾಕ್ಯಗಳನ್ನು ಸ್ಪಷ್ಟತೆಗಾಗಿ ತಂದಿದ್ದಾರೆ ಅದೇನೇ ಇರಲಿ, ಮೂಲತಃ ಸಂಪ್ರದಾಯವಾದಿಯಾಗಿದ್ದ ಮಠಾಧಿಪತಿಯೊಬ್ಬರು ಸಂಪೂರ್ಣ ಇನ್ನೊಂದು ತುದಿಯಲ್ಲಿರುವ ಸಮಕಾಲೀನ ಕಲೆಯನ್ನು ಅರಗಿಸಿಕೊಂಡು ಬೆಳೆದಿರುವ ಪರಿಯು ನಮ್ಮಲ್ಲಿ ಆಶ್ಚರ್ಯ ಹುಟ್ಟಿಸುತ್ತದೆ. ಹೀಗೆ ಇವರ ಎರಡೂ ನೆಲೆಗಳ ಕೃತಿಗಳು ನಿಜಕ್ಕೂ ಗಮನಾರ್ಹವಾಗಿವೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

**೧೩೨. ಇರುವುದರ ಪರಿಣಾಮ ಹೆಚ್ಚಿಸಲು ಇಲ್ಲದುದರ ನೆರವು**[೧೪೯]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೦-೦೭-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಪ್ರದರ್ಶಿತವಾದ ಅಹಮದಾಬಾದಿನ ಪ್ರಯಾಸ್ ಅಭಿನವ್ ಅವರ ಛಾಯಾಚಿತ್ರಗಳ ಹಾಗು ಕೆಲವು ವರ್ಣಚಿತ್ರಗಳ ಕಲಾ ಮಹತ್ವವನ್ನು ಕೃ.ಸೆ. ಗುರುತಿದ್ದಾರೆ.

ಅವರ ಈ ಛಾಯಾಚಿತ್ರಗಳಲ್ಲಿ ಆಕಾಡೆಮಿಕ್‌ಸಂಯೋಜನಾ ತಂತ್ರಗಳು ಸ್ಪಷ್ಟವಾಗಿ ಗೋಚರಿಸು ತ್ತವೆ. ಆದರೆ ಈ ಸಾಮಾನ್ಯತೆಯ ನಡುವೆಯೂ ಕೆಲವು ಹೊಸತನವನ್ನು ಇವರು ಪ್ರಕಟಿಸುತ್ತಾರೆ. ಅದೆಂದರೆ ಆಕಾಡೆಮಿಕ್ ಕಲೆ ಬಯಸುವಂಥಹ ಛಾಯಾಚಿತ್ರವೊಂದರಲ್ಲಿನ ಸ್ಪಷ್ಟತೆಗಿಂತಲೂ ಆ ದೃಶ್ಯ ಉಂಟುಮಾಡಬೇಕಾದ ಪರಿಣಾಮವನ್ನು ಆದರಿಸಿ ಆ ರೂಪವನ್ನು ಮಂದವಾಗಿಸುವುದು, ಅಸ್ಪಷ್ಟವಾಗಿಸುವುದು, ಇಂದಿನ ಚಿತ್ರಕಲಾ ವಲಯದಲ್ಲಿ ವ್ಯಾಪಕವಾಗಿರುವ ಈ ಧೋರಣೆಯನ್ನು ಇವರೂ ಅನುಸರಿಸುವುದರಿಂದ ಹಲವೊಮ್ಮೆ ಇವರ ಕೃತಿಗಳು ಈ ಸೋತ ಕೃತಿಗಳೆಂಬ ಭಾವನೆ ಬರಬಹುದು, ಕೆಲವೊಮ್ಮೆ ಬಣ್ಣ ಕಳೆದುಕೊಂಡು ಪೇಲವವಾಗಿದೆ ಎಂದೆನಿಸಬಹುದು, ಆದರೆ ರೂಪದ ಸ್ಪಷ್ಟತೆಗಿಂತಲೂ ಭಾವ ಪ್ರಕಟಣೆಯ ದೃಷ್ಟಿಯಿಂದ ಉದ್ದೇಶಪೂರ್ವಕವಾಗಿ ಮಾಡಿರು ವುದರಿಂದ ಕಲಾತ್ಮಕವಾಗಿ ಯಶಸ್ವಿಯೆನಿಸುತ್ತವೆ.

ಈ ಕಲಾವಿದ ಒಂದು ನಿರ್ದಿಷ್ಟ ನೆಲೆಯಲ್ಲಿ ನಿಲ್ಲದೇ ಮನಬಂದೆಡೆ ಗಮನಹರಿಸಿ ತುಂಬು ವೈವಿಧ್ಯವನ್ನು ಪ್ರದರ್ಶಿಸುತ್ತಾರೆ. ಹಾಗೆ ಮಾಡುವಾಗಲೂ ಕೃತಿಯ ಚಿತ್ರಕ್ಷೇತ್ರವೊಂದರಲ್ಲಿ ಕತ್ತಲೆ ಮತ್ತು ಬೆಳಕುಗಳ ಪ್ರಮಾಣದಲ್ಲಿ ಹಿತ ಮಿತವೆನಿಸುವಂತೆ ಸಮತೋಲನ ತರುತ್ತಾರೆ. ಇವರ ಟ್ರಂಪ್ ಕಾರ್ಡ್ ಇರುವುದೇ ಈ ಬೆಳಕಿನ ಯೋಜನೆಯಲ್ಲಿ ಇದರೊಂದಿಗೆ ಇವರು ಕೇವಲ ಕಣ್ಣ ಮುಂದಿನ ದೃಶ್ಯಗಳನ್ನು ಯೋಗ್ಯ ಚೌಕಟ್ಟಿನಲ್ಲಿ ಸೆರೆ ಹಿಡಿಯುವುದಕಷ್ಟೇ ಗಮನ ಕೊಡದೆ,

---

೧೪೯. ಇರುವುದರ ಪರಿಣಾಮ ಹೆಚ್ಚಿಸಲು ಇಲ್ಲದುದರ ನೆರವು, ಪ್ರಜಾವಾಣಿ, ಕರ್ನಾಟಕ ದರ್ಶನ, ೨೦ ಜುಲೈ ೨೦೦೨

ಬ್ರಿಟನ್ನಿನ ಬಾಯ್ಸ್ ವೆಬ್ ಅವರಂತಹ ಹಲವು ಕಲಾವಿದರಂತೆ ತಮಗೆ ಬೇಕಾದ ವಸ್ತುಗಳನ್ನು ಜೋಡಿಸಿಯೂ ಸೆರೆ ಹಿಡಿಯುತ್ತಾರೆ. ತುಂಬು ವೈವಿಧ್ಯದ ಇವರ ಕೃತಿಗಳಲ್ಲಿ ಕೆಲವು ಸಾಮಾನ್ಯ ನೆಲೆಯ ಕೃತಿಗಳು ಇರುವುದಾದರೂ, ಹೆಚ್ಚಿನವು ಸಾಮಾನ್ಯತೆಯಿಂದ ಮೇಲಿದ್ದು, ಉತ್ತಮ ಪರಿಣಾಮ ಬೀರುವಂತೆ ಸೃಷ್ಟಿಯಾಗಿವೆ. ಹೀಗೆ ಬಹುತೇಕ ಛಾಯಾಚಿತ್ರಣದಲ್ಲಿ ಮಿಂಚುವ ಪ್ರಯಾಸ್ ಅವರು ತಮ್ಮ ವರ್ಣ ಚಿತ್ರಗಳಲ್ಲಿ ಆದರಿಂದ ಸಂಪೂರ್ಣ ವಿರುದ್ಧ ದಿಕ್ಕಿನಲ್ಲಿ ನಿಲ್ಲುತ್ತಾರೆ. ಅಂದರೆ ಅವರ ಈ ಅಮೂರ್ತ ನೆಲೆಯ ಕೃತಿಗಳು ತುಂಬ ಸಾಮಾನ್ಯ ನೆಲೆಯಲ್ಲಿವೆ. ಇವರು ಗ್ಲಾಮರ್ ದೃಶ್ಯಗಳಿಗೆ ಒತ್ತಾಸೆ ನೀಡಿರುವುದನ್ನು ಲೇಖಕರು ಪ್ರಸ್ತಾಪಿಸಿದ್ದಾರೆ.

**೧೩೩. ಬಿಕರಿಗಾಗಿ ರಾಜಿಮಾಡಿಕೊಂಡ ಪ್ರದರ್ಶನದ ಪರಿ**[೧೩೦]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೦-೦೭-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕೃ.ಸೆ.ಯವರು ಕಲಾ ಮಾರುಕಟ್ಟೆಗಳು ಸಾಕಷ್ಟು ಕುಸಿದಿರುವ ಈ ದಿನಗಳಲ್ಲಿ ವಾಣಿಜ್ಯ ಗ್ಯಾಲರಿಯವರೂ ಸೇರಿದಂತೆ ಅನೇಕರು ಕೃತಿಗಳ ಮಾರಾಟಕ್ಕಾಗಿ ಹಲವು ಬಗೆಯ ರಾಜಿ ಮಾಡಿಕೊಳ್ಳುತ್ತಿದ್ದಾರೆ ಎನ್ನುವ ಅಂಶಗಳ ಕುರಿತು ವಿಶೇಷವಾಗಿ ಚರ್ಚಿಸಿದ್ದಾರೆ. ತಮ್ಮ ಉಳಿವಿಗೆ ಅನಿವಾರ್ಯವಾಗಿ ಮಾಡಿಕೊಳ್ಳುವ ಈ ರಾಜಿಗಳಲ್ಲಿ ಕೆಲವಕ್ಕೆ ಸ್ವಲ್ಪ ರಿಯಾಯಿತಿ ತೋರಿಸಿ ಒಪ್ಪಿಕೊಳ್ಳಬಹುದಾದರೂ ಎಲ್ಲವನ್ನು ಒಪ್ಪಿಕೊಳ್ಳುವುದು ಸಾಧ್ಯವಿಲ್ಲ. ಬೆಂಗಳೂರಿನ ಲಕ್ಷಣ ಗ್ಯಾಲರಿಯು ದಕ್ಷಿಣ ಭಾರತದ ಹಲವಾರು ಕಲಾವಿದರ ಕೃತಿಗಳನ್ನು ಒಟ್ಟಿಗೇ ಪ್ರದರ್ಶಿಸಿದೆ. “ಲಕ್ಷ್ಮಣಾಸ್ ಆರ್ಟ್ ಮೇಳ”ದ ಹೆಸರಿನ ಈ ಪ್ರದರ್ಶನದಲ್ಲಿ ಸಿಂಹಪಾಲು ಪಡೆದಿರುವುದು ಕರ್ನಾಟಕವೇ. ಗ್ಯಾಲರಿ ಪ್ರವೇಶಿಸುತ್ತಿದ್ದ ಹಾಗೆಯೇ ಇದು ಆರ್ಟ್ ಗ್ಯಾಲರಿಯೇ ಅಥವಾ ಫ್ರೇಮಿನ ಅಂಗಡಿಯೇ ಎನ್ನುವ ಅನುಮಾನ ಮೊಟ್ಟಮೊದಲಿಗೆ ಎದುರಾಗುತ್ತದೆ. ಏಕೆಂದರೆ ನೋಡುಗರು ಮುಖ ಎತ್ತಿ ಮೇಲೆ ನೋಡುವಂತೆಯೇ ಸೊಂಟ ಬಗ್ಗಿಸಿ ಕೆಳಗೂ ನೋಡಬೇಕಾಗುತ್ತದೆ. ಇದು ದಕ್ಷಿಣ ಭಾರತದ ಪ್ರದರ್ಶನ ಎಂದು ಹೇಳಿದ್ದರೂ ನಿಜವಾದ ಅರ್ಥದಲ್ಲಿ ಆ ಮಟ್ಟವಾಗಲೀ ಯೋಗ್ಯ ಪ್ರಾತಿನಿಧ್ಯವಾಗಲೀ ಇಲ್ಲಿ ಕಂಡು ಬರುವುದಿಲ್ಲ ಎನ್ನುವುದನ್ನು ಇಲ್ಲಿ ಒತ್ತಿ ಹೇಳಲಾಗಿದೆ.

**೧೩೪. ಸುಲಭ ತಂತ್ರದ ಆಕರ್ಷಣೆ**[೧೩೧]

ಪುಣೆಯ ವಿಜಯಾ ಹೀರೇಮಠ ಅವರು ಈಚಿನ ಕೃತಿಗಳ ಪ್ರದರ್ಶನವು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ಇವು ಕೆಲವು ವರ್ಷಗಳ ಹಿಂದೆ ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ ಪ್ರದರ್ಶಿಸಿದ ಇವರ ಕೃತಿಗಳ ಮುಂದುವರೆದ ರೂಪಗಳೇ ಆಗಿವೆ.

---

೧೩೦. ಬಿಕರಿಗಾಗಿ ರಾಜಿಮಾಡಿಕೊಂಡ ಪ್ರದರ್ಶನದ ಪರಿ, ಪ್ರಜಾವಾಣಿ,ಕ ದರ್ಶನ, ೨೦ ಜುಲೈ ೨೦೦೨

೧೩೧. ಸುಲಭ ತಂತ್ರದ ಆಕರ್ಷಣೆ, ಅದೇ

ಮೂಲತಃ ನಿಸರ್ಗ ಪ್ರೇರಿತರಾದ ಇವರು ಅಲ್ಲಿನ ರೂಪಗಳನ್ನು ಜೈವಿಕ ರೂಪಗಳಾಗಿ ಪರಿವರ್ತಿಸುತ್ತಾರೆ. ತಕ್ಷಣಕ್ಕೆ ಅಮೂರ್ತ ತಂತ್ರವೇ ಮುಖ್ಯ ಪಾತ್ರ ವಹಿಸುತ್ತದೆ. ಕ್ಯಾನ್ವಾಸಿನ ಮೇಲೆ ವಿವಿಧ ಬಣ್ಣಗಳನ್ನು ಹಾಕಿ ಸಗಣಿ ಸಾರಿಸಿದಂತೆಯೇ ನೆಗೆಟಿವ್ ಪೋಸೆಸ್‌ನಲ್ಲಿ ಅಲ್ಲಲ್ಲಿ ಬಣ್ಣವನ್ನು ಕೆರೆದು ತೆಗೆಯುವ ಮೂಲಕ ಆಕೃತಿಗಳನ್ನು ಮೂಡಿಸುವ ತಂತ್ರವಿದು. ಈ ನಿರ್ದಿಷ್ಟ ತಂತ್ರದಲ್ಲಿ ವಿವರಗಳಿಗಿಂತಲೂ ಒಟ್ಟಾರೆಯಾದ ರೂಪಗಳನ್ನಷ್ಟೇ ಮೂಡಿಸುವ ಸಾಧ್ಯತೆ ಹೆಚ್ಚಾಗಿದ್ದು ಅದನ್ನು ಇವರು ಯಶಸ್ವಿಯಾಗಿ ದುಡಿಸಿಕೊಂಡಿದ್ದಾರೆ. ಆದರೆ ಚೇತೋಹಾರಿಯಾಗಿದ್ದ ಇವರ ಹಿಂದಿನ ಕೃತಿಗಳಲ್ಲಿನ ತಾಜಾತನವಾಗಲೀ ಪರಿಶುದ್ಧ ನಿರ್ವಹಣೆಯಾಗಲೀ ಇಲ್ಲಿಲ್ಲ. ಹಿಂದಿನ ತೀವ್ರತೆಯನ್ನು ಇವು ಕಳೆದುಕೊಂಡಿವೆ ಆದರೂ ಆಕರ್ಷಣೆ ಪೂರ್ತಿಯಾಗಿ ತಗ್ಗಿಲ್ಲ ಎನ್ನುವುದನ್ನು ಲೇಖಕರಾದ ಕೃ.ಸೆ.ಯವರು ವಿಶೇಷವಾಗಿ ಇಲ್ಲಿ ಚರ್ಚಿಸಿದ್ದಾರೆ.

### ೧೩೫. ಆಧ್ಯಾತ್ಮಿಕ, ಸಾಂಪ್ರದಾಯಿಕತೆಗಳ ವಿಭಿನ್ನ ದನಿ ನುಡಿಸುವ ಜೋಡಿ[೧೩೨]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೩-೦೮-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ "ಡ್ಯೂಯೆಟ್" ಹೆಸರಿನಲ್ಲಿ ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ನಡೆದ ಉಪನ್ಯಾಸಕರು ಮತ್ತು ಕಲಾವಿದರಾದ ಎ. ಶ್ರೀಧರಮೂರ್ತಿ ಹಾಗೂ ಎಂ.ವಿ. ಶ್ರೀನಿವಾಸಾಚಾರ್ಯರವರ ಕಲಾಕೃತಿಗಳ ವಿಶೇಷತೆಗಳನ್ನು ಮುಂದಿನಂತೆ ಗುರುತಿಸಿದ್ದಾರೆ.

ಪ್ರದರ್ಶನವನ್ನು "ಡ್ಯೂಯೆಟ್" ಎಂದು ಕರೆದಿದ್ದರೂ, ಇದು ಯಾವುದೇ ನೆಲೆಯಿಂದ ಸಾಮರಸ್ಯವುಳ್ಳಂತಹ ಜೋಡಿಯಲ್ಲ, ಬದಲಿಗೆ ಈ ಇಬ್ಬರ ವಸ್ತು ಶೈಲಿ ಧೋರಣೆ, ತಂತ್ರಗಳೆಲ್ಲ ವಿಭಿನ್ನವಾದವು, ಇವರ ಕ್ಯಾಟ್‌ಲಾಗ್‌ನಲ್ಲಿ ಒಬ್ಬರಿಂದ ಇನ್ನೊಬ್ಬರನ್ನು ತಲೆಕೆಳಗಾಗಿ ನೋಡುವಂತೆ ಓದುವಂತೆ ಮಾಡಿರುವುದು ಕೂಡಾ ಇವರಲ್ಲಿರುವ ವ್ಯತ್ಯಾಸಗಳಿಗೆ ಪೂರಕವಾಗಿವೆ. ಶ್ರೀಧರಮೂರ್ತಿಯವರು ಈಚಿನ ದಿನಗಳಲ್ಲಿ ಒಂದು ವಿಶಿಷ್ಟ ಬಗೆಯ ಕೃತಿಗಳನ್ನು ರಚಿಸುತ್ತಿದ್ದಾರೆ. ಮೂಲತಃ ಗ್ರಾಫಿಕ್ ಕೃತಿಗಳ ಮೂಲಕ ಹೊರಟ ಈ ಎಳೆ ಇದೀಗ ಜಲವರ್ಣದಲ್ಲಿ ಮುನ್ನಡೆದಿದೆ, ಒಡೆದ ಗಂಟೆ, ಮೊಟ್ಟೆ, ಮಣ್ಣಿನ ಮಡಿಕೆ, ಮರ,ಹಣ್ಣು ಹೂವು ಇತ್ಯಾದಿಗಳನ್ನು ಸಂಕೇತಗಳಂತೆ ಬಳಸುವ ಆಧ್ಯಾತ್ಮಿಕ ಪ್ರಯತ್ನ ಇಲ್ಲಿದೆಯಾದರೂ ಇವುಗಳನ್ನು ಯಾವ ದೃಷ್ಟಿಯಿಂದ ಬಳಸಲಾಗಿದೆ ಎಂಬ ನಿರ್ದಿಷ್ಟ ಸೂಚನೆ ಇಲ್ಲಿ ಸಿಗುವುದಿಲ್ಲ. ಹೀಗೆ ಅನಿಶ್ಚಯಾರ್ಥಗಳಿಂದ ಕೂಡಿವೆ ಎಂದೆನಿಸುವ ಈ ಎಲ್ಲ ಕೃತಿಗಳು ಬಹುತೇಕ ಸಂಯೋಜನೆಯಲ್ಲಿಯೂ ಒಂದೇ ನೆಲೆಯಲ್ಲಿವೆ. ಈ ಏಕಸೂತ್ರತೆಯೇ

---

೧೩೨. ಆಧ್ಯಾತ್ಮಿಕ, ಸಾಂಪ್ರದಾಯಿಕತೆಗಳ ವಿಭಿನ್ನ ದನಿ ನುಡಿಸುವ ಜೋಡಿ, ಪ್ರಜಾವಾಣಿ, ಕರ್ನಾಟಕದರ್ಶನ, ೮ ಆಗಸ್ಟ್ ೨೦೦೨

ಇವುಗಳನ್ನು ಗಂಭೀರ ಆವರಣದೆಡೆಗೆ ಕೊಂಡೊಯ್ಯುತ್ತವೆ. ಜೊತೆಗೆ ಎಲ್ಲಿಯೂ ಪ್ರಖರ ವರ್ಣಗಳನ್ನು ಬಳಸದೇ ಇವುಗಳನ್ನು ಮುಂದಿಟ್ಟ ರೀತಿಯಿಂದಾಗಿ ಇವುಗಳಿಗೆ ಮಿಸ್ಟಿಕ್ ಆದ. ಆಧ್ಯಾತ್ಮಿಕವೆನಿಸುವ ಆಯಾಮ ಪ್ರಾಪ್ತವಾಗಿದೆ. ಇಂತಹ ಕಡೆಗಳಲ್ಲಿ ಹೆಸರಾಂತ ಸರ್‍ರಿಯಲಿಸ್ಟ್ ಕಲಾವಿದ ಡಿ.ಬಿರಿಕೊನ ನೆನಪು ಇಲ್ಲಿ ಬರುವಂತಿದೆಯಾದರೂ ಇವು ಅವನಿಂದ ಎರವಲು ಪಡೆದ ರೂಪಗಳೆಲ್ಲ, ಹಾಗಿದ್ದರೂ ಪೌರ್ವಾತ್ಯದ ಕೆಲವು ಸೆಳಕುಗಳಿಂದಾಗಿ ಇವು ಎಲ್ಲಿಯೋ ನೋಡಿದವು ಎಂಬ ಭಾವನೆ ತರುವುದಂತೂ ನಿಶ್ಚಯ.

ವಸ್ತುವಿನ ದೃಷ್ಟಿಯಿಂದ ಸ್ಥೂಲವಾಗಿ ಇವು ಜೀವನದ ನಶ್ವರತೆಯನ್ನು ಪ್ರಕಟಿಸುವ ಕೃತಿಗಳೆಂದು ಹೇಳಿಬಿಡಬಹುದಾದರೂ ಅಷ್ಟಕ್ಕೆ ನಿಲ್ಲದ ವಿವಿಧಾರ್ಥಗಳನ್ನು ಹೊರಡಿಸುವ ಶಕ್ತಿಯನ್ನು ಇವು ಹೊಂದಿವೆ. ಹೀಗೆ ಧ್ಯಾನಸ್ಥ ಸ್ಥಿತಿಗೆ ನೋಡುಗರನ್ನು ಕೊಂಡೊಯ್ಯುವ ಈ ಕೃತಿಗಳು ಸಾಮಾನ್ಯತೆಯಿಂದ ಸಾಕಷ್ಟು ಮೇಲಿವೆ. ಉಳಿದೆಲ್ಲ ಕೃತಿಗಳಿಗೆ ಹೋಲಿಸಿದರೆ ಪ್ರದರ್ಶನದ ಕೊನೆಯಲ್ಲಿರುವ ಜಲವರ್ಣದ ಅರೆ ಪಾರದರ್ಶಕ ಗುಣವನ್ನು ಚೆನ್ನಾಗಿ ದುಡಿಸಿಕೊಂಡ ಕೃತಿಗಳೇ ಹೆಚ್ಚು ಪರಿಣಾಮಕಾರಿಯಾಗಿವೆ, ಎಂದರೆ ತಪ್ಪಲ್ಲ ಎಂದು ಲೇಖಕರು ಹೇಳುತ್ತಾರೆ.

**೧೩೬. ಪರಿಣಾಮ ಬೀರದ ಕೃತಿಗಳು**[೧೩೩]

ಮಧ್ಯಪ್ರದೇಶದ ಕರಕುಶಲ ವಸ್ತುಗಳ ಪ್ರದರ್ಶನವೊಂದು ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ಇದರಲ್ಲಿಯೇ ಕಲಾವಿದರಾದ ವಿದಿಶಾದ ವೇದಪ್ರಕಾಶ್ ಶರ್ಮ ಅವರ ಚಿತ್ರಗಳ ಪ್ರದರ್ಶನವು ಒಟ್ಟಿಗೆ ನಡೆದಿದ್ದು ಇಲ್ಲಿಯ ವಿಶೇಷತೆ. ಕ್ರಾಫ್ಟ್ ಅಂಗಡಿಯೊಂದರಲ್ಲಿಯಂತೆ ತುಂಬ ಕೆಟ್ಟದಾಗಿ ಪ್ರದರ್ಶಿತಗೊಂಡ ಇವು ಅಭಿವ್ಯಕ್ತಿಗಿಂತಲೂ ಬಿಕರಿಯ ಆಶಯವುಳ್ಳ ಅಲಂಕರಣದ ಆಶಯಕ್ಕೆ ತಕ್ಕಂತೆ ವೈವಿಧ್ಯ ವಸ್ತುಗಳುಳ್ಳ ಇವುಗಳಲ್ಲಿ ಸಿಂಹಪಾಲು ಪಡೆದಿರುವುದು ಗಣೇಶನ ಆಕೃತಿಗಳು, ಬಹುತೇಕ ಹವ್ಯಾಸಿ ಕಲಾವಿದರ ಕ್ಯಾಲೆಂಡರ್‌ನಂತಹ ನೆಲೆಯಲ್ಲಿರುವ ಇವುಗಳಲ್ಲಿ ಕೆಲವೆಡೆ ಕಲ್ಪನೆಗಳು ಗಮನಾರ್ಹವಾಗಿವೆಯಾದರೂ ನಿರ್ವಹಣೆಯಲ್ಲಿ ಪೂರ್ತಿ ಸ್ರೆರಗಿವೆ. ಹಾಗಾಗಿ ವಿವಿಧ ನೆಲೆಗಳಲ್ಲಿ ತುಂಬ ಬಾಲಿಶವೆನಿಸುವ ಕೃತಿಗಳೇ ಇಲ್ಲಿ ತುಂಬಿವೆ. ಮೃಗ ನಯನಿಯ ಈ ಪ್ರದರ್ಶನದಲ್ಲಿ ವೇದಪ್ರಕಾಶ್ ಅವರು ಈ ಕೃತಿಗಳಿಗಿಂತಲೂ ಗ್ರಾಮೀಣ ಕಲಾವಿದರು ರಚಿಸಿದ ಸಾಂಪ್ರದಾಯಿಕ ಕರಕುಶಲ ವಸ್ತುಗಳೇ ನಮಗೆ ಹೆಚ್ಚು ಇಷ್ಟವಾಗುತ್ತವೆ ಎನ್ನುವ ಬಹು ಮುಖ್ಯ ಅಂಶವನ್ನು ಕೃ.ಸೆ.ಯವರು ಈ ಲೇಖನದಲ್ಲಿ ಚರ್ಚಿಸಿದ್ದಾರೆ.

---

೧೩೩. ಪರಿಣಾಮ ಬೀರದ ಕೃತಿಗಳು, ಪ್ರಜಾವಾಣಿ, ಕರ್ನಾಟಕದರ್ಶನ, ೮ ಆಗಸ್ಟ್ ೨೦೦೨

**೧೩.೭.ವ್ಯಕ್ತಿಯ ದೇಹವೇ ಅಭಿವ್ಯಕ್ತಿಯ ಭಿತ್ತಿಯಾದಾಗ**[೧೩೪]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೦-೦೮-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಬೆಂಗಳೂರಿನ ಕೆನ್ ಕಲಾಶಾಲೆಯಲ್ಲಿ ಕಲಾಭ್ಯಾಸ ಮಾಡಿರುವ ರಮೇಶ್ ಕಲ್ಕೂರ್ ಅವರ ಕಲಾ ಕೃತಿಗಳ ಪ್ರದರ್ಶನ ಸುಮುಖ ಗ್ಯಾಲರಿಯಲ್ಲಿ ನಡೆಯಿತು. ಅವರ ಕಲಾ ವಿಶೇಷತೆಗಳನ್ನು ಕೃ.ಸೆ. ಈ ಮುಂದಿನಂತೆ ಪ್ರಸ್ತಾಪಿಸಿದ್ದಾರೆ. ಈಚಿನ ದಿನಗಳಲ್ಲಿ ಛಾಯಾಚಿತ್ರಗಳನ್ನು ವಿಶಿಷ್ಟವಾಗಿ ಬಳಸಿಕೊಂಡ ಅವರು ಇದೀಗ ಮತ್ತೊಂದು ಬಗೆಯ ಪ್ರಯೋಗಶೀಲ ಕೃತಿಗಳನ್ನು ನಮ್ಮ ಮುಂದಿಟ್ಟಿದ್ದಾರೆ.

ರಮೇಶ್ ಅವರ ಈ ಕೃತಿಗಳ ಕೇಂದ್ರಬಿಂದು ಮಾನವನ, ಅದರಲ್ಲೂ ಪುರುಷನ ಮುಂಡ, ಮುಂಡದ ಒಟ್ಟಾರೆಯಾದ ಆಕೃತಿಯೇ ಮುಖ್ಯವಾಗಿರುವ ಇಲ್ಲಿನ ಅಭಿವ್ಯಕ್ತಿಯಲ್ಲಿ ಎರಡು ಪ್ರಕಾರದ ಕೃತಿಗಳಿವೆ. ಮೊದಲನೆಯ ಪ್ರಕಾರದಲ್ಲಿ ಮಾನವನನ್ನು ಮರಗಳೊಂದಿಗೆ ಸಮೀಕರಿಸಿ ನೋಡುವ ಪ್ರಯತ್ನವಿದೆ. ಮನುಷ್ಯನಿಗೆ ಮುಂಡ ಹೇಗೋ ಮರಕ್ಕೆ ಅದರ ಕಾಂಡವೂ ಹಾಗೆಯೇ. ನಮ್ಮ ವರ್ತಮಾನದಲ್ಲಿ ಮರದ ಕಾಂಡಗಳನ್ನು ಆರ್ಚನೆಯಿಂದ ಹಿಡಿದು ಜಾಹಿರಾತುಗಳೂ ಸೇರಿದಂತೆ ವಿವಿಧ ಬಗೆಗಳಲ್ಲಿ ಬಳಸಿಕೊಳ್ಳಲಾಗುತ್ತಿದೆ. ಹೀಗೆ ಸ್ವಾಬಾವಿಕವಾಗಿಯೇ ನಾವು ವಿಕೃತಿಗೊಳಿಸಿದ ಮರದ ಕಾಂಡವನ್ನು ಇವರು ಪಾರದರ್ಶಿಕೆ (ಸ್ಲೈಡ್)ಗಳಲ್ಲಿ ಸೆರೆಹಿಡಿದಿದ್ದಾರೆ. ಈ ಸ್ಲೈಡ್‌ಗಳನ್ನು ಪುರುಷ ಮುಂಡದ ಮೇಲೆ ಪ್ರೊಜೆಕ್ಟ್ ಮಾಡಿ ಮತ್ತೊಮ್ಮೆ ಅದನ್ನು ಚಿತ್ರೀಕರಿಸಿ ಡಿಜಿಟಲ್ ತಂತ್ರದಲ್ಲಿ ಮುದ್ರಿಸಿದ ಕೃತಿಗಳು ಈ ಪ್ರಕಾರದವು. ಇಲ್ಲಿನ ಕಲ್ಪನೆ ಹಾಗು ವಸ್ತುವು ಅತ್ಯಂತ ಕುತೂಹಲಕರವಾಗಿವೆಯಾದರೂ, ಅಂತಿಮ ಪರಿಣಾಮಕ್ಕೆ ಸ್ವಲ್ಪ ಹಿನ್ನಡೆ ಉಂಟಾಗಿದೆ. ಪ್ರೊಜೆಕ್ಟ್ ಮಾಡಿರುವ ಪರಿಣಾಮಕ್ಕೆ ಬದಲಾಗಿ ದೃಶ್ಯಗಳು ಬೆನ್ನಿನ ಆಕಾರದಲ್ಲಿ ಮಾಸ್ಕ್ ಮಾಡಿ ಮುದ್ರಿಸಿದ ಹಾಗೆ ಕಂಡುಬರುತ್ತವೆ. ಜೊತೆಗೆ ದೃಶ್ಯಗಳ ಮೂಲಬಣ್ಣವು ಬೆನ್ನಿನ ಕಂದು ಬಣ್ಣದೊಂದಿಗೆ ಸೇರಿ ಸೇಪಿಯಾದಂಥ ಅನುಭವ ನೀಡುತ್ತಿದೆ.

ರಮೇಶ್ ನಿಜಕ್ಕೂ ಮಿಂಚುವುದು ಆಕ್ರಿಲಿಕ್ ಕೃತಿಗಳಲ್ಲಿ, ಜಾಕ್ಸನ್ ಪೊಲಾಕ್‌ನ ಕೃತಿಗಳಲ್ಲಿ ಯಂತೆ ವಿವಿಧ ರೀತಿಗಳಲ್ಲಿ ಕ್ಯಾನ್ವಾಸಿನ ಕಾಗದ ಮೇಲೆ ಬಣ್ಣಗಳನ್ನು ಎರಚಿ ಅದು ಅರ್ಧ ಒಣಗಿರುವಾಗಲೇ ನೀರಿನಲ್ಲಿ ತೊಳೆಯುವಂತಹ ವಿಧಾನ ಇಲ್ಲಿಯದು. ಈ ಪ್ರಕ್ರಿಯೆಯನ್ನು ಹಲವು ಬಾರಿ ಮಾಡಿ ಬೆಳೆಸಿದ ಇವುಗಳಲ್ಲಿನ ಮೈವಳಿಕೆ ಹಾಗೂ ಪ್ಯಾಟರ್ನ್‌ಗಳು ಅತ್ಯಂತ ಪರಿಣಾಮಕಾರಿಯಾಗಿವೆ. ತಂತ್ರದ ವೈಭವಿಕರಣವುಳ್ಳ ಈ ಕೃತಿಗಳನ್ನು ಕೋಣೆಯಂಥ ಆವರಣದಲ್ಲಿ

---

೧೩೪. ವ್ಯಕ್ತಿಯ ದೇಹವೇ ಅಭಿವ್ಯಕ್ತಿಯ ಭಿತ್ತಿಯಾದಾಗ....., ಪ್ರಜಾವಾಣಿ, ಕರ್ನಾಟಕ ದರ್ಶನ, ೧೦ ಆಗಸ್ಟ್ ೨೦೦೨

ಪ್ರದರ್ಶಿಸಿರುವ ಕ್ರಮವೂ ವಿನೂತನವಾಗಿದೆ. ಇದರ ಹೊರಗೋಡೆಯ ಕೃತಿಗಳು ಒಂದು ಬಗೆಯ ಉತ್ತಮ ಪರಿಣಾಮವುಂಟು ಮಾಡಿದರೆ, ಒಳಗೋಡೆಯ ಗ್ರಿಡ್‌ನಂತಹ ವಿನ್ಯಾಸದಲ್ಲಿನ ರಚನೆಗಳು ಇನ್ನಷ್ಟು ಉತ್ತಮವಾಗಿವೆ. ರಮೇಶ್ ಅವರ ಈ ಕ್ರಮವೂ ಹಲವು ಪಾಶ್ಚಾತ್ಯ ಕಲಾವಿದರ ನೆನಪು ತಂದರೂ ನಮ್ಮ ಸಂದರ್ಭಕ್ಕೆ ಉತ್ತಮವೆನಿಸುತ್ತ ವಿನೂತನವಾಗಿವೆ. ಇವುಗಳ ರಚನೆಯಲ್ಲಿನ ಇದರ ಆಳವಾದ ಪರಿಶ್ರಮ ಹಾಗೂ ತನ್ಮಯತೆಗಳು ನೋಡುಗರ ಅರಿವಿಗೆ ಬಾರದಿರದು ಹೀಗೆ ಹಲವು ನೆಲೆಗಳಲ್ಲಿ ಉತ್ತಮವಾದ ಈ ಪ್ರದರ್ಶನವು ಪರಿಣಾಮದಲ್ಲಿನ ಎರಡು ಸ್ತರಗಳ ಮೂಲಕವೂ ಮನದಲ್ಲಿ ಉಳಿಯುವಂತಿದೆ ಎನ್ನುವ ಬಹು ಮುಖ್ಯ ಅಂಶವನ್ನು ಕೃ.ಸೆ.ಯವರು ಈ ಲೇಖನದಲ್ಲಿ ಚರ್ಚಿಸಿದ್ದಾರೆ.

**೧೩೮. ಸಾಂಪ್ರದಾಯದ ನಿಜ ಸತ್ವ**

ಬಹು ಅಪರೂಪವೆನಿಸುವಂತಹ ಕೃತಿಗಳನ್ನು ಕಲಾವಿದೆ ಪ್ರಭಾ ಮಲ್ಲೇಶ್ ಅವರು ರಚಿಸಿದ್ದಾರೆ. ಸಾಂಪ್ರದಾಯಿಕ ಕಲಾಸಕ್ತರೆಲ್ಲ ಅವಶ್ಯವಾಗಿ ನೋಡಬೇಕಾದ ಅವರ ಕೃತಿಗಳ ಪ್ರದರ್ಶನವು ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ಮೈಸೂರು ಸಂಪ್ರದಾಯದ ನಿಜ ಸತ್ವವನ್ನು ಮೈಗೂಡಿಸಿಕೊಂಡ ಇವರ ಕಲಾ ಕೃತಿಗಳು ಹಲವಾರು ಉತ್ತಮ ಅಂಶಗಳನ್ನು ಹೊಂದಿದ್ದು, ಗಂಭೀರ ಕಲಾಸಕ್ತರನ್ನು ಈ ಪ್ರದರ್ಶನವು ಆಕರ್ಷಿಸುತ್ತದೆ. ಇದಕ್ಕೆ ಬಹುಮುಖ್ಯ ಕಾರಣವೆಂದರೆ ಇಲ್ಲಿನ ಘನಗಂಭೀರ ವರ್ಣಮೇಳ, ಬಹುತೇಕ ಸಾಂಪ್ರದಾಯಿಕ ಕಡುಪಾದ, ಢಾಳಾದ, ಬಣ್ಣಗಳನ್ನು ಬಳಸಿದರೆ, ಪ್ರಭಾ ಅವರು ಮೆಲುದನಿಯಲ್ಲಿ ಮಾತನಾಡುವಂತಹ ಹಿತ-ಮಿತವಾದ ಬಣ್ಣಗಳನ್ನು ತುಂಬ ಚೆನ್ನಾಗಿ ದುಡಿಸಿಕೊಂಡಿದ್ದಾರೆ. ಹಿತಕರವಾದ ಜೆಸ್ಸೊ ಕೆಲಸವೂ ಕೂಡಾ ಇದೇ ಹಾದಿಯಲ್ಲಿದೆ, ಈ ಬಗೆಯ ಸಾಂಪ್ರದಾಯಿಕ ಕೃತಿಗಳಲ್ಲಿ ತುಂಬ ಮುಖ್ಯವಾದ ರೇಖಾ ಲಾಲಿತ್ಯದಲ್ಲೂ ಇವರು ಅಷ್ಟೇನು ಹಿಂದೆ ಬಿದ್ದಿಲ್ಲ. ಹೀಗೆ ಕೆಲವು ಮಿತಿಗಳ ನಡುವೆಯೂ ಸಂಪ್ರದಾಯದ ಗಂಭಿರ ಕಲಾಸಕ್ತರಿಗೆ ರಸದೌತಣ ನೀಡುವಂತಹ ಕೃತಿಗಳಿವು.

ಪ್ರಭಾ ಅವರು ಈ ಸಂಪ್ರದಾಯದ ನೆರಳಿನಲ್ಲಿಯೇ, ಅದರಿಂದ ಸ್ವಲ್ಪ ಮುಂದುವರೆದಂತಹ ಕೆಲವು ಕೃತಿಗಳನ್ನು ನಿರ್ವಹಿಸಿದ್ದಾರೆ. ರಮ್ಯ ನೆಲೆಯಲ್ಲಿ ಹೊಸ ವಸ್ತುಗಳನ್ನು ಪರಿಚಯಿಸಿದ ಇಲ್ಲಿನ ಕ್ರಮವು ರಾಜಸ್ತಾನದ ಸಾಂಪ್ರದಾಯಿಕ ಕಲಾವಿದ ಉಮಾಶಂಕರ ಶರ್ಮ ಅವರ ಕೃತಿಗಳ ನೆನಪು ತರುವಂತಿದೆ. ಇಲ್ಲಿ ರಮ್ಯತೆಯ ಅಲಂಕರಣದ, ಅಪ್ಯಾಯಮಾನತೆಯ ಆಶಯವಿದ್ದರೂ ಕೀಳು ಅಭಿರುಚಿಗೆ ತಿರುಗಿಸದೆ ಅವುಗಳಿಗೂ ಸಾಧ್ಯವಾದಷ್ಟು ಗಂಭೀರ ಆವರಣ ನೀಡಿರುವುದು ಇಲ್ಲಿನ ಹೆಗ್ಗಳಿಕೆ, ಹೀಗೆ ಪ್ರಭಾ ಮಲ್ಲೇಶ್ ಅವರು ಹಿಂದಿಗಿಂತಲೂ ಸಾಕಷ್ಟು ಮುನ್ನಡೆದ ಈ

ಕೃತಿಗಳ ಮೂಲಕ, ಪ್ರಸ್ತುತ ಮೈಸೂರು ಸಂಪ್ರದಾಯದ ಮುಂಚೂಣಿಯಲ್ಲಿ ನಿಲ್ಲಬಲ್ಲ ಸೂಚನೆಯನ್ನು ನೀಡಿದ್ದಾರೆ ಎನ್ನುವ ಬಹು ಮುಖ್ಯ ಅಂಶವನ್ನು ಕೃ.ಸೆ.ಯವರು ಈ ಲೇಖನದಲ್ಲಿ ಚರ್ಚಿಸಿದ್ದಾರೆ.

**೧೩೯. ವ್ಯಂಗ್ಯ, ವಿಡಂಬನೆಗಳ ಮೂಲಕ ಬದುಕಿನ ವಿಮರ್ಶೆ**[೧೩೫]

ಪ್ರಜಾವಾಣಿಯ ಕರ್ನಾಟಕದರ್ಶನದಲ್ಲಿ ೧೭-೦೮-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ "ಆತ್ಮರತಿಯ" ನೆಲೆಯ ವಿರಳ ಕಲಾವಿದರಲ್ಲಿ ಒಬ್ಬರಾದ ಕಲ್ಕತ್ತದ ಹಿರಿಯ ಕಲಾವಿದ ಪಾರಿತೋಷ್ ಸೇನ್ ಅವರ ಕಲಾ ಪ್ರಾವಿಣ್ಯವನ್ನು ಮುಂದಿನಂತೆ ಕೃ.ಸೆ.ಚರ್ಚಿಸಿದ್ದಾರೆ.

ಪಾರಿತೋಷ್ ಸೇನ್' ಭಾರತೀಯ ಕಲೆಯ ಪಿತಾಮಹಾರಲ್ಲಿ ಒಬ್ಬರು. ೮೪ರ ಇಳಿವಯಸ್ಸಿನಲ್ಲಿ ಕ್ರಿಯಾಶೀಲವಾಗಿರುವ ಇವರು ಭಾರತದ ಆಧುನಿಕ ಕಲೆಯ ಸಾಕ್ಷೀ ಪ್ರಜ್ಞೆಯಂತಿರುವವರು, ಭಾರತೀಯ ಕಲೆಯ ಏಳು ಬೀಳುಗಳನ್ನೆಲ್ಲ ಸ್ವತಃ ಕಂಡ ಇವರು ವಿವಿಧ ಕಾಲಘಟ್ಟಗಳ ಜೊತೆಗೇ ನಡೆದುಬಂದವರು ಕ್ರಮೇಣ ತಮ್ಮದೇ ಆದ ಒಂದು ನಿರ್ದಿಷ್ಟ ವಿಧಾನದಲ್ಲಿ ನಿಲ್ಲುವ ಮೂಲಕ ತಮ್ಮ ಛಾಪು ಮೂಡಿಸಿದವರು. ಅವರ ಹಿನ್ನೆನಪುಗಳ ಪ್ರದರ್ಶನವೆಂಬಂತೆ ಹಲವು ದಶಕಗಳ ಪ್ರಾತಿನಿಧಿಕ ಕೃತಿಗಳ ಪ್ರದರ್ಶನವು ಬೆಂಗಳೂರಿನ ಗ್ಯಾಲರಿ ಝೆನ್‌ನಲ್ಲಿ ನಡೆಯಿತು. ಟೈಮ್ ಅಂಡ್ ಸ್ಪೇಸ್, ಗ್ಯಾಲರಿ ಝೆನ್ ಹಾಗು ಆರ್ಟ್ ವರ್ಲ್ಡ್‌ಗಳು ಸಂಯುಕ್ತವಾಗಿ ಏರ್ಪಡಿಸಿದ ಈ ಪ್ರದರ್ಶನವು ಕೃತಿಗಳ ಸಂಖ್ಯೆಯ ದೃಷ್ಟಿಯಿಂದಲೂ ಸಾಕಷ್ಟು ಬೃಹತ್ತಾದುದು.

ಆಕಾಡೆಮಿಕ್‌ಕಲೆಯ ನ್ಯೂಡ್ ಸ್ಟಡೀಸ್, ಸೃಜನಶೀಲ ಸ್ಕೆಚ್‌ಗಳು ಈ ಮುಂತಾದುವುಗಳಿಂದ ಹಿಡಿದು ವಿವಿಧ ಮಾಧ್ಯಮದ ವರ್ಣ ಚಿತ್ರಗಳವರೆಗಿನ ವೈವಿಧ್ಯ ಇಲ್ಲಿದೆ. ವಸ್ತುವಿನ ಒಟ್ಟು ವಿವರಗಳನ್ನಷ್ಟೇ ಅತ್ಯಂತ ಕ್ಲಿಷ್ಟವಾಗಿ ತೀಕ್ಷ್ಣ ರೇಖೆಗಳಲ್ಲಿ ಮೂಡಿಸುವ ಇವರ ಕ್ರಮ ನಿಜಕ್ಕೂ ಪರಿಣಾಮಕಾರಿ ಮಾನವ ದೇಹರಚನಾ ಶಾಸ್ತ್ರದ ಅಧ್ಯಯನ ದೃಷ್ಟಿಯಿಂದಲೂ ಕಲಾವಿದರಿಗೆ ಅಗತ್ಯವಾದ ನ್ಯೂಡ್ ಸ್ಟಡೀಸ್ ಕೂಡಾ ಇಲ್ಲಿದ್ದು, ರೇಖಾ ಮಾಧ್ಯಮದ ಈ ಅಭ್ಯಾಸಗಳೂ ಅತ್ಯಂತ ಉತ್ತಮ ನೆಲೆಯಲ್ಲಿವೆ. ಇವರಲ್ಲಿ ವಿವಿಧ ಶೈಲಿಗಳ. ಪಂಥಗಳ ಮಿಶ್ರಣವನ್ನು ಕಾಣಬಹುದು ಪಿಕಾಸೋ, ತೌಲಸ್ ಲಾತ್ರೆಕ್ ಅವರಿಂದ ಹಿಡಿದು ಎಕ್ಸಪ್ರೆಶನಿಸ್ಟರು, ಕ್ಯುಬಿಸ್ಟರು ವ್ಯಂಗ್ಯ ಚಿತ್ರಕಾರರು ಈ ಮುಂತಾದ ಪಾಶ್ಚಾತ್ಯ ಕಲೆಯ ಅಂಶಗಳೊಂದಿಗೆ ದೇಶೀಯ ರೂಪಗಳೂ ಬೆರೆತಿವೆ. ಹೀಗೆ ವಿಚಿತ್ರ ಪ್ರಾಣಿಯೊಂದರಂತೆ ಈ ಕೃತಿಗಳು ಹೊಸದೆನಿಸುತ್ತವೆ. ಸ್ವಾನುರಕ್ತಿಯುಳ್ಳ ಈ ಕಲಾವಿದ ತಮ್ಮ ಕೃತಿಗಳಲ್ಲಿ ತಮ್ಮ ಸ್ವಂತ ರೂಪವನ್ನೇ ತರುತ್ತಾರೆ. ಸೆಲ್ಫ್ ಪೋರ್ಟ್ರೈಟ್‌ಗಳಿಗಿಂತ ತುಂಬ ಭಿನ್ನವಾದ ಆತ್ಮ-ಚಿತ್ರ ಗಳೆನ್ನಬಹುದಾದ ಈ ಬಗೆಯ ಹಲವಾರು ಕೃತಿಗಳು ಇಲ್ಲಿವೆ(ಇಲ್ಲಿ

೧೩೫. ವ್ಯಂಗ್ಯ, ವಿಡಂಬನೆಗಳ ಮೂಲಕ ಬದುಕಿನ ವಿಮರ್ಶೆ, ಪ್ರಜಾವಾಣಿ, ಕರ್ನಾಟಕ ದರ್ಶನ, ೧೭ ಆಗಸ್ಟ್ ೨೦೦೨

ಮುದ್ರಿತ ಚಿತ್ರಗಳು ಮಾತ್ರ ಆ ಬಗೆಯವಲ್ಲ) ಹೀಗೆ ರೂಪದಲ್ಲಿ ತುಂಬ ವಿಶಿಷ್ಟ ನೆಲೆಯಲ್ಲಿ ನಿಲ್ಲುವ ಇವರ ಕೃತಿಗಳು ವಸ್ತುವಿನ ದೃಷ್ಟಿಯಿಂದಲೂ ಗಮನಾರ್ಹವೆನಿಸುತ್ತವೆ, ಸಮಕಾಲೀನ ಸಮಾಜವನ್ನು ವ್ಯಂಗ್ಯ ವಿಡಂಬನೆಗಳ ಕನ್ನಡಕದಲ್ಲಿ ನೋಡುವುದು ಇದರಲ್ಲೊಂದು. ಆದರೆ ಇವು ಹಾಸ್ಯಾಸ್ಪದವೆನಿಸದೆ, ರಾಜಕಪೂರ ಅವರ ಸಿನಿಮಾ ಜೋಕರ್‌ಗಳಂತೆ ವಿಷಾದದ ದನಿ ಹೊರಡಿಸುತ್ತವೆ. ಹೀಗೆ ಇವುಗಳ ಮೇಲ್ಪದರ ತೆಗೆದು ನೋಡಿದಾಗ ಅಲ್ಲಿ ಐರನಿಯ ದರ್ಶನ ವಾಗುತ್ತದೆ. ಏಕವ್ಯಕ್ತಿ ಪ್ರಧಾನವಾದ ಈ ಕೃತಿಗಳಲ್ಲಿ ಅಯಾ ಕಾಲದ ಬದುಕಿನ, ಜೀವನ ಶೈಲಿಯ ರೂಪಗಳು ದೊರೆಯುತ್ತವೆ ಎನ್ನುವ ಬಹು ಮುಖ್ಯ ಅಂಶವನ್ನು ಕೃ.ಸೆ.ಯವರು ಈ ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ.

**೧೪೦. ಖಿನ್ನತೆಯ ಆಯಾಮ ಪಡೆದುಕೊಂಡ ಸಿಂಹಾವಲೋಕನ**[೧೩೬]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೪-೦೮-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕಲಾವಿದ ಎಸ್.ಜಿ. ವಾಸುದೇವ್ ಅವರ ಕಲಾಕೃತಿಗಳಲ್ಲಿ ಬಹುತೇಕ ಹಿಂದಿನ ವಸ್ತು-ವಿಷಯಗಳೇ ಮರುಕಳಿಸಿ "ಹೊಸ ಶೀಶೆಯಲ್ಲಿ ಹಳೆಯ ಮದ್ಯದಂತೆ" ಆಗಿವೆ ಎಂಬ ಅಂಶವನ್ನು ಕೃ.ಸೆ.ಪ್ರಸ್ತಾಪಿಸಿದ್ದಾರೆ. ಇವರ ನಿಶ್ಚಿತ ಶೈಲಿಯ ರೂಪಗಳು ಥಟ್ಟೆಂದು ನಮ್ಮ ಮುಂದೆ ನಿಲ್ಲುತ್ತವೆ. ಜನಪದದ ರೂಪಗಳನ್ನು ನವ್ಯದೊಂದಿಗೆ ಬೆಸೆದ ವಿಶಿಷ್ಟ ರೂಪಗಳು ಅವರದು. ಹೀಗೆ ಅಚ್ಚಳಿಯದಂತೆ ನಮ್ಮ ಮನದಾಳದಲ್ಲಿ ಕುಳಿತಿರುವ ಅವರ ರೂಪಗಳೇ ಇಲ್ಲಿಯೂ ಮುಂದುವರೆದಿವೆ. (ಭಾವಚಿತ್ರಗಳಂತಹ ಕೆಲವು ಕೃತಿಗಳಲ್ಲಿ ಹೊಸ ತಂತ್ರದ ಪ್ರಯತ್ನವಿದೆಯಾದರೂ ಅವು ಅಷ್ಟೇನು ಪರಿಣಾಮಕಾರಿಯಾದ ಬದಲಾವಣೆ ಎನಿಸುವುದಿಲ್ಲ) ಆಗಾಗ ಬದಲಾವಣೆಯ ಸೆಳಕುಗಳನ್ನು ನಿಜವಾದ ಅರ್ಥದಲ್ಲಿ ತುಂಬ ಗಮನಾರ್ಹವಾದ ಬದಲಾವಣೆಗಳು ಇವರಲ್ಲಿ ಆಗಿಲ್ಲ. ಅಂತೆಯೇ ಈ ಪ್ರದರ್ಶನದಲ್ಲಿನ ಈ ಕೃತಿಗಳೂ ಹಿಂದೆಂದೋ ನೋಡಿದಂತಹ ಕೃತಿಗಳೇ ಎಂದೆನಿಸದಿರದು, ಮೇಲ್ನೋಟಕ್ಕೆ ಅಷ್ಟೇನು ಬದಲಾಗಿಲ್ಲ ಎಂದೆನಿಸಿದರೂ, ಸೂಕ್ಷ್ಮವಾಗಿ ಕೃತಿಗಳ ಒಳಹೊಕ್ಕು ನೋಡಿದಾಗ ಕೆಲವಾದರೂ ಬದಲಾವಣೆಯ ಅಂಶಗಳು ಸಿಗುತ್ತವೆ. ಅದರಲ್ಲಿ ಮೊಟ್ಟ ಮೊದಲನೆಯದೆಂದರೆ ವರ್ಣಮೇಳ, ಇವರ ಈ ಹಿಂದಿನ ಕೃತಿಗಳಲ್ಲಿ ಪ್ರಖರ ಬಣ್ಣಗಳಿದ್ದು ಅವು ಉತ್ಸಾಹ, ಉಲ್ಲಾಸದ ಮೂಲಕ ರಂಜನೀಯ ಎನಿಸಿದರೆ, ಈ ಪ್ರದರ್ಶನದಲ್ಲಿ ಅವು ಮಬ್ಬಾಗುವ ಮೂಲಕ ಖಿನ್ನತೆಯ ಆಯಾಮ ಪಡೆದುಕೊಂಡಿವೆ. ಜೊತೆಗೆ ಇವರ ಟ್ರಂಪ್ ಕಾರ್ಡ್ ಎನ್ನಬಹುದಾದ ಮೈವಳಿಕೆಗಳು ಹಿಂದಿಗಿಂತಲೂ ಸೂಕ್ಷ್ಮಗೊಂಡಿವೆ, ವಿಶಿಷ್ಟ ನಿರ್ವಹಣೆಯ ಮೂಲಕ ಆಕೃತಿಗಳು ಹಲವೆಡೆ ಎಂಬಾಸಿಂಗ್‌ನಂತೆ ತ್ರಿಯಾಮದ ಭ್ರಮೆಯುಂಟು ಮಾಡುತ್ತವೆ.

---

೧೩೬. ಖಿನ್ನತೆಯ ಆಯಾಮ ಪಡೆದುಕೊಂಡ ಸಿಂಹಾವಲೋಕನ, ಪ್ರಜಾವಾಣಿ, ಕರ್ನಾಟಕ ದರ್ಶನ, ೨೪ ಆಗಸ್ಟ್ ೨೦೦೨

ತಂತ್ರದ ಪರಿಣಾಮದ ದೃಷ್ಟಿಯಿಂದ ಇವು ಬಹುತೇಕ ಇವರ ಹಿಂದಿನ ಕೃತಿಗಳಿಂದಲೂ ಮುಂದುವರೆದು ಅತ್ಯುತ್ತಮ ನೆಲೆಯಲ್ಲಿವೆ ಎನ್ನುತ್ತಾರೆ ಕೃ.ಸೆ.ಯವರು.

### ೧೪೧. ಪ್ರೌಢಾವಸ್ಥೆಗೆ ಜಿಗಿದ ಬಾಲಿಶ ರೂಪಗಳು[೧೩೭]

ತನ್ನ ಚೊಚ್ಚಲ ಪ್ರದರ್ಶನದಲ್ಲಿಯೇ ಕಲಾವಲಯದ ಗಮನ ಸೆಳೆದ ಎಸ್, ಕುಶಾಲ್ ಕುಮಾರನ ಎರಡನೆಯ ಏಕವ್ಯಕ್ತಿ ಪ್ರದರ್ಶನ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. "ಸ್ಪ್ಲಾಶ್" ಶೀರ್ಷಿಕೆಯ ಇವುಗಳಲ್ಲಿ ಸ್ಥಾಯಿಯಾಗಿರುವುದು ಮೀನುಗಳು ಹಿಂದಿನ ಪ್ರದರ್ಶನದಲ್ಲಿ ಬಾಲಿಶತನದ ನಡುವೆಯೇ ಕೃತಿಗಳು ಗಂಭೀರ ಸೆಳಕುಗಳನ್ನು ಹೊಂದಿದ್ದರೆ. ಈ ಪ್ರದರ್ಶನದಲ್ಲಿನವು ಬಾಲಿಶತನವನ್ನು ಕಳೆದುಕೊಂಡು ಪ್ರೌಢಾವಸ್ಥೆಗೆ ಜಿಗಿದಿವೆ. ಹಲವು ದೃಷ್ಟಿಗಳಿಂದ ನಮ್ಮನ್ನು ನಿಬ್ಬೆರಗಾಗಿಸುವ ಇವರ ಕೃತಿಗಳು ಸಾಕಷ್ಟು ಉತ್ತಮವಾಗಿವೆ.

ಸಾಮಾನ್ಯವಾಗಿ ಗಂಭೀರ ಕಲಾವಿದರಾದರೂ ಸಂಯೋಜನಾ ಚಿತ್ರಗಳಲ್ಲಿ ಬಳಸದಂತಹ ಸ್ಕೆಚ್ ಪೆನ್ನುಗಳನ್ನು ಬಳಸಿರುವ ಕ್ರಮವು ಇಲ್ಲಿ ತುಂಬ ಕುತೂಹಲಕಾರಿಯಾಗಿದೆ. ಅದರಲ್ಲೂ ಪ್ಯಾಟರ್ನ್‌ಗಳ ರಚನೆಯಲ್ಲಿ ಸ್ಕೆಚ್ ಪೆನ್ನು ಬಳಸಿರುವ ಕ್ರಮವು ಹೊಸ ಸಾಧ್ಯತೆಗಳನ್ನು ಪರಿಚಯಿಸಿದಂತಿದೆ. ಅಲಂಕರಣದ, ಕೃತಕ, ಶೈಲೀಕೃತ ಮೀನುಗಳನ್ನು ಇಟ್ಟಿರುವಂತಹ ವಾತಾವರಣವೂ ಮನಮೋಹಕವಾಗಿದೆ. ಹೀಗೆ ಹದಿನಾಲ್ಕರ ಬಾಲಕನೊಬ್ಬನಿಂದ ಸಾಮಾನ್ಯವಾಗಿ ನಿರೀಕ್ಷಿಸದಂತಹ ಕೃತಿಗಳಿವು ಎನ್ನುವ ಬಹು ಮುಖ್ಯ ಅಂಶವನ್ನು ಕೃ.ಸೆ.ಯವರು ಈ ಲೇಖನದಲ್ಲಿ ಚರ್ಚಿಸಿದ್ದಾರೆ.

### ೧೪೨. ಒಂದೆಡೆ ಕೋಮಲ ಸ್ಪರ್ಶ, ಇನ್ನೊಂದೆಡೆ ಮೃಗೀಯ ವಿರೂಪ[೧೩೮]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೩೧-೦೮-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕಲಾವಿದ ಚೆನ್ನೈನ ಆರ್.ಬಿ. ಭಾಸ್ಕರನ್ ಅವರ ವಿಶೇಷತೆಗಳನ್ನು ಚರ್ಚಿಸಿದ್ದಾರೆ. ದೇಶದ ಪ್ರತಿಷ್ಠಿತ ಕಲಾವಿದರಾದ ಇವರು ಕೇಂದ್ರ ಲಲಿತಕಲಾ ಅಕಾಡೆಮಿಯ ಪ್ರಶಸ್ತಿ ಗಳಿಸಿದವರು. ಇವರು ವಿದೇಶಗಳಲ್ಲೂ ಕಲಾಭ್ಯಾಸ ಮಾಡಿದವರು. "ಆರ್ಟ್ ಇನ್ ಕ್ರಾಫ್ಟ್ಸ್" ವ್ಯವಸ್ಥೆಗೊಳಿಸಿದ ಅವರ ಈಚಿನ ಕಲಾಕೃತಿಗಳ ಪ್ರದರ್ಶನವು ವಿಂಡ್ಸರ್ ಮ್ಯಾನರ್ ಹೋಟೆಲಿನ ವೆಸ್ಟ್‌ಮಿನಿಸ್ಟರ್ ಗ್ಯಾಲರಿಯಲ್ಲಿ ನಡೆಯಿತು.

---

೧೩೭. ಪ್ರೌಢಾವಸ್ಥೆಗೆ ಜಿಗಿದ ಬಾಲಿಶ ರೂಪಗಳು, ಪ್ರಜಾವಾಣಿ, ಕರ್ನಾಟಕದರ್ಶನ, ೩೧ ಆಗಸ್ಟ್ ೨೦೦೨

೧೩೮. ಒಂದೆಡೆ ಕೋಮಲ ಸ್ಪರ್ಶ, ಇನ್ನೊಂದೆಡೆ ಮೃಗೀಯ ವಿರೂಪ, ಪ್ರಜಾವಾಣಿ, ಕರ್ನಾಟಕ ದರ್ಶನ, ೩೧ ಆಗಸ್ಟ್ ೨೦೦೨

ಭಾಸ್ಕರನ್ ಅವರ ಇಲ್ಲಿನ ಕಲಾಕೃತಿಗಳಲ್ಲಿ ಅವರ ಬಹುತೇಕ ಹಿಂದಿನ ರೂಪಗಳೇ ಹೊಸ ಅವತಾರದಲ್ಲಿ ಕಾಣಿಸಿಕೊಂಡಿವೆ. ಇವುಗಳಲ್ಲಿ ಮುಖ್ಯವಾಗಿ ಎರಡು ಬಗೆಯ ಕೃತಿಗಳಿವೆ, ಮೊದಲನೆಯದು ಕಾಗದದ ಮೇಲೆ ಮಿಶ್ರ ಮಾಧ್ಯಮದಲ್ಲಿ ರಚಿಸಿದವು, ಕೋಮಲತೆಯ ಸ್ಪರ್ಶ ಪಡೆದ ಇವುಗಳಲ್ಲಿ ಖಿನ್ನತೆಯಿದ್ದರೂ ಕರ್ಕಶವಿಲ್ಲ, ಬಹುತೇಕ ಮದ್ರಾಸಿನ ಕಲಾವಿದರಂತೆ ಜನಪದದ ರೂಪಗಳನ್ನು ನವ್ಯಕ್ಕೆ ಹೊಂದಿಸುವುದು ಹಾಗು ಪೌರ್ವಾತ್ಯ ರೂಪಗಳನ್ನು ಪಾಶ್ಚಾತ್ಯ ಅಂಶಗಳೊಂದಿಗೆ ಬೆಸೆಯುವುದು ಇವರ ಕ್ರಮ. ಹೀಗೆ ಈ ಪ್ರದರ್ಶನದಲ್ಲಿ ಸ್ಥಾಯಿಯಾಗಿರುವುದೆಂದರೆ "ಸ್ಟಿಲ್‌ಲೈಫ್" ಅಥವಾ ಸ್ಮಿತ ಜೀವ, ಅದರಲ್ಲೂ ಶೈಲೀಕರಣಗೊಂಡ ಹೂಕುಂಡಗಳೇ ಇಲ್ಲಿನ ಕೇಂದ್ರ ವಸ್ತು. ಈ ಬಾರಿ ಇದರೊಂದಿಗೆ ಮೀನುಗಳ ಸೇರ್ಪಡೆಯೂ ಆಗಿದೆ.

ಕಾಗದದ ಮೇಲಿನ ಕೃತಿಗಳು ಕೋಮಲ ವೆನಿಸಿದರೆ, ಕ್ಯಾನ್ವಾಸ್‌ನ ಮೇಲಿನ ಕೃತಿಯಲ್ಲಿ ಬಹುತೇಕ ಅದೇ ರೂಪಗಳು ಕಣ್ಣಿಗೆ ಕಠೋರವೆನಿಸುವಂತೆ ರಚಿಸಲ್ಪಟ್ಟಿವೆ. ಹೀಗೆ ಒಂದು ವಸ್ತುವಿನ ಎರಡು ಭಾವನಾತ್ಮಕ ಮುಖವನ್ನು ಇಲ್ಲಿ ಕಾಣಬಹುದು, ವಿರೂಪದಲ್ಲಿ ಮೃಗೀಯ ಆಯಾಮ ವಿರುವುದು ಇಲ್ಲಿಯೇ. ಇವುಗಳಲ್ಲಿ ಮಿಂಚಿನಂತೆ ಹೊಳೆಯುವ ತಾಮ್ರ, ಹಿತ್ತಾಳೆ, ಬೆಳ್ಳಿಯ ಬಣ್ಣಗಳನ್ನು ಮೈವಳಿಕೆ ಸೃಷ್ಟಿಸುವಂತೆ ದಪ್ಪನಾಗಿ ಹಚ್ಚಿದ್ದಾರೆ, ತೀವ್ರತೆಯ ರೇಖೆಗಳು ಹಾಗು ಕುಂಚದ ಬೀಸುಗಳು ಕೃತಿಯೊಳಗೇ ವಿಶಿಷ್ಟವಾದ ಡೈನಮಿಸಂ ನಿರ್ಮಿಸುತ್ತದೆ, ಒಟ್ಟಾರೆಯಾಗಿ ವಿಲಕ್ಷಣ ರೂಪಗಳನ್ನು ಬಿಂಬಿಸುವ ಭಾಸ್ಕರನ್ ಅವರ ಈ ಕೃತಿಗಳು ಅತ್ಯುತ್ತಮ ಪರಿಣಾಮ ಮೂಡಿಸುವಂತಿವೆ ಎಂದು ಒಟ್ಟಾರೆ ಕೃ.ಸೆ.ಅಭಿಪ್ರಾಯ ವ್ಯಕ್ತಪಡಿತ್ತಾರೆ.

**೧೪೩. ಚಿತ್ತಾಕರ್ಷಕಗೊಂಡ ವರ್ಣಮೇಳ**[೧೩೫]

ಬೆಂಗಳೂರಿನಲ್ಲಿ ಸುಮುಖ ಗ್ಯಾಲರಿಯಲ್ಲಿ ನಡೆದ ಯೂಸುಫ್ ಅರಕ್ಕಲ್ ಅವರ 'ಮೈ ಬುಕ್ ಆಫ್ ರೆಫರೆನ್ಸಸ್" ಶೀರ್ಷಿಕೆಯ ಕಲಾಕೃತಿಗಳ ೨ನೇ ಪ್ರದರ್ಶನದಲ್ಲಿದ್ದ ಕೆಲ ವಿಶೇಷ ಮತ್ತು ಕುತೂಹಲಕರ ಬದಲಾವಣೆಗಳನ್ನು ಕೃ.ಸೆ. ಈ ಲೇಖನದ ಮೂಲಕ ಪ್ರಸ್ತಾಪಿಸಿದ್ದಾರೆ.

ಒಂದೆರಡು ದಶಕಗಳಿಂದಲೂ ಯೂಸುಫ್ ಅವರ ಮುಖ್ಯ ಬಂಡವಾಳವಾಗಿರುವುದು ಕೃತಿಯ ಹಿನ್ನೆಲೆ. ಬಹುತೇಕ ಕಲಾವಿದರಿಗೆ ಪಾಸಿಟಿವ್ ಸ್ಪೇಸ್ ಮುಖ್ಯವೆನಿಸಿದರೆ ಯೂಸುಫ್ ಅವರ ಕೃತಿಗಳ ನಿಜವಾದ ಹೀರೋ ಎಂದರೆ ನೆಗೆಟಿವ್ ಸ್ಪೇಸ್ ಎನ್ನುವುದರಲ್ಲಿ ಎರಡು ಮಾತಿಲ್ಲ, ಹಿನ್ನೆಲೆಯ ವೈವಿಧ್ಯಮಯ ಸಂಕೀರ್ಣ ಮೈವಳಿಕೆಗಳ ಮೂಲಕ ಚಿತ್ತಾಕರ್ಷಕ ಸಂಯೋಜನೆಯನ್ನು ಸೃಷ್ಟಿಸುವುದರಲ್ಲಿ ಯೂಸುಫ್ ಸಿದ್ಧಹಸ್ತರು. ಈ ಪ್ರದರ್ಶನದಲ್ಲಿ ಅದು ಇನ್ನಷ್ಟು ಪ್ರೌಢಿಮೆಯನ್ನು

---

೧೩೫. ಚಿತ್ತಾಕರ್ಷಕಗೊಂಡ ವರ್ಣಮೇಳ, ಪ್ರಜಾವಾಣಿ, ಕರ್ನಾಟಕದರ್ಶನ, ೩೧ ಆಗಸ್ಟ್ ೨೦೦೨

ಪಡೆದಿದೆ. ಜೊತೆಗೆ ದಟ್ಟವಾದ, ಪ್ರಖರವಾದ ಬಣ್ಣಗಳು ಹಾಗು ಕತ್ತಲೆ- ಬೆಳಕಿನ ಕೃತಕ ಚೆಲ್ಲಾಟದ ಮೂಲಕ ಇವುಗಳನ್ನು ಇನ್ನಷ್ಟು ರಂಜನೀಯವಾಗಿಸಿದ್ದಾರೆ. ಹಾಗಾಗಿ ಈ ಬಾರಿಯ ಬಹುತೇಕ ಕೃತಿಗಳು ನಳನಳಿಸುತ್ತ, ನವವಧುವಿನಂತೆ ಅಲಂಕೃತಗೊಂಡಿವೆ. ಇವರ ಎಂದಿನ ಸ್ಥಾಯಿಯಾದ ತಂತ್ರವಾದ ಚಿತ್ರಕ್ಷೇತ್ರದ ವಿಭಜನೆಯಲ್ಲೂ ಇಲ್ಲಿ ಕೆಲವು ವ್ಯತ್ಯಾಸಗಳ ಸೂಚನೆಯಿದೆ, ಬಹು ಹಿಂದಿನಿಂದಲೂ ಫಿಗರೆಟಿವ್ ಕೃತಿಗಳಲ್ಲಿ ಅಷ್ಟೇನು ಯಶಸ್ಸು ಕಂಡಿರದಿದ್ದ ಇವರು, ಈ ಬಾರಿ ಯಾಂತ್ರಿಕ ವಿಧಾನಗಳ ಮೂಲಕ ಆ ದೌರ್ಬಲ್ಯಗಳನ್ನು ಮುಚ್ಚಿ ಹಾಕಿದ್ದಾರೆ. ಹಾಗಾಗಿ ಈ ಪ್ರದರ್ಶನದಲ್ಲಿ ಅವರಿಗೆ ಸಾಧ್ಯವೆನಿಸುವ ಪರಿಪಕ್ವತೆಯ ಬಿಂದುವನ್ನು ತಲುಪಿದ್ದಾರೆ ಎನ್ನಬಹುದು, ವರ್ಣ ಸಮೃದ್ಧಿಯ ಮೂಲಕ ರಂಜನೀಯ ಅಂಶಗಳನ್ನು ಇಷ್ಟಪಡುವವರಿಗೆ ಇದೊಂದು ನಿಜಕ್ಕೂ ಉತ್ತಮ ಪ್ರದರ್ಶನವಾಗಿದೆ ಎಂದಿದ್ದಾರೆ ಕೃ.ಸೆ.ಯವರು.

### ೧೪೪. ಆವೇಶಭರಿತ ಬೀಸುಗಳುಳ್ಳ ಅಮೂರ್ತ ವೈಭವ[೧೪೦]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೧-೦೯-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಬೆಂಗಳೂರಿನ ಚಿತ್ರಕಲಾ ಪರಿಷತ್ತು ಹಾಗು ಬರೋಡಾ ಕಲಾಶಾಲೆಗಳಲ್ಲಿ ಕಲಾಭ್ಯಾಸ ಮಾಡಿರುವ ಅಮರನಾಥ್ ಅವರು ಮೂಲತಃ ಬಂಡಾಯ ಮನೋಭಾವದವರು. ಈಚಿನ ವರ್ಷಗಳಲ್ಲಿ ವಿಶಿಷ್ಟ ರೀತಿಯ ಅಮೂರ್ತ ಕೃತಿಗಳಲ್ಲಿ ಅವರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ ಎನ್ನುವ ಸಂಗತಿಯನ್ನು ಕೃ.ಸೆ. ಗುರುತಿದ್ದಾರೆ.

ಇವರ ಚೌಕಾಕೃತಿಯ, ಚಿಕ್ಕ ಅಳತೆಯ ಕಲಾಕೃತಿಗಳು ಹಿಂದಿನ ಕೃತಿಗಳ ದಾರಿಯಲ್ಲಿಯೇ ಸಾಗಿದ್ದರೂ ಈ ಬಾರಿ ಸಾಕಷ್ಟು ವೈವಿಧ್ಯಗಳೂ ಇವೆ, ಶೈಲಿಯಲ್ಲಿಯೂ ವಿವಿಧ ಪಾಶ್ಚಾತ್ಯ ಕಲಾವಿದರ ಗುರುತುಗಳು ಸುಳಿಯುವಂತಹ ವಿವಿಧ ಪ್ರಕಾರಗಳಿವೆ, ಕಳೆದ ಪ್ರದರ್ಶನದಲ್ಲಿ 'ಇಂಪಾಸ್ಟೊ' ಎಂದು ಕರೆಯುವಂತಹ ದಪ್ಪವಾಗಿ ಬಣ್ಣವನ್ನು ಮೆತ್ತುವಿಕೆಗೆ ಹೆಚ್ಚು ಒತ್ತಾಯವಿದ್ದರೆ, ಈ ಬಾರಿ ಅದು ಸ್ವಲ್ಪ ಸೌಮ್ಯವೆನಿಸಿದೆ. ಈ ಹಿಂದೆ ಪ್ರಭಾಕರ್ ಕೋಲತೆಯವರ ಕೃತಿಗಳಲ್ಲಿರುವಂತಹ ಆಳದಲ್ಲಿ ಗಂಭೀರವಾಗಿ ಪ್ರಭಾವಿಸುವಂತಹ ವರ್ಣಮೇಳಕ್ಕೆ ಪ್ರಾಶಸ್ತ್ಯವಿದ್ದರೆ, ಈ ಬಾರಿ ಅ ಬಗೆಯ ಕೃತಿಗಳೊಂದಿಗೆ ರಂಗುರಂಗಿನ ವೈವಿಧ್ಯದ ಕೃತಿಗಳೂ ಇವೆ. ಆ ಕೃತಿಗಳಲ್ಲಿ ಫಾರ್ಮನಲ್ಲಯೂ ವೈವಿಧ್ಯವಿದೆ ಹೀಗೆ ಹಿಂದಿನ ಬೇರುಗಳು ವಿವಿಧ ಕವಲುಗಳಾಗಿ ಒಡೆದು ಬೆಳೆದಿರುವ ಪ್ರದರ್ಶನವಿದು.

ಯಾವುದೇ ಕೃತಕ ವೈಚಾರಿಕ ಅಯಾಮವಿಲ್ಲದೆ, ಬಣ್ಣಗಳ ಭೌತಿಕ ಆಕೃತಿಗಳಿಗೇ ನಿಷ್ಠವಾಗಿರುವ ಕೃತಿಗಳಿವು. ಶುದ್ಧ ಆಧುನಿಕ ಸಂಗೀತವೊಂದರಂತೆ ಪರಿಣಾಮ ಬೀರುವ ಇವು ಯಾವುದೇ

---

೧೪೦. ಆವೇಶಭರಿತ ಬೀಸುಗಳುಳ್ಳ ಅಮೂರ್ತ ವೈಭವ, ಪ್ರಜಾವಾಣಿ, ಕರ್ನಾಟಕ ದರ್ಶನ, ೧ ಸೆಪ್ಟಂಬರ್ ೨೦೦೨

ನಿಶ್ಚಿತ ಸಂದೇಶ ಹೊಂದಿರುವ ಕೃತಿಗಳಲ್ಲ ಬದಲಿಗೆ, ಯಾದೃಚ್ಛಿಕವಾಗಿ, ಮನಬಂದಂತೆ ಕುಂಚದ ಬೀಸುಗಳನ್ನು ಬೀಸಿದ ಕೃತಿಗಳಿವು ನಯ-ನಾಜೂಕು, ನೀಟುಗಾರಿಕೆಯನ್ನು ಸಂಪೂರ್ಣವಾಗಿ ನಿರಾಕರಿಸಿ, ಗ್ರಾಮ್ಯ ಒರಟುತನವನ್ನು ತಮ್ಮೊಳಗೆ ಧರಿಸಿದ ಈ ಅಮೂರ್ತ ಕೃತಿಗಳು ತುಂಬ ಉತ್ತಮ ನೆಲೆಯಲ್ಲಿವೆ.

**ಹರಿಯುವ ನಿಸರ್ಗ**

ಝೆನ್ ಗ್ಯಾಲರಿಯಲ್ಲಿಯೇ ಅಮರನಾಥ್ ಅವರ ಕೃತಿಗಳ ಪಕ್ಕದಲ್ಲಿಯೇ ಇನ್ನೊಂದು ಬಗೆಯ ಕೃತಿಗಳ ಪ್ರದರ್ಶನವು ನಡೆಯಿತು. ಸ್ವಂತ ಅಭ್ಯಾಸದಿಂದ ಅಮೂರ್ತಕ್ಕೆ ಹತ್ತಿರವಾದ ಕಲಾಕೃತಿಗಳನ್ನು ರಚಿಸುತ್ತಿರುವ ವಿನೋದಾ ರೇವಣಸಿದ್ದಯ್ಯನವರ ಈ ನಿಸರ್ಗ ಕೃತಿಗಳಲ್ಲಿ ಅಮೂರ್ತವನ್ನು ನಿಸರ್ಗದೊಂದಿಗೆ ಸಮೀಕರಿಸುವ ಆಶಯವಿದೆ. ದ್ರವರೂಪದ ಬಣ್ಣಗಳನ್ನು ಕ್ಯಾನ್ವಾಸಿನ ಮೇಲೆ ವಿವಿಧ ರೀತಿಗಳಲ್ಲಿ ಹರಿಸಿ ಅವುಗಳನ್ನು ವಿವಿಧೆಡೆಗಳಿಗೆ ತಿರುಗಿಸುತ್ತಲೇ ರೂಪಗಳನ್ನು ರೂಪಿಸುವ ಅಪರೂಪದ ತಂತ್ರವೇ ಈ ಕೃತಿಗಳ ಬಂಡವಾಳವಾಗಿದೆ. ವಿನೋದಾ ಅವರು ಇಲ್ಲಿ ಬಾಹ್ಯಕಾಶದ ಸಮುದ್ರ ತೀರದ ಪರ್ವತಗಳ ಈ ಮುಂತಾದ ನೈಸರ್ಗಿಕ ರೂಪಗಳನ್ನು ಈ ತಂತ್ರದ ಮೂಲಕ ಯಶಸ್ವಿಯಾಗಿ ಮೂಡಿಸುತ್ತಾರೆ. ಹೀಗೆ ಮಾಡುವಾಗ ಸಾಮಾನ್ಯ ಕಣ್ಣುಗಳನ್ನು ತಣಿಸುವಂತಹ ಪ್ರಖರ ಪ್ರಕಾಶಮಾನವಾದ ಬಣ್ಣಗಳನ್ನು ಬಳಸುವುದರಿಂದ ಇವುಗಳಲ್ಲಿ ಅತಿಯಾದ ಸಿಹಿತನ ತುಂಬಿಕೊಳ್ಳುತ್ತದೆ. ಈ ಅತಿಯಾದ ಸಿಹಿತನವೇ ಇವುಗಳ ಗಾಂಭೀರ್ಯವನ್ನು ಮೊಟಕುಗೊಳಿಸುತ್ತದೆ. ಈ ರೊಮ್ಯಾಂಟಿಕ್ ನೆಲೆಯ ಸಿಹಿತನ ಕಳಚಿ ಬಿದ್ದಾಗಲಷ್ಟೇ ಈ ರೂಪಗಳು ಕುತೂಹಲಕಾರಿ ಎನಿಸಬಲ್ಲವು ಎಂಬುದನ್ನು ಪ್ರಸ್ತುತ ಲೇಖನದಲ್ಲಿಯೇ ಕೃ.ಸೆ.ಯವರು ಸ್ಪಷ್ಟಪಡಿಸಿದ್ದಾರೆ.

**೧೪೫. ಮರಳಿ ಕ್ಯಾಲೆಂಡರ್ ಕಲೆಯೆಡೆಗೆ**[೧೪೧]

ಬೆಂಗಳೂರಿನ ಸುಮುಖ ಗ್ಯಾಲರಿಯಲ್ಲಿ ನಡೆದ ಕೊಲ್ಕತ್ತಾದ ಜಯಶ್ರೀ ಬರ್ಮನ್ ಅವರ ಕೃತಿಗಳ ಪ್ರದರ್ಶನವು ದಶಕಗಳ ಹಿಂದಿನ ಕ್ಯಾಲೆಂಡರ್ ಕಲೆಯ ಅಂಶಗಳನ್ನು ಬಹುತೇಕ ಯಥಾವತ್ತಾಗಿ ಅನುಸರಿಸುವ ಆಶಯ ಇಲ್ಲಿದ್ದರೂ ಒಂದೆರಡು ಹಳೆಯ ರೂಪಗಳನ್ನೇ ಬೆಸೆಯುವ ಪ್ರಯತ್ನ ಮಾಡಿದ್ದಾರೆ. ಮೈ-ಕೈ ತುಂಬಿಕೊಂಡ ಇಲ್ಲಿನ ಶೈಲೀಕೃತ ರೂಪಗಳು ಶಕ್ತಿ ಬರ್ಮನ್ ಅವರ ಕೃತಿಗಳ ನೆನಪು ತರುವಂತಿವೆ.

ಇವುಗಳ ವೈಶಿಷ್ಟ್ಯವೆಂದರೆ ವರ್ಣಚಿತ್ರ ಮತ್ತು ರೇಖಾಚಿತ್ರಗಳೆರಡನ್ನು ಒಂದೇ ಕೃತಿಯಲ್ಲಿ ಕಸಿ ಮಾಡಿರುವುದು ಹೂ-ಸಸ್ಯಗಳ, ಪಶು ಪಕ್ಷಿಗಳ ನಡುವೆ ಅನೂಹ್ಯ ಲೋಕದಲ್ಲಿರುವ ಇಲ್ಲಿನ

೧೪೧. ಮರಳಿ ಕ್ಯಾಲೆಂಡರ್ ಕಲೆಯೆಡೆಗೆ, ಪ್ರಜಾವಾಣಿ, ಕರ್ನಾಟಕದರ್ಶನ, ೧ ಸೆಪ್ಟಂಬರ್ ೨೦೦೨

ವ್ಯಕ್ತಿಗಳಿಂದಾಗಿ ಇಲ್ಲಿ ಪ್ಯಾಂಟಸಿ ನಿರ್ಮಾಣವಾಗಿದೆ. ಆದರೆ ಹಳೆಯ ರೂಪಗಳನ್ನು ಪುನರ್ಶೋಧಿಸುವ ಈ ಆಶಯಕ್ಕೆ ನಿರ್ವಹಣೆಯಲ್ಲಿನ ಕೆಲವು ದೋಷಗಳಿಂದಾಗಿ ತಡೆಯುಂಟಾಗಿದೆ. ವರ್ಣಗಳ ನಿರ್ವಹಣೆ, ಪ್ರಮಾಣಬದ್ದತೆ ರೇಖಾಲಾಲಿತ್ಯ ಈ ಬಗೆಯ ಹಲವು ದೋಷಗಳು ಇಲ್ಲಿ ಮನೆಮಾಡಿವೆ. ಹಾಗಾಗಿ ಕುತೂಹಲದ ನಡುವೆಯೂ ಈ ಪ್ರದರ್ಶನವು ಮಿಶ್ರ ಅನುಭವ ನೀಡುತ್ತದೆಂಬುದನ್ನು ಪ್ರಸ್ತುತ ಲೇಖನದಲ್ಲಿ ಕೃ.ಸೆ.ಯವರು ಸ್ಪಷ್ಟಪಡಿಸಿದ್ದಾರೆ.

**೧೪೬. ಕಲಾತ್ಮಕ ಏರಿಳಿತಗಳ ನಡುವೆ**[೧೪೨]

ಬೆಂಗಳೂರಿನ ವಿ.ಶಕೀರಾ ಅವರು ಸ್ವಂತ ಅಭ್ಯಾಸದಿಂದ ಕಲಾಕೃತಿಗಳನ್ನು ರಚಿಸುತ್ತಿರುವವರು. ಇತ್ತೀಚೆಗಷ್ಟೇ ಸಮಾಕಾಲೀನ ಕಲೆಯ ಪ್ರಾಥಮಿಕ ಪಾಠಗಳಿಗೆ ತೆರೆದುಕೊಂಡಿರುವ ಇವರು ತಮ್ಮ ಕೃತಿಗಳನ್ನು ಚಿತ್ರಕಲಾ ಪರಿಷತ್ತಿನಲ್ಲಿ ಪ್ರದರ್ಶಿಸಿದ್ದರು. ಮುಖ್ಯವಾಗಿ ಮೂರು ನೆಲೆಯ ಕೃತಿಗಳಿರುವ ಇವುಗಳಲ್ಲಿ ಮೊದಲು ಗಮನ ಸೆಳೆಯುವ ಕೃತಿಗಳೆಂದರೆ ಕಾಲ್ಪನಿಕ ನಿಸರ್ಗ ಚಿತ್ರಗಳು ಇಂಪ್ರೆಸನಿಸ್ಟರಂತೆ ನಿಸರ್ಗದ ಮುಖ್ಯ ಚೈತನ್ಯವನ್ನು ಹಿಡಿದಿಡಬಯಸುವ ಇವುಗಳಲ್ಲಿ ಉದ್ದೇಶ ಪೂರ್ವಕವಾಗಿ ಒರಟು ನಿರ್ವಹಣೆಯಿದೆ. ಪ್ರದರ್ಶನದಲ್ಲಿ ನಿಜಕ್ಕೂ ಉತ್ತಮ ಕೃತಿಗಳು ಇವಾಗಿದ್ದು, ಶಕೀರಾ ಅವರು ಈ ಹಾದಿಯಲ್ಲಿ ಮುಂದುವರೆದರೆ ಯಶಸ್ಸು ಕಾಣುವ ಸಾಧ್ಯತೆ ಹೆಚ್ಚಾಗಿದೆ. ಎರಡನೆಯ ನೆಲೆಯ ಕೃತಿಗಳಲ್ಲಿ ಛಾಯಾಚಿತ್ರಗಳಂತೆ 'ನಿಸರ್ಗದ' ಸುಂದರ ದೃಶ್ಯಗಳನ್ನು ಯಥಾವತ್ತಾಗಿ ಸೆರೆಹಿಡಿಯುವ ಪ್ರಯತ್ನಗಳು ವಾಸ್ತವತೆ ಮತ್ತು ಜಡತೆಯು ಅಷ್ಟಾಗಿ ಗಮನ ಸೆಳೆಯುವುದಿಲ್ಲ ಎಂಬುದನ್ನು ಪ್ರಸ್ತುತ ಲೇಖನದಲ್ಲಿ ಕೃ.ಸೆ.ಯವರು ಸ್ಪಷ್ಟಪಡಿಸಿದ್ದಾರೆ.

**೧೪೭. ವೈಭವೀಕೃತ ರಾಮಾಯಣದ ಎರಡು ಸಾಂಪ್ರದಾಯಿಕ ಕವಲುಗಳು**[೧೪೩]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೪-೦೯-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ರಾಮಯಣ ಕಥಾವಸ್ತುವನ್ನು ಆಧರಿಸಿ ರಚಿತವಾದ ಕಲಾ ಕೃತಿಗಳ ಮಹತ್ವವನ್ನು ಕೃ.ಸೆ.ಯವರು ವಿಶ್ಲೇಷಿಸಿದ್ದಾರೆ.

'ಯುಗ ಯಾತ್ರಿ' ಸಂಘಟನೆಯು ರಾಮಾಯಣದ ಮಹಾನತೆಯನ್ನು ಸಾರುವ ಉದ್ದೇಶದಿಂದ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಪ್ರಾಚೀನ ತೊಗಲು ಬೊಂಬೆಗಳು ಹಾಗು ಮೈಸೂರು ಸಾಂಪ್ರದಾಯಿಕ ವರ್ಣ ಚಿತ್ರಗಳ ಪ್ರದರ್ಶನವನ್ನು ಏರ್ಪಡಿಸಿತ್ತು. ಇದು ಬಹುತೇಕ ಈ ತೊಗಲು ಬೊಂಬೆಗಳನ್ನು ಹಾಗೂ ಸಾಂಪ್ರದಾಯಿಕ ಚಿತ್ರಗಳನ್ನು ಕೇವಲ ಕಲಾರೂಪವಾಗಿಯಷ್ಟೇ

---

೧೪೨. ಕಲಾತ್ಮಕ ಏರಿಳಿತಗಳ ನಡುವೆ, ೧೪ ಸೆಪ್ಟಂಬರ್ ೨೦೦೨

೧೪೩. ವೈಭವೀಕೃತ ರಾಮಾಯಣದ ಎರಡು ಸಾಂಪ್ರದಾಯಿಕ ಕವಲುಗಳು, ಪ್ರಜಾವಾಣಿ, ಕರ್ನಾಟಕ ದರ್ಶನ, ೧೪ ಸೆಪ್ಟಂಬರ್ ೨೦೦೨

ಪರಿಭಾವಿಸಿದವರಿಗೆ ರಾಮಾಯಣ ಕಥೆಯ ಹಿನ್ನೆಲೆಯನ್ನು ಪರಿಭಾವಿಸಿದಾಗ ಆಗುವ ಸಂಭ್ರಮವೇ ಬೇರೆಯದು. ಇಂದಿನ ಆಧುನಿಕ ನವ್ಯೋತ್ತರದ ಕಲೆಗಳೆದುರು ಹಲವು ನೆಲೆಗಳಲ್ಲಿ ಸೆಡ್ಡು ಹೊಡೆದು ನಿಲ್ಲುವಂತಹ ಶಕ್ತಿ ಈ ಕಲಾ ರೂಪಗಳಲ್ಲಿ ಸಮೃದ್ಧವಾಗಿತ್ತು. ಇವುಗಳನ್ನು ಹಿನ್ನೆಲೆಯ ಮಂದ ಬೆಳಕಿನಲ್ಲಿ ಪ್ರದರ್ಶಿಸಿದ ಪರಿಯೂ ಮೆಚ್ಚುವಂತಿತ್ತು.

ರಿಯಲಿಸ್ಟಿಕ್ ನೆಲೆಯ ಪಾಶ್ಚಾತ್ಯ ಶೈಲಿಯ ಕೃತಿಗಳು ನಮ್ಮಲ್ಲಿಗೆ ಬರುವುದಕ್ಕೆ ಬಹು ಮುಂಚೆಯೇ ನಮ್ಮಲ್ಲಿ ಹುಟ್ಟಿಕೊಂಡ ಈ ಎರಡೂ ಕಲಾಪ್ರಕಾರಗಳು ಬಹು ಮುಖ್ಯವಾದವು ಕುತೂಹಲದ ಸಂಗತಿಯೆಂದರೆ ಈ ಎರಡೂ ಪ್ರಕಾರಗಳ ವಸ್ತು ಒಂದೇ ಆದರೂ ಎರಡರ ಧೋರಣೆಯೂ ವಿಭಿನ್ನವಾದುದು. ಸಾಹಿತ್ಯಕ ಪರಿಭಾಷೆಯಲ್ಲಿ ಹೇಳುವುದಾದರೆ ತೊಗಲು ಬೊಂಬೆಗಳು 'ದೇಸಿ'ಯದಾದರೆ ಈ ಮೈಸೂರು ಸಂಪ್ರದಾಯದ ಚಿತ್ರಗಳು 'ಮಾರ್ಗ' ಪರಂಪರೆಗೆ ಸೇರಿದವು. ಒಂದು ಜನಪದ ಇನ್ನೊಂದು ಶಿಷ್ಟಪದದ್ದು, ತೊಗಲು ಬೊಂಬೆಗಳಲ್ಲಿ ಗ್ರಾಮ್ಯ ರೂಪಗಳು ಮೆರೆದರೆ, ಈ ವರ್ಣ ಚಿತ್ರಗಳಲ್ಲಿ ಪುರಾತನ ನಗರ ಸಂಸ್ಕೃತಿಯ ಅಂಶಗಳು ವೈಭವೀಕೃತಗೊಂಡಿವೆ. ಒಂದು ಅನಕ್ಷರ ಸಂಸ್ಕೃತಿಯ ಸೃಷ್ಟಿಯಾದರೆ ಇನ್ನೊಂದು ಅಕ್ಷರ ಸಂಸ್ಕೃತಿಯದು. ಹೀಗೆ ಎರಡು ವೈವಿಧ್ಯಗಳನ್ನು, ವಿಭಿನ್ನ ಬೇರುಗಳುಳ್ಳ ಕೃತಿಗಳು ಇವಾದರೂ ಇಂದಿನ ರಿಯಲಿಸ್ಟಿಕ್ ಕಲೆಯ ಹಲವಾರು ಅಂಶಗಳನ್ನು ನಿರಾಕರಿಸುವುದರಿಂದಾಗಿ ಇವುಗಳಿಗೆ ಗಂಭೀರ ಕಲಾವಲಯದಲ್ಲಿಯೂ ಅಪಾರ ಮನ್ನಣೆಯಿದೆ ಎಂಬುದನ್ನು ಪ್ರಸ್ತುತ ಲೇಖನದಲ್ಲಿ ಕೃ.ಸೆ.ಯವರು ಸ್ಪಷ್ಟಪಡಿಸಿದ್ದಾರೆ.

**೧೪೮. ಪ್ರಸಿದ್ಧರ ಕೃತಿಗಳ ಮರೀಚಿಕೆ**[೧೪೪]

ಬೆಂಗಳೂರಿನ ಮಣಿಪಾಲ್ ಸೆಂಟರ್‌ನಲ್ಲಿ ಫ್ಲೂಯಿಡ್ ಸ್ಪೇಸ್ ಆರ್ಟ್ ಗ್ಯಾಲರಿಯು ಕಲಾಕೃತಿಗಳ ಪ್ರದರ್ಶನ ಮತ್ತು ಮಾರಾಟವನ್ನು ಏರ್ಪಡಿಸಿತ್ತು, ಇಲ್ಲಿ ವಿಶ್ವ ಪ್ರಸಿದ್ಧರ ಸುಮಾರು ೪೦೦೦ ಮುದ್ರಿತ ಪ್ರತಿಗಳನ್ನು ಮಾರಾಟಕ್ಕಾಗಿ ಇಡಲಾಗಿತ್ತು. ಮೂಲ ಕೃತಿಗಳಿಂದ ಸಾಕಷ್ಟು ಚಿಕ್ಕದಾದ ಹಾಗು ವಿವಿಧ ಅಳತೆಗಳಲ್ಲಿರುವ ಈ ಪ್ರತಿಗಳನ್ನು ವಿಶ್ವಾದ್ಯಂತ ಪ್ರಮುಖ ಮ್ಯೂಸಿಯಂಗಳವರಿಂದ ಸಂಗ್ರಹಿಸಿ ಪ್ರದರ್ಶಿಸಿದ್ದು ಗಮನಾರ್ಹ, ಇದರಲ್ಲಿ ವಿಶ್ವವಿಖ್ಯಾತ ಕಲಾವಿದ ವಿನ್ಸೆಂಟ್ ವ್ಯಾನ್ ಗೋನ ಕೃತಿಗಳದ್ದೇ ಸಿಂಹಪಾಲು, ಉಳಿದಂತೆ ಪಿಕಾಸೊ, ಆಂಡಿ ವರೋಲ್, ರನ್ವಾ, ಮೋನೆ, ಮಾರ್ಕ್ ರೋಥ್ಕೋ, ಗುಸ್ತಾವ್ ಮುಂತಾದವರ ಹಲವಾರು ಕೃತಿಗಳ ಮುದ್ರಣಗಳಿವೆ. ಜೊತೆಗೆ ಹಲವು ಛಾಯಾಚಿತ್ರಗಳೂ ಇವೆ. ಸಾಕಷ್ಟು ಸುಲಭ ಬೆಲೆಯಲ್ಲಿ ವಿಶ್ವವಿಖ್ಯಾತ ಒಂದು ಛಾಯಾಚಿತ್ರ ಪಡೆದುಕೊಳ್ಳಬಯಸುವವರಿಗೆ ಮಾತ್ರ ಈ ಬಗೆಯ ಪ್ರಯತ್ನಗಳು ಸ್ವಲ್ಪ ಸಮಾಧಾನ

೧೪೪. ಪ್ರಸಿದ್ಧರ ಕೃತಿಗಳ ಮರೀಚಿಕೆ, ಪ್ರಜಾವಾಣಿ, ಕರ್ನಾಟಕದರ್ಶನ, ೧೪ ಸೆಪ್ಟಂಬರ್ ೨೦೦೨

ತರಬಹುದು, ಅದು ಹೊರತು ಪಡಿಸಿದರೆ ಈ ಬಗೆಯ ಸಾಮಾನ್ಯ ಮುದ್ರಣಗಳಿಗೆ ಕಲಾತ್ಮಕ ವೈಶಿಷ್ಟ್ಯ ದಕ್ಕುವುದಿಲ್ಲ. ಅಂತೆಯೇ ಇವು ನಿಜವಾದ ಕಲಾಸಕ್ತರ ಮನತಣಿಸುವುದಿಲ್ಲ. ಬದಲಿಗೆ ಮನದಣಿಸುತ್ತವೆ. ಆದ್ದರಿಂದ ಇನ್ನು ಮುಂದಾದರೂ ಗ್ಯಾಲರಿಗಳವರು ಈ ಬಗೆಯ ಪ್ರಯತ್ನಗಳನ್ನು ಮುಂದುವರೆಸದಿರುವುದು ಒಳಿತು. ಇದರಿಂದ ಕಲೆಗೆ ಆಗುವ ಉಪಯೋಗಕ್ಕಿಂತಲೂ ನಷ್ಟವೇ ಹೆಚ್ಚು ಎನ್ನುವುದನ್ನು ಕೃ.ಸೆ.ಯವರು ಈ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.

### ೧೪೯. ಅಮೂರ್ತದ ಹುಡುಕಾಟದಲ್ಲಿ ಹುಟ್ಟಿದ ಗಣೇಶ[೧೪೫]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೪–೦೯–೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ನಮ್ಮ ಯುವ ಕಲಾವಿದರ ವಲಯದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ತಮ್ಮನ್ನು ಕ್ರಿಯಾತ್ಮಕವಾಗಿ ತೊಡಗಿಸಿಕೊಳ್ಳುವ ಎಂ.ಎಸ್.ಮೂರ್ತಿಯವರು ಗಣೇಶನನ್ನು ವಸ್ತುವಾಗಿಸಿಕೊಂಡ ಚಿತ್ರಸರಣಿಯನ್ನು ಪ್ರದರ್ಶಿಸಿದ್ದಾರೆ. ಅವರ ಈ ಹೊಸ ಸಾಮಯಿಕ ಸರಣಿಯ ಕೃತಿಗಳ ಪ್ರದರ್ಶನ ಬೆಂಗಳೂರಿನ ಟೈಮ್ ಅಂಡ್ ಸ್ಪೇಸ್ ಗ್ಯಾಲರಿಯಲ್ಲಿ ನಡೆಯಿತು.

ಕೆಲ ಸಮಯದ ಹಿಂದೆ ಬುದ್ಧ ದಿ ಲೈಟ್ ಸರಣಿಯಲ್ಲಿ ಅಮೂರ್ತ ನೆಲೆಯಲ್ಲಿ ಜಲವರ್ಣದ ದಿಟ್ಟ ವಾಶ್ ತಂತ್ರದ ಮೂಲಕ ಕಲಾಕೃತಿ ರಚಿಸಿ ಹೆಸರುಗಳಿಸಿದ್ದ ಇವರು ಗಣೇಶ ಸರಣಿಯನ್ನು ಚಿತ್ರಿಸಿದ್ದಾರೆ. ಏಕೆಂದರೆ ಈಗ ಪ್ರದರ್ಶಿತ ಸರಣಿಯ ಒಟ್ಟಾರೆಯಾದ ರೂಪಗಳು ಹಿಂದಿನದರ ಮುಂದುವರೆದ ರೂಪಗಳಾಗಿವೆ. (ಗೋಲ್ಡ್ ಲೀಫ್ ಮಾತ್ರ ಇಲ್ಲಿಲ್ಲ.) ಹಿಂದಿನ ಕೃತಿಗಳಲ್ಲಿ ಅಮೂರ್ತದಲ್ಲಿಯೇ ಮೂರ್ತವನ್ನು ಕಲ್ಪಿಸಿಕೊಳ್ಳುವ ಬಯಕೆಯಿದ್ದರೆ, ಇಲ್ಲಿ ಅಮೂರ್ತವನ್ನು ಮೂರ್ತವಾಗಿ ಪರಿವರ್ತಿಸುವ ಆಶಯವಿದೆ. ಅಂದರೆ ಇಲ್ಲಿರುವ ಕೃತಿಗಳಲ್ಲಿ ಕೆಲವನ್ನು ಹೊರತುಪಡಿಸಿದರೆ ಹೆಚ್ಚಿನವುಗಳನ್ನು ನೋಡಿದಾಗ ತಕ್ಷಣಕ್ಕೆ ಅವು ಅಮೂರ್ತ ಕೃತಿಗಳೇ ಎಂದೆನಿಸದಿರದು ಇದು ಗಣಪತಿಯನ್ನು ಕುರಿತ ಕೃತಿಗಳೆಂಬ ನೆನಪಾದಾಗ ಎಲ್ಲಿಯೋ ಒಂದೆಡೆ ಗಣಪತಿಯ ಸೊಂಡಿಲು, ಕಿವಿಗಳ ಸೂಚನೆ ನೆಪಮಾತ್ರಕ್ಕೆ ಕಾಣಿಸುತ್ತವೆ. ಈ ಕೆಲವು ಸೂಚ್ಯ, ಸೂಕ್ಷ್ಮಗಳ ಮೂಲಕವೇ ಗಣಪತಿಯ ರೂಪವನ್ನು ಬಿಂಬಿಸುವ ಪ್ರಯತ್ನ ಮಾಡಿದ್ದಾರೆಂದು ಕೃ.ಸೆ.ಯವರು ಈ ಲೇಖನದ ಮುಖಾಂತರ ಸ್ಪಷ್ಟೀಕರಿಸಿದ್ದಾರೆ.

### ೧೫೦. ಸಂಪ್ರದಾಯದ ಆಚೀಚೆಗೆ[೧೪೬]

ಚೆನ್ನೈನ ಶಾಂತಿ ಗೋವಿಂದರಾಜ್ ಅವರ ಈಚಿನ ತಂಜಾವೂರು ಸಂಪ್ರದಾಯದ ಕೃತಿಗಳ ಪ್ರದರ್ಶನವು ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು, ಈ ಹಿಂದೆ ಅವರು ಪ್ರದರ್ಶಿಸಿದ

---

೧೪೫. ಅಮೂರ್ತದ ಹುಡುಕಾಟದಲ್ಲಿ ಹುಟ್ಟಿದ ಗಣೇಶ, ಪ್ರಜಾವಾಣಿ, ಕರ್ನಾಟಕದರ್ಶನ, ೧೪ ಸೆಪ್ಟಂಬರ್ ೨೦೦೨

೧೪೬. ಸಂಪ್ರದಾಯದ ಆಚೀಚೆಗೆ, ಪ್ರಜಾವಾಣಿ, ಕರ್ನಾಟಕದರ್ಶನ, ೧೪ ಸೆಪ್ಟಂಬರ್ ೨೦೦೨

ಕೃತಿಗಳಿಗೆ ಹೋಲಿಸಿದರೆ ಇಲ್ಲಿ ಹೇಳಿಕೊಳ್ಳುವಂತಹ ಬದಲಾವಣೆಗಳೇನು ಇಲ್ಲ. ಎಲ್ಲ ಸಾಂಪ್ರದಾಯಿಕ ಕಲಾವಿದರಂತೆ ಸಾಮಾನ್ಯವಾದ ವಸ್ತು-ವಿಷಯಗಳೊಂದಿಗೆ ಕೆಲವು ಹೊಸ ವಸ್ತುಗಳನ್ನು ಈ ಸಂಪ್ರದಾಯದೊಳಗೆ ಎಳೆದು ತರುವ ಪ್ರಯತ್ನ ಮಾಡಿದ್ದಾರೆ. ಕ್ಯಾಲೆಂಡರ್ ಕೃತಿಗಳಂತಿರುವ ಶಿವ-ಪಾರ್ವತಿ ಮತ್ತು ರವಿವರ್ಮನ ಕೃತಿಗಳ ಪುನರ್ ಸೃಷ್ಟಿಗಳನ್ನು ಈ ದಿಸೆಯಲ್ಲಿ ಹೆಸರಿಸ ಬಹುದಾಗಿದೆ.

ಶಾಂತಿ ಅವರು ಹಲವೆಡೆಗಳಲ್ಲಿ ಜೆಸ್ಸೊ ಕೆಲಸದ ದೊಡ್ಡ ಆಕೃತಿಗಳನ್ನು ಹಾಗೆಯೇ ಬಿಡುತ್ತಾರೆ. ಸಾಮಾನ್ಯವಾಗಿ ಇಂತಹ ಸಂದರ್ಭಗಳಲ್ಲಿ ಕಲಾವಿದರು ಚಿಕ್ಕಚಿಕ್ಕ ವಿನ್ಯಾಸಗಳ ಮೂಲಕ ಆ ಸ್ಥಾನವನ್ನು ತುಂಬಿದರೆ, ಇವರು ವಿನ್ಯಾಸಗಳಿಲ್ಲದೆಯೇ ಅದನ್ನು ಸಮತಟ್ಟಾಗಿ ಬಿಡುತ್ತಾರೆ. ಈ ಕೃತಿಗಳಲ್ಲಿ ನಿಜವಾದ ಗಾಂಭೀರ್ಯವಾಗಲೀ ಚೈತನ್ಯವಾಗಲೀ ಅಷ್ಟಾಗಿ ಕಂಡು ಬರುವುದಿಲ್ಲ ಏಕೆಂದರೆ ನಿಜವಾದ ಸಾಂಪ್ರದಾಯಿಕ ಕೃತಿಗಳಲ್ಲಿ ಕಣ್ಣಿಗೆ ರಾಚುವಂತಹ, ಢಾಳಾದ ಬಣ್ಣಗಳು ಬರುವುದು ಅಪರೂಪ, ಅದರೆ ಸಾಮಾನ್ಯ ಮಾರುಕಟ್ಟೆಯ ಮೇಲೆ ಕಣ್ಣಿಟ್ಟಿರುವ ಈ ಕಲಾವಿದೆ ಸಾಮಾನ್ಯರನ್ನು ಸುಲಭವಾಗಿ ತಲುಪುವ ಆಶಯ ಹೊಂದಿದ್ದಾರೆಂದು ಕೃ.ಸೆ.ಯವರು ಈ ಲೇಖನದ ಮುಖಾಂತರ ಸ್ಪಷ್ಟೀಕರಿಸಿದ್ದಾರೆ.

**೧೫೧. ಯುವ ಕಲಾವಿದರ ವೈವಿಧ್ಯ**[೧೪೭]

ಚಿತ್ರಕಲಾ ಪರಿಷತ್ತಿನ ಕಾಲೇಜಿನಲ್ಲೇ ಈಚೆಗಷ್ಟೇ ತಮ್ಮ ಕಲಾಭ್ಯಾಸ ಮುಗಿಸಿದ ಕೆಲವು ಕಲಾವಿದರು 'ಅಂಕುರ' ಎಂಬ ತಂಡದ ಹೆಸರಿನಲ್ಲಿ ಈಚೆಗೆ ಪ್ರದರ್ಶನವೊಂದನ್ನು ಏರ್ಪಡಿಸಿದ್ದರು. ಚಿತ್ರಕಲಾ ಪರಿಷತ್ತಿನಲ್ಲಿ ನಡೆದ ಇದರಲ್ಲಿ ಹನ್ನೊಂದು ಯುವ ಕಲಾವಿದರು ಭಾಗವಹಿಸಿದ್ದರು. ಪ್ರದರ್ಶನದ ಒಟ್ಟಾರೆಯಾದ ಕಲಾತ್ಮಕತೆಯಲ್ಲಿ ಏರಿಳಿತಗಳಿದ್ದರೂ ಕೆಲವಾದರೂ ಗಮನಾರ್ಹವಾದ ಕೃತಿಗಳಿರುವ ಪ್ರದರ್ಶನವಿದು. ಇಂದಿನ ಕಲಾ ಮಾರುಕಟ್ಟೆಯ ಸಂದರ್ಭದಲ್ಲಿ ಕೊನೆಯ ಬೆಂಚಿನಲ್ಲಿರುವ ಗ್ರಾಫಿಕ್ ಮಾಧ್ಯಮದ ಕೆಲವಾದರೂ ಉತ್ತಮ ಕೃತಿಗಳು ಇಲ್ಲಿವೆ, ವಿಶೇಷತಃ ವೀಣಾ ಹಾಗು ಎಸ್, ಶೇಖರ್ ಅವರ ಕೆಲವು ಕೃತಿಗಳನ್ನು ಈ ದಿಸೆಯಲ್ಲಿ ಉದಾಹರಿಸಬಹುದಾಗಿದೆ. ಜಲವರ್ಣದಲ್ಲಿ ಹಳೆಯ ಗೋಡೆಗಳಂತಹ ಮೇಲ್ಮೈಗಳನ್ನು ಹಿಡಿದಿಡಬಯಸುವ ಗುರುಲಿಂಗ ಅರಳಿಯವರ ಕೃತಿಗಳು ನಿಸ್ತೇಜದ ನಡುವೆಯೂ ಗಮನಾರ್ಹವಾಗಿವೆ. ಈ ನಡುವೆ ಜೆ. ಶಿವಕುಮಾರ್ ಅವರ ಸಂಯೋಜನೆಗಳು ದೃಶ್ಯಾತ್ಮಕ ಪರಿಣಾಮದಲ್ಲಿ ಸೆಳೆಯುವಂತಿವೆ, ತಮ್ಮ ಹಿಂದಿನ ವಸ್ತು-ವಿಷಯಕ್ಕೇ ಹೊಂದಿಕೊಂಡಿರುವ ಕೆ. ಕೃಷ್ಣಪ್ರಸಾದ್ ಅವರ ಇಲ್ಲಿನ ಕೃತಿಗಳು ಹಿಂದಿಗಿಂತಲೂ ಪ್ರಗತಿಯನ್ನು ಸೂಚಿಸುವಂತಿವೆ, ಈ ನಡುವೆ ಬಿ.ವಿ. ಮುರಳಿ, ವೇಣುಗೋಪಾಲ ವರ್ಮ, ಎಸ್

---

೧೪೭. ಯುವ ಕಲಾವಿದರ ವೈವಿಧ್ಯ, ಪ್ರಜಾವಾಣಿ, ಕರ್ನಾಟಕದರ್ಶನ, ೧೪ ಸೆಪ್ಟಂಬರ್ ೨೦೦೨

ಸುರೇಶ್ ಹಾಗು ಸಿ.ಕುಮಾರ್ ಅವರ ಕೃತಿಗಳೂ ಪರವಾಗಿಲ್ಲ. ಆದರೆ ಮೀರಾ ಕೃಷ್ಣ ಅವರ ಕೃತಿಗಳು ಬರಿಯ ಡಿಸೈನಿನ ಅಭ್ಯಾಸಗಳಾಗಿಯೇ ಉಳಿದುಬಿಟ್ಟರೆ, ವಿ.ಹರೀಶ್ ಅವರ ರೇಖಾಚಿತ್ರಗಳು ಜಡತೆಯಿಂದಾಗಿ ಹಿಂದೆ ಉಳಿಯುತ್ತವೆ. ಒಟ್ಟಾರೆಯಾಗಿ 'ಅಂಕುರ' ತಂಡವು ಹೆಸರಿಗೆ ತಕ್ಕಂತೆಯೇ ಇನ್ನೂ ಮೊಳೆಯುವ ಸ್ಥಿತಿಯಲ್ಲಿದ್ದು ಈ ಕೃತಿಗಳು ಮಿಶ್ರ ಅನುಭವ ನೀಡುವಂತಿವೆ ಎನ್ನುವುದನ್ನು ಕೃ.ಸೆ.ಯವರು ಈ ಲೇಖನದ ಮುಖಾಂತರ ಸ್ಪಷ್ಟೀಕರಿಸಿದ್ದಾರೆ.

**೧೫೨. ಚಲನೆಯ ಅನುಭವ ಬಯಸುವ ಸಂಯೋಜನೆಗಳು**[೧೪೮]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೭-೦೯-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕಲಾವಿದ ಸುನೀಲ್ ಗಾವಡೆಯವರು ವಿಶೇಷತೆಯನ್ನು ದಾಖಲಿಸಿದ್ದಾರೆ. ಇವರು ಮುಂಬಯಿಯ ಜೆ.ಜೆ.ಕಲಾಶಾಲೆಯಲ್ಲಿ ಶಿಕ್ಷಣ ಮುಗಿಸಿ, ಬ್ರಿಟಿಷ್ ಕೌನ್ಸಿಲ್‌ನ ಪ್ರತಿಷ್ಠಿತ ಚಾರ್ಲ್ಸ್ ವ್ಯಾಲೇಸ್ ಸ್ಕಾಲರ್‌ಶಿಪ್ ಪಡೆದು ಇಂಗ್ಲೆಂಡಿನ ಗ್ಲಾಸ್‌ಗೋ ಸ್ಕೂಲ್ ಆಫ್ ಆರ್ಟ್‌ನಲ್ಲಿಯೂ ಕಲಾಭ್ಯಾಸ ಮಾಡಿದವರು, ಎಂದಿನ ದಾರಿಯಿಂದ ಭಿನ್ನವಾದ ಕುತೂಹಲಕಾರಿಯಾದ ಕೃತಿಗಳನ್ನು ಸೃಷ್ಟಿಸುವ ಇವರ ಕಲಾಕೃತಿಗಳ ಪ್ರದರ್ಶನವು 'ಏಟ್ ಸೆಕೆಂಡ್ ಅಹೆಡ್ ಆಫ್ ಟೈಮ್' ಶೀರ್ಷಿಕೆಯಲ್ಲಿ ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ನಡೆಯಿತು. ಈ ಪ್ರದರ್ಶನವು ಹಲವು ನೆಲೆಗಳಲ್ಲಿ ಪಝುಲ್‌ನಂತೆ ಕಂಡು ಬರುತ್ತವೆ. ಏಕೆಂದರೆ ಈ ಶೀರ್ಷಿಕೆಯೂ ಇವರ ಕೃತಿಗಳು ತಕ್ಷಣಕ್ಕೆ ಪಾಶ್ಚಾತ್ಯ ಮನಿಮಲಿಸ್ಟರ್ ಕೃತಿಗಳನ್ನು ನೆನಪಿಸುತ್ತವೆ. ಸುನೀಲ್ ಕೂಡಾ ತುಂಬ ಸರಳವಾದ ಜಾಮಿತೀಯ ಆಕೃತಿಗಳನ್ನು ರಚಿಸುತ್ತಾರೆ. ಹೀಗೆ ರಚಿಸುವಾಗ ಕ್ಯಾನ್ವಾಸಿನ ಮೇಲೆ ದಪ್ಪನೆಯ ರೋಲರ್‌ಗಳಿಂದ ಬಣ್ಣ ಹಚ್ಚಿ ವಿಚಿತ್ರ ಮೈವಳಿಕೆಗಳನ್ನು ಸೃಷ್ಟಿಸುತ್ತಾರೆ. ಹೀಗೆ ದಪ್ಪವಾಗಿ ಹಚ್ಚಿದ ಬಣ್ಣದಲ್ಲಿ ವೃತ್ತಗಳನ್ನು ಯಾಂತ್ರಿಕವಾಗಿ ಕೆರೆದು ತೆಗೆಯುವುದು ಇವರ ಕ್ರಮ. ಹೀಗೆ ಕೆರೆದು ತೆಗೆದಾಗ ಕ್ಯಾನ್ವಾಸಿನ ಸ್ವಲ್ಪ ಮಾತ್ರವೇ ರವೆ ರವೆಯಂತಹ ಬಣ್ಣ ಹಾಗೆಯೇ ಉಳಿದು ಕೃತಿಯಲ್ಲಿ ಎರಡು ಪದರುಗಳು ಉಂಟಾಗುತ್ತವೆ, ಇದರಲ್ಲಿ ಒಂದು ಪಾಸಿಟಿವ್ ಸ್ಪೇಸ್ ಎನಿಸಿದರೆ ಮತ್ತೊಂದು ನೆಗೆಟಿವ್ ಸ್ಪೇಸ್ ಎನಿಸುತ್ತದೆ. ಗಾವಡೆಯವರು 'ಆಪ್ ಆರ್ಟ್'ನಲ್ಲಿಯಂತಹ ಉಪಾಯಗಳನ್ನು ತಮ್ಮ ಕೃತಿಗಳಲ್ಲಿ ತರುವುದರಿಂದ ನೋಟದ ದೃಷ್ಟಿಯಿಂದಲೂ ಕುತೂಹಲವಿರುತ್ತದೆ.

ಹೀಗೆ ರಚಿಸಿದ ಸ್ವಲ್ಪವೇ ವ್ಯತ್ಯಾಸಗಳುಳ್ಳ ನಾಲ್ಕಾರು ಕ್ಯಾನ್ವಾಸ್‌ಗಳನ್ನು ಪಕ್ಕಪಕ್ಕದಲ್ಲಿ ಪ್ರದರ್ಶಿಸಿರುವುದರಿಂದ ವಿಚಿತ್ರವಾದ ಟೆನ್ಷನ್ ಕೂಡಾ ಉಂಟಾಗುತ್ತದೆ. ಹೀಗೆ ಇವು ಸರಣಿ ಚಿತ್ರಗಳಾದ್ದರಿಂದ ಯಾವುದೇ ಕಥೆ ಹೇಳಲು ಹೊರಟಿದೆ ಎಂದೆನಿಸದಿರದು, ಸುನೀಲ್ ಅವರು ಬೇಕೆಂದರೆ ಈ

---

೧೪೮. ಚಲನೆಯ ಅನುಭವ ಬಯಸುವ ಸಂಯೋಜನೆಗಳು, ಪ್ರಜಾವಾಣಿ, ಕರ್ನಾಟಕ ದರ್ಶನ, ೭ ಸೆಪ್ಟಂಬರ್ ೨೦೦೨

ಪ್ರತಿಯೊಂದರ ಕುರಿತೂ ಕಥೆ ಹೇಳಬಲ್ಲವರಾದರೂ ಇಲ್ಲಿನ ಆಶಯ ಕಥೆ ಹೇಳುವುದಿಲ್ಲ, ಬದಲಿಗೆ ವಿಶಿಷ್ಟ ಅನುಭವ ಲೋಕವನ್ನು ನಿರ್ಮಿಸುವುದು, ಕುತೂಹಲವನ್ನು ನಿರ್ಮಿಸುವುದು, ಗಣಿತಜ್ಞರಂತೆ ತುಂಬ ಲೆಕ್ಕಚಾರದಿಂದ ನಿಖರವಾಗಿ ರಚಿಸಿದ ಈ ಕೃತಿಗಳು ಮೊದಲ ನೋಟಕ್ಕೆ ಆಕರ್ಷಿಸುವಷ್ಟು ಪ್ರಭಾವಶಾಲಿಯಾಗಿವೆ. ಜೊತೆಗೆ ಇವುಗಳ ಹಿಂದಿರುವ ಸರಳವಾದ ಕಾನ್ಸೆಪ್ಟ್ ಕೂಡಾ ನಮ್ಮ ಅಗತ್ಯಕ್ಕೆ ತಕ್ಕಂತೆ ಬದಲಾಗುವಷ್ಟು ಫ್ಲೆಕ್ಸಿಬಲ್ ಆಗಿವೆ. ಹೀಗೆ ಇವರ ಈ ಕಲಾಕೃತಿಗಳು ತುಂಬ ಸರಳವಾದುದಾದರೂ, ವಿಶಿಷ್ಟ ಅನುಭವ ಮೂಡಿಸುವಷ್ಟು ಗಮನಾರ್ಹವಾಗಿವೆ ಎನ್ನುವುದನ್ನು ಇಲ್ಲಿ ಗುರುತಿಸಿದ್ದಾರೆ.

**೧೫೩. ಉಲ್ಲಾಸ ತಂದ ಚಿತ್ರ ಯೋಜನೆ**[೧೪೯]

ಬ್ಯಾಂಕ್‌ನಲ್ಲಿ ಕೆಲಸ ಮಾಡುತ್ತಿರುವ ಗಿರಿಧರ ಖಾಸನೀಸ ಯಾವುದೇ ಕಲಾಶಾಲೆಗಳಲ್ಲಿ ಔಪಚಾರಿಕ ಕಲಾ ಶಿಕ್ಷಣ ಪಡೆದವರಲ್ಲ. ಬದಲಿಗೆ ಕಲಾವಿದರ ಒಡನಾಟ, ಪುಸ್ತಕಗಳ ನೆರವು ಇತ್ಯಾದಿಗಳಿಂದ ಕಲೆಯನ್ನು ಕಲಿತವರು. ಅವರ ಈಚಿನ ಕೃತಿಗಳ ಪ್ರದರ್ಶನವು ಬೆಂಗಳೂರಿನ 'ಕೆಫೆ ಕಾಫಿ ಡೇ'ಯ ಮೂರು ಗ್ಯಾಲರಿಗಳಲ್ಲಿ ನಡೆಯಿತು. ಇವುಗಳ ವಿಶೇಷತೆಯನ್ನು ಕೃ.ಸೆ.ಯವರು ಈ ಮುಂದಿನಂತೆ ವಿಶ್ಲೇಷಿಸಿದ್ದಾರೆ. ಮಿನಿಯೇಚರ್‌ನಂತೆ ಇವುಗಳೆಲ್ಲ ತುಂಬ ಚಿಕ್ಕ ಅಳತೆಯವಾಗಿದ್ದು, ಮೂಲತಃ ಸಂಯೋಜನಾ ಪ್ರಧಾನವಾದವು, ತಮ್ಮದೇ ಆದ ನಿರ್ದಿಷ್ಟ ಶೈಲಿಯನ್ನು ರೂಪಿಸಿಕೊಳ್ಳುವುದಕ್ಕಿಂತಲೂ ಮನ ಬಂದಂತೆ ಗಮನ ಹರಿಸಿದ ಯಾದೃಚ್ಛಿಕ ಕೃತಿಗಳಿವು, ಕೃತಿಗಳು ತುಂಬ ಚಿಕ್ಕವಾದರೂ ಹಲವೆಡೆ ಸಂವೇದನಾಶೀಲ ನಿರ್ವಹಣೆ ಇರುವುದು ಇಲ್ಲಿನ ವೈಶಿಷ್ಟ್ಯ. ಹಲವೆಡೆ ಇತರರ ಪ್ರಭಾವಗಳು ಸುಳಿಯುತ್ತವಾದರೂ ಅದನ್ನು ತಮ್ಮದಾಗಿಸಿಕೊಳ್ಳುವಲ್ಲಿ ಇವರು ಸಾಕಷ್ಟು ಯಶಸ್ವಿಯಾಗಿದ್ದಾರೆ. ಮೂಲತಃ ಅಮೂರ್ತವಾಗಿಯೇ ಇದ್ದರೂ ಕೆಲವೆಡೆ ಕುತೂಹಲಕರ ಆಕೃತಿಗಳ ಮೂಲಕ ಇವುಗಳಿಗೆ ಮೂರ್ತ ಸ್ವರೂಪ ನೀಡಿದ್ದಾರೆ.

ಚಿಕ್ಕ ಕ್ಷೇತ್ರದಲ್ಲೂ ಮೈವಳಿಕೆ ರಚನೆ, ಜೊತೆಗೆ ಕ್ರತಿಯ ಕ್ಷೇತ್ರವನ್ನು ವಿಭಜಿಸುವ ಸಂಯೋಜನಾ ಚಾಣಕ್ಯ ಹೆಚ್ಚುವಂತಿದೆ. ಹಾಗಿದ್ದರೂ ಅದು ಎಲ್ಲ ಕೃತಿಗಳಲ್ಲಿ ಯಶಸ್ವಿಯಾಗಿಲ್ಲ, ಹೆಚ್ಚಿನೆಡೆ ಉಲ್ಲಾಸ, ಉತ್ಸಾಹದ ವಾತಾವರಣವನ್ನು ನಿರ್ಮಿಸಿದ್ದಾರೆ. ಈ ಕೃತಿಗಳ ಒಂದು ಅಳತೆ, ಯಾವುದೇ ಕೃತಿಯೊಂದು ಒಂದು ನಿರ್ದಿಷ್ಟ ಅಳತೆಯಲ್ಲಿ ರಚಿತವಾಗದಿದ್ದರೆ, ಅವು ಪರಿಣಾಮದಲ್ಲಿ ಹಿಂದೆ ಬೀಳುತ್ತವೆ. ಇಷ್ಟೊಂದು ಸಂಕೀರ್ಣವಾದ ಈ ಕೃತಿಗಳು ಸಾಕಷ್ಟು ದೊಡ್ಡ ಆಳತೆಯಲ್ಲಿದ್ದರೆ ಇವುಗಳ ಮಹತ್ವ ಇನ್ನಷ್ಟು ಹೆಚ್ಚುತ್ತಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ, ಅದೇನೇ ಇರಲಿ ಗಿರಿಧರ ಖಾಸನೀಸ ಅವರು ತಮ್ಮ ಚೊಚ್ಚಲ ಪ್ರದರ್ಶನದಲ್ಲಿಯೇ ಉತ್ತಮ ಸಂವೇದನಶೀಲತೆಯನ್ನು ಪ್ರದರ್ಶಿಸಿದ್ದಾರೆಂಬುದು ಲೇಖಕರ ಅಭಿಪ್ರಾಯವಾಗಿದೆ.

---

೧೪೯. ಉಲ್ಲಾಸ ತಂದ ಚಿತ್ರ ಯೋಜನೆ, ಪ್ರಜಾವಾಣಿ, ಕರ್ನಾಟಕ ದರ್ಶನ, ೨೮ ಸೆಪ್ಟಂಬರ್ ೨೦೦೨

## ೧೫೪. ವಿದೇಶಿ ಕಣ್ಣುಗಳಲ್ಲಿ ಭಾರತೀಯ ಆಧ್ಯಾತ್ಮಿಕ ದರ್ಶನ[೧೫೦]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೮-೦೯-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಆಧ್ಯಾತ್ಮಿಕತೆಯನ್ನು ವಸ್ತುವನ್ನಾಗಿಸಿಕೊಂಡು ಬೆಂಗಳೂರಿನಲ್ಲಿ ನಡೆದ ಕಲಾವಿದ ಇಟಲಿಯ ಲ್ಯುಗಿ ಅನಸ್ತೇಶಿಯೊ ಅವರ ಕಲಾ ಪ್ರದರ್ಶನಗಳ ವಿಶೇಷತೆಗಳನ್ನು ಕೃ.ಸೆ.ಯವರು ಮುಂದಿನಂತೆ ವಿಶ್ಲೇಷಿಸಿದ್ದಾರೆ.

ಮೂಲತಃ ಇಟಲಿಯ ಲ್ಯುಗಿ ಅನಸ್ತೇಶಿಯೊ ಅವರು ನಮ್ಮ ದೇಶದ ಪುರಾತನ ಆಧ್ಯಾತ್ಮಿಕ ಸಿದ್ಧಾಂತಗಳಿಗೆ ಒಲಿದವರು. ಕಳೆದ ಸುಮಾರು ಇಪ್ಪತ್ತು ವರ್ಷಗಳಿಂದ ಭಾರತವನ್ನೇ ಮನೆ ಮಾಡಿಕೊಂಡ ಅವರು ಶಾಂತಿನಿಕೇತನದಲ್ಲಿ ಪೋಸ್ಟ್ ಡಿಪ್ಲೊಮಾ ಪದವಿಯನ್ನೂ ಪಡೆದಿದ್ದಾರೆ. ಈ ಆಧ್ಯಾತ್ಮಿಕ ಮುಖಾಮುಖಿಯನ್ನು ಅವರು ತಮ್ಮದೇ ರೀತಿಯಲ್ಲಿ ಕಲಾಕೃತಿಗಳ ಮೂಲಕ ಅಭಿವ್ಯಕ್ತಿಸುತ್ತಿದ್ದಾರೆ. 'ವಂಶ ಪರಂಪರೆ' ಶೀರ್ಷಿಕೆಯ ಈ ಕೃತಿಗಳ ಪ್ರದರ್ಶನವು ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ನಡೆಯಿತು. ಇದರಲ್ಲಿ ಈ ಜಗತ್ತಿನಲ್ಲಿ ಮಾನವ ಆದಿಕಾಲದಿಂದ ಇಂದಿನವರೆಗೆ ಅವನ ಜೊತೆ ಸಾಗಿ ಬಂದ ದಾರ್ಶನಿಕ ಭಾಷೆಗಳ ರವಾನೆ ಎಂದು ಹೇಳುತ್ತಾರೆ. ಧರ್ಮಾಂಧತೆಯನ್ನು ಖಂಡಿಸುವ ನಿಜವೂ ಅವರ ಕೃತಿಗಳಲ್ಲಿದೆ. ಆದರೆ ತೀವ್ರ ದಾರ್ಶನಿಕ ಚಿಂತನೆಯನ್ನು ತುಂಬಿಕೊಂಡ ಇವು ಬಹುತೇಕ ಪೋಸ್ಟ್ ಮಾಡರ್ನ್ ಕೃತಿಗಳಲ್ಲಿಯಂತೆ ಭಾಷಿಕ ವಿವರಣೆಯನ್ನು ಆಶ್ರಯಿಸಿವೆ. ಹಾಗಾಗಿ ಗೊಂದಲದಿಂದಾಗಿ, ತೀವ್ರ ಚಿಂತನೆಗಳ ನಡುವೆಯೂ ಸಾಮಾನ್ಯರಿಗೆ ಇವುಗಳೊಳಗೆ ತುಂಬಿಕೊಂಡ ಸಿದ್ಧಾಂತಗಳು ಸುಲಭವಾಗಿ ದಕ್ಕುವುದಿಲ್ಲ.

ಇವರು ಕೃತಿಯಿಂದ ಕೃತಿಗೆ ರೂಪದಲ್ಲಿಯೂ ಬದಲಾಗುತ್ತಾ ವೈವಿಧ್ಯವನ್ನು ಪ್ರಕಟಿಸುತ್ತಾರೆ. ಹಾಗಾಗಿ ವಿಭಿನ್ನ ಶೈಲಿಗಳ, ವಿಭಿನ್ನ ನಿಲುವುಗಳುಳ್ಳ ಕೃತಿಗಳು ಇಲ್ಲಿವೆ. ಇಲ್ಲಿ ಇವುಗಳನ್ನು ಏಕಸೂತ್ರತೆಗೆ ತಂದು ನಿಲ್ಲಿಸಬಲ್ಲ ಏಕೈಕ ಅಂಶವೆಂದರೆ ಈ ಆಧ್ಯಾತ್ಮಿಕತೆ ಮಾತ್ರ. ಈ ಕಲಾವಿದ ಇಂದು ಪಾಶ್ಚಾತ್ಯರಲ್ಲಿ ಸಾಕಷ್ಟು ಚಲಾವಣೆಯಲ್ಲಿರುವ ಗ್ರಿಡ್‌ನಂತಹ ಸಂಯೋಜನಾ ತಂತ್ರಗಳನ್ನು ಬಳಸಿಕೊಳ್ಳುತ್ತಾರೆ. ಭಾರತೀಯತೆಯೊಂದಿಗೆ ಸುಲಭವಾಗಿ ತಳುಕು ಹಾಕುವಂತಹ ಒಂದು ಮುಖ್ಯ ಅಂಶವೆಂದರೆ ದಕ್ಷಿಣ ಭಾರತದ ದೇವ ದೇವತೆಗಳ ಔಟ್‌ಲೈನ್ ಆಕೃತಿಗಳು ಹಾಗೂ ತಾಂತ್ರಿಕ ರೂಪಗಳು. ಹೀಗೆ ಇವು ತಮ್ಮೊಳಗೆ ಗಂಭೀರ ಆಶಯಗಳನ್ನು ತುಂಬಿಟ್ಟುಕೊಂಡಿದ್ದರೂ ಅದು ವೀಕ್ಷಕರಿಗೆ ತಲುಪುವುದು ಕಷ್ಟ. ಅದೇನೇ ಇರಲಿ, ಲ್ಯುಗಿ ಅವರು ಕುತೂಹಲಕಾರಿಯಾದ ರೂಪಗಳನ್ನು ನಮ್ಮ ಮುಂದೆ ಇಟ್ಟಿದ್ದಾರೆಂಬುದನ್ನು ಇಲ್ಲಿ ಕೃ.ಸೆ.ಯವರು ವಿಶೇಷವಾಗಿ ಚರ್ಚಿಸಿದ್ದಾರೆ.

---

೧೫೦. ವಿದೇಶಿ ಕಣ್ಣುಗಳಲ್ಲಿ ಭಾರತೀಯ ಆಧ್ಯಾತ್ಮಿಕ ದರ್ಶನ, ಪ್ರಜಾವಾಣಿ, ಕರ್ನಾಟಕ ದರ್ಶನ, ೨೮ ಸೆಪ್ಟೆಂಬರ್ ೨೦೦೨

### ೧೫೫. ಅಲಂಕರಣಗೊಂಡ ಆಧ್ಯಾತ್ಮಿಕತೆ[೧೫೧]

ಉಡುಪಿಯ ದಿವಾಕರ ಶೆಟ್ಟಿಯವರು ಮುಂಬಯಿಯ ಜೆ.ಜೆ.ಕಲಾಶಾಲೆಯಲ್ಲಿ ಕಲಾಭ್ಯಾಸ ಮಾಡಿದವರು. ಬಹು ಹಿಂದೆಯೇ ಆಧ್ಯಾತ್ಮಿಕತೆಗೆ ಮನಸೋತು ಅವರು ನಮ್ಮ ಶಾಸ್ತ್ರ ಗ್ರಂಥಗಳನ್ನು ಅಭ್ಯಾಸ ಮಾಡಿ ಅಲ್ಲಿನ ಆಶಯಗಳನ್ನು ದೃಶ್ಯ ರೂಪಕ್ಕೆ ರೂಪಾಂತರಿಸಿದ್ದಾರೆ. ಅವರ ಈ ಬಗೆಯ ಮರದ ಉಬ್ಬು ಶಿಲ್ಪಗಳ ಪ್ರದರ್ಶನವು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ಈ ಪ್ರದರ್ಶನದಲ್ಲಿ ವಿಶೇಷತಃ ತಾಂತ್ರಿಕ್ ಸಾಂಕೇತಿಕ ರೂಪಗಳನ್ನು ಆಧುನಿಕವಾಗಿ ಪರಿಚಯಿಸುವ ಪ್ರಯತ್ನವಿತ್ತು. ಇವರಲ್ಲಿ ಒಳ್ಳೆಯ ಹಸ್ತ ಕೌಶಲ್ಯವಿದೆ ಎಂಬ ಅಂಶವನ್ನು ಈ ಉಬ್ಬುಶಿಲ್ಪಗಳು ಮೊದಲ ನೋಟಕ್ಕೆ ಬಿಟ್ಟುಕೊಡುತ್ತವೆ. ಒಳ್ಳೆಯ ಕ್ರಾಫ್ಟ್‌ಮನ್‌ಶಿಪ್ ಉಳ್ಳವರು ಇವರು ತಾಂತ್ರಿಕ್ ಹಾಗೂ ಆಧ್ಯಾತ್ಮಿಕ ಸಂಕೇತಗಳನ್ನು ವಿಶಿಷ್ಟ ರೀತಿಯಲ್ಲಿ ಬೆಸೆಯುತ್ತಾರೆ. ಹೀಗೆ ಬೆಸೆದ ರೂಪಗಳಲ್ಲಿ ಒರಟುತನವಿಲ್ಲದಂತಹ ಸುಕೋಮಲ ತಿರುವುಗಳು. ಮೃದುವಾದ ಉಬ್ಬು ತಗ್ಗುಗಳಿರುವುದರಿಂದ ಇವು ರೋಮ್ಯಾಂಟಿಕ್‌ನ ಕಡೆಗೆ ಓಡುತ್ತವೆ. ಜೊತೆಗೆ ಈ ಉಬ್ಬುಶಿಲ್ಪಗಳ ಮೇಲೆ ಬಹುತೇಕ ಏಕವರ್ಣದಂತಹ ಮೆಟಾಲಿಕ್ ವರ್ಣಗಳನ್ನು ಸ್ಪ್ರೇ ಮಾಡುವುದರಿಂದ ಇವುಗಳಿಗೆ ಅವಶ್ಯಕವಾದ ಸಿಹಿತನ ಬಂದು ಬಿಡುತ್ತದೆ. ಇಲ್ಲಿಯ ಲಾಲಿತ್ಯವುಳ್ಳ ಶೈಲಿಯೂ ಇದಕ್ಕೆ ಪೂರಕವಾಗಿದೆ. ಹೀಗೆ ಇವುಗಳೆಲ್ಲ ಆಧ್ಯಾತ್ಮಿಕ ಗಾಂಭೀರ್ಯವನ್ನು ಕಳೆದುಕೊಂಡು ಕೇವಲ ನಯನ ಮನೋಹರ ರೂಪಗಳಾಗಿ ಅರಳುತ್ತವೆ. ಅಂತೆಯೇ ಗಂಭೀರ ಕಲಾಸಕ್ತರಿಗಿಂತಲೂ ರಂಜನೆಯನ್ನು ಬಯಸುವಂತಹ ಪ್ರೇಕ್ಷಕರನ್ನು ಉದ್ದೇಶಿಸಿದ ಕೃತಿಗಳೆನಿಸುತ್ತವೆ ಎಂಬುದನ್ನು ಈ ಲೇಖನದಲ್ಲಿ ಕೃ.ಸೆ.ಯವರು ದಾಖಲಿಸಿದ್ದಾರೆ.

### ೧೫೬. ಸಾಂಕೇತಿಕ ಪ್ರಾತಿನಿಧ್ಯ[೧೫೨]

ನವದೆಹಲಿಯ ತರುಣ್ ಚೆರಿಯನ್ ಅವರ 'ಮೊಮೆಂಟ್ಸ್ ಆಫ್ ಕ್ರಿಯೇಶನ್' ಕೃತಿಗಳೂ ಆಧ್ಯಾತ್ಮಿಕ ಆಶಯವುಳ್ಳಂತವು. ಅವರ ಈ ಬಗೆಯ ವರ್ಣಚಿತ್ರಗಳ ಪ್ರದರ್ಶನವು ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ನಡೆಯಿತು. ಸ್ವತಃ ಕವಿಯಾದ ಇವರು ತಮ್ಮೆಲ್ಲ ಆಲೋಚನೆಗಳನ್ನು ಒತ್ತಾಯಪೂರ್ವಕವಾಗಿ ದೃಶ್ಯ ರೂಪಕ್ಕೆ ಪರಿವರ್ತಿಸುವ, ಸಾಂಕೇತಿಕವಾಗಿಸುವ ಹಠ ತೊಡುತ್ತಾರೆ. ಆದರೆ ಕೆಲವೆಡೆ ಇದಕ್ಕೆ ಅಗತ್ಯವಾದ ಕಲಾ ಪರಿಶ್ರಮ ಕಂಡುಬರುವುದಿಲ್ಲ. ಎಕ್ಸ್‌ಪ್ರೆಶನಿಸ್ಟ್ ನಿರ್ವಹಣೆಯುಳ್ಳ ಕೆಲವು ಕೃತಿಗಳಲ್ಲಿ ಅವರು ನಿಜಕ್ಕೂ ಮಿಂಚುತ್ತಾರೆ. ಇಂದಿನ ದೃಶ್ಯ ಕಲೆ ಬಯಸುವಂತಹ ಒರಟು ನಿರ್ವಹಣೆ ಇಲ್ಲಿದೆ. ಇಲ್ಲಿ ನಾಲ್ಕು ಡಿಜಿಟಲ್ ಮುದ್ರಣಗಳನ್ನು ಇವರು

---

೧೫೧. ಅಲಂಕರಣಗೊಂಡ ಆಧ್ಯಾತ್ಮಿಕತೆ, ಪ್ರಜಾವಾಣಿ, ಕರ್ನಾಟಕದರ್ಶನ, ೨೮ ಸೆಪ್ಟಂಬರ್ ೨೦೦೨

೧೫೨. ಸಾಂಕೇತಿಕ ಪ್ರಾತಿನಿಧ್ಯ, ಅದೇ

ಪ್ರದರ್ಶಿಸಿದ್ದು ಸೌಮ್ಯ ರೂಪದಲ್ಲಿನ ಈ ಧ್ಯಾನಸ್ತ ಕೃತಿಗಳು ಗಂಭೀರವಾಗಿವೆ. ಹೀಗೆ ಕಲಾತ್ಮಕ ಏರಿಳಿತಗಳುಳ್ಳ ಪ್ರದರ್ಶನವಿದು ಎಂಬುದನ್ನು ಈ ಲೇಖನದಲ್ಲಿ ಕೃ.ಸೆ.ಯವರು ದಾಖಲಿಸಿದ್ದಾರೆ.

### ೧೫೭. ಅತ್ಯುತ್ತಮ ಗ್ರಾಫಿಕ್ ಕೃತಿಗಳು[೧೫೩]

ಬೆಂಗಳೂರಿನ ಲ್ಯಾವೆಲೆ ರಸ್ತೆಯಲ್ಲಿರುವ ವರ್ಮಿಲಿಯನ್ ಹೌಸ್‌ನಲ್ಲಿ ಯುರೋಪಿಯನ್ ಕಲಾವಿದರು ರಚಿಸಿದ ಗ್ರಾಫಿಕ್ ಕಲಾಕೃತಿಗಳ ಪ್ರದರ್ಶನ ನಡೆಯಿತು. ೧೮ ಹಾಗೂ ೧೯ ನೆಯ ಶತಮಾನದ ಈ ಕಲಾವಿದರು ಅಂದಿನ ದೃಶ್ಯಗಳನ್ನು ಛಾಯಾಚಿತ್ರವೊಂದರಲ್ಲಿಯೇ ದಾಖಲಿಸುವ ಪ್ರಯತ್ನ ಮಾಡಿದ್ದಾರೆ. ಇಲ್ಲಿ ಎನ್‌ಗ್ರೇವಿಂಗ್‌ಗಳು, ಲಿಥೊಲಿಕ್ ಮುಂತಾದ ವಿವಿಧ ತಂತ್ರಗಳಿಂದ ತಯಾರಿಸಿದ ಮುದ್ರಣಗಳಿವೆ. ಕೈಗಳಿಂದ ಅಂದಿನ ಭಾರತೀಯ ಪರಿಸರದ ಚಿತ್ರ ಮಾಡ ಬಯಸುವವರಿಗೆ ಅವುಗಳು ಮಾದರಿಗಳಾಗಿದ್ದು, ಕಲೆಯ ಸೂಕ್ಷ್ಮ ನಿರ್ವಹಣೆಯುಳ್ಳವುಗಳಾಗಿವೆ ಎಂಬುದನ್ನು ಈ ಲೇಖನದಲ್ಲಿ ಕೃ.ಸೆ.ಯವರು ದಾಖಲಿಸಿದ್ದಾರೆ.

### ೧೫೮. ಗಂಭೀರ ಅಭಿವ್ಯಕ್ತಿಗೆ ರೂಪಕವಾದ ಸಾಮಾನ್ಯ ಸಾಮಗ್ರಿ[೧೫೪]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೨-೧೦-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕಲಾವಿದ ಎ.ಎಂ ಪ್ರಕಾಶ್ ಅವರ ಕಲಾಕೃತಿಗಳ ವಿಶೇಷತೆಯನ್ನು ದಾಖಲಿಸಿದ್ದಾರೆ.

ಬೆಂಗಳೂರಿನ ಕಲಾಮಂದಿರ ಕಲಾಶಾಲೆಯ ಪ್ರಾಂಶುಪಾಲರಾಗಿರುವ ಪ್ರಕಾಶ್ ಅವರು ಇತ್ತೀಚಿನ ವರ್ಷಗಳಲ್ಲಷ್ಟೇ ಕಲೆಯ ದೃಷ್ಟಿಯಿಂದ ತುಂಬ ಗಂಭೀರ ಹೆಜ್ಜೆಗಳನ್ನು ಇಡುತ್ತಿರುವವರು. ಕಲೆಯ ನಿಜವಾದ ಸೂಕ್ಷ್ಮಗಳಿಗೆ ಈಗಷ್ಟೇ ತೆರೆದುಕೊಳ್ಳುತ್ತಿರುವ ಇವರು 'ವೈಬ್ರೇಶನ್ಸ್' ಶೀರ್ಷಿಕೆಯಲ್ಲಿ ತಮ್ಮ ಇತ್ತೀಚಿನ ಕೃತಿಗಳನ್ನು ಪ್ರದರ್ಶಿಸಿದ್ದಾರೆ. ಲಕ್ಷಣ ಆರ್ಟ್ ಗ್ಯಾಲರಿಯಲ್ಲಿ ನಡೆದ ಈ ಪ್ರದರ್ಶನದಲ್ಲಿ ಮಿನಿಯೇಚರ್‌ನಂತೆ ಬಹುತೇಕ ತುಂಬ ಚಿಕ್ಕ ಅಳತೆಯ ವೈವಿಧ್ಯಮಯ ಕಲಾಕೃತಿಗಳನ್ನು ಪ್ರದರ್ಶಿಸಿದ್ದರು.

ಸಂಕೇತ ಮತ್ತು ರೂಪಕಗಳಾಗಿ ಸೇಫ್ಟಿ ಪಿನ್ ಆಧರಿಸಿ ಅದನ್ನು ರಿಯಲಿಸ್ಟ್ ನೆಲೆಯಲ್ಲಿ ಚಿತ್ರಿಸಿದೇ ಶೈಲೀಕೃತಗೊಳಿಸಿ ಕಲಾಕೃತಿಗಳನ್ನು ರಚಿಸಿರುವ ಪ್ರಕಾಶ್ ಅವರು ತಮ್ಮ ಕ್ಯಾಟಲಾಗ್‌ನಲ್ಲಿ ಪ್ರಭಾವದಿಂದ ಇವುಗಳನ್ನು ರಚಿಸಿದೆ ಎಂಬ ಸೂಚನೆ ನೀಡುತ್ತಾರಾದರೂ 'ಮ್ಯೂಸಿಕಲ್ ಪ್ಲೇ'ನಂತಹ ಒಂದೆರಡು ಕೃತಿಗಳನ್ನು ಬಿಟ್ಟರೆ ಬಹುತೇಕ ಕಡೆಗಳಲ್ಲಿ ಅವು ಸಂಗೀತದೊಂದಿಗೆ ಸಂಬಂಧ

---

೧೫೩. ಅತ್ಯುತ್ತಮ ಗ್ರಾಫಿಕ್ ಕೃತಿಗಳು, ಪ್ರಜಾವಾಣಿ, ಕರ್ನಾಟಕದರ್ಶನ, ೧೨ ಅಕ್ಟೋಬರ್ ೨೦೦೨

೧೫೪. ಗಂಭೀರ ಅಭಿವ್ಯಕ್ತಿಗೆ ರೂಪಕವಾದ ಸಾಮಾನ್ಯ ಸಾಮಗ್ರಿ, ಪ್ರಜಾವಾಣಿ, ಕರ್ನಾಟಕ ದರ್ಶನ, ೧೨ ಅಕ್ಟೋಬರ್ ೨೦೦೨

ಕಲ್ಪಿಸಿಕೊಳ್ಳುವುದಿಲ್ಲ. ಹಾಗಾಗಿ ಸಂಗೀತದ ಕಂಪನವನ್ನು ಹೊರತುಪಡಿಸಿಯೇ ಇವುಗಳನ್ನು ನೋಡುವುದು ಉತ್ತಮ. ಬಹುತೇಕ ಅಮೂರ್ತದಂತಹ ಹಿನ್ನೆಲೆಯಲ್ಲಿ ದಟ್ಟವಾದ ರೇಖಾಕೃತಿಗಳ ಮೂಲಕ ಮುಖ್ಯ ರೂಪವನ್ನು ಸೃಷ್ಟಿಸುವ ವಿಧಾನ ಇಲ್ಲಿರುವುದರಿಂದ ಇವು ಹಲವೆಡೆ "ಡ್ರಾಯಿಂಗ್-ಪೈಂಟಿಂಗ್"ಗಳೇ ಆಗಿಬಿಡುತ್ತವೆ.

ಈ ಪ್ರದರ್ಶನದಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳ ಕೃತಿಗಳಿದ್ದು, ಒಂದು ಪ್ರಕಾರದಲ್ಲಿ ವಾಸ್ತವದ ಸೇಫ್ಟಿ ಪಿನ್ನುಗಳನ್ನೇ ಕೃತಿಯಲ್ಲಿ ಕೊಲಾಜ್‌ನಂತೆ ಹಚ್ಚಿದ್ದಾರಲ್ಲದೆ ಅವುಗಳ ಪಕ್ಕದಲ್ಲಿ ಪಿನ್ನಿನ ಶೈಲೀಕೃತ ರೇಖಾಕೃತಿಗಳನ್ನು ಬರೆದಿದ್ದಾರೆ. ಈ ಬಗೆಯ ಕೆಲವು ಕೊಲಾಜ್ ಕೃತಿಗಳಲ್ಲಿ ಹಾಗು "ಗೋಲ್ಡ್‌ಫಿಶ್" ನಂತಹ ಕೆಲವು ಕೃತಿಗಳಲ್ಲಿ ಹಾಗು ಗ್ರಾಫಿಕ್ ಮುದ್ರಣಗಳನ್ನು ಅದರಲ್ಲೂ ಇಂಟಾಗ್ಲಿಯೋ ಮುದ್ರಣಗಳನ್ನು ನೆನಪಿಸುವಂತಹ ನಿರ್ವಹಣೆಯಿದೆ. ವರ್ಣಮೇಳದ ದೃಷ್ಟಿಯಿಂದಲೂ ಎಲ್ಲಿಯೂ ಕಡುಪಾದ, ಗಾಢವಾದ ಬಣ್ಣಗಳನ್ನು ಬಳಸದೇ ಮಿಶ್ರ ಮಾಧ್ಯಮದಲ್ಲಿ ಹಿತಮಿತವಾದ ಬಣ್ಣಗಳ ಬಳಕೆ ಇಲ್ಲಿದೆ. ಜೊತೆಗೆ ಚಿತ್ರ ಕ್ಷೇತ್ರದಲ್ಲಿ ಒಂದು ಬಣ್ಣವನ್ನು ಹಂಚಿ ಸಮತೋಲನ ತರುವ ದೃಷ್ಟಿಯಿಂದಲೂ ಸಾಮಾನ್ಯೇತರ ವಿಧಾನವನ್ನು ಅನುಸರಿಸಿದ್ದಾರೆ.

ಸಂಯೋಜನಾ ವೈವಿಧ್ಯತೆ ಇವರ ಕಲಾಕೃತಿಗಳ ಪ್ಲಸ್ ಪಾಯಿಂಟ್. ಆದರೆ ಸಂಯೋಜನೆಗಳ ಒಟ್ಟಾರೆಯಾದ ರೂಪವು ದೇಶೀಯತೆಗಿಂತಲೂ ಪಾಶ್ಚಾತ್ಯ ರೂಪಗಳಿಗೆ ಹತ್ತಿರವಾಗಿವೆ. ಇಲ್ಲಿನ ಶೈಲೀಕರಣ ಸಂಯೋಜನೆ ಹಾಗು ವರ್ಣಮೇಳವು ಕೂಡಾ ಈ ಪಾಶ್ಚಾತ್ಯ ಅನುಭವಕ್ಕೆ ಪೂರಕವಾಗಿವೆ. ಈ ನಡುವೆ ರೂಪದ ದೃಷ್ಟಿಯಿಂದ ಗಾಢವಾಗಿ ತಟ್ಟುವ ಈ ಕೃತಿಗಳು ಏನನ್ನು ಹೇಳ ಹೊರಟಿವೆ ಎನ್ನುವ ಸಂದಿಗ್ಧತೆಯನ್ನು ತುಂಬಿಕೊಂಡಿವೆ. ಒಂದೆರಡು ಅನುಮಾನಗಳ ನಡುವೆಯೂ ಈ ಪ್ರದರ್ಶನವು ವಿವಿಧ ನೆಲೆಗಳಲ್ಲಿ ಗಮನಾರ್ಹವಾಗಿವೆ ಎನ್ನುವುದನ್ನು ವಿಶೇಷವಾಗಿ ಕೃ.ಸೆ.ಗುರುತಿಸಿದ್ದಾರೆ.

**೧೫೯. ಅಜ್ಞಾತ ವಸ್ತುವಿಗೆ ವಿಶಿಷ್ಟ ವ್ಯಕ್ತಿತ್ವ ದಕ್ಕಿದಾಗ**[೧೫೫]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೧೯-೧೦-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕಲಾವಿದ ರವಿ ಕಾಶಿಯವರ ಕಲಾಕೃತಿಗಳ ವಿಶೇಷತೆಯನ್ನು ಕೃ.ಸೆ.ಯವರು ಮುಂದಿನಂತೆ ವಿಶ್ಲೇಷಿಸಿದ್ದಾರೆ. ಈ ಕಲಾವಿದ ಚಾರ್ಲ್ಸ್ ವ್ಯಾಲೇಸ್ ಇಂಡಿಯಾ ಟ್ರಸ್ಟಿನ ಸ್ಕಾಲರ್‌ಸಿಪ್ ಪಡೆದು ಬ್ರಿಟನ್ನಿನ ಗ್ಲಾಸ್‌ಗೋ ಸ್ಕೂಲ್ ಆಫ್ ಆರ್ಟ್‌ನಲ್ಲಿ ಅಭ್ಯಾಸ ಮಾಡಿದ್ದಾರೆ. ವಿಶೇಷತಃ ಹ್ಯಾಂಡ್‌ಮೇಡ್ ಕಾಗದ ನಿರ್ಮಾಣವನ್ನು ಅಭ್ಯಸಿಸಿರುವ ಅವರು ಅವುಗಳ ಮೂಲಕವೇ ಸೃಷ್ಟಿಸಿದ ಕಲಾ ಕೃತಿಗಳನ್ನು

---

೧೫೫. ಅಜ್ಞಾತ ವಸ್ತುವಿಗೆ ವಿಶಿಷ್ಟ ವ್ಯಕ್ತಿತ್ವ ದಕ್ಕಿದಾಗ, ಪ್ರಜಾವಾಣಿ,ಕರ್ನಾಟಕದರ್ಶನ,೧೯ ಅಕ್ಟೋಬರ್ ೨೦೦೨

ಈ ಮೊದಲು ಚೆನ್ನೈನಲ್ಲಿ ಪ್ರದರ್ಶಿಸಿದ್ದರು. ಇದೇ ಕಲಾ ಕೃತಿಗಳ ಪ್ರದರ್ಶನ 'ಮೇಡ್ ಇನ್ ಗ್ಲಾಸ್‌ಗೋ' ಶೀರ್ಷಿಕೆಯಲ್ಲಿ ಬೆಂಗಳೂರಿನ ಗ್ಯಾಲರಿ ಸುಮುಖದಲ್ಲಿ ಏರ್ಪಡಿಸಲಾಗಿತ್ತು.

ಅಮೆರಿಕನ್ ಪಾಪ್ ಕಲಾವಿದರಂತೆ ರವಿ ಕಾಶಿ ಯವರಿಗೆ ಬಹು ಹಿಂದಿನಿಂದಲೂ ಗ್ರಾಹಕ ಸಂಸ್ಕೃತಿಯ ಮೇಲೆ ಕಣ್ಣು ಈ ಆಧುನಿಕ ಗ್ರಾಹಕ ಸಂಸ್ಕೃತಿಯ ಒಂದಲ್ಲ ಒಂದು ಮುಖವನ್ನು ತಮ್ಮ ಕೃತಿಗಳಲ್ಲಿ ಮುಖಾ ಮುಖಿಯಾಗಿಸುವುದು ಇವರ ವಿಧಾನ. ವಾಣಿಜ್ಯೀಕರಣದ, ಸರಕು ಸಂಸ್ಕೃತಿಯ ಈ ಒಂದು ಎಳೆಯನ್ನೇ ಮುಂದಿಟ್ಟುಕೊಂಡು ಇವರು ದೊಡ್ಡ ಕಥೆಯನ್ನೇ ಹೆಣೆದಿದ್ದಾರೆ.

ಇವರು ಬ್ರಿಟನ್ನಿನ ಜಾಕಿ ಪ್ಯಾರಿಯವರ ಮಾರ್ಗದರ್ಶನದಲ್ಲಿ ಕಲಿತ ಕಾಗದ ತಯಾರಿಕೆಯ ವಿಶಿಷ್ಟ ವಿಧಾನವನ್ನೇ ಈ ಕಲಾಕೃತಿಗಳ ಶರೀರವಾಗಿ ರೂಪಿಸಿದ್ದಾರೆ. ಕಾಗದವನ್ನು ಪಲ್ಪ್‌ನಿಂದ ಪದರ ಪದರವಾಗಿ ರೂಪಿಸುವಾಗ ಅದಕ್ಕೆ ಬಣ್ಣದ ಪದರಗಳನ್ನು ಸೇರಿಸುತ್ತ ರೂಪಿಸುವ ವಿಧಾನವದು. ಇದರೊಂದಿಗೆ ಚಿಕ್ಕ ಇಮೇಜ್‌ಗಳನ್ನು ಪುನರಾವರ್ತಿತವಾಗಿ ರೂಪಿಸುವುದು, ಅಕ್ಷರಗಳ ಬಳಕೆ ಈ ಮುಂತಾದವು ಇವರ ಹಿಂದಿನ ಕೃತಿಗಳಲ್ಲಿ ಬಳಸಲಾಗಿದ್ದರೂ, ಹೊಸ ಅಯಾಮ ಪಡೆದುಕೊಂಡಿದೆ. ಇವರ ಮತ್ತೊಂದು ವೈಶಿಷ್ಟ್ಯತೆಯೆಂದರೆ ಡೈರಿಯಂತಹ ಹಾಳೆಯ ಮೇಲೆಯೇ ಚಿತ್ರ ಹಾಗು ಅಕ್ಷರಗಳ ಮೂಲಕ ಇವುಗಳನ್ನು ರೂಪಿಸಿದ್ದಾರೆ. ಕ್ರಿಕೆಟ್ ಹಾಗು ಕ್ರೀಡಾ ಪಂದ್ಯಗಳಲ್ಲಿ ತಕ್ಷಣ ಮರೆಯುವ 'ಇನ್‌ಸ್ಟಂಟ್ ರಾಷ್ಟ್ರೀಯತೆಯ ಭಾವವನ್ನು ಒಂದೆಡೆ ಅಣಕಿಸುವಂತೆಯು ಇವು ಇವೆ. ಈ ಮುಖವಾಡಗಳಲ್ಲಿ ಹಲವಾರು ಪಾಶ್ಚ್ಯಾತ್ಯ ಕಲಾವಿದರ ಪ್ರಭಾವಗಳು ಕಂಡುಬಂದರೂ ಇಲ್ಲಿನ ಆಕೃತಿ ಮತ್ತು ರೂಪಗಳಿಂದ ಇವು ವೀಕ್ಷಕರಿಗೆ ದೃಶ್ಯಾತ್ಮಕವಾಗಿ ಆಕರ್ಷಕ ಎನಿಸುತ್ತವೆ. ಅರ್ಥ, ಅನುಭವಗಳ ಸೃಷ್ಟಿಯಿಂದಲೂ ಬಹುಮುಖೀಯ ಅಯಾಮಗಳನ್ನು ಪಡೆದುಕೊಳ್ಳುವ ಸಾಮರ್ಥ್ಯ ಈ ಶಿಲ್ಪಗಳಿಗೆ ಇವೆ ಎಂಬುದು ಲೇಖಕರ ಅಭಿಪ್ರಾಯ.

### ೧೬೦. ವರ್ತಮಾನದ ಬೆಂಗಳೂರಿಗೊಂದು ವ್ಯಕ್ತಿತ್ವ [೧೫೬]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೬-೧೦-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಮೂಲತಃ ಬಿಹಾರದ ಕಲಾವಿದ ಸಂಜಯ್‌ಸಿಂಗ್ ಅವರು ಬೆಂಗಳೂರು ನಗರದ ಜನಜೀವನ ಮತ್ತು ಅಲ್ಲಿನ ವಿಶೇಷತೆ ಕುರಿತಂತೆ ತಮ್ಮ ಕಲಾ ಕೃತಿಗಳ ಮೂಲಕ ವಿಶ್ಲೇಷಿಸಿರುವುದನ್ನು ಕೃ.ಸೆ.ಯವರು ಈ ಲೇಖನದಲ್ಲಿ ಗುರುತಿಸಿದ್ದಾರೆ.

ರೈಸ್ ಕಾಗದದ ಮೇಲೆ ಗ್ವಾಷ್ ಮಾಧ್ಯಮದಲ್ಲಿ ಇವರು ರಚಿಸಿದ ಕಲಾಕೃತಿಗಳ ಪ್ರದರ್ಶನವನ್ನು ಬೆಂಗಳೂರಿನ ಸಫೀನಾ ಪ್ಲಾಜಾದಲ್ಲಿರುವ ಕ್ರಿಮ್‌ಸನ್ ಗ್ಯಾಲರಿಯಲ್ಲಿ ಏರ್ಪಡಿಸಲಾಗಿತ್ತು. ಇವರ

---

೧೫೬. ವರ್ತಮಾನದ ಬೆಂಗಳೂರಿಗೊಂದು ವ್ಯಕ್ತಿತ್ವ, ಪ್ರಜಾವಾಣಿ, ಕರ್ನಾಟಕದರ್ಶನ, ೨೬ ಅಕ್ಟೋಬರ್ ೨೦೦೨

ಅಭಿವ್ಯಕ್ತಿಯಲ್ಲಿ ಹಲವಾರು ಕುತೂಹಲಕರ ಅಂಶಗಳಿವೆ. ಪೋಸ್ಟ ಮಾಡರ್ನಿಸಂನ ಸಂದರ್ಭದಲ್ಲಿಯೂ ಕೂಡಾ ಬಹುತೇಕ ಕಲಾವಿದರು ಪಾಶ್ಚಾತ್ಯ ಪ್ರೇರಿತ ರೂಪಗಳಿಗೆ ಶರಣುಹೋದರೆ, ಸಂಜಯ್ ಅವರು ತಮ್ಮ ಶಾಂತಿನಿಕೇತನದ ಚೈತನ್ಯವನ್ನು ಉಳಿಸಿಕೊಳ್ಳುವಂತೆ ದಶಕಗಳ ಹಿಂದಿನ ರೂಪವನ್ನು ಆಶ್ರಯಿಸುತ್ತಾರೆ. ಇಲ್ಲಿನ ತಂತ್ರ, ರೂಪಗಳು ಹಳೆಯದಾದರೂ ಅಭಿವ್ಯಕ್ತಿಯಲ್ಲಿನ ಶೈಲಿ ಹಾಗು ವಸ್ತುವಿನ ದೃಷ್ಟಿಯಿಂದ ಇವು ಕುತೂಹಲವನ್ನು ಪಡೆದುಕೊಳ್ಳುತ್ತದೆ. ಈ ಕಲಾವಿದ ಬೆಂಗಳೂರನ್ನು ತಮ್ಮ ಕಣ್ಣುಗಳಿಂದ ನೋಡುವಾಗ ಬೆಂಗಳೂರು ನಿರ್ಮಾಪಕ ಕೆಂಪೇಗೌಡನಿಂದ ಹಿಡಿದು ಇಂದಿನ ಆಪ್ಟಿಕಲ್ ಫೈಬರ್ ಹಾಕುವವರೆಗಿನ ವಿವಿಧ ಅಂಶಗಳನ್ನು ಪ್ರಸ್ತಾಪಿಸುತ್ತಾರೆ. ಅದರಲ್ಲೂ ಇಲ್ಲಿನ ಆಟೋರಿಕ್ಷಾ ಕುರಿತಂತೆ ವಿವಿಧ ಬಗೆಯ ವಿಶ್ಲೇಷಣೆಗಳಿದ್ದು, ಒಂದರಲ್ಲಿ ಇಲ್ಲಿನ ಆಟೋಗಳು ನೆಲದ ಮೇಲೆ ಚಲಿಸುವುದಕ್ಕಿಂತ ನೆಲದಿಂದ ಸಾಕಷ್ಟು ಮೇಲೆ ಹಾರುತ್ತಾ ಚಲಿಸುತ್ತವೆ ಎಂಬುದನ್ನು ಸೂಚಿಸುತ್ತಾರೆ. ಇಲ್ಲಿನ ಅಭಿವ್ಯಕ್ತಿ ವಿಧಾನವೂ ಇಲಸ್ಟ್ರೇಷನ್‌ಗೆ ಸಾಕಷ್ಟು ಹತ್ತಿರವಾಗಿರುವುದರಿಂದ ಇವು ಹೆಚ್ಚಿನವರಿಗೆ ತಲುಪುವಂತಿವೆ ಎಂಬುದನ್ನು ಇಲ್ಲಿ ವಿಶ್ಲೇಷಿಸಿದ್ದಾರೆ.

### ೧೬.೧. ಅಮೂರ್ತಗೊಂಡ ಆಧ್ಯಾತ್ಮ[೧೫೭]

ಡೆನ್ಮಾರ್ಕಿನ ಯೋಹಾನ್ ಬೆಂತಿನ್ ಅವರು ಕೆಲವು ವರ್ಷಗಳಿಂದ ಬೆಂಗಳೂರಿನಲ್ಲಿ ನೆಲೆಸಿ ಕ್ರಿಯಾಶೀಲರಾಗಿದ್ದಾರೆ. ಹಲವಾರು ವಿದೇಶಿಯರಂತೆ ಭಾರತೀಯ ಅಧ್ಯಾತ್ಮಿಕತೆಗೆ ಮನಸೋತ ಇವರು, ಈ ಅನುಭವಗಳನ್ನು ಅಮೂರ್ತ ವಿಧಾನವನ್ನು ಅಭಿವ್ಯಕ್ತಿಸುತ್ತಿದ್ದಾರೆ. ಇವರ ಕಲಾ ಕೃತಿಗಳ ಪ್ರದರ್ಶನವು ಗ್ಯಾಲರಿ ಸುಮುಖದಲ್ಲಿ ನಡೆದಿರುತ್ತದೆ. ಪರಿಚಿತ ಪ್ರಪಂಚದ ಯಾವುದೇ ರೂಪಗಳಿಲ್ಲದ ಇವು, ಇವರು ಈ ಹಿಂದೆ ಪ್ರದರ್ಶಿಸಿದ್ದ ಕೃತಿಗಳ ಮುಂದುವರಿದ ರೂಪಗಳಂತಿವೆ. ಇವುಗಳ ರೂಪಕ್ಕಿಂತಲೂ ಶೀರ್ಷಿಕೆಗಳಿಂದಾಗಿಯೇ ಇವು ಅಧ್ಯಾತ್ಮಿಕದೆಡೆಗೆ ಪಯಣಿಸುತ್ತವೆ.

ಇವರು ನೋಡುಗರಲ್ಲಿ ಆಯಾಸವಿಲ್ಲದಂತಹ ಹಗುರದ ಭಾವನೆ ಉಂಟಾಗುವಂತೆ ಈ ಕೃತಿಗಳನ್ನು ನಿರ್ವಹಿಸಿದ್ದಾರೆ. ದ್ವಿಮಾನದ ಕೃತಿಗಳಲ್ಲೇ ಹಲವು ಪದರಗಳನ್ನು ನಿರ್ಮಿಸುತ್ತಾ ಆಳದ ಭಾವನೆಯನ್ನು ನಿರ್ಮಿಸುವ ಇವು. ಪಾಶ್ಚಾತ್ಯ ಅಮೂರ್ತ ಕಲೆಗೆ ತುಂಬ ಹತ್ತಿರವಾಗಿವೆ. ಅದೇನೇ ಇರಲಿ ಅಮೂರ್ತ ಕಲೆಯ ಗಾಂಭೀರ್ಯವನ್ನು ಅಸ್ವಾದಿಸ ಬಯಸುವವರೆಗೆ ಇವು ನಿಜಕ್ಕೂ ಆಪ್ತವೆನಿಸುತ್ತವೆ ಎನ್ನುವುದನ್ನು ಈ ಲೇಖನದಲ್ಲಿ ಕೃ.ಸೆ.ಯವರು ಪ್ರಸ್ತಾಪಿಸಿದ್ದಾರೆ.

### ೧೬.೨. ಯುವ ಕಲಾವಿದರ ವೈವಿಧ್ಯ[೧೫೮]

"ಉದಯೋನ್ಮುಖರ" ಹೆಸರಿನಲ್ಲಿ ಯುವ ಕಲಾವಿದರ ಪ್ರದರ್ಶವೊಂದನ್ನು ಕರ್ನಾಟಕ ಲಲಿತಕಲಾ ಆಕಾಡೆಮಿಯು ಈಚೆಗೆ ಸಂಘಟಿಸಿತ್ತು. ಬೆಂಗಳೂರಿನ ಕನ್ನಡ ಭವನದ ಚಿತ್ರ ಗ್ಯಾಲರಿಯಲ್ಲಿ

---

೧೫೭. ಅಮೂರ್ತಗೊಂಡ ಆಧ್ಯಾತ್ಮ, ಪ್ರಜಾವಾಣಿ, ಕರ್ನಾಟಕದರ್ಶನ, ೨೬ ಅಕ್ಟೋಬರ್ ೨೦೦೨
೧೫೮. ಯುವ ಕಲಾವಿದರ ವೈವಿಧ್ಯ, ಅದೇ

ನಡೆದ ಈ ಪ್ರದರ್ಶನದಲ್ಲಿ ಕರ್ನಾಟಕದ ವಿವಿಧ ಪ್ರದೇಶಗಳ ೩೦ ಕಲಾವಿದರು ಭಾಗವಹಿಸಿದ್ದರು. ಇದರಲ್ಲಿನ ಹಲವರು ಈಗಾಗಲೇ ಕಲಾವಲಯದಲ್ಲಿ ಸ್ಪಷ್ಟ ಹೆಜ್ಜೆಗಳನ್ನು ಇಟ್ಟಿದ್ದಾರೆ. ಇಲ್ಲಿನ ಕೃತಿಗಳಲ್ಲಿ ಆರ್.ರಾಜಾ.ಯಲ್ಲಪ್ಪ ಕಾಂಬಳೆ, ಡಿಂಪಲ್ ಷಾ, ಶಿವಕುಮಾರ ಕೆಸರಮಡು, ಬಾಬು ಈಶ್ವರ್ ಪ್ರಸಾದ್, ಬಿ.ಆರ್. ರೂಪಾ, ರಾಜು ತೇರದಾಳ, ಸಭಾಷ್ ಕಮ್ಮಾರ್, ಕಿಶೋರ್ ಕುಮಾರ್, ಸಿ.ಜೆ.ಕಮ್ಮಾರ್, ವಿನೋದ್ ಸೂಗೂರ್, ಟಿ,ಕೆ ರಾಮ್ಸಿಂಗ್, ಡಿ,ಹೆಚ್, ಸುರೇಶ್, ಪಿ. ರೂಪಾ ಅವರ ಕೃತಿಗಳು ಪರಿಣಾಮಕಾರಿಯಾಗಿವೆ ಎನ್ನುವುದನ್ನು ಈ ಲೇಖನದಲ್ಲಿ ಕೃ.ಸೆ.ಯವರು ಪ್ರಸ್ತಾಪಿಸಿದ್ದಾರೆ.

**೧೬೩. ದುರ್ಬಲಗೊಂಡ ತೀವ್ರತೆ**[೧೫೯]

ಹೆಸರಾಂತ ಕಲಾನಿರ್ದೇಶಕ ಥೋಟಾ ಧರಣಿಯವರು ತೀವ್ರ ವೇಗದ ಕುಂಚದ ಬೀಸುಗಳುಳ್ಳ ಕೃತಿಗಳ ಮೂಲಕ ಕಲಾವಲಯದಲ್ಲೂ ಒಳ್ಳೆಯ ಹೆಸರು ಮಾಡಿದವರು. ತಮ್ಮ ಎಂದಿನ ದಾರಿಯಿಂದ ಬದಲಾಗಿ 'ಸಿಂಫೋನಿ ಆಫ್ ಲೈಫ್' ಹೆಸರಿನಲ್ಲಿ ಇವರು ಹಲವು ವಿಶೇಷ ಅಮೂರ್ತ ಕೃತಿಗಳನ್ನು ಸೃಷ್ಟಿಸುತ್ತಿದ್ದಾರೆ. ಬೆಂಗಳೂರಿನ ಆರ್ಟ್ ಗ್ಯಾಲರಿಯಲ್ಲಿ ನಡೆದ ಇವರ ಕಲಾ ಪ್ರದರ್ಶನದಲ್ಲಿ ಸಂಗೀತದ ಅನುಭವವನ್ನು ದೃಶ್ಯರೂಪಕ್ಕೆ ಪರಿವರ್ತಿಸುವ ಆಶಯವಿದೆ ಎನ್ನುವುದನ್ನು ಈ ಲೇಖನದಲ್ಲಿ ಕೃ.ಸೆ.ಯವರು ಚರ್ಚಿಸಿದ್ದಾರೆ.

**೧೬೪. ಉತ್ಕೃಷ್ಟ ಹಸ್ತಕೌಶಲ ಮೆರೆವ ಭಾರತೀಯ ದೃಶ್ಯಗಳು**[೧೬೦]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೨೬-೧೦-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಕೃ.ಸೆ.ಯವರು ಜಪಾನಿನ ಕಲಾವಿದ ಶಿನ್ ಕಿತಮುರಾ ಅವರ ವಿಶೇಷತೆಯನ್ನು ವಿಶ್ಲೇಷಿಸಿದ್ದಾರೆ. ಭಾರತ ಮತ್ತು ಜಪಾನಿನ ನಡುವೆ ರಾಯಭಾರ ಬಾಂಧವ್ಯಕ್ಕೆ ೫೦ ವರ್ಷಗಳು ಸಂದ ನೆನಪಿನಲ್ಲಿ ಜಪಾನಿನ ಕಲಾವಿದ ಶಿನ್ ಕಿತಮುರಾ ಅವರ 'ಲವ್‌ಇಂಡಿಯಾ' ಶೀರ್ಷಿಕೆಯ ಕಲಾಕೃತಿಗಳ ಪ್ರದರ್ಶನವನ್ನು ಬೆಂಗಳೂರಿನಲ್ಲಿ ಸಂಘಟಿಸಲಾಗಿತ್ತು. ಕಿತಮುರಾ ಅವರ ಜಪಾನಿನವರಾದರೂ ಭಾರತದ ಬಗ್ಗೆ ಅಪೂರ್ವ ಒಲವುಳ್ಳವರಾಗಿದ್ದು ೧೯೬೬ ರಿಂದ ಈವರೆಗೆ ಮುವತ್ತಕ್ಕೂ ಹೆಚ್ಚು ಬಾರಿ ಭಾರತವನ್ನು ಸಂದರ್ಶಿಸಿದಾಗ ತಾವು ಪಡೆದ ಅನುಭವಗಳನ್ನು ರಿಯಲಿಸ್ಟಿಕ್ ನೆಲೆಯ ಕೃತಿಗಳನ್ನು ರಚಿಸಿದ್ದಾರೆ. ಭಾರತದ ವಿವಿಧ ಪ್ರದೇಶಗಳ ಈ ದೃಶ್ಯಗಳನ್ನು ರೂಪಿಸಲು ಅವರು ಛಾಯಾಗ್ರಾಹಕನೊಬ್ಬನ ದೃಷ್ಟಿಯನ್ನೇ ಅನುಸರಿಸಿದ್ದಾರೆ. ಹಾಗಾಗಿ ಇವು

---

೧೫೯. ದುರ್ಬಲಗೊಂಡ ತೀವ್ರತೆ, ಪ್ರಜಾವಾಣಿ, ಕರ್ನಾಟಕದರ್ಶನ, ೨೬ ಅಕ್ಟೋಬರ್ ೨೦೦೨

೧೬೦. ಉತ್ಕೃಷ್ಟ ಹಸ್ತಕೌಶಲ ಮೆರೆವ ಭಾರತೀಯ ದೃಶ್ಯಗಳು, ಪ್ರಜಾವಾಣಿ, ಕರ್ನಾಟಕ ದರ್ಶನ, ೨೬ ಅಕ್ಟೋಬರ್ ೨೦೦೨

ಬಹುತೇಕ ಛಾಯಾಚಿತ್ರಗಳನ್ನು ನೋಡಿದ ಅನುಭವವನ್ನೇ ನೀಡುತ್ತವೆ. ಆದರೂ ಇವರು ಬಹಳಷ್ಟು ಕೃತಿಗಳಲ್ಲಿ ಎಲ್ಲೆಲ್ಲಿಯದೋ ರೂಪಗಳನ್ನು ವ್ಯಕ್ತಿಗಳನ್ನು, ಪ್ರಾಣಿಗಳನ್ನೂ ಒಂದೇ ದೃಶ್ಯದಲ್ಲಿ ತಂದು ಪುನರ್ಯೋಜಿಸುತ್ತಾರೆ. ಹಾಗಾಗಿ ತುಂಬಿದಂತಿರುವ ಈ ಚಿತ್ರಗಳ ಬಹುತೇಕ ಭಾಗ ಕ್ರಿಯಾತ್ಮಕವೆನಿಸುತ್ತವೆ. ಹೀಗೆ ವಿಭಿನ್ನ ಸಂದರ್ಭಗಳ ರೂಪಾ ಕೃತಿಗಳನ್ನು ಒಂದರಲ್ಲಿಯೇ ತಂದರೂ ರಸಭಂಗವಾಗದಂತೆ ಜೋಡಿಸಿರುವುದು ಇವರ ಹೆಗ್ಗಳಿಕೆ.

ಇವು ರಿಯಲಿಸ್ಟಿಕ್ ನೆಲೆಗೆ ಹತ್ತಿರವಾಗಿದ್ದರೂ ನೂರಕ್ಕೆ ನೂರರಷ್ಟು ಅದಕ್ಕೆ ಅಂಟಿಕೊಂಡವುಗಳಲ್ಲ. ಬದಲಿಗೆ ಸರ್ರಿಯಲಿಸ್ಟರ ಹಾಗೆಯೇ ವಾಸ್ತವದಲ್ಲಿ ವಿಶಿಷ್ಟ ಅನುಭವಗಳನ್ನು ಮುಟ್ಟಿಸುವ ಆಶಯ ಹೊಂದಿವೆ. ಗೋವುಗಳು, ನೀರಿನ ಅಲೆಗಳು, ಹೂವುಗಳು, ವಸ್ತ್ರದ ಡಿಸೈನ್ ಮುಂತಾದವುಗಳನ್ನು ಓವರ್‌ಲ್ಯಾಪ್ ಮಾಡಿರುವ ಹಾಗು ಕೆಲವೆಡೆ ಅರೆ ಪಾರದರ್ಶಕವಾಗಿ ಹಿಂದಿನ ರೂಪ ಕಾಣಿಸುವಂತೆ ಮಾಡಿರುವುದನ್ನು ನೋಡಿದಾಗ ಹೀಗನ್ನಿಸುವುದು ಸಹಜವೇ. ಜೊತೆಗೆ ಪ್ರಾಣಿ, ಪಕ್ಷಿ, ಕೀಟಗಳೂ ಮನುಷ್ಯರ ನಡುವೆ ನಿರ್ಭೀತಿಯಿಂದ ಸೇರಿರುವುದರಿಂದಲೂ ಹೀಗನ್ನಿಸುತ್ತದೆ. ಭಾರತೀಯರಿಗೆ ಗೋವು ಶ್ರದ್ಧೆಯ ಪ್ರಾಣಿ ಎನ್ನುವ ಕಾರಣದಿಂದಲೋ ಏನೋ ಇವರು ಹೆಚ್ಚಿನೆಡೆ ಗೋವುಗಳನ್ನು ಕೆಲವೆಡೆಯಂತೂ ಅನಗತ್ಯವಾಗಿ ಚಿತ್ರದೊಳಗೆ ಸೇರಿಸಿದ್ದಾರೆ.

ಕಿತಮುರಾ ಅವರು ಡಚ್ ಕಲಾವಿದ ರೆಂಬ್ರಾಂಟ್‌ನಂತೆ ಗಾಢವಾಗಿ ಅಲ್ಲದಿದ್ದರೂ, ಕೃತಿಯಲ್ಲಿ ಎಲ್ಲಕ್ಕಿಂತ ಮೊದಲು ವ್ಯಕ್ತಿಯ ಮುಖ ಗಮನ ಸೆಳೆಯುವಂತೆ ಮಾಡುತ್ತಾರೆ. ಬಳಿಕ ಕೃತಿಯ ಉಳಿದ ಭಾಗಗಳನ್ನು ಹಂತಹಂತವಾಗಿ ಮಸುಕಾಗಿಸುತ್ತಾ ಹಿಂದಕ್ಕೆ ಸರಿಯುವಂತೆ ಮಾಡುತ್ತಾರೆ. ಹಾಗಾಗಿ ಇವು ನಾಟಕೀಯ ಆವರಣವನ್ನು ಸೃಷ್ಟಿಸುತ್ತವೆ. ಈ ಕಲಾವಿದ ವಾಸ್ತವ ಶೈಲಿಗೆ ಅಂಟಿಕೊಂಡಿದ್ದರೂ ನಮ್ಮ ಸಿನಿಮಾ ಹೋರ್ಡಿಂಗ್ ಪೈಂಟರ್‌ಗಳಂತೆ ನಿಶ್ಚಿತ ದೂರಕ್ಕೆ ಮಾತ್ರ ಒಗ್ಗುವ ಕೃತಿಗಳನ್ನಾಗಿಸುವುದಿಲ್ಲ. ಬದಲಿಗೆ ಎಷ್ಟೇ ಹತ್ತಿರದಿಂದ ನೋಡಿದರೂ ಸ್ಪಷ್ಟವೆನಿಸುವಂತೆ ಎಲ್ಲ ವಿವರಗಳನ್ನು ತಾಳ್ಮೆಯಿಂದ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಸೂಕ್ಷ್ಮ ವಿವರಗಳ ವಿಶಿಷ್ಟ ನಿರ್ವಹಣೆಯಿಂದಾಗಿಯೇ ಇವು ಬಹುಜನರಿಗೆ ಆಪ್ತವೆನಿಸುತ್ತವೆ. ಜೊತೆಗೆ ಇವರ ಅಪೂರ್ವ ಹಸ್ತಕೌಶಲ್ಯಕ್ಕೆ ಮರುಳಾಗದಿರುವವರು ತುಂಬ ವಿರಳ. ಹೀಗೆ ಎಲ್ಲರನ್ನು ಸೂಜಿಗಲ್ಲಿನಂತೆ ಸೆಳೆಯುವ ಹಸ್ತಕೌಶಲ್ಯ ಇವರದು, ಇಲ್ಲಿನ ಕೃತಿಗಳ ದೊಡ್ಡ ಅಳತೆಯೂ ಈ ಪ್ರಭಾವ ಬೀರುವಲ್ಲಿ ಪಾತ್ರವಹಿಸುತ್ತದೆ.

ಸಾಮಾನ್ಯವಾಗಿ ವಿದೇಶಿಯರು ಈ ಬಗೆಯ ಚಿತ್ರಗಳನ್ನು ರಚಿಸಿದಾಗ ಅವು ಪಾಶ್ಚಾತ್ಯ ಮುಖಗಳಾಗಿ ಪರಿವರ್ತನೆಗೊಂಡು ಭಾರತೀಯ ಕಳೆ ಇರುವುದು ಅಪರೂಪ. ಆದರೆ ಇಲ್ಲಿ ಹಾಗಾಗದಿರುವುದು ನಿಜಕ್ಕೂ ಮೆಚ್ಚುವಂತಹ ಅಂಶ. ಆದರೆ ಛಾಯಾಚಿತ್ರಗಳನ್ನು ಆಧರಿಸಿ ಅದಕ್ಕೇ ಹೆಚ್ಚಿನ ನಿಷ್ಠೆ ತೋರಿಸಿರುವುದರಿಂದಾಗಿ ಇವು ಚಲನೆಯ ಸತ್ವ ಕಳೆದುಕೊಂಡು ನಿಶ್ಚಲತೆಯ

ಭಾವವೇ ಹೆಚ್ಚಾಗಿದೆ. ಜೊತೆಗೆ ಛಾಯಾಚಿತ್ರಗಳಿಗೆ ಪೋಸು ನೀಡಿದಂತ ಇಲ್ಲಿನ ವ್ಯಕ್ತಿಗಳು ಸ್ತಬ್ದರಾಗಿರುವುದು ಕೊರತೆಯ ಅಂಶವೇ. ಕೆಲವು ಕೃತಕವೆನಿಸುವ ಕೃತಿಗಳೂ ಇಲ್ಲಿವೆ. ಅದೇನೇ ಇರಲಿ ಹಸ್ತ ಕೌಶಲ್ಯವನ್ನು ಮೆರೆಸುವ ರಿಯಲಿಸ್ಟಿಕ್ ಕೃತಿಗಳು ಇಲ್ಲವೇ ಇಲ್ಲವೆನ್ನುವಷ್ಟು ವಿರಳವಾಗಿರುವ ಇಂದಿನ ದಿನಗಳಲ್ಲಿ ಇವು ನಮ್ಮ ಮನ ತಣಿಸುವಷ್ಟು ಪರಿಣಾಮಕಾರಿಯಾಗಿವೆ. ಜೊತೆಗೆ ನಾವು ಮರೆತಿರುವುದನ್ನು ಜ್ಞಾಪಿಸಲು ಹೊರದೇಶದ ಕಲಾವಿದರೇ ಬರಬೇಕಾಯಿತಲ್ಲ ಎಂಬ ಬೇಸರವನ್ನು ಇಲ್ಲಿ ಕೃ.ಸೆ. ವ್ಯಕ್ತಪಡಿಸಿದ್ದಾರೆ.

**೧೬೫. ನೋವು-ನಲಿವು ಒಂದಾಗಿಸಿದ ಹಕ್ಕಿಯ ಹಾಡು**[೧೬೧]

ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ ೦೨-೧೧-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಸುದೇಶ್ ಮಹಾನ್ ಅವರ ಕೃತಿಗಳ ಮಹತ್ವವನ್ನು ಕೃ.ಸೆ. ಚರ್ಚಿಸಿದ್ದಾರೆ. ಇವರು ಚಿತ್ರಕಲೆಗಿಂತಲೂ ಪೂರಕ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಇವರು ಇದೀಗ ತಮ್ಮ ಗಂಭೀರ ಕೃತಿಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಸಿನಿಮಾ ಹಾಗು ರಂಗಭೂಮಿಯ ಕ್ಷೇತ್ರಗಳಲ್ಲಿ ಕಲಾನಿರ್ದೇಶನಕ್ಕೆ ಹೊಸ ಅಯಾಮ ನೀಡಿದ ಇವರು 'ತನ್ನೊಳಗಿನ ಹಕ್ಕಿಗಳು' ಶೀರ್ಷಿಕೆಯಲ್ಲಿ ಕಲಾಕೃತಿಗಳನ್ನು ರಚಿಸಿದ್ದು, ಅವುಗಳ ಪ್ರದರ್ಶನವನ್ನು ಚಿತ್ರಕಲಾ ಪರಿಷತ್ತಿನಲ್ಲಿ ಏರ್ಪಡಿಸಲಾಗಿತ್ತು.

ಅತ್ತ ರೇಖಾಚಿತ್ರವೂ ಇತ್ತ ಬರಿಯ ವರ್ಣಚಿತ್ರವೂ ಆಗಿ ಉಳಿಯದೆ ಎರಡನ್ನು ಬೆಸೆಯುವ ಮೂಲಕವೇ ಸುದೇಶ್ ಇಲ್ಲಿನ ಉದ್ದೇಶ ಪೂರ್ವಕವಾದ ಇಬ್ಬಂದಿತನಕ್ಕೆ ದ್ವಿತ್ವಕ್ಕೆ ನಾಂದಿ ಹಾಡುತ್ತಾರೆ. ಹಾಗಾಗಿ ಇವೆಲ್ಲವುಗಳನ್ನು ವರ್ಣಚಿತ್ರಗಳು ಅಥವಾ ರೇಖಾ ಚಿತ್ರಗಳು ಎಂದು ಪ್ರತ್ಯೇಕವಾಗಿ ಕರೆಯುವುದಕ್ಕಿಂತಲೂ ರೇಖಾ – ವರ್ಣ ಚಿತ್ರಗಳೆಂದೂ ಕರೆಯಬಹುದಾಗಿದೆ. ಸುದೇಶ್ ಅವರ ಈ ಕೃತಿಗಳನ್ನು ನೋಡಿದಾಗ ಮೊದಲಿಗೆ ಇವು ಅಮೂರ್ತ ಕೃತಿಗಳೆಂದೇ ಎನಿಸದಿರದು. ಇವು ಮೂರ್ತದಿಂದಲೇ ಹುಟ್ಟಿದ ರೂಪಗಳಾದ್ದರಿಂದ ಸ್ವಲ್ಪ ಗಮನವಿಟ್ಟು ನೋಡಿದಾಗ ಪರ್ಝುಲ್‌ನಂತೆ ತನ್ನೊಳಗಿನ ಗುಟ್ಟುಗಳನ್ನು ಸ್ವಲ್ಪವಾದರೂ ಬಿಟ್ಟು ಕೊಡುತ್ತವೆ. ಆದರೆ ಇವು ಮೂರ್ತ ಮತ್ತು ಅಮೂರ್ತಗಳ ನಡುವಿನ ಸರಿಸುಮಾರು ಮಧ್ಯದ ಬಿಂದುವಿಗೇ ಬಂದು ನಿಂತ ಕೃತಿಗಳಾದ್ದರಿಂದ 'ಇಬ್ಬಂದಿತನ'ದ ನೆನಪಾಗದಿರದು. ಮೂಲತಃ ಎಡಪಂಥೀಯ ಬಲವುಳ್ಳ ಈ ಕಲಾವಿದ ವಸ್ತುವಿನ ದೃಷ್ಟಿಯಿಂದ ಅವುಗಳನ್ನು ದಾಖಲಿಸುವಲ್ಲಿಯೂ 'ದ್ವಿತ್ವ'ದ ಧೋರಣೆಯನ್ನು ಮರೆಯುತ್ತಾರೆಂಬುದನ್ನು ಇಲ್ಲಿ ವಿಶೇಷವಾಗಿ ಉಲ್ಲೇಖಿಸಿದ್ದಾರೆ.

---

೧೬೧. ನೋವು-ನಲಿವು ಒಂದಾಗಿಸಿದ ಹಕ್ಕಿಯ ಹಾಡು, ಪ್ರಜಾವಾಣಿ, ಕರ್ನಾಟಕ ದರ್ಶನ, ೨ ನವಂಬರ್ ೨೦೦೨

## ೧೬೬. ವೈಚಾರಿಕ ಕನ್ನಡಿಯ ಮೂಲಕ ಭಾರತೀಯ ಬದುಕಿನ ಪ್ರತಿಫಲನ[೧೬೨]

ಗ್ಯಾಲರಿ ಸುಮುಖದಲ್ಲಿ ನಡೆದಿರುವ ಗ್ಲೂ (ಅಂಟು) ಶೀರ್ಷಿಕೆಯ ಪ್ರದರ್ಶನವೂ ಕೂಡಾ ಹಲವು ಬಗೆಗಳಲ್ಲಿ ನೋಡುಗರನ್ನು ವೈಚಾರಿಕವಾಗಿ ಕಾಡುವ ಆಶಯವುಳ್ಳವು, ಸುಮಾರು ಒಂದು ದಶಕದಿಂದಲೂ ಭಾರತದಲ್ಲಿಯೇ ವಾಸಿಸಿರುವ ಅಮೆರಿಕದ ಕಲಾವಿದ ಲೇಖಕ ಪೀಟರ್‌ನಾಗಿ ಕ್ಯರೇಟ್ ಮಾಡಿದ ಪ್ರದರ್ಶನವಿದು.

ಈ ಪ್ರದರ್ಶನದಲ್ಲಿ ನಮ್ಮ ದೇಶದ ವಿವಿಧ ತಲೆಮಾರುಗಳ ಎಂಟು ಕಲಾವಿದರು ಭಾಗವಹಿದ್ದಾರೆ. ಇಲ್ಲಿನ ಎಲ್ಲರಲ್ಲೂ ಸಮಾನವಾಗಿರುವ ಒಂದು ಅಂಶವೆಂದರೆ ಅಂಟಿಸುವಿಕೆ. ಕಳೆದ ಶತಮಾನದ ಕಲೆಯಲ್ಲಿ ತುಂಬ ಪ್ರಮುಖ ಪಾತ್ರವಹಿಸಿದ ಕೊಲ್ಯಾಜನ್ನು ಆಧರಿಸಿ ಬೆಳೆದ ಕಲ್ಪನೆಯನ್ನು ದುಡಿಸಿಕೊಳ್ಳುವ ಆಶಯ ಇಲ್ಲಿನದು. ಹಾಗಿದ್ದರೂ ಎರಡನ್ನು ಅಂಟಿಸುವುದು ಇಲ್ಲಿ ಹೊಸ ಅರ್ಥಗಳನ್ನು ಪಡೆದುಕೊಂಡಿದೆ. ಪ್ರತಿಯೊಬ್ಬರೂ ವೈವಿಧ್ಯವನ್ನು ಮೆರೆದಿರುವುದರಿಂದಾಗಿ ಇಲ್ಲಿ ಏಕತಾನತೆಗೆ ಅವಕಾಶವೇ ಆಗದಷ್ಟು ವಿಸ್ತಾರವಿದೆ, ಪ್ರತಿಯೊಂದನ್ನು ಸುಲಭವಾಗಿ ಸರಳವಾಗಿ ನೋಡುವುದಕ್ಕಿಂತಲೂ ಫಜಲ್‌ನಂತೆ ಪರಿಭಾವಿಸುವುದನ್ನು ಪ್ರೋತ್ಸಾಹಿಸುವ ಪ್ರದರ್ಶನವಿದು. ಸಮಿತ್ ದಾಸ್ ಅವರು ವಿನ್ಯಾಸ ಮಾಡಿದ ಸಮಾನ್ಯೇತರ ರೀತಿಯ ಕ್ಯಾಟಲಾಗ್ ಕೂಡಾ ಈ ಸಂಕೀರ್ಣತೆಗೆ, ಗೊಂದಲಕ್ಕೆ ಪೂರಕವಾಗಿದೆ.

ನ್ಯೂಯಾರ್ಕ್ ಮತ್ತು ನವದೆಹಲಿಗಳಲ್ಲಿ ವಾಸಿಸಸುವ ರಾಮ್ ರಹಮಾನ್ ಅವರು ಬಾಬರಿ ಮಸೀದಿ ಕೆಡವಿದ ಹಾಗು ಆನಂತರದ ಘಟನೆಗಳನ್ನು ಆಧರಿಸಿ ಡಾಕ್ಯುಮೆಂಟರಿಯ ಹಾಗೆ ಹಲವು ಆಂಶಗಳನ್ನು ಸಂಯೋಜಿಸಿದ್ದಾರೆ. ಘೋಷಣೆಯ ನೆಲೆಯಲ್ಲಿ ಭಿತ್ತಿ ಪತ್ರಗಳಂತಿರುವ ಇವರ ಕೃತಿಗಳಲ್ಲಿ ಕಲೆಗಿಂತಲೂ ಕೋಮು ರಾಜಕೀಯದ ವಿಶ್ಲೇಷಣೆಗಳೇ ಪ್ರಧಾನವಾಗಿವೆ. ನೋಡುಗರನ್ನು ತಣಿಸುವುದಕ್ಕಿಂತಲೂ ವಾಚ್ಯದ ನೆಲೆಯಲ್ಲಿ ಗೊಂದಲದ ಗೂಡಿಗೆ ತಳ್ಳುವ ಕೃತಿಗಳು ಇವರವು.

ಮುಂಬಯಿಯ ಜಿತಿಕ್ ಕಲಟ್ ಅವರು ವರ್ತಮಾನದ ಬದುಕಿನ ದೃಶ್ಯಗಳನ್ನು ತುಂಬ ಕುತೂಹಲಕರ ರೀತಿಯಲ್ಲಿ ಜೋಡಿಸಿದ್ದಾರೆ. ಈ ವರ್ಣ ಚಿತ್ರಗಳಲ್ಲಿ ವಾಸ್ತವ ರೂಪಗಳನ್ನು ಕಂಪ್ಯೂಟರ್‌ನಲ್ಲಿ ರೂಪಾಂತರಿಸುವಂತೆ ಬದಲಾದ ಈ ಕೃತಿಗಳು ವಸ್ತು ರೂಪಗಳೆರಡರ ದೃಷ್ಟಿಯಿಂದಲೂ ನಿಜಕ್ಕೂ ಗಮನಾರ್ಹವಾದವುಗಳಾಗಿವೆ. ನಮ್ಮ ದೇಶದಲ್ಲಿ ಇನ್‌ಸ್ಟಲೇಶನ್‌ಗಳ

---

೧೬೨. ವೈಚಾರಿಕ ಕನ್ನಡಿಯ ಮೂಲಕ ಭಾರತೀಯ ಬದುಕಿನ ಪ್ರತಿಫಲನ, ಪ್ರಜಾವಾಣಿ, ಕರ್ನಾಟಕ ದರ್ಶನ, ೨ ನವಂಬರ್ ೨೦೦೨

ದೃಷ್ಟಿಯಿಂದಲೇ ಸಾಕಷ್ಟು ಗಮನ ಸೆಳೆದಿರುವ ವಿವನ್ ಸುಂದರಮ್ ಅವರು ಕೂಡಾ ಎರಡು ನೆಲೆಗಳಲ್ಲಿ ಅಭಿವ್ಯಕ್ತಿಸಿದ್ದು, ಮಂಚದಂತಹ ಆಕೃತಿಯ 'ಬಂಕ್ ಬೆಡ್' ಕೃತಿಯು ಅನುಕೂಲ ಹಾಗು ಸುರಕ್ಷತೆಗಳು ಫೋಟೊಗ್ರಫಿಯ ಮೂಲಕ ಪುನರ್‌ಸೃಷ್ಟಿಸಿದ ಕೃತಿಗಳಲ್ಲಿ ನೆಹರೂ ಮತ್ತು ಅಮೃತಾ ಕೇರ್‌ಗಿಲ್ ಅವರ ಭೇಟಿಗೆ ಹೊಸ ವಿಶ್ಲೇಷಣೆ ನೀಡುವ ಪ್ರಯತ್ನವಿದೆ ಎನ್ನುವುದನ್ನು ಪ್ರಜಾವಾಣಿಯ ಕರ್ನಾಟಕದರ್ಶನದಲ್ಲಿ ೦೨-೧೧-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಲೇಖಕರು ಗುರುತಿಸಿದ್ದಾರೆ.

**೧೬೭. ಮರೆತ ಮಾಧ್ಯಮ ಮತ್ತು ರೂಪಗಳ ಪುನರಾಗಮನ**[೧೬೩]

ಕ್ಯಾಮ್ಲಿನ್ ಆರ್ಟ್ ಫೌಂಡೇಶನ್ ದಕ್ಷಿಣ ಭಾರತದ ಪ್ರಾದೇಶಿಕ ಕಲಾ ಸ್ಪರ್ಧೆ ಮತ್ತು ಪ್ರದರ್ಶನವನ್ನು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಗಳಲ್ಲಿ ಏರ್ಪಡಿಸಲಾಗಿತ್ತು. ಎಂದಿನಂತೆಯೇ ಈಬಾರಿಯೂ ವೃತ್ತಿಪರರು ಮತ್ತು ವಿದ್ಯಾರ್ಥಿಗಳಿಗಾಗಿ ಪ್ರತ್ಯೇಕ ವಿಭಾಗಗಳಿದ್ದು ಅದರಲ್ಲಿಯೂ ತೈಲ ವರ್ಣ, ಜಲವರ್ಣ ಆಕ್ರಿಲಿಕ್ ಹಾಗು ಮಿಶ್ರ ಮಾಧ್ಯಮ ಗಳೆಂಬ ಪ್ರತ್ಯೇಕ ಭಾಗಗಳಲ್ಲಿ ಸ್ಪರ್ಧೆ ನಡೆಯುತ್ತಿದೆ. ಇದು ಕರ್ನಾಟಕ, ಕೇರಳ, ತಮಿಳುನಾಡು ಮತ್ತು ಆಂಧ್ರಪ್ರದೇಶ ಸೇರಿದಂತೆ ನಾಲ್ಕು ರಾಜ್ಯಗಳ ಮಟ್ಟದಲ್ಲಿದ್ದರೂ ಎಂದಿನಂತೆ ಈ ಸಲವೂ ಕರ್ನಾಟಕದ್ದೇ ಸಿಂಹಪಾಲು. ಅದರಲ್ಲೂ ಉತ್ತರ ಕರ್ನಾಟಕದವರದ್ದೇ ಹೆಚ್ಚಿನ ಸಂಖ್ಯೆ ಎನ್ನುವುದು ಕುತೂಹಲಕರ.

ಪ್ರದರ್ಶನದಲ್ಲಿ ನಮ್ಮ ಮನಸ್ಸನ್ನು ನಿರಂತರವಾಗಿ ಕಾಡಬಲ್ಲಂತಹ ಅಪೂರ್ವ ಕೃತಿಗಳು ಅಷ್ಟಾಗಿ ಇಲ್ಲದಿದ್ದರೂ ಪ್ರದರ್ಶಿತ ಕೃತಿಗಳಲ್ಲಿ ಹೆಚ್ಚಿನವು ಸಾಮಾನ್ಯತೆಯಿಂದ ಮೇಲಿವೆ. ಎನ್ನುವುದು ಸಂತೋಷದ ಸಂಗತಿ. ಏಕೆಂದರೆ ಇಂದಿನ ನಮ್ಮ ನಡುವಿನ ಬಹುತೇಕ ಕಲಾ ಸ್ಪರ್ಧೆಗಳಲ್ಲಿ ಹಲವೊಮ್ಮೆ ಒಳ್ಳೆಯ ಕೃತಿಗಳೊಂದಿಗೆ ಕಳಪೆಯ ಕೃತಿಗಳೂ ವಿಜೃಂಭಿಸುತ್ತವೆ. ಈ ಪ್ರದರ್ಶನದ ಕೊರತೆ ಎಂದು ಹೇಳಬಹುದಾದರೆ ವೃತ್ತಿಪರರು ಮತ್ತು ವಿದ್ಯಾರ್ಥಿಗಳ ಕೃತಿಗಳನ್ನು ಪ್ರತ್ಯೇಕವಾಗಿ ಪ್ರದರ್ಶಿಸದೇ ಇರುವುದು, ಇದೇ ಮಾತುಗಳನ್ನು ಮಾಧ್ಯಮಗಳ ದೃಷ್ಟಿಯಿಂದಲೂ ಹೇಳಬಹುದು ಸ್ಪರ್ಧೆಯಲ್ಲಿ ಪ್ರತ್ಯೇಕವಾದ ನಾಲ್ಕು ವಿಭಾಗಗಳಿದ್ದರೂ ಎಲ್ಲವನ್ನು ಮಿಶ್ರಗೊಳಿಸಿ ಪ್ರದರ್ಶಿಸಿರುವುದರಿಂದ ಹೋಲಿಕೆಯ ದೃಷ್ಟಿಯಿಂದ ಸ್ವಲ್ಪ ಗೊಂದಲವಾಗದಿರದು ಎಂಬ ಅಂಶವನ್ನು ಪ್ರಜಾವಾಣಿಯ ಕರ್ನಾಟಕದರ್ಶನದಲ್ಲಿ ೦೯-೧೧-೨೦೦೨ರಂದು ಪ್ರಕಟಗೊಂಡ ಈ ಲೇಖನದಲ್ಲಿ ಲೇಖಕರು ಗುರುತಿಸಿದ್ದಾರೆ.

---

೧೬೩. ಮರೆತ ಮಾಧ್ಯಮ ಮತ್ತು ರೂಪಗಳ ಪುನರಾಗಮನ, ಪ್ರಜಾವಾಣಿ, ಕರ್ನಾಟಕ ದರ್ಶನ, ೯ ನವಂಬರ್ ೨೦೦೨

**೧೬೮. ಕಲಾಶಿಕ್ಷಕರ ಸಮಕಾಲೀನ ಸಂವೇದನೆ**[೧೬೪]

ಲಕ್ಷಣ ಆರ್ಟ್ ಗ್ಯಾಲರಿಯಲ್ಲಿ ನಡೆದಿರುವ 'ಶಿಕ್ಷಕನ ಕಣ್ಣು' ಕಲಾ ಪ್ರದರ್ಶನದಲ್ಲಿ ಕೇವಲ ವರ್ಣಚಿತ್ರ ವಿಭಾಗವೇ ಹೆಚ್ಚು ಮೆರೆದಿದೆ. ರಾಜ್ಯದ ಬಹುತೇಕ ಎಲ್ಲ ಕಲಾ ಶಾಲೆಗಳವರೂ ತಮ್ಮ ಸಾಮೂಹಿಕ ಪ್ರದರ್ಶನಗಳ ದೃಷ್ಟಿಯಿಂದ ಮಹತ್ವ ಕಳೆದುಕೊಂಡಿರುವ ಈ ಸಂದರ್ಭದಲ್ಲಿ ಎರಡು ಕಲಾ ಶಾಲೆಗಳು ಒಟ್ಟಾಗಿ ಏರ್ಪಡಿಸಿದ ಈ ಬಗೆಯ ಪ್ರದರ್ಶನಗಳು ಹೊಸ ಆಸೆಯೊಂದನ್ನು ಚಿಗುರಿಸಬಲ್ಲವು. ಸಾಮಾನ್ಯವಾಗಿ ಉಳಿದ ಕಲಾವಿದರಿಗೂ ಕಲಾ ಶಿಕ್ಷಕರಿಗೂ ಸಾಕಷ್ಟು ವ್ಯತ್ಯಾಸ ಗಳಿರುತ್ತವೆ. ಬೋಧನೆ ಮಾಡಬೇಕಾದುದರಿಂದ ಅವರು ಆಗಾಗ ಚಲಾವಣೆಗೆ ಬರುವ ಹೊಸ ಪ್ರಯೋಗಗಳೆಡೆಗೂ ಗಮನಹರಿಸುವುದು. ತಿಳಿದುಕೊಳ್ಳುವುದು. ಅನಿವಾರ್ಯವಾಗಿರುತ್ತದೆ. ಆದರೆ ಈ ಪ್ರದರ್ಶನದೆಡೆಗೆ ಒಟ್ಟಾರೆಯಾಗಿ ಗಮನ ಹರಿಸಿದಾಗ ದಶಕಗಳ ಹಿಂದೆ ಚಲಾವಣೆಯಲ್ಲಿದ್ದು, ಇಂದಿಗೂ ಮುಂದುವರೆದಿರುವ ರೂಪಗಳಿಗೇ ಒತ್ತಾಸೆಯಿದೆ. ಅಂದರೆ ಈಚೆಗೆ ಹೆಚ್ಚು ಅಬ್ಬರದಿಂದ ಚಲಾವಣೆಯಲ್ಲಿರುವ ಪೋಸ್ಟ್ ಮಾಡರ್ನ್ ನೆಲೆಯ ಕೃತಿಗಳನ್ನು ಇವರಾರೂ ಅನುಸರಿಸಿಲ್ಲ. ಆಧರಿಸಿಲ್ಲವಾದರೂ ಇಡೀ ಪ್ರದರ್ಶನದಲ್ಲಿ ಕೇವಲ ಬೌದ್ಧಿಕತೆಗಿಂತಲೂ ಹೃದಯ ಸಂವಾದಿಯಾದ ಅಭಿವ್ಯಕ್ತಿಗೇ ಆದ್ಯತೆಯಿದೆ ಆದರೂ ಎನ್, ರಮೇಶ್ ಅವರ ಕೃತಿಯೊಂದು ಮಾತ್ರ ಈ ಪ್ರದರ್ಶನದ ಧಾಟಿಗೆ ಹೊಂದುವಂತಿಲ್ಲ. ಹೀಗೆ ಈ ಪ್ರದರ್ಶನವು ತುಂಬ ಹೆಚ್ಚಿನ ಪರಿಣಾಮ ಬೀರದಿದ್ದರೂ, ಸಾಮಾನ್ಯ ಪ್ರದರ್ಶನಗಳಿಂದ ಮೇಲಿನ ಸ್ತರದಲ್ಲಿದೆ ಎನ್ನುವುದೇ ಸಮಾಧಾನಕರ ಅಂಶ ಎಂಬುದನ್ನು ಕೃ.ಸೆ.ಯವರು ಪ್ರಜಾವಾಣಿಯ ಕರ್ನಾಟಕದರ್ಶನದಲ್ಲಿ ೩೦-೧೧-೨೦೦೨ರಂದು ಪ್ರಕಟಗೊಂಡ ತಮ್ಮ ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ.

ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಕೃ.ಸೆ.ಯವರಿಂದ ರಚಿತವಾದ ದೃಶ್ಯಕಲೆಗೆ ಸಂಬಂಧಿಸಿದ ಹಲವು ವಿಮರ್ಶಾ ಲೇಖನಗಳಲ್ಲಿರುವ ಅವರ ಬರವಣಿಗೆಯ ಸಾರವನ್ನ ನಮ್ಮದೇ ಆದ ಶೈಲಿಯಲ್ಲಿ ಈ ಮೇಲಿನಂತೆ ವಿಮರ್ಶೆ ಮಾಡಲಾಗಿದೆ, ಇವುಗಳಲ್ಲದೇ ಇವರಿಂದ ರಚಿತವಾದ ಇತರೆ ಲೇಖನಗಳ ಸಂಕ್ಷಿಪ್ತ ಮಾಹಿತಿಯ ಪಟ್ಟಿಯನ್ನು ಅನುಬಂಧ-೨ರಲ್ಲಿ ನೀಡಲಾಗಿದೆ.

---

೧೬೪. ಕಲಾಶಿಕ್ಷಕರ ಸಮಕಾಲೀನ ಸಂವೇದನೆ, ಪ್ರಜಾವಾಣಿ, ಕರ್ನಾಟಕದರ್ಶನ, ೩೦ ನವಂಬರ್ ೨೦೦೨

## ಚಿ.ಸು ಕೃಷ್ಣಸೆಟ್ಟಿಯವರ ಕಲಾ ಗ್ರಂಥಗಳು












## ಚಿ.ಸು ಕೃಷ್ಣಸೆಟ್ಟಿಯವರ ಕಲಾ ಗ್ರಂಥಗಳು









## ಅಧ್ಯಾಯ: ನಾಲ್ಕು

# ಚಿ.ಸು.ಕೃಷ್ಣಸೆಟ್ಟಿಯವರ ಚಿತ್ರಕಲಾಕೃತಿಗಳು

ಚಿತ್ರಕಲೆಯ ಚರಿತ್ರೆ ಪ್ರಾರಂಭವಾಗುವುದು ಪ್ರಾಗಿತಿಹಾಸದ ಗುಹಾಚಿತ್ರಗಳಿಂದ, ಚಿತ್ರ ರಚನೆಗಳು ಆದಿಮಾನವರಿಂದ ಸಾಂಸ್ಕೃತಿಕ ಮನಸೋಲ್ಲಾಸದ ಹಿನ್ನೆಲೆಯಲ್ಲಿ ಮೂಡಿಬಂದವು ಎಂದು ಅನೇಕ ಉಲ್ಲೇಖಗಳು ಹೇಳುತ್ತವೆ. ಆದಿ ಮಾನವನ ಅಂತರ್ ಭಿತ್ತಿಯ ಸಂವೇದನೆಗಳು ಚಿತ್ರ ರೂಪದಲ್ಲಿ ಪ್ರಕಟಗೊಳ್ಳುವಿಕೆಯ ಹಿನ್ನೆಲೆಯಲ್ಲಿ ತನ್ನ ಸುತ್ತಲಿನ ನಿಸರ್ಗ, ದೈನಂದಿನ ಬದುಕಿನ ರೂಪಣಗಳನ್ನು ಪುನರಾವರ್ತಿಸಿ ಕಲೆಯ ಮುಖೇನ ಭಾಷೆಯ ಸೃಷ್ಟಿಗೆ ತೊಡಗಿದ್ದು ದಿಟ. ಆದಿ ಮಾನವನಿಗೆ ನಾಗರೀಕತೆಯ ಅರಿವು ಮೂಡುತ್ತಿದ್ದಂತೆ ತನ್ನ ಸಂಸ್ಕೃತಿಯ ತುಡಿತಗಳ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಚಿತ್ರ ಬರೆಯುವಿಕೆಯನ್ನು ಮಾರ್ಪಡಿಸಿಕೊಂಡ. ಶತಶತಮಾನಗಳು ಸಂದಂತೆ ಕ್ರಮೇಣ ಚಿತ್ರಕಲೆ ಧಾರ್ಮಿಕ ವಿಧಿಕ್ರಿಯೆಯಾಗಿ ಒಡಮೂಡಿ, ನಂತರದಲ್ಲಿ ರಾಜಾಶ್ರಯ ಪಡೆದು ತನ್ನದೇ ಆದ ಪ್ರತ್ಯೇಕ ಪರಿಸರದಲ್ಲಿ ಚಿತ್ರ ಸೃಷ್ಟಿಯ ಕ್ರಿಯೆಗಳು ನಡೆದವು.

ಧಾರ್ಮಿಕ ಆಶ್ರಯದಲ್ಲಿ ಅಂದರೆ ಪಶ್ಚಿಮದ ದೇಶಗಳ ಚರ್ಚುಗಳಲ್ಲಿ ಕ್ರಿಸ್ತನ ಜೀವನ ಚರಿತ್ರೆಯ ಕುರಿತಾದ ಚಿತ್ರಗಳು ಧಾರ್ಮಿಕ ಪ್ರಚಾರದ ಒಂದು ಪ್ರಬಲ ದೃಶ್ಯ ಮಾಧ್ಯಮವಾಗಿ ಹೊರ ಹೊಮ್ಮಿದವು. ದೃಶ್ಯದ ಮೂಲಕ ಧಾರ್ಮಿಕ ಪ್ರಚಾರದ ಆಂದೋಲನವನ್ನು ಮೊದಲಿಗೆ ಗುರುತಿಸುವುದು ಇಲ್ಲಿಂದಲೇ, ಕೇವಲ ಚಿತ್ರದ ಮೂಲಕವಷ್ಟೇ ಅಲ್ಲ-ಶಿಲ್ಪಗಳ ಮೂಲಕವೂ ಧಾರ್ಮಿಕ ಆಂದೋಲನ ನಡೆದಿರುವುದರ ಮೇಲೂ ಪಶ್ಚಿಮದ ಕಲಾಇತಿಹಾಸದ ಬೆಳಕು ಚೆಲ್ಲುತ್ತದೆ.[೧]

ಒಂದು ಪ್ರದೇಶದ, ಒಂದು ಕಾಲದ ಸಂಸ್ಕೃತಿಯನ್ನು ಅಭ್ಯಸಿಸುವ ಸಂದರ್ಭದಲ್ಲಿ ಅಲ್ಲಿಯ ಉಳಿದ ಕಲಾ ಪ್ರಕಾರಗಳಂತೆ ಚಿತ್ರಕಲೆಯನ್ನು ಅವಶ್ಯಕವಾಗಿ ಪರಿಗಣಿಸಬೇಕಾಗುತ್ತದೆ. ಇಲ್ಲಿ ಚಿತ್ರಕಲೆ ಎರಡು ರೀತಿಗಳಿಂದ ಮುಖ್ಯವಾಗುತ್ತದೆ. ಈಗಾಗಲೇ ರಚಿತವಾಗಿರುವ ಕಲಾಕೃತಿಗಳಿಂದ

೧. ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ, ಕಲಾವಿದ ಆರ್.ಎಂ.ಹಡಪದ, ಒಂದು ಅಧ್ಯಯನ ಪಿಎಚ್.ಡಿ ಮಹಾಪ್ರಬಂಧ, ಕ.ವಿ.ವಿ., ೨೦೦೩

ಅಲ್ಲಿಯ ಸಂಸ್ಕೃತಿಯನ್ನು ಪರಿಶೀಲಿಸುವುದು ಇನ್ನೊಂದು. ಆದಿಮಾನವನ ಕಾಲದಿಂದಲೂ ಚಿತ್ರಕಲೆ ಕೇವಲ ಬರಿದಾದ ಭಿತ್ತಿಯಲ್ಲಿ ಅಲಂಕರಣ ಮಾಡುವುದಕ್ಕಿಂತ ಹೆಚ್ಚಿನ ಅರ್ಥದಲ್ಲಿ, ಒಂದು ವಿಧಿಕ್ರಿಯೆಯಾಗಿ ಬಂದಿರುವುದರಿಂದ ಒಂದು ಪ್ರದೇಶದ ಸಂಸ್ಕೃತಿಯ ಮೇಲೆ ಚಿತ್ರಕಲೆಯ ಪ್ರಭಾವವನ್ನು ಗುರುತಿಸಬಹುದಾಗಿದೆ. ಅಲ್ಲದೇ ಲಿಪಿಯ ಮೂಲಕ ಸಾಹಿತ್ಯ ಉಳಿದಿರುವಂತೆ ಚಾಕ್ಷುಷ ರೂಪದಲ್ಲಿ ಚಿತ್ರಕಲೆ ಉಳಿದು ಬಂದಿದ್ದು. ಶ್ರವ್ಯ ಮಾಧ್ಯಮದ ಸಂಗೀತವಾಗಲೀ, ದೃಶ್ಯವೇ ಆದರೂ ಈಚಿನವರೆಗೆ ಧ್ವನಿಮುದ್ರಣ ಹಾಗೂ ಛಾಯಾಗ್ರಹಣದ ಮೂಲಕ ಉಳಿಸಿಕೊಳ್ಳಬಹುದಾದಂತೇ, ನೃತ್ಯ ನಾಟಕಗಳಾಗಲೀ ಉಳಿದು ಬಂದಿಲ್ಲವಾಗಿ ಅವು ಹೇಗಿತ್ತೆಂಬುದು ಊಹೆ ಅಥವಾ ಕಲ್ಪನೆಯಲ್ಲಷ್ಟೇ ಸೀಮಿತವಾಗುತ್ತದೆ.[೨] ಎಂಬುದಂತೂ ಸತ್ಯ.

ಭಾರತದಲ್ಲಿಯೂ ರಾಜಾಶ್ರಯದ ಮೂಲಕ ಧಾರ್ಮಿಕ ಚಿತ್ರಗಳು ಗುಹೆಗಳ ಭಿತ್ತಿಯ ಮೇಲೆ ರಚಿಸಲ್ಪಟ್ಟವು. ಉದಾಹರಣೆಗೆ ಅಜಂತಾ–ಎಲ್ಲೋರಾ ಹಾಗೂ ಕರ್ನಾಟಕದ ಹಲವೆಡೆಗಳಲ್ಲಿ ಚಾಲುಕ್ಯರು ಮೊದಲ್ಗೊಂಡು ವಿಜಯನಗರದ ಆಳರಸರುಗಳು ನಿರ್ಮಿಸಿದ ದೇಗುಲಗಳಲ್ಲಿ ಕ್ರಮವಾಗಿ ಶೈವ, ವೈಷ್ಣ, ಬೌದ್ಧ, ಜೈನ ಮುಂತಾದ ಧಾರ್ಮಿಕ ವಿಷಯಗಳ ದೃಶ್ಯ ಅಭಿವ್ಯಕ್ತಿಯು ಹೆಚ್ಚಾಗಿ ಭಿತ್ತಿಗಳ ಮೂಲಕವಾಗಿಯೇ ಮೂಡಿಬಂದವು.

ಅಭಿವ್ಯಕ್ತಿ ಪ್ರಧಾನವಾದ ಚಿತ್ರಕಲೆಯನ್ನು ಎರಡು ರೀತಿಗಳಿಂದ ಪರಿಗಣಿಸಬೇಕಾಗುತ್ತದೆ. ಈಗಾಗಲೇ ರಚಿತವಾಗಿರುವ ಚಿತ್ರಕಲಾ ಕೃತಿಗಳನ್ನು ಇರಿಸಿ ಅವುಗಳ ಮೂಲಕ ಅಲ್ಲಿಯ ಸಂಸ್ಕೃತಿಯನ್ನು ನೋಡುವುದು ಒಂದಾದರೆ ಒಂದು ಜನಾಂಗದ ಆಚರಣೆಯ ಸಂದರ್ಭದಲ್ಲಿ ರಚಿತವಾಗುವ ಕಲಾಕೃತಿಗಳಿಂದ ಅಲ್ಲಿಯ ಸಂಸ್ಕೃತಿಯನ್ನು ಪರಿಶೀಲಿಸುವುದು ಮತ್ತೊಂದು ಎಂಬಂತೆ ಸಂಸ್ಕೃತಿಯ ಮೂಲಕ ಪ್ರಕಟಗೊಳ್ಳುವ ಕಲೆಯ ಕುರಿತಾದ ವ್ಯಾಖ್ಯಾನಗಳು ವಿವಿಧ ರೀತಿಯಲ್ಲಿವೆ. ಕಲೆ ಎಂದರೇನು? ಎಂಬ ಪ್ರಶ್ನೆ ಜೀವನ ಎಂದರೆ ಏನು ಎನ್ನುವ ಪ್ರಶ್ನೆಯಷ್ಟೇ ಜಟಿಲವಾಗಿದೆ. ಈ ನಿಟ್ಟಿನಲ್ಲಿ ನಮ್ಮ ಪಾಶ್ಚಾತ್ಯ ಮತ್ತು ಪೌರಾತ್ಯ ಕಲಾವಿದ್ವಾಂಸರು ಕಲೆಯ ಬಗ್ಗೆ ವ್ಯಾಖ್ಯಾನಗಳನ್ನು ನೀಡುತ್ತಾ ಬಂದಿದ್ದಾರೆ ಆದರೆ ಇದನ್ನು ಸಂಪೂರ್ಣವಾಗಿ ಸ್ವೀಕರಿಸಬೇಕೇ ಬೇಡವೆ ಎಂಬ ಗೊಂದಲದಿಂದ ನಾವಿನ್ನೂ ಹೊರಬಂದಂತಿಲ್ಲ.[೩]

ದೃಶ್ಯಕಲೆ ಎಂದರೇನು? ಎನ್ನುವ ಬಗ್ಗೆ ಹಲವಾರು ಶತಮಾನಗಳಿಂದ ಚರ್ಚೆ ನಡೆಯುತ್ತದೆ ಯಾದರೂ ಈವರೆಗೆ ಸಮರ್ಪಕವಾದ, ಸರ್ವಸಮ್ಮತವಾದ ಉತ್ತರ ಸಿಕ್ಕಿಲ್ಲ. ಈ ಹಿನ್ನೆಲೆಯಲ್ಲಿ

---

೨. ಡಾ.ಅ.ಲ.ನರಸಿಂಹನ್: ಆಲೇಖ್ಯ, ಪು.೬

೩. ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಂ.ಹಡಪದ, ಒಂದು ಅಧ್ಯಯನ ಸಂಶೋಧನ ಗ್ರಂಥ, ಕ.ವಿ.ವಿ.ಹಂಪಿ, ಪು.೧೦೧

ಕಲೆ ಎಂದರೇನು? ಎನ್ನುವ ಬಗ್ಗೆ ಕೆಲವರ ಅಭಿಪ್ರಾಯವನ್ನು ಚಿ.ಸು.ಕೃಷ್ಣಸೆಟ್ಟಿಯವರು ಚಿತ್ರಚಿತ್ತ. ಗ್ರಂಥದಲ್ಲಿ ಹೀಗೆ ಸಂಗ್ರಹಿಸಿದ್ದನ್ನು ಇಲ್ಲಿ ಪುನರಾವರ್ತಿಸಲಾಗಿದೆ. ವಾತ್ಸಾಯನನ ಕಾಮಸೂತ್ರಕ್ಕೆ ಟೀಕೆಯನ್ನು ಬರೆದ ಯಶೋಧರ ಪಂಡಿತನು ಒಂದು ಶ್ಲೋಕದ ಮೂಲಕ ಚಿತ್ರಕಲೆಯಲ್ಲಿರಬೇಕಾದ ಷಡಾಂಗಗಳು ಅಂದರೆ ಆರು ಅಂಗಗಳನ್ನು ಹೀಗೆ ಹೇಳಿದ್ದಾನೆ.

ರೂಪ ಭೇದಾಃ ಪ್ರಮಾಣಾನಿ ಭಾವ ಲಾವಣ್ಯ ಯೋಜನಮ್
ಸಾದೃಶ್ಯಂ ವರ್ಣಿಕಾಭಂಗಂ ಇತಿ ಚಿತ್ರ ಷಡಂಗಕಮ್ ॥

ಇದರ ಭಾವಾರ್ಥ

ರೂಪಭೇದ : ಅಂದರೆ ಜೀವ, ನಿರ್ಜೀವ ವಸ್ತುಗಳಲ್ಲಿನ ವ್ಯತ್ಯಾಸ

ಪ್ರಮಾಣ : ಅಂಗಾಂಗಳ ಪ್ರಮಾಣ, ತಾಳಮಾನ

ಭಾವ : ಅಭಿವ್ಯಕ್ತಿಗೊಳಿಸುವ ರಸಭಾವ

ಲಾವಣ್ಯ ಯೋಜನೆ : ಸೌಂದರ್ಯ ಯೋಜನೆ

ಸಾದೃಶ್ಯ : ಆಂತರಿಕ ಮತ್ತು ಪ್ರಾತಿನಿಧಿಕ ಅಂಶಗಳ ಹೋಲಿಕೆ

ವರ್ಣಿಕಾ ಭಂಗ : ವರ್ಣ ಸಂಯೋಜನೆ, ವರ್ಣವಿನ್ಯಾಸ

ಈ ಆರು ಅಂಗಗಳಿಂದ ಕಲೆಯು ಕೂಡಿರಬೇಕೆಂದು ಯಶೋಧರ ಪಂಡಿತ ಹೇಳುತ್ತಾನೆ.

ಪ್ಲೇಟೋವಿನ ಶಿಷ್ಯ ಅರಿಸ್ಟಾಟಲ್ (ಕ್ರಿ.ಪೂ.೩೮೪) ಕಲೆ ಮತ್ತು ಕಲಾವಿದರ ಬಗ್ಗೆ ಹಲವಾರು ವಿಚಾರಗಳನ್ನು ತಿಳಿಸಿದ. "ಸೃಷ್ಟಿ ಸೌಂದರ್ಯಕ್ಕೆ ಪೂರಕವಾಗುವ ಅಥವಾ ಅದರ ಸೌಂದರ್ಯಾನುಭೂತಿಗೆ ಹತ್ತಿರವಾಗುವ ಮಾನವ ನಿರ್ಮಿತ ಕಲಾಸೃಷ್ಟಿಯನ್ನು ಗ್ರಾಹ್ಯ ಮಾಡಬಹುದೆಂದು ಹೇಳಿದ." "ಆದರೆ ಕೆಳದರ್ಜೆಯ ವಸ್ತುಗಳು ಉತ್ತಮವಾದುದ್ದನ್ನು ಅನುಕರಣೆ ಮಾಡಿದರೆ ಅಥವಾ ಆ ಉತ್ತಮವಾದುದರ ಗುಣ ವಿಶೇಷಣವನ್ನು ತನ್ನಲ್ಲಿಯೇ ಪ್ರತಿಬಿಂಬಿಸಿದರೆ ಅದು ಕಲಾಕೃತಿಯಾಗುತ್ತದೆ. ಅಂದರೆ ಕಲಾಕೃತಿಗಳೆಲ್ಲಾ ದೈವ ಸೃಷ್ಟಿಯ ಅನುಕರಣವೆಂದು ಕರೆದು, ಮೂಲವಸ್ತು ಇರುವಂತೆಯೇ ಅಥವಾ ಅದಕ್ಕಿಂತ ಹೆಚ್ಚಿನ ಚೆಲುವಿನಲ್ಲಿ ಇಲ್ಲವೇ ಕಡಿಮೆ ಚೆಲುವಿನಿಂದ ರಚಿಸಬಹುದೆಂಬ ಈ ಸಿದ್ಧಾಂತವನ್ನು ಆನಂತರದವರು ಇನ್ನಷ್ಟು ವಿಸ್ತರಿಸಿದರು.

ಟಾಲ್‌ಸ್ಟಾಯ್ ಅವರ ಪ್ರಕಾರ "ಅನುಭವಿಸಿ ಆಗಿರುವ ಭಾವವನ್ನು ಒಬ್ಬಾತ ತನ್ನಲ್ಲಿ ಎಚ್ಚರಿಸಿಕೊಂಡು ಅದನ್ನು ಚಲನೆ, ರೇಖೆ, ಬಣ್ಣ, ನಾದ, ಆಕೃತಿ ಅಥವಾ ಶಬ್ದಗಳ ಮೂಲಕ ಅಭಿವ್ಯಕ್ತಿಗೊಳಿಸಿ, ಆ ಭಾವವನ್ನು ಇನ್ನೊಬ್ಬನೆಡೆಗೆ ಪ್ರವಹಿಸಿದಾಗ ಎರಡನೆಯವನಲ್ಲೂ ಮೂಲದ ಭಾವನೆ ಸ್ಫುರಿಸುವಂತೆ ಮಾಡುವುದೇ ಕಲೆಯ ಕೆಲಸ ಸೌಂದರ್ಯ ಶಾಸ್ತ್ರಜ್ಞ ಇಮ್ಯಾನ್ಯುಯಲ್ ಕ್ಯಾಂಟ್ ಅವರ ಪ್ರಕಾರ "ಯಾವುದು ತಾಟಸ್ಥ ಚಿಂತನೆಯಲ್ಲಿ ಆನಂದವನ್ನು ಕೊಡಬಲ್ಲದೋ

ಅದೇ ಕಲೆ, ತಾಟಸ್ಥ್ಯವು ಶುದ್ಧವಾದ ಚಿಂತನೆಯಾಗಿದ್ದು ಅದಕ್ಕೆ ವಸ್ತುವಿನ ಇರುವಿಕೆಯ ಅವಶ್ಯಕತೆಯಲ್ಲ. ವಸ್ತುವಿನ ಅಸ್ತಿತ್ವದ ಮೇಲಿರುವ ಆಸಕ್ತಿಯಿಂದಾಗಿ ಆ ವಸ್ತು ಒಳ್ಳೆಯದು ಹಿತಕಾರಿ ಎಂಬ ಗುಣಗಳೂ ಸೇರಿರುತ್ತವೆ. ಆದರೆ ಯಾವುದು ಸುದರವಾಗಿದೆಯೋ ಅದು ಈ ಬಗೆಯ ಎಲ್ಲಾ ಆಸಕ್ತಿಗಳಿಂದ ಸ್ವತಂತ್ರವಾಗಿರುತ್ತದೆ." ಇನ್ನೊಬ್ಬ ಸೌಂದರ್ಯ ಶಾಸ್ತ್ರಜ್ಞ ಕ್ರೋಷೆ" ಕಲೆ ಎಂದರೆ ತಟಸ್ಥ ಅವಲೋಕನವೂ ಅಲ್ಲ. ಹಗಲುಗನಸು ಕಾಣುವುದೂ ಅಲ್ಲ. ಅದು ವ್ಯವಸ್ಥಾಪಿಸಲ್ಪಟ್ಟ ಪ್ರತಿಮೆಗಳ ಮೂಲಕ ಉಂಟಾಗುವ ಮಾನಸಿಕ ದೃಶ್ಯ ಎನ್ನುತ್ತೇನೆ.

ಒಂದು ನಿಶ್ಚಿತ ಸಂದೇಶವನ್ನು ಸಮೃದ್ಧಗೊಳಿಸಲು, ವಸ್ತುವಿನ ಗುಣಗಳನ್ನು ಹೆಚ್ಚಿಸಲು ಅಥವಾ ನೋಡುಗನಲ್ಲಿ ಗುಣಾತ್ಮಕವಾದ ಈ ವಿಷಯದ ಜಾಗೃತಿಯನ್ನು ಉಂಟುಮಾಡುವ ದಿಸೆಯಲ್ಲಿ ಮಾನವನು ಉದ್ದೇಶಪೂರ್ವಕವಾಗಿ ಮಾಡಿದವುಗಳೇ ಕಲೆ[೪] ಎನ್ನುವ ಅಭಿಪ್ರಾಯವೂ ಉಂಟು.

ಹೀಗೆ ಅನೇಕರು ಕಲೆಯ ಕುರಿತು ತಮ್ಮದೇ ಅಬಿಪ್ರಾಯಗಳನ್ನು ಹಂಚಿಕೊಂಡಿರುವುದನ್ನು ಕಾಣಬಹುದಾದರೂ ಇದೇ ಸರಿ, ತಪ್ಪು ಎಂಬ ಗೊಂದಲದಲ್ಲಿರುವಾಗಲೂ ಆಧುನಿಕ ಪ್ರಪಂಚದ ಈ ಸಂದರ್ಭದಲ್ಲಿ ವಿವಿಧ ಆಯಾಮಗಳಲ್ಲಿ ಕಲೆಯು ತನ್ನ ವ್ಯಾಖ್ಯಾನದ ಒಳ ಸ್ವರೂಪವನ್ನು ವಿಸ್ತರಿಸಿಕೊಳ್ಳು ತ್ತಿರುವುದನ್ನು ನಾವುಗಳು ಗಮನಿಸಬಹುದು.

ಅಷ್ಟೆ ಅಲ್ಲದೇ ಕಲೆಗೆ ವಿಶಿಷ್ಟ ಸ್ಥಾನಮಾನವನ್ನು ನೀಡಲಾಗಿದೆ ಅದು ಭಾರತದಲ್ಲಿ "ಕಲೆ"ಯಾಗಿದೆ ಅದೇ ಇಂಗ್ಲಿಷ್‌ನಲ್ಲಿ "Art" ಆಗಿದೆ, ಇಲ್ಲಿ ಈ ಎರಡು ಪದಗಳ ಬಗೆಗೆ ಇಲ್ಲಿಯವರೆಗೂ ಯಾವುದೇ ನಿಶ್ಚಿತವಾದ ಮತ್ತು ಸಮರ್ಪಕವಾದ ಸೂತ್ರ, ಅರ್ಥ ವಿವರಣೆ ಕೊಡಲು ಸಾಧ್ಯವಾಗಿರುವುದಿಲ್ಲ ಎಂಬ ಅಭಿಪ್ರಾಯವನ್ನು ಸಂಶೋಧಕರು, ಕಲಾವಿದರೂ ಆಗಿರುವ ಡಾ.ಬಿ.ಕೆ.ಹಿರೇಮಠರು ತಮ್ಮದೇ ಗ್ರಂಥವಾದ "ಸೃಷ್ಟಿ"ಯಲ್ಲಿ ಈ ಕೆಳಕಂಡಂತೆ ಉಲ್ಲೇಖಿಸಿರುತ್ತಾರೆ.

ಅಡುಗೆ ಮಾಡುವುದು ಒಂದು ಕಲೆ, ದಿನಪತ್ರಿಕೆ ಮಾರುವ ಹುಡುಗ ಪತ್ರಿಕೆ ಖರ್ಚಾಗಲು ಆಕರ್ಷಕವಾಗಿ ಕೂಗುತ್ತಿದ್ದರೆ ಅದೂ ಒಂದು ಕಲೆ, ಒಬ್ಬ ಭಿಕ್ಷುಕ ದಾನಿಗಳ ಮನ ಕರಗುವಂತೆ ಭಿಕ್ಷೆ ಬೇಡಿದರೆ ಅದೂ ಒಂದು ಕಲೆ, ಹೆಚ್ಚೇಕೆ ಒಬ್ಬನು ಮೋಸ ಮಾಡಿದ್ದಾನೆಂದರೆ–ಮೋಸ ಮಾಡುವುದೂ ಕೂಡ ಒಂದು ಕಲೆ ಎನ್ನುತ್ತೇವೆ[೫] ಈ ಉಲ್ಲೇಖಕ್ಕೆ ಪೂರಕವಾಗಿಯೇ ವಾತ್ಸಾಯನ ತನ್ನ ಕಾಮಸೂತ್ರದಲ್ಲಿ ಚೌಷಷ್ಟಿ ಕಾರ್ಯಗಳನ್ನು ಕಲೆ ಎಂದು ಉದ್ಘೋಷಿಸುತ್ತಾನೆ ಅದರಲ್ಲಿಯೂ

---

೪. ಚಿ.ಸು.ಕೃಷ್ಣಸೆಟ್ಟಿ : ಚಿತ್ರ ಚಿತ್ರ, ಪು.೫೮

೫. ಡಾ.ಬಿ.ಕೆ.ಹಿರೇಮಠ : ಸೃಷ್ಟಿ ಪು.೨೧೨

ಕೂಡ ಅರವತ್ತನಾಲ್ಕು ಕರ್ಮಗಳನ್ನು "ಕಲೆ"ಯೆಂದೇ ಕರೆಯುತ್ತಾನೆ. ಆ ಅರವತ್ತನಾಲ್ಕು ಕಲೆಗಳಲ್ಲಿ ಚಿತ್ರಕರ್ಮವನ್ನು 'ಆಲೇಖ್ಯ' ಎಂದು ಹೆಸರಿಸುತ್ತಾನೆ.[೬]

ಬಿ.ಕೆ.ಹಿರೇಮಠರು ಕಲೆಯ ಬಗೆಗೆ ಹೀಗೆ ಹೇಳಿರುತ್ತಾರೆ. "ಕಲೆ" ಈ ಪದದ ಮೂಲವು ಕೂಡ ಸಂದಿಗ್ದವಾದುದು, 'ಕಲ್' ಎಂಬ ದ್ರಾವಿಡ ಮೂಲದಿಂದ ಆರ್ಯರು ಎತ್ತಿಕೊಂಡಿರಬಹುದಾದ ಪದ ಈ 'ಕಲೆ' ಎಂಬುದು ಶ್ರೀ ಫಣೀಂದ್ರನಾಥ್ ಬೋಸರ ಅಭಿಪ್ರಾಯವಾಗಿದೆ. ಕೆಲವು ವಿದ್ವಾಂಸರು "ಸೌಂದರ್ಯ" ಎಂಬುದನ್ನು ಸೂಚಿಸುವ Kalos ಎಂಬ ಗ್ರೀಕ್ ಪದಕ್ಕೂ "ಕಲೆ" ಎಂಬುದಕ್ಕೂ ಸಂಬಂಧ ಕಲ್ಪಿಸಲು ಪ್ರಯತ್ನಪಟ್ಟಿದ್ದಾರೆ. ಮೊನಿಯರ್ ವಿಲಿಯಲ್ಸ್ ಅವರು "ಕಲೆ" ಎಂಬ ಈ ಪದದ ಮೂಲವೇ ಸಂಶಯಾಸ್ಪದ ಎಂಬುದಾಗಿ ಅಭಿಪ್ರಾಯ ಪಟ್ಟಿದ್ದಾರೆ. ಇನ್ನೂ ಕಲೆ ಎಂಬ ಪದದ ಅರ್ಥ, ಕಲಾ ಅಥವಾ 'ಕಲೆ' ಎಂಬುದಕ್ಕೆ ಮ್ಯಾಕ್‌ಡೊನೆಲ್ ಅವರು ಬೇರೆ ಬೇರೆ ಅರ್ಥಗಳನ್ನು ಕೊಡುವುದರ ಜೊತೆಗೆ Artistic skill, art (of which there are 64) ಎಂಬುದಾಗಿ ಹೇಳುತ್ತಾರೆ. ಕಿಟಲ್‌ರು ಕಲೆ ಪದಕ್ಕಿರುವ ವಿವಿಧ ಅರ್ಥಗಳನ್ನು ಸೂಚಿಸುತ್ತ any practical art. Any mechanical or fine art ; sixty four such are enumerated as carpentering, architecture, jevellary, farriery, acting, dancing, music medicine, poetry etc; (ಶಿಲ್ಪ ವಿಕರ್ಮ, ಶಿಲ್ಪಕರ್ಮ) ಎಂಬುದಾಗಿ ವಿವರಿಸುತ್ತಾರೆ.[೭]

ಇನ್ನೂ ಭಾರತೀಯ ದರ್ಶನಗಳಲ್ಲಿ ಕಲೆಯ ಕುರಿತಾದ ವ್ಯಾಖ್ಯಾನಗಳನ್ನು ಇಲ್ಲಿ ಹೇಳಲಾಗಿದೆ.[೮] ಋಗ್ವೇದದಲ್ಲಿ ಬರುವ ಕಲೆ ಎಂಬ ಪದಕ್ಕೆ ಅಂಶ ಅಥವಾ ಕತೃತ್ವ ಎಂಬುದಾಗಿ ಅರ್ಥೈಸುತ್ತಾರೆ. ಕಲೆ ಎಂದರೆ ದಿವ್ಯಶಕ್ತಿಯ ಅಥವಾ ಪರಮಾತ್ಮನ ಶಕ್ತಿಯ ಒಂದು ಕಿರಣ ಅಥವಾ ಪರಮಾತ್ಮನ ಸೃಷ್ಟ್ಯಾತ್ಮಕ ಶಕ್ತಿಯ ಒಂದು ಅಂಶ ಎಂಬುದೊಂದು ಅಭಿಪ್ರಾಯವಾದರೆ "ಕ" ಕಾರವು ಬ್ರಹ್ಮವಾಚಕ ಆದುದರಿಂದ ಸೃಷ್ಟಿಧರ್ಮವನ್ನು 'ಲ'ಕಾರವು ಲಯವನ್ನು ಸೂಚಿಸುವುದರಿಂದ ಕಲೆಯು ಸೃಷ್ಟಿ-ಸ್ಥಿತಿ-ಸಂಹಾರ ರೂಪವಾದುದು ಎಂಬುದು ಇನ್ನೊಂದು ಅಭಿಪ್ರಾಯವಾಗಿದೆ. ಕ-ಲ ಎಂಬಕ್ಷರಗಳಲ್ಲಿ ಲಿಖಿತ ತ್ರಿಪುರ ಸುಂದರಿಯ ಸ್ವರೂಪವು ನಿರ್ದಿಷ್ಟವಾಗಿದೆ. ಶ್ರೀ ವಿದ್ಯೋಪಾಸನೆಯ ಬಹಿರ್‌ಯಾಗ ಕ್ರಮದಲ್ಲಿ ಚಂದ್ರಮಂಡಲದ ಹದಿನಾರು ಕಲೆಗಳನ್ನು ಉಪಾಸನೆ ಮಾಡುವಾಗ ಮುಖ್ಯವಾದುದು ಸಂದಾಖ್ಯ ಕಲೆಯೇ ತ್ರಿಪುರ ಸುಂದರೀ ಸ್ವರೂಪ. ಈ ಹದಿನಾರು ಕಲೆಗಳಿಂದ ನಾಲ್ಕು ನಾಲ್ಕು

---

೬. ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಂ.ಹಡಪದ ಒಂದು ಅಧ್ಯಯನ ಸಂಶೋಧನ ಮಹಾಪ್ರಬಂಧ, ಕ.ವಿ.ವಿ.ಹಂಪಿ. ಪು.ಸಂ. ೧೦೨

೭. ಡಾ.ಬಿ.ಕೆ.ಹಿರೇಮಠ : ಸೃಷ್ಟಿ, ಪು.ಸಂ.೨೧೨

೮. ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಂ.ಹಡಪದ ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ. ಹಂಪಿ, ಪು.ಸಂ. ೧೦೩, ೨೦೦೩

ಭಾಗಗಳಾಗಿ ಅರವತ್ತು ನಾಲ್ಕು ಕಲೆಗಳು ಅಕ್ಷರಗಳು ಹುಟ್ಟಿದವು. ಎಂಬುದಾಗಿ ಪ್ರಪಂಚಸಾರ, ಮಾತೃ ಕಾರ್ಣವ ಗ್ರಂಥಗಳು ವಿವರಿಸುತ್ತವೆ. ಭಾರತೀಯ ಪ್ರಕಾರ ಹದಿನಾಲ್ಕು ವಿದ್ಯೆಗಳು ಮತ್ತು ಕಲೆಗಳು ಒಟ್ಟು ಅರವತ್ತು ನಾಲ್ಕು ಕಲೆ ಜ್ಞಾನದ ಎಲ್ಲಾ ಶಾಖೆಗಳನ್ನು ಅಂದರೆ–ರಸಾಯನಶಾಸ್ತ್ರ ಜೀವಶಾಸ್ತ್ರ ಧನುರ್ವಿದ್ಯೆ ಮತ್ತು ಲಲಿತಕಲೆಗಳನ್ನು ಒಳಗೊಳ್ಳುವಷ್ಟು ವಿಸ್ತೃತವಾದ ಅರ್ಥದಲ್ಲಿ ಬಳಕೆಗೊಂಡಿದೆ. ಭಾರತೀಯರ ದೃಷ್ಟಿಯಲ್ಲಿ ವಿದ್ಯೆ ಹಾಗೂ ಕಲೆಗಳ ಗುರಿ ಪರಮಾತ್ಮನನ್ನು ಅರಿಯುವುದು. ಈ ಬಗೆಗೆ ಜ್ಞಾನ ಮಾಡಿಕೊಡುವುದು ಆಗಿದೆ 'ಕಲಾ' ಎಂಬ ಪದಕ್ಕೆ ಪಂಡಿತರು ನಾನಾ ಅರ್ಥವನ್ನು ಕೊಟ್ಟರೂ ಕಲಾ ಶಬ್ದಕ್ಕೆ ಸಾಮಾನ್ಯವಾದ ಅರ್ಥ ಉಪಾಯ ಅಥವಾ ಕೌಶಲ ಎಂಬುದು ಯಾವ ಉಪಾಯದಿಂದ ಅಥವಾ ಕೌಶಲದಿಂದ ನಮ್ಮ ಭಾವನೆಗಳನ್ನು ಆಲೋಚನೆಗಳನ್ನು ಮನಮುಟ್ಟುವ ರೀತಿಯಲ್ಲಿ ತಿಳಿಸಬಹುದೋ ಅಂತಹ ವಿಧಾನವೇ ಕಲೆ ಎನ್ನಬಹುದು[೯] ಎಂಬುದನ್ನು ವಿವರವಾಗಿ ತಿಳಿಸಿರುತ್ತಾರೆ.

ಜಗತ್ತು ಹುಟ್ಟಿದಂದಿನಿಂದ ಮಾನವ ಸಂಸ್ಕೃತಿ, ಸಂಸ್ಕಾರದ ಇತಿಹಾಸದಲ್ಲಿ ಅನೇಕ ಏರಿಳಿತಗಳು ಬಂದಿವೆ. ಆಯಾಕಾಲದ ನಾಗರಿಕತೆ ಮತ್ತು ಸಂಸ್ಕೃತಿ ಸಂಸ್ಕಾರವನ್ನು ಅಳೆಯಲು ಕಲೆ ಮತ್ತು ಸಾಹಿತ್ಯ ಮಾನದಂಡಗಳೆಂದು ನಿಸ್ಸಂದೇಹವಾಗಿ ಹೇಳಬಹುದು. ಸಾಹಿತ್ಯಕ್ಕಿಂತಲೂ ಮೊದಲು ಕಲೆ ಹುಟ್ಟಿತೆಂದು ನನ್ನ ಮನವರಿಕೆಯಾಗಿದೆ. ನಿಸರ್ಗವೇ ಕಲಾಮಯವಾಗಿರುವಾಗ ನಿಸರ್ಗದಲ್ಲಿ ಹುಟ್ಟಿ ಬೆಳೆಯುವ ಮಾನವ ಕುಲವು ಇದರಿಂದಲಾದರೂ ಹೊರಗೆ ಇರಬಲ್ಲುದೇ ? ನಿಸರ್ಗದಲ್ಲಿ ಹುಟ್ಟಿ ಬೆಳೆಯುವ ಮಾನವನು ನಿಸರ್ಗದಿಂದಲೇ ಕಲಿಸಲ್ಪಡುವನೆಂದು ನಂಬಲಾಗಿದೆ. ಮನುಷ್ಯನು ಸಾಹಿತ್ಯವಿಲ್ಲದಿದ್ದಾಗ ಕಲಾಮಯಜೀವಿಯಾಗಿದ್ದನು.[೧೦] ಎಂಬಂತೆ ಕಲೆಗಳು ವ್ಯಕ್ತಿನಿಷ್ಠವಾದ ವಾಸ್ತವಿಕತೆಯನ್ನು ವಸ್ತು ನಿಷ್ಠಗೊಳಿಸುತ್ತದೆ. ನಿಸರ್ಗದ ಬಾಹ್ಯಾನುಭಾವಗಳನ್ನು ವ್ಯಕ್ತಿಗತವನ್ನಾಗಿಸುತ್ತವೆ. ಕಲೆಯಲ್ಲಿ ಶಿಕ್ಷಣ ಎಂದರೆ ಅನುಭೂತಿಗಳ ಶಿಕ್ಷಣ ಭಾವನೆಗಳ ಶಿಕ್ಷಣ, ಈ ಶಿಕ್ಷಣವನ್ನು ಅಲಕ್ಷ್ಯ ಮಾಡಿದ ಸಮಾಜ ಯಾವುದೇ ರೂಪ, ನಿಯಂತ್ರಣ ಇಲ್ಲದ ಭಾವನೆಯ ವಶವಾಗುತ್ತದೆ. ಕೆಟ್ಟ ಕಲೆ ಭಾವನೆಯನ್ನು ಹೊಲಗೆಡಿಸುತ್ತದೆ ಆದ್ದರಿಂದ ಕೆಟ್ಟಕಲೆ ಇರುವುದಕ್ಕಿಂತಲೂ ಕಲೆಯೇ ಇಲ್ಲದಿರುವುದು ಉತ್ತಮವೆಂದು ಸುಸ್ಯಾನ್ ಲ್ಯಾಂಗರ್[೧೧] ರವರು ಅಭಿಪ್ರಾಯ ಪಟ್ಟಿರುತ್ತಾರೆ. ಇದು ಕಲೆಯ ಕುರಿತಾದ ಮನಸ್ಸಿನ ಭಾವನೆಗಳು ಒಂದು ಕರೆಯಾದರೆ ಸಮಾಜದಲ್ಲಾಗುತ್ತಿರುವ ಕಲೆಯ ಬೆಳವಣಿಗೆಯ ಕಳಕಳಿ ಮತ್ತು ಆಂತರ್ಯದ ಭಾವದ ಸಂಕೇತ ಹಿನ್ನೆಲೆಯೂ ಕೂಡ.

---

೯. ಡಾ.ಬಿ.ಕೆ.ಹಿರೇಮಠ : ಸೃಷ್ಟಿ, ೨೦೦೩, ಪು.೨೧೩,

೧೦. ಪಿ.ಆರ್.ತಿಪ್ಪೇಸ್ವಾಮಿ(ಪ್ರಸಂ.): ಚಿತ್ರಕಲಾ ಪ್ರಪಂಚ, ಲೇ. ಬಿ.ಎಸ್.ಗೌಡ, ಭಾರತೀಯ ಚಿತ್ರಕಲೆ, ಪು.೧೨೧

೧೧. ಚಿ.ಸು.ಕೃಷ್ಣಸೆಟ್ಟಿ : ಚಿತ್ರ ಚಿತ್ತ, ಪು.೫೯

ಹೀಗೆ ಶತಶತಮಾನಗಳಿಂದಲೂ ಕಲೆಯನ್ನು ಕುರಿತು ನೂರಾರು ಹೇಳಿಕೆಗಳು ವ್ಯಾಖ್ಯೆಗಳು, ಅಭಿಪ್ರಾಯಗಳು ಬಂದಿವೆ. ಬರುತ್ತಿವೆ. ಹೀಗೆ ಇವುಗಳನ್ನೆಲ್ಲಾ ಚರ್ಚಿಸುತ್ತಾ ಹೋದರೆ ಸಾಮಾನ್ಯರಲ್ಲಿ ಗೊಂದಲ ನಿರ್ಮಾಣವಾಗುವಷ್ಟು ಹೇಳಿಕೆಗಳಿವೆ. ವಿಶ್ಲೇಷಣೆಗಳಿವೆ. ಇವುಗಳನ್ನೆಲ್ಲಾ ಪಕ್ಕಕ್ಕಿಟ್ಟು ಒಟ್ಟಿನಲ್ಲಿ "ಕಲಾವಿದನ ಭಾವನೆಗಳ ಕಲಾತ್ಮಕ ಅಭಿವ್ಯಕ್ತಿಯನ್ನು ಕಲೆ" ಎಂದು ಸರಳವಾಗಿ ಹೇಳಬಹುದೆಂದೆನಿಸುತ್ತದೆ. ಅದರಂತೆಯೇ ಮುದ ನೀಡುವಂತಹ ಆಕೃತಿಗಳನ್ನು ಸೃಷ್ಟಿಸುವ ಕಲಾತ್ಮಕ ಪ್ರಯತ್ನವೇ ಕಲೆ ಎಂದೆನ್ನಲೂಬಹುದು. ಕಥೆಗಾರ ಯಶವಂಥ ಚಿತ್ತಾಲರು ಹೀಗೆ ಹೇಳುತ್ತಾರೆ. "ಕಲೆ ಎಂದರೆ ಮುಖ್ಯವಾಗಿ ನಮ್ಮ ಸುಪ್ತಪ್ರಜ್ಞೆಗೆ ನಾವು ಜಾಗೃತ ಸ್ಥಿತಿಯಲ್ಲಿ ; ಎಚ್ಚರ ಅಂಶದಿಂದಾಗಿಯೇ ಅದು ಮಾನವ ಮನಸ್ಸಿನ ಉಳಿದ ಅವಿಷ್ಕಾರಗಳಾದ ಪುರಾಣಗಳು (myths) ಕನಸುಗಳು ಹಾಗೂ ನ್ಯೂರೋಸಿಸ್ (ನರವ್ಯಾಧಿ) ಇವುಗಳಿಂದ ಬೇರೆಯಾಗುತ್ತದೆ. ಹೆಸರಾಂತ ಮನಶಾಸ್ತ್ರಜ್ಞ ಕಾರ್ಲ್ ಯಾಂಗನ್ ಪ್ರಕಾರ ಮನುಷ್ಯನ ಚಿತ್ತ ಎಲ್ಲಾ ಮಾನವೀಯ ಚಟುವಟಿಕೆಗಳಿಗೆ ಸಂಸ್ಕೃತಿ, ನಾಗರೀಕತೆಗಳಿಗೆ ಕೇಂದ್ರಸ್ಥಾನವಾಗಿದೆ. ಈ ಚಟುವಟಿಕೆಗಳ ಮೂಲಕವಾಗಿಯೇ ಮನುಷ್ಯನ ಜಾಗೃತ ಪ್ರಜ್ಞೆಯು ಸುಪ್ತಪ್ರಜ್ಞೆಯ ತತ್ವಗಳನ್ನು ತನ್ನಲ್ಲಿ ನಿರಂತರವಾಗಿ ಅರಗಿಸಿಕೊಳ್ಳುತ್ತಾ ವಿಕಾಸಗೊಳ್ಳುತ್ತದೆ.[೧೨]

ಹೀಗೆ ಕಲೆಯ ಕುರಿತು ಅನೇಕ ಕಲಾವಿದರು ತಮ್ಮದೇ ದಾಟಿಯಲ್ಲಿ ವಿವರಿಸಿರುವುದು, ಹೇಳಿರುವುದು ಸೌಜನ್ಯ ವಾತಾವರಣಕ್ಕೊಂದು ಸಾಕ್ಷಿ ಎನಿಸಿದರೂ, ಕಲಾವಿದರ ಅಭಿವ್ಯಕ್ತಿಯ ಸ್ವರೂಪವನ್ನು ಬದಲಾವಣೆ ಮಾಡಿಲ್ಲ. ಅದು ತನ್ನಿಂದ ತಾನಾಗಿಯೇ ಕಾಲಾನುಕ್ರಮವಾಗಿ ಬದಲಾವಣೆಗೊಳ್ಳುತ್ತಾ ಕಲೆ ಎಂದರೇನು? ಎಂಬ ಪ್ರಶ್ನೆಯ ಬಗೆಗೆ ಯಾವುದೇ ರೀತಿಯ ಸ್ಪಂದನೆಯನ್ನೂ ನೀಡಿಲ್ಲವೆಂಬುದಕ್ಕೆ ಇಂದಿನ ಕಲಾಸೃಷ್ಟಿಗಳೇ ಕಾರಣ[೧೩] ಎಂಬುದಂತೂ ಸತ್ಯ.

ಅದೇ ರೀತಿ ಕಲೆ ಮನುಷ್ಯನ ಮನಸ್ಸನ್ನು ಮುದಗೊಳಿಸಿ ಅವನಲ್ಲಿ ವಿಶಿಷ್ಟವಾದ ಸಂಸ್ಕಾರವನ್ನು ಮೂಡಿಸುತ್ತದೆ. ಮನಸ್ಸನ್ನು ಎತ್ತರದ ಎತ್ತರಕ್ಕೊಯ್ದು ಸಂಸ್ಕಾರಗೊಂಡ, ಹದವಾದ ವ್ಯಕ್ತಿತ್ವವನ್ನು ರೂಪಿಸಲು ನೆರವಾಗುತ್ತದೆ. ಭೌತಿಕ ಜೀವನದ ಹೋರಾಟದಲ್ಲಿ ಸದಾ ತೊಳಲುವ ಮಾನವ ಕಲೆಯನ್ನು ಆರಾಧಿಸಿದಿದ್ದರೆ ಅವನ ಪಾಲಿಗೆ ಮಾನಸಿಕ ಸೌಖ್ಯ ದೂರವಾಗುತ್ತದೆ. ಜೀವನದಲ್ಲಿ ನೆಮ್ಮದಿ ಸಂತೃಪ್ತಿಗಳು ದೊರೆಯದಾಗುತ್ತವೆ. ಅವನಲ್ಲಿ ಮಾನವೀಯ ಗುಣಗಳನ್ನು ಜಾಗೃತಗೊಳಿಸಲು, ಸೌಂದರ್ಯ ಪ್ರಜ್ಞೆಯನ್ನು ಎಚ್ಚರಿಸಲು ಒಳ್ಳೆಯದರ ಕಡೆ ಅವನು ಸದಾ ಆಲೋಚಿಸುವಂತೆ ಮಾಡಲು ಕಲೆ ಒಂದು ಚಿರಂಜೀವಿಯಂತೆ ಅವನ ಪಾಲಿಗೆ ಲಭ್ಯವಾಗುತ್ತದೆ. ಶರೀರದ ಬೆಳವಣಿಗೆಗೆ

೧೨. ಚಿ.ಸು.ಕೃಷ್ಣಸೆಟ್ಟಿ : ಚಿತ್ರ ಚಿತ್ತ, ಪು.೪೯

೧೩. ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ: ಕಲಾವಿದ ಆರ್.ಎಂ.ಹಡಪದ ಒಂದು ಅಧ್ಯಯನ ಪಿಎಚ್.ಡಿ.ಮ.ಪ್ರಬಂಧ ಪು.೧೦೪

ಆಹಾರ ಎಷ್ಟು ಅಗತ್ಯವೋ ಮನಸ್ಸಿನ ಬೆಳವಣಿಗೆಗೆ, ಸಂಸ್ಕಾರಕ್ಕೆ ಕಲೆ ಅಷ್ಟೆ ಅವಶ್ಯಕ[೧೪]ವಾಗಿರುತ್ತದೆ. ಎಂಬಂತೆ ಚಿತ್ರವೂ ಕೂಡ ಒಂದು ದೇಶಬದ್ದ ಕಲೆ ಎಂದು ಗುರುತಿಸಲಾಗುತ್ತದೆ.

ಅದರಂತೆಯೇ ಸಂಗೀತ, ನಾಟಕಗಳನ್ನು ಕಾಲಬದ್ಧ ಎಂದೂ ಗುರುತಿಸುತ್ತೇವೆ.[೧೫] ಚಲನರಹಿತವಾದ ಚಿತ್ರ ಕಾಲಬದ್ಧ ಕಲೆಗಿಂತ ಪ್ರಭಾವಿ ಎಂಬುದನ್ನು ಪ್ರಪಂಚದಲ್ಲಿ ಪ್ರಮುಖ ಚಿತ್ರನೆಲೆಗಳನ್ನು ಆಧರಿಸಿ ಹೇಳಬಹುದಾಗಿದೆ. ಗ್ರೀಕ್ ಕವಿ ಪೊಟಾರ್ಕ್ ಅದಕ್ಕೆಂದೇ ಚಿತ್ರವನ್ನು ನಿಶಬ್ದವಾದ ಕವಿತೆ ಎಂದು ವರ್ಣಿಸುತ್ತಾನೆ. ಒಂದು ಚಿತ್ರ ಒಬ್ಬೊಬ್ಬ ನೋಡುಗನಿಗೆ ವೈವಿಧ್ಯಮಯ ಅನುಭವವನ್ನು ನೀಡಬಹುದಾದ ಸಾಧ್ಯತೆಗಳೇ ಹೆಚ್ಚು. ಅದರಲ್ಲೂ ಇತ್ತೀಚೆಗೆ ಆಧುನಿಕ ಚಿತ್ರಗಳ ಒಲವು ವಿಭಿನ್ನ ಅನುಭವಗಳನ್ನು ನೀಡುವಲ್ಲಿ ಮುಂಚೂಣಿಯಲ್ಲಿವೆ.[೧೬] ಈ ಹಿನ್ನೆಲೆಯಲ್ಲಿ ಕಲೆಯ ಗುಣಾವಶೇಷವನ್ನು ಅಳತೆಯಲ್ಲಿ ಕಂಡುಕೊಂಡು ತನ್ನದೇ ಅಭಿರುಚಿಯನ್ನು ತೋರಿಸುವ ಮಾರ್ಗದಲ್ಲಿ ವರ್ಣಚಿತ್ರಗಳ ಪಾತ್ರ ಬಹುಮುಖ್ಯವಾಗಿರುತ್ತದೆ ಈ ಹಿನ್ನೆಲೆಯಲ್ಲಿ ಚಿ.ಸು.ಕೃಷ್ಣಸೆಟ್ಟಿಯವರು ತಮ್ಮ ಬದುಕಿನುದ್ದಕ್ಕೂ ಚಿತ್ರಿಸಿದ ವರ್ಣಚಿತ್ರಗಳನ್ನು ಮುಖ್ಯವಾಗಿ ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ವರ್ಣಗಳು**

ಖನಿಜಗಳು, ಸಸ್ಯಗಳು ಇಲ್ಲವೇ ಪ್ರಾಣಿಗಳಿಂದ ವರ್ಣಗಳನ್ನು ತಯಾರಿಸುತ್ತಾರೆ. ಕಾಡಿಗೆ ಅಥವಾ ಇಂಗಾಲದಿಂದ ಕಪ್ಪು ಬಣ್ಣವನ್ನು ಮಣ್ಣು ಮತ್ತು ಖನಿಜಗಳಿಂದ ಹಳದಿ ಮತ್ತು ಹಸಿರು ಬಣ್ಣಗಳನ್ನು ಒಂದು ಜಾತಿಯ ಕಾಚಿನೀಲಿ ಎಂಬ ಕಿಟದಿಂದ ಕಡುಗೆಂಪು ಅಥವಾ ರಕ್ತವರ್ಣವನ್ನು ನಸುಹಳದಿಯ ಹೂವು ಬಿಡುವ ಒಂದು ಜಾತಿಯ ಅಡರು ಬಳ್ಳಿಯ ಬೇರುಗಳಿಂದ "ಮ್ಯಾಡರ್" ವರ್ಣವನ್ನು ತಯಾರಿಸಲಾಗುತ್ತದೆ. ಹಿಂದೆ ಪ್ರತಿಯೊಬ್ಬ ಕಲಾವಿದ ಇಲ್ಲವೇ ಅವನ ಸಹಾಯಕನು ತನಗೆ ಬೇಕಾದಂತೆ ಕುಟ್ಟಿ, ಅರೆದು ನುಣ್ಣಗೆ ಮಾಡಿ ಬಣ್ಣಗಳನ್ನು ತಯಾರಿಸಿಕೊಳ್ಳಬೇಕಾಗುತ್ತಿತ್ತು. ಆದರೆ ಈಗ ಎಲ್ಲಾ ತರಹದ ಬಣ್ಣಗಳೂ ಬಳಕೆಗೆ ಸಿದ್ಧವಾದ ರೂಪದಲ್ಲಿಯೇ ದೊರೆಯುತ್ತವೆ. ಕಾಲಾನುಕ್ರಮದಲ್ಲಿ ಬಣ್ಣಗಳ ಬಳಕೆಯ ವಿಧಾನವು ಬೇರೆ ಬೇರೆ ಮಾಧ್ಯಮಗಳಲ್ಲಿ ರೂಢಿಗೆ ಬಂದಿತು. ಆಯಾ ಮಾಧ್ಯಮಗಳಿಗನುಸಾರವಾಗಿ ವರ್ಣ ಚಿತ್ರಣ ವಿಧಾನ (painting Method) ವನ್ನು ಗುರುತಿಸಲಾಗುತ್ತದೆ. ಉದಾಹರಣೆಗೆ ಮೇಣವರ್ಣ ವಿಧಾನ, ಮೊಟ್ಟೆ, ತೈಲವರ್ಣವಿಧಾನ, ಜಲವರ್ಣವಿಧಾನಗಳು, ಮೇಣ, ಮೊಟ್ಟೆ, ತೈಲ ಮತ್ತು ಜಲ (ನೀರು)ಗಳು ಮಾಧ್ಯಮಗಳಾಗಿವೆ. ಬಣ್ಣ ಇಲ್ಲವೇ ಕುಟ್ಟಿ, ಅರೆದು, ನುಣ್ಣಗೆ ಮಾಡಿದ ಬಣ್ಣದ ಹುಡಿಗಳನ್ನು ಇಂಥ ಮಾಧ್ಯಮಗಳಲ್ಲಿ ಬೆರೆಸಿ ವರ್ಣಚಿತ್ರಗಳನ್ನು ಚಿತ್ರಿಸಲಾಗುತ್ತದೆ.

---

೧೪. ಪಿ.ಆರ್.ತಿಪ್ಪೇಸ್ವಾಮಿ (ಪ್ರ.ಸಂ.) ಚಿತ್ರಕಲಾ ಪ್ರಪಂಚ, (ಲೇ.ಜಿ.ಎಂ.ಪರಮಶಿವಯ್ಯ) ಪು.ಸಂ.೩೨೯

೧೫. ಪಿ.ಆರ್.ತಿಪ್ಪೇಸ್ವಾಮಿ (ಪ್ರ.ಸಂ.) ಚಿತ್ರಕಲಾ ಪ್ರಪಂಚ, (ಲೇ.ಜಿ.ಎಂ.ಪರಮಶಿವಯ್ಯ) ಪು.ಸಂ.೩೨೯

೧೬. ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಂ.ಹಡಪದ ಒಂದು ಅಧ್ಯಯನ, ಪು.ಸಂ. ೧೦೪

ಯೋಜನೆ, ಪ್ರಕೃತಿಚಿತ್ರ, ಭಾವಚಿತ್ರ ಹಾಗೂ ಅಮೂರ್ತ ಚಿತ್ರಗಳನ್ನು ಪ್ರಮುಖವಾಗಿ ಇಲ್ಲಿ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದ ಮುಖ್ಯ ಉದ್ದೇಶದಿಂದ ವಿಷಯಕ್ಕೆ ಅನುಗುಣವಾಗಿ ವರ್ಗೀಕರಿಸಿದೆ. ಈ ಕೆಳಗಿನ ಮಾಧ್ಯಮವಾರು ಕಲಾಕೃತಿಗಳನ್ನು ಪ್ರತ್ಯೇಕಿಸಿ ಪ್ರತಿ ಕಲಾಕೃತಿಯ ವಿಶ್ಲೇಷಣೆಯನ್ನು ಮಾಡಲಾಗಿರುತ್ತದೆ.

**ಮಾಧ್ಯಮಗಳು**

೧. ರೇಖಾಚಿತ್ರಗಳು

೨. ಜಲವರ್ಣ

೨. ಅಕ್ರಲಿಕ್

೩. ಗ್ರಾಫಿಕ್

೪. ತೈಲವರ್ಣ

**೧. ರೇಖಾ ಚಿತ್ರಗಳು**

ಚಿತ್ರಕಲೆ ಪ್ರಥಮವಾಗಿ ರೂಪುಗೊಳ್ಳುವುದು ರೇಖಾಚಿತ್ರಗಳಿಂದ ರೇಖೆಯು ಮಾನವನ ಸಾಮಾಜಿಕ ಬದುಕನಷ್ಟೇ ಪ್ರಾಚೀನವಾದದ್ದು ಎಂದು ಅ.ಲ.ನ. ಹಾಗೂ ಬಿ.ವಿ.ಕೆ.ಶಾಸ್ತ್ರೀ, ಇನ್ನು ಹಿರಿಯ ಕಲಾವಿದರು ತಮ್ಮ ಲೇಖನಗಳಲ್ಲಿ ಪ್ರಸ್ತಾಪಿಸುತ್ತಾರೆ. 'ಗೆರೆ ರೇಖೆಯನ್ನು' ಎಂದಿದ್ದಾರೆ. ಮಂಗರಾಜ ಚನ್ನ ನಿಘಂಟಿನಲ್ಲಿ ಸಂಸ್ಕೃತದ ರೇಖೆಯೇ ಕನ್ನಡದಲ್ಲಿ ಗೆರೆ ಅಥವಾ ಗೀಚು[೧೭] ಎಂದಾಗಿದೆ. ಇದನ್ನು ಇಂಗ್ಲೀಷ್‌ನಲ್ಲಿ ಲೈನ್ ಎಂದು ಕರೆಯಲಾಗುತ್ತದೆ.

ಗೆರೆ ಅಥವಾ ರೇಖೆ ಈ ಪದಗಳನ್ನು ಅನೇಥದಲ್ಲಿ ಬಳಸಬಹುದು. ಹಿಂದೆ ಚಿತ್ರಕಲೆಯಲ್ಲಿ ಮಾತ್ರ ಅದು ಎರಡು ಬಿಂದುಗಳನ್ನು ಜೋಡಿಸುವ ವಕ್ರ ಅಥವಾ ನೇರವಾದ ಪಥವೆಂದು ಪರಿಗಣಿಸಲಾಗುತ್ತದೆ. ಗಣಿತ ಶಾಸ್ತ್ರದಲ್ಲಿ ಬಿಂದುವಿಗಾಗಲೀ ಬಿಂದುಗಳನ್ನು ಕೂಡಿರುವ ರೇಖೆಗಾಗಲೀ, ನೈಜ ಅಸ್ತಿತ್ವವೇ ಇದರಲಿಲ್ಲ. ಅವುಗಳು ಮಾನವನ ಕಲ್ಪನೆಗೆ ಮಾತ್ರ ಅಸ್ತಿತ್ವ ಪಡೆದಿರುತ್ತದೆ. ಇಂತಹ ಒಂದು ಕಾಲ್ಪನಿಕ ಪರಿಭಾವನೆಯನ್ನು ಚಿತ್ರಕಲೆಯಲ್ಲಿ ಸಹಕಾರಗೊಂಡು ರೇಖೆ ಎಂದೆನಿಸಿಕೊಳ್ಳುತ್ತದೆ. ಒಂದು ರೇಖೆಯು ಆರಂಭ ಮತ್ತು ಕೊನೆಯನ್ನು ಸೂಚಿಸುವ ಅದಕಾರದ ಪಥ, ಇಂಥ ಪಥದಲ್ಲಿ ಕ್ರಮಿಸುವ ಮೂಲಕ ಚಿತ್ರಕಲಾವಿದನು ಒಂದು ಆಕೃತಿಯನ್ನೋ, ರೂಪವನ್ನೋ ದೃಗ್ಗೋಚರಗೊಳಿಸಲು ಯತ್ನಿಸುತ್ತಾನೆ. ಆದರೆ ಅವನ ಮನೋ ಲೋಕದಲ್ಲಿ ಮೂಡುವ ಭ್ರಮರ ಪರಿಭಾವನೆಯನ್ನು ಮೂರ್ತಗೊಳಿಸುತ್ತಾನೆ. ಹೀಗೆ ಮೂರ್ತಗೊಳ್ಳುವ ಗೆರೆಯು ನೈಜವಾದುದನ್ನು ಚಿತ್ರಿಸುವುದು ಅಥವಾ ಒಂದು ಪರಿಕಲ್ಪನೆಯನ್ನು ಸಾಂಕೇತಿಕವಾಗಿ ರೂಪ ಆಕಾರಗಳಲ್ಲಿ ಧ್ವನಿಸಬಹುದು.

೧೭. ರೇಖಾಚಿತ್ರ ಬಿ.ವಿ.ಕೆ.ಶಾಸ್ತ್ರೀ (ಸಂ) ಪು.೩

ಕಲಾವಿದನ ಕೈಯಿಂದ ಮೂಡುವ ರೇಖೆಗಳು ರೂಪ ಆಕಾರಗಳ ಮೂಲಕ ಸೌಂದರ್ಯವನ್ನು ಸೃಷ್ಟಿಸುತ್ತವೆ. ಹಾಗೆ ನೋಡಿದರೆ ಸೌಂದರ್ಯ ಎಂಬ ಪದವೇ ಅತ್ಯಂತ ಅಮೂರ್ತವಾಗಿದ್ದು ಭಾವಕ್ಕೆ ಮಾತ್ರ ನಿಲುಕುವಂಥದ್ದು ಅದನ್ನು ಬುದ್ಧಿಪೂರ್ವಕವಾಗಿ ಪರಿಶೀಲಿಸಿ, ವಿಶ್ಲೇಷಿಸಿ ವಿವೇಚಿಸುವುದು ಅತ್ಯಂತ ಕಠಿಣ ಸಾಹಸವೇ.[೧೮]

ರೇಖಾಚಿತ್ರಗಳು ಯಾವುದೇ ಒಂದು ದೇಶಕ್ಕೆ ಸೀಮಿತವಾಗಿಲ್ಲ. ಸ್ಪೇನ್, ಜಪಾನ್, ಚೀನಾ ಭಾರತ ದೇಶಗಳನ್ನೊಳಗೊಂಡು ಆಫ್ರಿಕಾ, ಆಸ್ಟ್ರೇಲಿಯಾ, ಯೂರೋಪ್ ಹಾಗೂ ಏಶಿಯಾ ಖಮಡಗಳ ಅನೇಕ ದೇಶಗಳ ಆದಿಮ ರೇಖಾಚಿತ್ರಗಳು ಹೇರಳವಾಗಿ ಕಾಣಸಿಗುತ್ತವೆ. ಭಾರತದ ಉದ್ದಗಲಕ್ಕೂ ಅನೇಕ ಪರ್ವತ ಶ್ರೇಣಿಗಳಲ್ಲಿ ಸಾವಿರಾರು ಗುಹಾಚಿತ್ರಗಳನ್ನು ಕಾಣಬಹುದು. ಈ ಎಲ್ಲ ಚಿತ್ರಗಳು ಆ ಕಾಲದ ಮಾನವರ ಸಾಂಸ್ಕೃತಿಕ ಚಟುವಟಿಕೆಗಳನ್ನು ಬಿಂಬಿಸುತ್ತವೆ ಅವರ ದೈನಂದಿನ ಬದುಕಿನಲ್ಲಿ ಅನುಭವಕ್ಕೆ ಬರುತ್ತಿದ್ದ ಪಶು–ಪ್ರಾಣಿಗಳು ರೇಖಾಚಿತ್ರಗಳಲ್ಲಿ ಮೂಡಿಬಂದಿರುವುದನ್ನು ನೋಡಬಹುದು. ಹಾಗಾಗಿ ಕಲಾವಿದೆ ಕಾಡೆಮ್ಮೆ, ಜಿಂಕೆ ಮುಂತಾದ ಚಿತ್ರಗಳು ನಮ್ಮ ಕರ್ನಾಟಕದಲ್ಲಿಯೂ ಕೂಡ ಕಾಣಸಿಗುತ್ತವೆ.

ಈ ರೇಖೆಗಳ ಬಗ್ಗೆ ಅ.ಲ.ನರಸಿಂಹನ್ ಅವರು ವಿಸ್ತೃತವಾಗಿ ಹೀಗೆ ಹೇಳುತ್ತಾರೆ. "ದಕ್ಷಿಣ ಚಿತ್ರದುರ್ಗದಿಂದ ಆರಂಭವಾಗಿ ಉತ್ತರದ ಹೈದ್ರಾಬಾದ್ ಕರ್ನಾಟಕದ ಜಿಲ್ಲೆಗಳನ್ನು ಹಾಗೂ ಕೃಷ್ಣ ತುಂಗಭದ್ರಾ ಹಾಗೂ ಭೀಮಾನದಿ ದಂಡೆಯಲ್ಲಿ ವಿಜಯಪುರ ಜಿಲ್ಲೆಯವರೆಗೂ ವ್ಯಾಪಿಸಿರುವ ರಾಯಚೂರಿನ ಗುಡ್ಡಗಳ ಶ್ರೇಣಿಯಲ್ಲಿ ಇಪ್ಪತ್ತಕ್ಕೂ ಹೆಚ್ಚು ಕೇಂದ್ರಗಳ ಸುಮಾರು ಎಪ್ಪತ್ತೈದು ಸ್ಥಳಗಳಲ್ಲಿ ನೂರಾರು ಗುಹಾಚಿತ್ರಗಳನ್ನು ಗುರುತಿಸಿ ಅ.ಸುಂದರ್ ಅವರು ಪುನರ್ವೀಕ್ಷಣೆ ಮಾಡಿ ಹಲವಾರು ಸಂಶೋಧನಾ ಲೇಖನಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಅರ್ಧದಷ್ಟು ಕೇಂದ್ರಗಳು ರಾಯಚೂರು ಜಿಲ್ಲೆಯೊಂದರಲ್ಲಿಯೇ ಇವೆ. ಇಲ್ಲಿಯ ಗುಹಾಚಿತ್ರಗಳು ನೂರು ವರ್ಷಗಳಷ್ಟು ಹಿಂದೆಯೇ ಸಂಶೋಧಕರ ದೃಷ್ಟಿಗೆ ಬಂದಿದ್ದರೂ ಅವುಗಳಲ್ಲಿಯ ವಿಧಿಯ ವೈವಿಧ್ಯ ಕಲಾತ್ಮಕತೆ ಕುರಿತು ಅಧ್ಯಯನ ಆರಂಭವಾದದ್ದು ಈಚೆಗಷ್ಟೇ" ಇವುಗಳು ತಾಮ್ರ ಶಿಲಾಯುಗದ ಕಾಲದವಾಗಿದ್ದು ಜಿಂಕೆ. ಎತ್ತು, ಆಕಳು, ಹುಲಿ, ಚಿರತೆ, ಆನೆ, ಮೊಸಳೆ, ನವಿಲು ಇತ್ಯಾದಿ ಪ್ರಾಣಿಗಳ ಬೇಟೆ, ನೃತ್ಯ ಮಾಡುತ್ತಿರುವ ಹಾಗೂ ಬೇಟೆಯಾಡುತ್ತಿರುವ ಜನರ ಗುಂಪುಗಳು ಮತ್ತು ಅನೇಕ ಜ್ಯಾಮಿತೀಯ ಆಕಾರಗಳು ಕಂಡುಬರುತ್ತವೆ. ಇಪ್ಪತ್ತೈದಕ್ಕೂ ಹೆಚ್ಚು ಮಂದಿ ಕೈ ಕೈ ಹಿಡಿದು ಕೊನೆಯಲ್ಲಿರುವವರು ಕೈಗೊಡಲಿಯಂತಹ ಆಯುಧ ಹಿಡಿದು ನಿಂತಿರುವಂತೆ ಚಿತ್ರಿಸಿರುವ ಹಾವು ಸಾಲುಗಳು ಇಂದಿನ ಸೋಮು (ಸೋಮು ಬೇಟೆ ಎಂದರೆ ಅಡಗಿರೋ ಪ್ರಾಣಿಗಳನ್ನು ಎಬ್ಬಿಸಿ ಆಡುವ ಬೇಟೆ) ಬೇಟೆಯಂತೆ

---

೧೮. ಜಿ.ಎಸ್.ಶಿವರುದ್ರಪ್ಪ : ಸೌಂದರ್ಯ ಸಮೀಕ್ಷೆ (ಮೊದಲ ಮಾತು) ಪು.೫


ಚಿತ್ರಕೃತಿಗಳು
ರೇಖಾಚಿತ್ರ ಮಾಧ್ಯಮ
ಜಲವರ್ಣ ಮಾಧ್ಯಮ
ಅಕ್ರಾಲಿಕ್ ಮಾಧ್ಯಮ
ಗ್ರಾಫಿಕ್ ಮಾಧ್ಯಮ
ತೈಲವರ್ಣ ಮಾಧ್ಯಮ
ನೈಜಚಿತ್ರಗಳು
ಅಮೂರ್ತಚಿತ್ರಗಳು
ನೈಜಚಿತ್ರಗಳು
ಅಮೂರ್ತಚಿತ್ರಗಳು
ಅಮೂರ್ತ ಚಿತ್ರಗಳು
ಸಮ್ಮಿಶ್ರ ಚಿತ್ರಗಳು
ಶೀರ್ಷಿಕೆ ರಹಿತ
ನೈಜ ಚಿತ್ರಗಳು
ಅಮೂರ್ತ
ನೈಜ ಚಿತ್ರಗಳು
ಅಮೂರ್ತ
ನೈಜ ಚಿತ್ರಗಳು
ಅಮೂರ್ತ
ನೈಜ ಚಿತ್ರಗಳು
ಅಮೂರ್ತ

ಕಾಣುತ್ತವೆ. ಕುದುರೆಯ ಮುಖಕ್ಕೆ ಹಾಕಿರುವ ಕಡಿವಾಣ ಅದರ ತಲೆಯ ಮೇಲಿಂದ ಹಾಯ್ದು ಸವಾರ ಕೈಯಲ್ಲಿ ಇರುವಂತೆ ರೂಪಿಸುವುದು, ಅದನ್ನು ಲೋಹದಿಂದ ಮಾಡಿದ್ದರಬೇಕೆಂಬ ಭ್ರಮೆ ಉಂಟಾಗುತ್ತದೆ ಎಂಬುದು ಸಂಶೋಧಕರ ಅಭಿಪ್ರಾಯಿಸುತ್ತಾರೆ.

ಪ್ರಾಣಿಗಳ ಆಕೃತಿಗಳ ಮೇಲೆ ಬಾಣವನ್ನು ಹೊಡೆದಂತೆ ಚಿತ್ರಿಸಿರುವ ಹಾಗೂ ಮೈಮೇಲೆ ಹಲವಾರು ರೇಖೆಗಳನ್ನು ಹಾಕಿರುವಂತೆ ಇರುವ ಮುಖವಾಡ ಧರಿಸಿರುವ ಮನುಷ್ಯರ ಚಿತ್ರಗಳು ಮಾಂತ್ರಿಕ ಆಚರಣೆಯನ್ನುಕುರಿತ ಚಿತ್ರಗಳಾಗಿದ್ದಿರಬೇಕೆಂಬ ಅಭಿಪ್ರಾಯವಿದೆ. ಸಾಮಾನ್ಯವಾಗಿ ದುರ್ಗಮವಾದ ಸ್ಥಳಗಳಲ್ಲಿ ಕೈ ಎಟಕಿಗಿಂತ ಎತ್ತರದಲ್ಲಿ ಕೆಲವೊಮ್ಮೆ ಅಟ್ಟಣೆಗೆ ಬಿಡಿಸಿ ರಚಿಸಬಹುದಾದ ಈ ಚಿತ್ರಗಳನ್ನು ಕೆಮ್ಮಣ್ಣಿನೊಂದಿಗೆ ರಕ್ತ, ಅಥವಾ ವನಸ್ಪತಿಯನ್ನು ಸೇರಿಸಿ ತಯಾರಿಸಿದ ಬಣ್ಣಗಳನ್ನು ಬಳಸಿ ಚಿತ್ರಿಸಿದಂತಿದೆ. ಹಿಂದೆ ಅಳತೆ ಆಕಾರದ ಹಲವಾರು ನೆರಳು ಚಿತ್ರಗಳನ್ನು ರಚಿಸಲು ಚರ್ಮ ಅಥವಾ ಎಲೆಗಳಲ್ಲಿ ಆಕಾರ ಕತ್ತರಿಸಿಕೊಂಡು ಅವುಗಳ ಆಧಾರದಿಂದ ಹೊರರೇಖೆಗಳನ್ನು ಹಾಕಿ ಹಿಗ್ಗುಗಳನ್ನು ತುಂಬಿಸಿದಂತಿದೆ. ಕಪ್ಪುಗಲ್ಲಿನಲ್ಲಿ ವೃಷಭ ಹಾಗೂ ಅಂಗಗಳು ಅಕ್ಕಿಹಾಳದಲ್ಲಿಯ ಅರ್ಧನಾರೀಶ್ವರ ಇತ್ಯಾದಿ ಚಿತ್ರಗಳು ಆದಿಮ ಚಿತ್ರಗಳಿಂದ ಸಾಂಪ್ರದಾಯಿಕ ಚಿತ್ರಗಳ ಕಾಲಕ್ಕೆ ಬರುತ್ತಿದ್ದ ಅವಧಿಯದ್ದಾಗಿರಬೇಕು. ಅಂತೆಯೇ ವಿಜಯನಗರ ಕಾಲದಲ್ಲೂ ಶಿಲಾಶ್ರಯಗಳಲ್ಲಿ ರಚಿಸಿದ ಚಿತ್ರಗಳು ದೊರೆಯುವರಾದರೂ ಅವು ಆದಿಮ ಚಿತ್ರಗಳಾಗುವುದಿಲ್ಲ. ಸರಳವಾದ ಸತ್ವಶಲಿಯಾದ, ಭಾವಸಂಕೇತಗಳಲ್ಲಿ ಪರಿಣಾಮಕಾರಿಯಾದ ಚಿತ್ರ ಲಕ್ಷಣಗಳೇ ಮುಂದಿನ ಇತಿಹಾಸ ಕಾಲದ ಚಿತ್ರ, ಶಿಲ್ಪಗಳಲ್ಲಿ ಮುಂದುವರೆದಿವೆಯೆಂದು ಅ.ಸುಂದರ್ ಅವರು ತಿಳಿಸುತ್ತಾರೆ.[೧೯]

**ಚಿ.ಸು.ಕೃಷ್ಣಸೆಟ್ಟಿ ಅವರ ರಚಿತ ರೇಖಾ ಚಿತ್ರಗಳು**

೧. ಇದು ರೇಖಾಚಿತ್ರವಾಗಿದ್ದು, ಕಾಲೇಜ್ ಪರಿಸರದಲ್ಲಿ ರಚಿಸಿದ ಚಿತ್ರವಾಗಿರುತ್ತದೆ. ಈ ಚಿತ್ರದ ರಚನೆ ಅಪ್ಪಟ ಅಕಾಡೆಮಿಕ್ ನೆಲೆಯಲ್ಲಿರುವುದನ್ನ ಕಾಣಬಹುದು. ಆದರೆ ಪೆನ್ಸಿಲ್‌ನ ಬಳಕೆಯಿಂದ ಚಿತ್ರಿಸಿದ ಸ್ತ್ರೀ ವ್ಯಕ್ತಿಚಿತ್ರಣದಲ್ಲಿ ರೇಖೆಗಳಿಗೆ ಜೀವ ತುಂಬಿದ್ದಾರೆ. ಇಲ್ಲಿ ಒಬ್ಬ ಯುವಸ್ತ್ರೀ ಕುಳಿತುಕೊಂಡಿದ್ದು, ಅಪ್ಪಟ ಭಾರತೀಯ ನಾರಿಯಂತೆ ಅಸನ್ಮುಖತೆಯನ್ನು ಕಾಣಬಹುದು. ಅನುಭವದ ಗೀಚುವಿಕೆಗೆ ಈ ಚಿತ್ರ ಸಾಕ್ಷಿಯಾದಂತಿದೆ. ಅಷ್ಟರ ಮಟ್ಟಿಗೆ ಚಿತ್ರದಲ್ಲಿ ಸೌಂದರ್ಯ ತುಂಬಿರುತ್ತದೆ.

೨. ಚಿಂತನೆಯಲ್ಲಿ ಕುಳಿತಿರುವ ಬಾಲಕಿಯಂತಿರುವ ಚಿತ್ರ ಇದಾಗಿದ್ದು, ಪೆನ್ಸಿಲ್‌ನಿಂದ ರಚಿಸಿದ ಚಿತ್ರವಾಗಿರುತ್ತದೆ. ಮುಖದಲ್ಲಿ ಅವಳ ಭಾವನೆಗಳು ಸೇರೆಯಾಗಿದ್ದು, ನೊಡುಗರಲ್ಲಿ ಚಿಂತಿಸುವ

---

೧೯. ಬಿ.ವಿ.ಕೆ.ಶಾಸ್ತ್ರಿ (ಸಂ): ರೇಖಾಚಿತ್ರ ಪು.೭–೮

ಚಿತಿಸುವ ನೆನಪನ್ನು ನೀಡಿದ ಅನುಭವ ಆದಂತಾಗುತ್ತದೆ. ಇಲ್ಲಿನ ರೇಖೆಗಳಲ್ಲಿ ಭಾರ ಹೊತ್ತಿರುವಂತೆ ಕಂಡರೂ ಭಾವನೆಗೆ ತಕ್ಕಂತೆ ಭಾವಚಿತ್ರವನ್ನು ಕಲಾವಿದರೂ ರಚಿಸಿದ್ದಾರೆ ಎನ್ನಬಹುದು.

೩. ವೃದ್ಧ ವ್ಯಕ್ತಿಯ ಚಿತ್ರವಾಗಿದ್ದು ಪೆನ್ಸಿಲ್ ಬಳಸಿ ಚಿತ್ರಿಸಿದ ಚಿತ್ರ ಇದ್ದು ಅಕಾಡೆಮಿ ಶೈಲಿಯನ್ನು ಹೊಂದಿದ ಚಿತ್ರವಾಗಿದೆ. ನೈಜತೆಗೆ ಹತ್ತಿರವಿರುವ ಹಾಗೆ ಚಿತ್ರಿಸಲಾಗಿದೆ. ಅವನ ಬಡಕಲು ದೇಹ ಹಾಗೂ ಕುಳಿತಿರುವ ಬಂಗಿ ಎಂತಹವರನ್ನು ವಿಸ್ಮಯವೆನಿಸುವ ಹಾಗೇ ರಚಿಸಿದ್ದಾರೆ. ವಿಶೇಷವೆಂದರೆ ಮೂಳೆಗಳು ಅವನ ಮುಖದ ಭಾವನೆಗಿಂತ ಹೆಚ್ಚು ಸ್ಪಷ್ಟತೆಯನ್ನು ಹೊಂದಿದ್ದು ಮುಖದಲ್ಲಿಯು ಸಹ ಹಸನ್ಮುಖ ಗುಣವನ್ನು ಹೊರ ಹಾಕುವುದರಲ್ಲಿ ಯಶಸ್ವಿಯಾಗಿರುತ್ತದೆ.

೪. ಈ ಚಿತ್ರದಲ್ಲಿಯೂ ಸಹ ವ್ಯಕ್ತಿಯ ಅನಾಟಮಿಗೆ ಹೆಚ್ಚು ಪ್ರಾಮುಖ್ಯತೆ ನೀಡಲಾಗಿದೆ. ಇದು ಪೆನ್ಸಿಲ್‌ನ ಮಾಧ್ಯಮದಲ್ಲಿ ರಚಿತವಾದ ಚಿತ್ರ ಅಕಾಡೆಮಿಯ ಶೈಲಿಯಲ್ಲಿ ಇದನ್ನು ಕಾಣಬಹುದು. ಹಿಂದಿನ ಚಿತ್ರಕ್ಕಿಂತ ಸ್ವಲ್ಪ ವಯಸ್ಸಿನಲ್ಲಿ ಯುವಕನಂತೆ ಕಂಡರು ಅವನ ಮುಖ ಹಾಗೂ ದೇಹದಲ್ಲಿನ ಮೂಳೆಗಳಿಗೆ ಹೆಚ್ಚು ಪ್ರಧಾನವಾಗಿ ಚಿತ್ರದಲ್ಲಿ ತೊರಿಸಲಾಗಿದೆ. ಇಲ್ಲಿ ನಿಧಾನ ಹಾಗೂ ವೇಗ ಎರಡು ರೀತಿಯಲ್ಲಿ ರಚನೆಯಾಗಿರುವುದನ್ನು ಕಾಣಬಹುದು. ನೆರಳು, ಬೆಳಕಿನ ಸಂಯೋಜನೆ ಉತ್ತಮವಾಗಿದೆ. ಈ ಚಿತ್ರ ಅಕಾಡೆಮಿಕ್ ಸ್ಪರ್ಶಗಳನ್ನು ಒಳಗೊಂಡ ಉತ್ತಮ ವ್ಯಕ್ತಿ ಚಿತ್ರಣ. ವಿವರವಾದ ಭಾವರಚನೆ ಯಥಾವತ್ತಾಗಿ ಪಾಲಿಸಲಾಗದ ಪ್ರಾಕೃತಿ ಇದು. ಇದರಲ್ಲಿ ಪಾರದರ್ಶಕ ಹಾಗೂ ಅಪಾರದರ್ಶಕವಾಗಿ ಬಳಸಿಕೊಳ್ಳುತ್ತ ವ್ಯಕ್ತಿಯ ಬಾಹ್ಯ ಚಹರೆಗೆ ಹಾಗೂ ನಿಂತಿರುವ ಭಂಗಿಗೆ ಪ್ರಾಧಾನ್ಯತೆ ನೀಡಿದ ಉತ್ತಮ ವ್ಯಕ್ತಿ ಚಿತ್ರಣ ಉಡುಪನ್ನು ಅತೀವ ಎಚ್ಚರದಿಂದ ರೂಪಿಸಲಾಗಿದೆ. ಬಟ್ಟೆಯ ಸುಕ್ಕು ಹಾಗೂ ವರ್ಣಗಳನ್ನು ಬಗೆ ಬಗೆಯಲ್ಲಿ ತೋರಿಸುವ ಪ್ರಯತ್ನವನ್ನು ಮಾಡಲಾಗಿದೆ. ಕುಂಚದ ಬೀಸುಗಳು ಅತೀ ಸೂಕ್ಷ್ಮವಾಗಿ ಕಾಣಬಹುದು. ಕುಂಚದ ಬೀಸುಗಳು ಅತಿ ಸೂಕ್ಷ್ಮ ಹಾಗೂ ಘಡ ಎರಡು ರೀತಿಯಲ್ಲಿವೆ. ಕೆಂಪು ಚರ್ಮದ ವರ್ಣಗಳನ್ನು ಯಥಾವತ್ತಾಗಿ ಮೂಡಿರುವ ಬಗೆಯು ಇಲ್ಲಿದೆ. ಹಾಗೆಯೇ ರೂಪದರ್ಶವನ್ನು ಕೈಯಲ್ಲಿ ಹಿಡಿದುಕೊಂಡಿರುವ ಕೊಲು ನಿಂತಿರುವ ಭಂಗಿ ಆಕೃತಿಯ ಅಂಗಾಂಗಳನ್ನು ವಿವರಪೂರ್ಣವಾಗಿರುವ ಆಶಯವು ಇಲ್ಲಿ ಪ್ರಕಟವಾಗಿದೆ. ಹಿನ್ನೆಲೆಯಲ್ಲಿ ವ್ಯಕ್ತಿಯ ಮುಖದ ವರ್ಣಗಳನ್ನು ಕಾಣಬಹುದು.

**೧. ಜಲವರ್ಣ(water-colour)**

ಜಲವರ್ಣ ಚಿತ್ರಗಳನ್ನು ಸಾಮಾನ್ಯವಾಗಿ ಕಾಗದಗಳ ಮೇಲೆ ಕೆಲವು ವೇಳೆ ರೇಷ್ಮೆ ಬಟ್ಟೆ, ಹಸ್ತಿದಂತ ಇಲ್ಲವೇ ಎಲುಬುಗಳ ಮೇಲೆ ಚಿತ್ರಿಸುತ್ತಾರೆ. ಬಣ್ಣಗಳನ್ನು ನೀರಿನಲ್ಲಿ ಮಿಶ್ರ ಮಾಡಿ

ಚಿತ್ರಗಳನ್ನು ಚಿತ್ರಿಸುವುದೇ ಜಲವರ್ಣ ವಿಧಾನ. ಬಹುದಿನಗಳಿಂದಲೂ ರೇಖಾಚಿತ್ರಗಳಿಗೆ (Drawings) ಜಲವರ್ಣಗಳಿಂದ ಮುಕ್ತಾಯ ಸ್ಪರ್ಶ(Finishing touches) ಗಳನ್ನು ಕೊಡಲಾಗುತ್ತಿತ್ತೆಂಬುದನ್ನು ಲಿಯೋನಾರ್ಡೋ ಡಾ ವಿನ್ಸಿ ಮತ್ತು ಡ್ಯೂರರ್ ಅವರ ಅಸಂಖ್ಯಾತ ರೇಖಾಚಿತ್ರಗಳಿಂದ ತಿಳಿಯಬಹುದಾಗಿದೆ. ಈಗಲೂ ಈ ಪದ್ಧತಿಯೂ ರೂಢಿಯಲ್ಲಿರುತ್ತದೆಯಲ್ಲದೆ ಕಿರುವರ್ಣಚಿತ್ರಗಳನ್ನು (miniature paintings) ಹೆಚ್ಚಾಗಿ ಜಲವರ್ಣ ಮಾಧ್ಯಮದಲ್ಲಿಯೇ ಚಿತ್ರಿಸಲಾಗುತ್ತದೆ ಎಂಬುದು ಸರ್ವವಿದಿತ.

ಇಂಗ್ಲೆಂಡ್‌ನಲ್ಲಿ ೧೮ನೇ ಶತಮಾನದ ಕೊನೆಗೆ ನಿಸರ್ಗ ದೃಶ್ಯಚಿತ್ರ (landscape) ಗಳನ್ನು ಚಿತ್ರಿಸುವ ಕಲಾವಿದರ ತಂಡವೊಂದು ಉದಯಿಸಿತು. ಈ ತಂಡದ ಕಲಾವಿದರೇ ಈ ವಿಧಾನದಲ್ಲಿ ಘನವಂತರಾದ ಯುರೋಪಿಯನ್ ವರ್ಣಚಿತ್ರಕಾರರಾಗಿದ್ದರೆನ್ನಬಹುದು. ಜಲವರ್ಣ ಮಾಧ್ಯಮವು ಇನ್ನುಳಿದ ಯಾವುದೇ ಮಾಧ್ಯಮಗಳಿಗಿಂತಲೂ ನಿಸರ್ಗ ದೃಶ್ಯ ಚಿತ್ರ ಕಲಾಕೃತಿಗಳ ರಚನೆಗೆ ಅತ್ಯುತ್ತಮವಾದ ಮಾಧ್ಯಮವಾಗಿದೆಯಲ್ಲದೆ ಬಹು ಕಠಿಣವಾದ ಮಾಧ್ಯಮವೂ ಆಗಿದೆ. ಮಧ್ಯಯುಗೀನ ಅನೇಕ ಅಲಂಕೃತ ಹಸ್ತಪ್ರತಿಗಳು (Illuminated manuscripts) ಜಲವರ್ಣ ಮಾಧ್ಯಮದಲ್ಲಿಯೇ ರಚಿಸಲ್ಪಟ್ಟಿವೆ. ಫ್ರೆಸ್ಕೊ ವಿಧಾನವು ಜಲವರ್ಣಗಳನ್ನು ಬಳಸಿ ಕಲಾಕೃತಿಗಳನ್ನು ರಚಿಸುವ ಜಲವರ್ಣ ಮಾಧ್ಯಮದ ಇನ್ನೊಂದು ಪ್ರತ್ಯೇಕ ರೂಪವಾಗಿದೆ.

ಜೆ.ಆರ್.ಕಝೆನ್ಸ್, ಥಾಮಸ್, ಜಿರ್ಟಿನ್, ಜೆ.ಎಸ್.ಕಾಟ್ಮನ್, ಪೀಟರ್.ಡಿ. ವಿಕಟ್ ಮುಂತಾದವರು ಸುಪ್ರಸಿದ್ಧ ಜಲವರ್ಣ ಚಿತ್ರಕಾರರಾಗಿದ್ದರು. ಪ್ರಾಯಶಃ ಇವರ ಸಮಕಾಲೀನ ಕಲಾವಿದನಾದ ಜೆ.ಎಮ್.ಡಬ್ಲ್ಯೂ.ಟರ್ನರನು ಸರ್ವೋತ್ಕೃಷ್ಟ ನಿಸರ್ಗದೃಶ್ಯ ಚಿತ್ರಕಲಾವಿದನಾಗಿದ್ದನು. ತೈಲವರ್ಣ ಮಾಧ್ಯಮದಲ್ಲಿ ಟರ್ನರನ ಪ್ರತಿಸ್ಪರ್ಧಿಯಾಗಿದ್ದ ಕಾನ್ಸ್ಟೇಬಲ್‌ನೂ ಕೆಲವು ಚಿತ್ರಗಳನ್ನು ಜಲವರ್ಣ ಮಾಧ್ಯಮದಲ್ಲಿ ಚಿತ್ರಿಸಿದ್ದಾನೆ. ೧೮೫೧ರಲ್ಲಿ ಟರ್ನರನು ಕಾಲವಾದ ನಂತರ ಜಲವರ್ಣ ಮಾಧ್ಯಮದ ಕಲಾವಿದರಲ್ಲಿ ಸಿಝಾನೆಯು ಸುಪ್ರಸಿದ್ಧ ಕಲಾವಿದನೆಂದು ಪರಿಗಣಿಸಲ್ಪಟ್ಟಿದ್ದಾನೆ.[೨೦]

ಭಾರತದಲ್ಲಿ ಮೊದಲಿನಿಂದಲೂ ಜಲವರ್ಣಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದೆ. ಗುಹಾಚಿತ್ರಗಳಿಂದ ಹಿಡಿದು ಭಿತ್ತಿಚಿತ್ರಗಳು, ತಾಳೆಯೋಲೆ, ಕಾಗದಗಳ ಮೇಲಿನ ಚಿತ್ರಗಳು ಜಲವರ್ಣದಲ್ಲಿಯೇ ರಚಿತವಾದ ಚಿತ್ರಕಲೆಯ ಶಾಸ್ತ್ರ ಗ್ರಂಥಗಳು ಜಲವರ್ಣದ ಪುಡಿಗಳನ್ನು ಮಾಡಿಕೊಳ್ಳುವ ಬಗೆಗೆ ಅನೇಕ ವಿಧಾನಗಳನ್ನು ತಿಳಿಸುತ್ತದೆ. ಜಲವರ್ಣದ ಜೊತೆಗೆ ಬೆರೆಸುವ ವಿವಿಧ ಬಗೆಯ ಅಂಟು ಪದಾರ್ಥಗಳ ಬಗ್ಗೆಯೂ ವಿವರಗಳು ದೊರೆಯುತ್ತವೆ.[೨೧] ಜಲವರ್ಣದ

---

೨೦. ಪಿ.ಆರ್.ತಿಪ್ಪೇಸ್ವಾಮಿ : ಚಿತ್ರಕಲಾ ದರ್ಪಣ, ಕ.ಲ.ಕ.ಅ. ಪು.೧೦೭

೨೧. ಪಿ.ಆರ್.ತಿಪ್ಪೇಸ್ವಾಮಿ(ಸಂ) : ಕಲಾಕೋಶ, ಕ.ಲ.ಕ.ಅ., ೧೯೯೪, ಪು.೧೬೧

ಚಿತ್ರವನ್ನು ಚಿತ್ರಿಸಲು ಬಳಸುವ ಕಾಗದವನ್ನು ಕೈಕಾಗದ(Hand made paper) ಎಂದು ಕರೆಯುವರು. ರದ್ದಿ ಕಾಗದಗಳನ್ನು ಬಹುದಿನಗಳ ಕಾಲ ನೀರಿನಲ್ಲಿ ಹಾಕಿ ಸರಿಯಾಗಿ ನೆನೆಸಿ, ನಂತರ ಬೆಣ್ಣೆಯಂತೆ ರುಬ್ಬಿ ಯಂತ್ರದಲ್ಲಿ ಅಚ್ಚೊತ್ತಿ ಕಾಗದವನ್ನಾಗಿ ತಯಾರಿಸಲಾಗುತ್ತದೆ. ನೀರಿನಲ್ಲಿ ನೆನೆದಿರುವುದರಿಂದ ಈ ಕಾಗದ ಜಲವರ್ಣ ಲೇಪನವಾದಾಗ ನೀರನ್ನು ಹೀರಿ ಬಣ್ಣವನ್ನು ಸಹ ಆಳ ಪದರಗಳಲ್ಲಿ ಇಳಿಸಿಕೊಳ್ಳುತ್ತದೆ. ಹೀಗೆ ಆಳ ಪದರಗಳಲ್ಲಿ ಇಳಿದ ವರ್ಣ ಶಾಶ್ವತವಾಗಿ ಇರುತ್ತದೆಯಲ್ಲದೇ ಜಲವರ್ಣ ಬಹುವರ್ಷಗಳವರೆಗೂ ತನ್ನ ವರ್ಣ ಶ್ರೀಮಂತಿಕೆಯನ್ನು, ಮೆರಗನ್ನು ಸ್ಥಿರವಾಗಿ ಕಾಪಾಡಿಕೊಂಡು ಬರುತ್ತದೆ.

ಕರ್ನಾಟಕದಲ್ಲಿ ಜಲವರ್ಣದಲ್ಲಿ ಸಿದ್ಧಹಸ್ತರೆನಿಸಿಕೊಂಡ[೨೨] ರುಮಾಲೆ ಚೆನ್ನಬಸವಯ್ಯ, ಪಿ.ಆರ್.ತಿಪ್ಪೇಸ್ವಾಮಿ, ಜೆ.ಎಸ್.ಖಂಡೇರಾಂ, ಎಂ.ಬಿ.ಪಾಟೀಲ್ ಹಡಪದ, ಚಂದ್ರನಾಥ ಆಚಾರ್ಯ, ಜೆ.ಸಿ.ಮಣಿ, ಪ್ರತಾಪ ಬಹುರೂಪಿ, ಸಯ್ಯದ್, ಮಲ್ಲಪ್ಪಹಳ್ಳಿ, ಮಲ್ಲಿಕಾರ್ಜುನ ಬಾಗೋಡಿ ಮುಂತಾದ ಕಲಾವಿದರು ಜಲವರ್ಣವನ್ನು ರಚನೆ ಮಾಡುತ್ತಾ ಬಂದಿರುತ್ತಾರೆ. ಚಿ.ಸು.ಕೃಷ್ಣಸೆಟ್ಟಿಯವರು ಗೋಡೆಯ ಮೇಲೆ ಚಿತ್ರ ಮತ್ತು ಅಕ್ಷರ ಬರೆಯುವುದರ ಮೂಲಕ ಪ್ರಾರಂಭವಾದ ಚಿತ್ರಕಲೆಯ ವ್ಯಕ್ತಿತ್ವವು ಭಿನ್ನ ಆಯಾಮಗಳಲ್ಲಿ ಬೆಳೆಯಿತಾದರೂ ಚಿತ್ರಕಲೆಯನ್ನು ಕಲಿಯುವಂತಹ ಸಂದರ್ಭಗಳಲ್ಲಿ ಜಲವರ್ಣವನ್ನು ಬಳಸಿಕೊಂಡು ವ್ಯಕ್ತಿಚಿತ್ರ ಮತ್ತು ಭಾವಚಿತ್ರದ ಜೊತೆ ಪ್ರಕೃತಿ ಚಿತ್ರಗಳನ್ನು ಕೂಡ ರಚಿಸಿರುತ್ತಾರೆ. ಆ ಎಲ್ಲಾ ಕಲಾಕೃತಿಗಳನ್ನು ಈ ಅಧ್ಯಾಯದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.

ವಿಷ್ಣುಧರ್ಮೋತ್ತರ ಪುರಾಣದಲ್ಲಿನ ಒಂದು ವ್ಯಾಖ್ಯಾನ ಪರಿಶೀಲನಾರ್ಹವಾಗುತ್ತದೆ. “ಚಿತ್ರದಲ್ಲಿ ಕಣ್ಣಿನಿಂದ ನೋಡದಿರುವ ವಸ್ತುವನ್ನು ಬರೆಯುವುದಕ್ಕಿಂತಲೂ ನೋಡಿದ ವಸ್ತುವನ್ನು ಅದಕ್ಕೆ ಹೋಲುವಂತೆ ಬರೆಯುವಿಕೆಯೇ ಮುಖ್ಯ. ಚಿತ್ರಕಾರನ ಕುಶಲತಾ ಪರೀಕ್ಷೆಗೆ ಇದೇ ಪ್ರಧಾನ ಎಂಬ ಮಾತಿನಂತೆ ಕಲಿಯುವ ವಿದ್ಯಾರ್ಥಿಗಳಲ್ಲಿರಬೇಕಾದ ಅರ್ಹತೆಗಳಲ್ಲಿ ಒಂದು ಎಂಬುದನ್ನು ಸೂಚಿಸುತ್ತದೆ. ಹೀಗಾಗಿ ಕಲಾಶಾಲೆಗಳಲ್ಲಿ ಭಾವಚಿತ್ರಗಳು, ಪ್ರಕೃತಿ ಚಿತ್ರಗಳನ್ನು ಪರೀಕ್ಷಾ ವಿಷಯಗಳ ಹೊರತಾಗಿ ವಾರದಲ್ಲೊಂದು ದಿನ ಪ್ರಕೃತಿ ಚಿತ್ರಣ, ಭಾವಚಿತ್ರ ವ್ಯಕ್ತಿಚಿತ್ರಗಳನ್ನು ರಚಿಸಲು ಕಲಾ ಶಾಲೆಯಿಂದ ಗ್ರಾಮ, ಪಟ್ಟಣಗಳಲ್ಲಿ ಸಂಚರಿಸುತ್ತಾರೆ.[೨೩] ಅದೇ ದಾರಿಯನ್ನನುಸರಿಸಿದ ಕಲಾವಿದ ಚಿ.ಸು.ಕೃಷ್ಣಸೆಟ್ಟಿಯವರು ಕಲಾಶಿಕ್ಷಣ ಪಡೆಯುವ ಹಂತದಲ್ಲಿ ಜಲವರ್ಣದಿಂದ ಭಾವಚಿತ್ರ, ವ್ಯಕ್ತಿಚಿತ್ರಗಳನ್ನು ರಚಿಸುವುದರ ಜೊತೆಗೆ ಪ್ರಕೃತಿ ಚಿತ್ರಗಳನ್ನು ರಚಿಸಿರುತ್ತಾರೆ.

---

೨೨. ಡಾ.ಸಿದ್ದಲಿಂಗಸ್ವಾಮಿ ಹಿರೇಮಠ: ಕಲಾವಿದ ಆರ್.ಎಂ.ಹಡಪದ. ಒಂದು ಅಧ್ಯಯನ ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ.ಹಂಪಿ. ಪು.೧೧೦

೨೩. ಡಾ.ಸಿದ್ದಲಿಂಗಸ್ವಾಮಿ ಹಿರೇಮಠ: ಕಲಾವಿದ ಆರ್.ಎಂ.ಹಡಪದ. ಒಂದುಅಧ್ಯಯನ ಪಿಎಚ್.ಡಿ.ಮಪ್ರಬಂಧ, ಕ.ವಿ.ವಿ.ಹಂಪಿ. ಪು.೧೧೯, ೨೦೦೩

**ಜಲವರ್ಣದ ಚಿತ್ರಕೃತಿಗಳು (ಭಾವಚಿತ್ರಗಳು)**

೧. ಜಲವರ್ಣದ ಭಾವಚಿತ್ರವಾಗಿರುವ ವೃದ್ಧನೊಬ್ಬನ ಚಿತ್ರವಿದು. ರೂಪಕನ ಮುಖವರ್ಣಗಳಿಗೆ ಪೂರಕವಾದ ಹಿನ್ನೆಲೆ ಚಿತ್ರಕ್ಕೆ ಮೃದುವಾದ ಭಾವವನ್ನು ತುಂಬಿದೆ. ಬ್ರೇಶ್‌ಮೇಟೆಡ್ ಕುಂಚದ ಬೀಸುಗಳಿಂದ ಮೃದುವಾಗಿ ವಾಶ್ ಮಾಡಲಾಗಿದೆ. ಅಲ್ಲಲ್ಲಿ ಲೈಟಿಂಗ್ಸ್‌ನ್ನು ಹಾಗೆಯೇ ಇಡಲಾಗಿದೆ. ಕುಂಚದ ಬೀಸುಗಳು ಪಾರದರ್ಶಕವಾದ ತಂತ್ರವನ್ನು ವರ್ಣಗಳು ಚೈತನ್ಯಯುಕ್ತವಾಗಿರುವುದಲ್ಲದೇ ತಾಜಾತನ (ವಾಟರ್‌ಕಲರ್ಸ್) ಸತ್ವವನ್ನು ಹೊಂದಿದೆ. ನೆರಳು, ಬೆಳಕಿನ ಸಂಯೋಜನೆಯಲ್ಲಿ ಮುಖ ಭಾವನೆಯನ್ನು ಕಾಣಬಹುದು. ವರ್ಣಗಳು ಕೂಡ ನೋಡುಗನಿಗೆ ಸಂತೋಷ ಹಾಗೂ ವ್ಯಕ್ತಿಯ ಗಂಭೀರತೆಯನ್ನು ಕಾಣಬಹುದು. ಇದೊಂದು ಯಶಸ್ವಿ ಭಾವಚಿತ್ರವಾಗಿದೆ.

೨. ಕೃಷ್ಣಸೆಟ್ಟರ ಭಾವಚಿತ್ರಗಳಲ್ಲಿ ಹಾಗೂ ವ್ಯಕ್ತಿಚಿತ್ರಗಳಲ್ಲಿ ಸ್ತ್ರೀ ರೂಪದರ್ಶಿಗಳೂ ಹೆಚ್ಚಾಗಿ ರಚಿಸಿದ್ದಾರೆ. ಇಲ್ಲಿ ಸ್ತ್ರೀ ಭಾವಚಿತ್ರವಾಗಿದ್ದು, ರಮಣೀಯ ಸೆಳಕುಗಳಿವೆ. ಏಕೆಂದರೆ ಕೆಲವು ವರ್ಣಗಳನ್ನು ಬಳಸಿ ಸ್ಟ್ರೋಕ್‌ಗಳ ಮೂಲಕ ಮುಖದ ಭಾವನೆಯನ್ನು ಸೆರೆಹಿಡಿಯಲಾಗಿದೆ. ರಚನಾ ತಂತ್ರ ಕೊಲ್ಯೆಜ್ ರೀತಿಯಲ್ಲಿ ಬಿಂಬಿತವಾಗಿದೆ. ಕುಂಚದಿಂದ ಭಾವಕ್ಕೆ ವಿವರವಾದ ಆದ್ಯತೆ ನೀಡಿದ್ದಾರೆ. ಹಿನ್ನೆಲೆಯ ಮಸುಕು ವರ್ಣ, ವಿಶಿಷ್ಟ ಮುಖದ ಗುಣಗಳು, ಕುಂಚದ ಬೀಸುವಿಕೆಯಿಂದ ಭಾವನೆಗಳು ಇದರಲ್ಲಿ ಎದ್ದು ಕಾಣಿಸುತ್ತಿದೆ.

೩. ಇದು ಭಾವಚಿತ್ರವಾಗಿದ್ದು, ಅತ್ಯಂತ ಕ್ಷಿಪ್ರವಾಗಿ ರಚಿಸಿದ ಚಿತ್ರಗಳಲ್ಲಿ ಇದು ಒಂದು ಎಂಬಂತೆ ಗೋಚರಿತವಾಗಿದೆ. ಸ್ತ್ರೀ ಭಾವಚಿತ್ರ, ಜಲವರ್ಣಚಿತ್ರ ಇದಾಗಿದ್ದರೂ ಅಕಾಡೆಮಿಕ್ ಸತ್ವವುಳ್ಳ ಭಾವಚಿತ್ರದಂತಿದೆ. ದಟ್ಟವಾದ ವರ್ಣದ ಬೀಸುವಿಕೆ ಮುಖದ ಹಿಂಭಾಗದಲ್ಲಿ ಹಾಗೂ ಅವರ ಕುಶಲತೆ ಹಾಗೂ ಕುತ್ತಿಗೆಯಲ್ಲಿ ಕಂಡುಬರುತ್ತದೆ. ಮುಖದ ಭಾವನೆ ವಾಶ್ ಮೆಥೇಡ್‌ನಲ್ಲಿ ರಚಿಸಿಲಾಗಿದ್ದು, ಇದರಲ್ಲಿ ಅಷ್ಟಾಗಿ ಬೀಸುಗಳು ಕಾಣುವುದಿಲ್ಲ. ಭಾವನೆಯನ್ನು ತಿಳಿವರ್ಣದಿಂದ ಸ್ಪಷ್ಟವಾಗಿ ತೋರಿಸಿರುವುದು ಈ ಚಿತ್ರದ ವೈಶಿಷ್ಟ್ಯ.

**ಜಲವರ್ಣದ ವ್ಯಕ್ತಿ ಚಿತ್ರಗಳು.**

೧. ಈ ಕೃತಿಯಲ್ಲಿ ಅರೆಬೆತ್ತಲೆಯಾಗಿ ಕುಳಿತಿರುವ ಬಿಳಿಗಡ್ಡದಾರಿ ಅಜ್ಜ, ಎಡ ಬಹುದ ಮೇಲೆ ಒಂದು ಕೈಚೀಲವನ್ನು ಹಾಕಿಕೊಂಡು ಎರಡು ಕೈಗಳಿಂದ ತನ್ನ ಬೆತ್ತವನ್ನು ಬಿಗಿಯಾಗಿ ಹಿಡಿದಿರುವುದನ್ನು ಕಾಣಬಹುದು. ದಣಿವಾರಿಸಿಕೊಳ್ಳುವ ದೃಶ್ಯದಂತೆ ಗೋಚರಿತವಾಗುವ ಈ ಕೃತಿಯಲ್ಲಿ ತುಂಬಾ ನೈಜತೆಯನ್ನು ಕಾಣಬಹುದು. ವಿಶೇಷವಾಗಿ ಇದೇ ಬಣ್ಣದಿಂದ ರಚಿಸಲಾಗಿದೆ ಎನ್ನುವುದಕ್ಕೆ ಸಾಕ್ಷಿ ಚಿತ್ರ ರಚನೆಯ ಭಾಗವನ್ನು ಸೂಕ್ಷ್ಮವಾಗಿ ಗಮನಹರಿಸಿದರೆ ಬಹುಶಃ ನಮ್ಮ ಅರಿವಿಗೆ ಬರಬಹುದು. ಬಡತನದ ಛಾಯೆ ಮುಖದಲ್ಲಿ ದೇಹದಲ್ಲಿ ಎದ್ದು

ಕಾಣುವಂತೆ ಬಿಂಬಿಸಿರುವ ಕಲಾವಿದರು, ಕಲಿಯುವ ಹಂತದಲ್ಲಿ ವ್ಯಕ್ತಿಚಿತ್ರ ಇದಾಗಿರುತ್ತದೆ. ಇಲ್ಲಿ ವ್ಯಕ್ತಿಗಷ್ಟೆ ಮಾನ್ಯತೆ ಕೊಟ್ಟಿಲ್ಲ. ವ್ಯಕ್ತಿಯ ಅಕ್ಕ, ಪಕ್ಕ ಏನಿದೆ ಎಂಬುದನ್ನು ಸರಳವಾಗಿ ತೋರಿಸಿದ್ದಾರೆ. ಒಟ್ಟಾರೆ ಈ ಚಿತ್ರಕೃತಿ ಸಂಯೋಜನೆಯಿಂದ ಕೂಡಿರುವಂತೆ ಕಲಾವಿದರು ನೋಡಿಕೊಂಡಿದ್ದಾರೆ.

೨. ಈ ಚಿತ್ರಕೃತಿಯಲ್ಲಿ ದಡೂತಿ ವ್ಯಕ್ತಿ ಎಗಲ ಮೇಲೆ ಹಳದಿ ಟವಲ್, ಬಿಳಿ ಜುಬ್ಬ ಹಾಕಿಕೊಂಡು ಕುಳಿತಿದ್ದು, ಬೋಳುತಲೆ, ಮುಖದ ಮೇಲೆ ದಪ್ಪ ಮೀಸೆ, ಗಂಭಿರವಾದ ನೋಟವಿರುವಂತೆ ಕಂಡುಬರುತ್ತಿದೆ. ಮುಖ್ಯವಾಗಿ ದಿಟ್ಟವಾದ ಕುಂಚದ ಬೀಸು ಕಾಣಿಸುವುದಿಲ್ಲ. ತೆಳುವಾದ ವರ್ಣದ ಬಳಕೆ ಹಾಗೂ ಗಾಢವರ್ಣಗಳ ಬಳಕೆ ಇಲ್ಲಿ ಹೆಚ್ಚಾಗಿದೆ. ನೆರಳು ಬೆಳಕುಗಳ ವ್ಯತ್ಯಾಸಗಳಿಗೆ ತಕ್ಕಂತೆ ವರ್ಣದಲ್ಲೂ ಮೂಡಿರುವುದು. ಹಾಗೂ ಮುಖದ ಉಬ್ಬು ತಗ್ಗುಗಳು ಸ್ಪಷ್ಟವಾಗಿ ಅಧ್ಯಯನ ನಡೆದೇ, ಸ್ಪಷ್ಟವಾಗಿ ಗೋಚರಿಸುತ್ತದೆ. ಮುಖದ ದುಂಡುತನವನ್ನು ಸೌಂದರ್ಯವನ್ನು ತೋರ್ಪಡಿಸುತ್ತದೆ. ಹಾಗೂ ಧರಿಸಿರುವ ಉಡುಪು ನಿಖರವಾಗಿ ರಚಿಸಲಾಗಿದ್ದು ಮೈಕಟ್ಟಿನಲ್ಲಿಯು ದುಂಡುತನವನ್ನು ಬಹು ಸಮರ್ಥವಾಗಿ ಈ ಚಿತ್ರದಲ್ಲಿ ಬಿಂಬಿತವಾಗಿದೆ.

೩. ಸ್ತ್ರೀ ಕುಳಿತುಕೊಂಡಿರುವ (ಓರೆಯಾಗಿ) ಚಿತ್ರವಾಗಿದ್ದರೂ ಯಥಾವತ್ತಾಗಿ ಮೂಡಿರುವ ಬಗೆಯು ಇಲ್ಲಿದೆ. ಹಾಗೆಯೇ ರೂಪದರ್ಶಿಯು ತನ್ನ ಕೈಗಳನ್ನು ನೆಲಕ್ಕೆ ಇಟ್ಟು, ಚಿಂತೆಯಲ್ಲಿ ಮಗ್ನಳಾಗಿರುವಂತಿದೆ. ವಿಭಿನ್ನ ರೀತಿಯ ತಂತ್ರಗಾರಿಕೆಯಿಂದ ರಚಿಸಿದೆ, ಮುಖದ ವರ್ಣಗಳು ತಿಳಿಯಾಗಿ ವಾಶ್ ಮೆಥೇಡ್‌ನಲ್ಲಿ ಕಂಡರೆ, ಅವಳ ವಸ್ತ್ರಗಳು ಅಕಾಡೆಮಿ ಶೈಲಿಯಲ್ಲಿವೆ. ವಸ್ತ್ರದ ವರ್ಣ ಮುಖಭಾವಗಳನ್ನುಂಟು ಗೋಚರಿಸುವಂತೆ ಚಿತ್ರಿಸಲಾಗಿದೆ. ಹಸಿರು ವರ್ಣದಲ್ಲಿ ಛಾಯೆಗಳನ್ನು ಬಳಸಲಾಗಿದ್ದು, ನೆರಳು, ಬೆಳಕಿನ ಸಂಯೋಜನೆಯಲ್ಲಿ ನೋಡುಗನ ಗಮನ ಸ್ತ್ರೀಯನ್ನು ಸೆಳೆಯುತ್ತದೆ ಹಿನ್ನೆಲೆಯಲ್ಲಿ ಹೆಚ್ಚು ವರ್ಣ ಬಳಕೆಯಾಗಿಲ್ಲ. ಸ್ತ್ರೀಗೆ ಪ್ರಾಧಾನ್ಯತೆ ನೀಡಲಾಗಿದೆ.

೪. ರೂಪದರ್ಶಿಯು ಕುಳಿತಿರುವ ಭಂಗಿಯಲ್ಲಿರುವ ಈ ಚಿತ್ರವನ್ನು ಕಲೆಯನ್ನು ಕಲಿಯುವ ಹಂತವಿರುವಾಗ ಮಾಡಲ್ ರೀತಿಯಲ್ಲಿ ಹುಡುಗಿಯನ್ನು ತಯಾರು ಮಾಡಿ ಕೂರಿಸಿ ತೆಗೆದಿರುವ ವ್ಯಕ್ತಿಚಿತ್ರವಾಗಿರುತ್ತದೆ. ಇದರಲ್ಲಿ ಒಂದು ಮಹಿಳೆ ಕೆಂಪು ಸೀರೆ, ಬಿಳಿ ಜಾಕೇಟ್ ತೊಟ್ಟು, ಎಡಗಾಲನ್ನು ಮಡಚಿ, ಬಲಗಾಲನ್ನು ನೇರಕ್ಕೆ ಚಾಚಿ ಇಡಲಾಗಿದ್ದು, ಬಲಗೈಯ ಮೇಲೆ ದೇಹದ ಭಾರವನ್ನು ಹಾಕಿ, ಎಡಗೈಯನ್ನು ಬಲಭಾಗಕ್ಕೆ ಚಾಚಿಟ್ಟಿದ್ದು, ಈ ಕೈಯ ಮುಂದೆ ಒಂದು ಕೋಳಿಹುಂಜವನ್ನು ತೋರಿಸಲಾಗಿದೆ. ಆ ಹುಂಜವನ್ನೇ ನೋಡುತ್ತಿರುವ ಮಾಡಲ್ ಚಿತ್ರದಲ್ಲಿ ಗಂಭೀರತೆಯಿದೆ. ಅಷ್ಟೇ ಸೌಂದರ್ಯವೂ ಇದೆ. ಜಲವರ್ಣವಾಗಿರುವುದರಿಂದ ತಿಳಿ ಬಣ್ಣಗಳನ್ನು ತೋರಿಸಿ ಚಿತ್ರವನ್ನು ಮುಗಿಸಲಾಗಿರುತ್ತದೆ.

೫. ಇದು ಕೂಡ ವ್ಯಕ್ತಿ ಚಿತ್ರವಾಗಿದ್ದು, ಈ ಮೇಲಿನ ಚಿತ್ರದ ಮಹಿಳೆಯೇ ಇಲ್ಲಿ ಸರಳವಾಗಿ ಮಲಗಿರುವಂತೆ ಕಂಡುಬಂದಿದ್ದು, ತಲೆಯಿಂದ ಕಾಲಿನವರೆಗೂ ರೇಖೆಯನ್ನು ಎಳೆದು ಜಲವರ್ಣದಿಂದ ಚಿತ್ರವನ್ನು ಪೂರ್ಣಗೊಳಿಸಲಾಗಿದೆ. ಈ ಚಿತ್ರವನ್ನು ನೋಡಿದ ತಕ್ಷಣಕ್ಕೆ ಪಾಶ್ಚಾತ್ಯ ಕಲಾವಿದರ ನೆನಪನ್ನು ತರಿಸುವಂತಿದ್ದು, ಇದು ಕೂಡ ಮಾಡಲ್ ಮಾಡಿದ ರೀತಿಯಲ್ಲೆ ಬಿಂಬಿಸಿದ್ದಾದರೂ ಕಾಮನ್ ಚಿತ್ರ ಎನ್ನುವಂತೆ ಬಿಂಬಿಸಲಾಗಿದೆ.

**ಕಾಲೇಜು ಸಮಯದಲ್ಲಿ ಈ ವರ್ಣಗಳ ಆಟ**

ಭಾವಚಿತ್ರದ ಹಲವು ಆಯಾಮಗಳಲ್ಲಿ ಪ್ರಯೋಗ ನಡೆಸಿದ ಕೃಷ್ಣಸೆಟ್ಟರು ವ್ಯಕ್ತಿ ಚಿತ್ರಣ (Life painting) ಹಲವು ತಂತ್ರಗಳಲ್ಲಿ ರಚಿಸಿರುತ್ತಾರೆ. ಬಹುತೇಕ ಚಿತ್ರಣಗಳು ಅವು ಕಲಾಶಿಕ್ಷಣ ಪಡೆಯುತ್ತ ಕಲಾ ಶಾಲೆಯಲ್ಲಿ ರಚಿಸಿದ್ದಾರೆ, ಈ ಇಲ್ಲಿ ಮಾಡಲ್ ತಯಾರಿಸಿಕೊಂಡು ಚಿತ್ರವನ್ನು ರಚಿಸುತ್ತಿದ್ದ ಸಮಯವದು. ಇಲ್ಲಿನ ರಚನೆಯಲ್ಲಿ ಘಾಡವಾದ ವರ್ಣಗಳ ಬಳಕೆಯಾಗುತ್ತಿತ್ತು. ಇದು ಪ್ರಯೋಗದ ಸಮಯ ಎಂದರೆ ಬಹುಶಃ ತಪ್ಪಾಗಲಿಕ್ಕಿಲ್ಲ. ಚಿತ್ರ ಎಂದ ಮೇಲೆ ಎಲ್ಲಾ ಕಡೆ ಸಮ ಪ್ರಮಾಣದಲ್ಲಿ ವರ್ಣದ ಬಳಕೆ ಕಾಣಿಸುತ್ತದೆ. ಅನಾಟಮಿಯು ಕೂಡ ನಿಜವಾದ ಸತ್ವವನ್ನು ಕಂಡಂತೆ ರಚಿಸಲಾಗುತ್ತಿತ್ತು. ಜಲವರ್ಣ, ಅಕ್ರಾಲಿಕ್, ಕಲರ್ ಪೆನ್ಸಿಲ್, ಚಾರ್ಕೋಲ್, ತೈಲವರ್ಣ ಇತ್ಯಾದಿ ವರ್ಣಗಳಿಂದ ಚಿತ್ರವನ್ನು ರಚಿಸುತ್ತಿದ್ದರು. ಸಂಯೋಜನೆಗೆ ಪೂರಕವಾಗಿರುವ ಅತ್ಯಂತ ವಿವರ ಪೂರ್ಣವಾದ ವ್ಯಕ್ತಿಚಿತ್ರಗಳನ್ನು ಅತಿ ಸೂಕ್ಷ್ಮತೆ, ಸಾಧ್ಯತೆ ಹಾಗೂ ನೆರಳು ಬೆಳಕಿನ ಅಂತರಗಳ ಮಹತ್ವದ ಅಂಶಗಳನ್ನು ಕಲಾವಿದರ ಚಿತ್ರದಲ್ಲಿ ಕಾಣಬಹುದು. ಇವರ ರಚನೆಯಲ್ಲಿ ಮುಖ್ಯವಾಗಿ ದಟ್ಟವಾದ ಕುಂಚದ ಬೀಸು ಕಾಣಿಸುವುದಿಲ್ಲ. ಭಾವಚಿತ್ರ, ವ್ಯಕ್ತಿಚಿತ್ರಗಳಲ್ಲಿ ತೆಳುವಾದ ವರ್ಣದ ಬಳಕೆ ಹಾಗೂ ಗಾಢವರ್ಣಗಳ ಬಳಕೆ ಹೆಚ್ಚಿರುತ್ತದೆ. ನೆರಳು, ಬೆಳಕುಗಳ ವ್ಯತ್ಯಾಸಗಳಿಗೆ ತಕ್ಕಂತೆ ವರ್ಣದಲ್ಲೂ ಮೂಡಿರುವುದು. ಹಾಗೂ ಇವರು ರಚಿತ ಭಾವಚಿತ್ರದಲ್ಲಿ ಉಬ್ಬು, ತಗ್ಗುಗಳ ಕುರಿತು ಸ್ಪಷ್ಟವಾಗಿ ಅಧ್ಯಯನ ನಡೆದಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಅದು ಕಲಾಕೃತಿಗಳನ್ನು ವೀಕ್ಷಿಸಿದಾಗ, ಅದರಲ್ಲಿರುವ ಭಾವನೆಯನ್ನು (ಮುಖದ ದುಂಡುತನವನ್ನು ಸೌಂದರ್ಯವನ್ನು) ತೋರ್ಪಡಿಸುತ್ತದೆ. ಹಾಗೂ ಮಾಡಲ್‌ಗೆ ಹಾಕಿರುವ ಉಡುಪು ನಿಖರವಾಗಿದ್ದು ವ್ಯಕ್ತಿಯ ಮೈಕಟ್ಟಿನಲ್ಲಿಯು ದುಂಡುತನವನ್ನು ಬಹು ಸಮರ್ಥವಾಗಿ ಚಿತ್ರಗಳ ಬಿಂಬಿತವಾಗಿದೆ.

ಪ್ರಮುಖವಾಗಿ ಚಿ.ಸು.ಕೃಷ್ಣಸೆಟ್ಟಿಯವರು ಹೋರಟಗಾರ, ಅದಾಗುವುದಕ್ಕಿಂತಲೂ ಮುಂಚಿತವಾಗಿ ಕಲೆಯನ್ನು ಪ್ರೀತಿಸಿದವರು. ಮೊದಲ ಎರಡು ವರ್ಷದಲ್ಲಿ ಸಾಕಷ್ಟು ಭಾವಚಿತ್ರ, ವ್ಯಕ್ತಿಚಿತ್ರವನ್ನು ರಚಿಸಿದ್ದಾರೆ. ಅವು ವಿಭಿನ್ನ ರೀತಿಯ ತಂತ್ರಗಾರಿಕೆಯಿಂದ ಕೂಡಿವೆ. ಮುಖದ ವರ್ಣಗಳು ತಿಳಿಯಾಗಿ ವಾಶ್ ಮೆಥೇಡ್‌ನಲ್ಲಿ ಕಂಡರೆ, ವಸ್ತ್ರಗಳು ಅಕಾಡೆಮಿ ಶೈಲಿಯಲ್ಲಿರುವುದನ್ನು ಗಮನಿಸಬಹುದು. ಬಣ್ಣಗಳ ಮೂಲಕ ಭಾವನೆಗಳನ್ನು ಸೆರೆಹಿಡಿದಿದ್ದಾರೆ. ಹಸಿರು ವರ್ಣದಲ್ಲಿ

ಛಾಯೆಗಳನ್ನು ಹೆಚ್ಚು ಬಳಸಲಾಗಿದ್ದು, ನೆರಳು, ಬೆಳಕಿನ ಸಂಯೋಜನೆಯಲ್ಲಿ ನೋಡುಗನ ಗಮನ ಸೆಳೆಯುವಂತೆ ಚಿತ್ರಗಳನ್ನು ರಚಿಸಿದ್ದಾರೆ. ಹೆಚ್ಚು ಜಲವರ್ಣಗಳಲ್ಲಿ ರಚಿಸಿದ ಚಿತ್ರಗಳಲ್ಲಿ ವರ್ಣವೂ ಅಷ್ಟಾಗಿ ಬಳಕೆಯಾಗಿರುವುದಿಲ್ಲ.

ಪ್ರಮುಖವಾಗಿ ಕಲೆಯನ್ನು ಕಲಿಯುವ ಹಂತದಲ್ಲಿ ಸಾಕಷ್ಟು ಪ್ರಯೋಗಗಳನ್ನು ಮಾಡಿ ಯಶಸ್ವಿಯಾಗಿದ್ದಾರೆ. ಪ್ರಸ್ತುತವೂ ಕೂಡ ಅದೇ ಹಾದಿ ಹಿಡಿದಿದೆ. ಜಲವರ್ಣ ಮತ್ತು ತೈಲವರ್ಣಗಳಲ್ಲಿ ತೈಲವರ್ಣವನ್ನು ಕೃಷ್ಣಸೆಟ್ಟರು ಇಷ್ಟ ಪಡುತ್ತರಾದರೂ ಹೆಚ್ಚು ವ್ಯಕ್ತಿಚಿತ್ರ ಮತ್ತು ಭಾವಚಿತ್ರಗಳನ್ನು ರಚಿಸಿರುವುದಿಲ್ಲ. ಆ ಕಾರಣದಿಂದಲೆ ಇಲ್ಲಿ ತೈಲವರ್ಣದ ಬಗ್ಗೆ ಮಾತನಾಡಿರುವುದಿಲ್ಲ. ಅದು ಬಿಟ್ಟರೆ ಸಾಕಷ್ಟು ಕಲಾಕೃತಿಗಳನ್ನು ರಚಿಸಿರುತ್ತಾರೆ. ಅವುಗಳನ್ನು ಮುಂದಿನ ಪುಟಗಳಲ್ಲಿ ಅಧ್ಯಯನ ಮಾಡಲಾಗಿದೆ. ಇವತ್ತಿಗೂ ಸಮಯವನ್ನು ಮಗುವಿನಂತೆ ಕಾಪಾಡುವ ಈ ಕಲಾವಿದರೂ ಅಲ್ಪ ಸಮಯಸಿಕ್ಕು ಮನೆಯಲ್ಲಿದ್ದರೆ ಖಂಡೀತಾ ಬಣ್ಣ, ಬ್ರೇಷ್‌ಗಳ ಗುದ್ದಾಟ ಇವರ ನಡುವೆ ನಡೆಯುತ್ತಲೇ ಇರುತ್ತದೆ.

**ಭಾವಚಿತ್ರ** (Postrait painting or painting from life)

ಬದಿಕಿರುವ ವ್ಯಕ್ತಿಗಳನ್ನು ಎದುರಿಗೆ ಕುಳ್ಳಿರಿಸಿಕೊಂಡು ಅವರ ರೂಪವನ್ನು ತದ್ರೂಪವಾಗಿ ಕ್ಯಾನ್ವಸ್, ಮರದ ಹಲಗೆ, ಕಾಗದ ಅಥವಾ ಹಸ್ತಿದಂತಗಳಂತಹ ಸಪಾಟಾದ ಮೇಲ್ಮೈಯ ವರ್ಣಗಳಿಂದ ಚಿತ್ರಿಸುವ ಇಲ್ಲವೇ ಶಿಲ್ಪಕಲಾಕೃತಿಗಳನ್ನಾಗಿ ತಯಾರಿಸುವ ಕಲಾಪ್ರಕಾರವನ್ನು ಭಾವಚಿತ್ರ ಇಲ್ಲವೇ ಪೋರ್ಟ್ರೇಟ್ ಎಂದು ಕರೆಯುತ್ತಾರೆ. ಭಾವಚಿತ್ರವು ಅರ್ಧಕೃತಿಯಲ್ಲಾಗಲೀ ಪೂರ್ಣ ಪ್ರಮಾಣ ದಲ್ಲಾಗಲೀ ರಚಿತವಾಗುತ್ತವೆ. ಭಾವಚಿತ್ರದಲ್ಲಿ ವ್ಯಕ್ತಿಯ ಮುಖದ ಬಾಹ್ಯ ಲಕ್ಷಣಗಳು ಬಣ್ಣಗಳು ಯಥಾವತ್ತಾಗಿ ರೂಪಿತವಾಗಿರಬೇಕಾದುದು ಅತ್ಯವಶ್ಯವಾಗಿದೆ. ಮೊದಲು ಭಾವಚಿತ್ರ ಪ್ರಕಾರವನ್ನು 'ಕಲಾಕೃತಿ' ಎಂದು ಪರಿಗಣಿಸುತ್ತಲೇ ಇರಲಿಲ್ಲವಾದರೂ ಅವು ಅತ್ಯುತ್ತಮ ಕಲಾಕೃತಿಗಳಾಗಿವೆ. ಈ ಪ್ರಕಾರವು ಈಜಿಫ್ಟ್, ಅಸ್ಸೀರಿಯ ಮತ್ತು ಇನ್ನುಳಿದ ಪುರಾತನ ಕಲಾಕೃತಿಗಳು ವ್ಯಕ್ತಿಗಳ ತದ್ರೂಪಿನ ಅರ್ಧಾಕೃತಿಯ ಭಾವಚಿತ್ರಗಳನ್ನೊಳನ್ನು ಒಳಗೊಂಡವಗಳಾದರೂ ಗ್ರೀಕ್ ಮತ್ತು ರೋಮನ್ನರ ಕಾಲದಿಂದೀಚೆಗೆ ರೂಪುಗೊಂಡ ಅರ್ಧಾಕೃತಿಯ ಭಾವಚಿತ್ರಗಳು ದೊಡ್ಡ ಸಂಖ್ಯೆಯಲ್ಲಿ ಉಳಿದುಕೊಂಡು ಬಂದಿವೆ. ಕ್ರಿ.ಶ.೧೫ನೆಯ ಶತಮಾನದ ಪುನರುಜ್ಜೀವನ ಕಾಲದಲ್ಲಿ ಇಟಲಿ ಮತ್ತು ಫ್ಲ್ಯಾಂಡರ್ಸ್‌ಗಳಲ್ಲಿ ಅಸಂಖ್ಯ ಭಾವಚಿತ್ರಗಳ ರಚನೆಯಾಯಿತು. ಈ ಪುರಾತನ ಭಾವಚಿತ್ರಗಳು ಸರಳವಾಗಿ ಬಣ್ಣಗಳಿಂದ ಚಿತ್ರಿಸಲ್ಪಟ್ಟಿವೆ. ಇಲ್ಲವೆ ಕೆತ್ತನೆಯ ಕಲಾಕೃತಿಗಳಾಗಿವೆ. ಯಾವ ಕಲೆಗಳನ್ನು ಕೇವಲ ನಮ್ಮ ಪಂಚೇಂದ್ರಿಯಗಳಲ್ಲಿ ಒಂದಾದ ನೇತೇಂದ್ರಿಯ ಮೂಲಕ ಮಾತ್ರ ನೋಡಿ ಅನುಭವಿಸಲು ಸಾಧ್ಯವಾಗುತ್ತದೋ ಅಂತಹ ಕಲೆಗಳನ್ನು ದೃಶ್ಯಕಲೆಗಳೆಂದು ಕರೆಯಲಾಗಿರುತ್ತದೆ. ಲಲಿತಕಲೆಗಳಲ್ಲಿ ಚಿತ್ರ, ಶಿಲ್ಪ, ವಾಸ್ತುಶಿಲ್ಪಗಳಂತಹ ಕಲೆಗಳು ಮುಖ್ಯವಾಗಿದ್ದು,ಅದು ಒಂದು ಗುಂಪಿಗೆ ಸೇರುತ್ತದೆ.

ಇವುಗಳನ್ನು ನೋಡುವುದರ ಮೂಲಕ ಮಾತ್ರವೇ ಗ್ರಹಿಸಲು ಸಾಧ್ಯವಾಗುತ್ತದೆ. ಹೀಗಾಗಿ ಇವುಗಳನ್ನು ದೃಶ್ಯಕಲೆಗಳೆಂದು ಕರೆಯುವರು.

ದೃಶ್ಯ ಕಲೆಗಳನ್ನು ಕೇವಲ ನೋಡುವುದರ ಮೂಲಕ ಅನುಭವಿಸಲು ಸಾಧ್ಯವಾಗುವುದರಿಂದ ಕಲಾಕೃತಿಗಳು ಮತ್ತು ನೋಡುವುದರ ಮಧ್ಯೆ ಒಂದು ಸಂವಹನ ನಡೆಯುತ್ತದೆ. ಹಾಗಾಗಿ ಈ ಚಿತ್ರಕಲೆ ಮತ್ತು ಶಿಲ್ಪಕಲೆಗಳನ್ನು ದೃಶ್ಯಕಲೆಗಳೆಂದು ಕರೆಯುವುದರ ಜೊತೆಗೆ ಅವುಗಳ ಮೂಲಕ ನಡೆಯುವ ಸಂವಹನ ಕ್ರಿಯೆಯನ್ನೇ ದೃಶ್ಯ ಭಾಷೆ ಎಂದು ಕರೆಯುವರು. ಭಾಷೆ ಚಿತ್ರಕಲೆಗೆ ಸಂಬಂಧಿಸಿ ಅನುಭವಗಳನ್ನು, ವಿಚಾರಗಳನ್ನು ಹೇಳಿಕೊಳ್ಳಲು ಸಹಾಯಕವಾಗುತ್ತದೆ. ಭಾಷೆ ಇಲ್ಲದಿದ್ದರೆ ಎಲ್ಲವನ್ನು ಚಿತ್ರದ ಮೂಲಕವೇ ಬರೆದು ತೋರಿಸಬೇಕಾಗುತ್ತದೆ. ದೃಶ್ಯ ಕಲೆಗೂ ಕೂಡಾ ತನ್ನದೇ ಆದ ಭಾಷೆ ಇದೆ. ಅದನ್ನು ದೃಶ್ಯ ಭಾಷೆ (ವಿಜ್ಯೂವಲ್ ಲ್ಯಾಂಗ್ವೇಜ್) ಎಂದು ಕರೆಯುವರು. ಇದರಲ್ಲಿ ಆಕೃತಿಗಳ ಕಲ್ಪನೆಯನ್ನು ನೀಡುವ ರೇಖೆಗಳು ಸೇರಿಕೊಳ್ಳುತ್ತವೆ. ಕಣ್ಣಿಗೆ ಕಾಣಿಸುವ ವಿವಿಧ ತೆರನಾದ ಬಣ್ಣಗಳೂ ಸೇರಿಸಿಕೊಳ್ಳುತ್ತವೆ. ಕೃತಿಗಳ ಮೇಲೆ ಬೆಳಕು ಬಿದ್ದಾಗ ಆ ಬೆಳಕು ನೋಡುಗರ ಕಣ್ಣಿನ ಮೇಲೆ ಹರಿದು ಬಂದಾಗ ಮಾತ್ರ ಆ ಭಾಷಾ ಸಂಕೇತಗಳು ನಮಗೆ ಗೋಚರಿಸುತ್ತವೆ. ಇವೆಲ್ಲವುಗಳೂ ಕಲಾಕೃತಿಗಳ ಮೂಲದಲ್ಲಿ ರೇಖೆಗಳು, ಸಾಹಿತ್ಯದಲ್ಲಿ ಶಬ್ದದಂತೆ ಕೆಲಸ ಮಾಡುತ್ತದೆ.

ಭಾರತೀಯ ಕಲೆಯ ಹೆಸರಾಂತ ಪುನರುಜ್ಜೀವನದ ಮೂಲ ಪುರುಷ ಸಾಹಿತಿಗಳಾದ ಆನಂದ ಕುಮಾರಸ್ವಾಮಿಯವರು ಭಾರತೀಯ ದೃಷ್ಟಿಕೋನದಿಂದ ರಸಸಿದ್ಧಾಂತವನ್ನು ಸೌಂದರ್ಯದ ಪರ್ಯಾಯವೆಂದು ಭಾವಿಸಿದ್ದಾರೆ. ಇದರ ಪ್ರಕಾರ ವಿಭಾವ, ಅನುಭಾವ ಹಾಗೂ ಸಂಚಾರಿ ಭಾವಗಳ ಬಾಹ್ಯ ಪ್ರೇರಣೆಗಳಿಂದಲೇ ರಸ ನಿಷ್ಪತ್ತಿಯಾಗುತ್ತದೆ. ನಿಷ್ಕರ್ಷ ರೂಪದಲ್ಲಿ ಆನಂದ ಕುಮಾರಸ್ವಾಮಿಯವರು ವಿಚಾರಗಳನ್ನು ವ್ಯಕ್ತಪಡಿಸುತ್ತಾ ಸಹಜ ಜ್ಞಾನವಾದ ರಸದ ಜ್ಞಾನವು ಕಲಾವಿದನಿಗಾಗುತ್ತದೆ. ಈ ಸಹಜ ಜ್ಞಾನವನ್ನು ಅವನು ಕಲಾಕೃತಿಯಲ್ಲಿ ಅಭಿವ್ಯಕ್ತಗೊಳಿಸುತ್ತಾನೆ. ಈ ಅಭಿವ್ಯಕ್ತಿಯ ಮೂಲಕ ಅವನು ತನ್ನ ಕಲಾಕೃತಿಗಳನ್ನು ಕಲಾರಸಿಕನವರೆಗೆ ಕೊಂಡೊಯ್ಯುತ್ತಾನೆ ಎಂದಿರುತ್ತಾನೆ. ಈ ಪ್ರಕೃತಿಯಲ್ಲಿ ಭಾಷೆ, ಬಣ್ಣ, ರೇಖೆಗಳು ಮುಂತಾದ ಭೌತಿಕ ಬೇಡಿಕೆಗಳು ಅವಶ್ಯಕವಾಗಿ ಬೇಕಾಗಿರುತ್ತದೆ. ಕಲಾರಸಿಕನ ಮನಸ್ಸಿನಲ್ಲಿಯೂ ಕಲಾವಿದನ ಮನಸ್ಸಿನಲ್ಲಿ ಉದ್ಭವಿಸಿದ ಭಾವನೆಯೇ ಉದ್ಭವಿಸಬೇಕು. ಕಲಾರಸಿಕ, ಕಲಾವಿದ ಹಾಗೂ ಕಲಾಕೃತಿ ಈ ಮೂರರ ಸಮನ್ವಯದಿಂದಲೇ ರಸ ನಿಷ್ಪತ್ತಿಯಾಗುತ್ತದೆ ಎಂಬ ಅಭಿಪ್ರಾಯವನ್ನು ಕೂಡ ವ್ಯಕ್ತಪಡಿಸುತ್ತಾರೆ.

ಕಲಾವಿದ ತಾನು ನೋಡಿದ ಅನುಭವಿಸಿದ ಎಲ್ಲವನ್ನು ಚಿತ್ರಿಸುತ್ತಾನೆ ಎಂದೇನಲ್ಲ, ಅವನು ಅನುಭವಿಸಿದ ಅನೇಕ ವಿಷಯಗಳಲ್ಲಿ ಕೆಲವು ಮಾತ್ರ ಆತನನ್ನು ಕಾಡಿ ಚಿತ್ರ ಬರೆಯಿಸಿಕೊಳ್ಳುತ್ತವೆ.

ಕೆಲವು ವಿಷಯಗಳು ಮನಸ್ಸಿನ ಆಳದಲ್ಲಿ ಬಹಳ ಕಾಲ ಉಳಿದುಕೊಂಡು ಆಮೇಲೆ ರೂಪ ಪಡೆಯಬಹುದು. ಇನ್ನೂ ಕೆಲವು ವಿಷಯಗಳು ಹಾಗೇ ಉಳಿದುಬಿಡಬಹುದು. ಇನ್ನೂ ಕೆಲವು ತುರ್ತಾಗಿ ಅಭಿವ್ಯಕ್ತಿ ಪಡೆಯಬಹುದು. ಯಾವುದೇ ವಸ್ತು ಹಾಗೂ ವಿಷಯ ಕಲಾವಿದನ ಮನಸ್ಸಿನ ಮೇಲೆ ಎಷ್ಟು ಪರಿಣಾಮಮಾಡಿದೆ, ಎಷ್ಟು ಪ್ರಭಾವ ಬೀರಿದೆ ಎನ್ನುವುದರ ಮೇಲೆ ಅದು ನಿರ್ಧಾರಿತವಾಗುತ್ತದೆ. ಅವನ ಹತ್ತಿರದವರ ಅವನ ಪ್ರಿಯವಾದವರ ಆಸೆಗಳೂ ಆಕಾಂಕ್ಷೆಗಳು ಅವನ ಅಭಿವ್ಯಕ್ತಿಯ ಪ್ರಾಶಸ್ತ್ಯದ ಮೇಲೆ ಪರಿಣಾಮ ಬೀರಬಹುದು.

ಕಲೆಯ ವಾತಾವರಣವನ್ನು ಮೂಡಿಸುವ, ನಿರಂತರ ಶ್ರಮಿಸುತ್ತಿರುವ ಕರ್ನಾಟಕದ ಖ್ಯಾತ ಕಲಾವಿದ ಚಿ.ಸು.ಕೃಷ್ಣಸೆಟ್ಟಿರವರಲ್ಲಿ ಪುಟಿಯುವ ಉತ್ಸಾಹಕ್ಕೆ, ಭಾವಚಿತ್ರ, ನೈಸರ್ಗಿಕ ಚಿತ್ರಗಳು, ಮ್ಯೂರಲ್–ಶಿಲ್ಪಕಲಾಕೃತಿಗಳು, ನವ್ಯಕಲೆಯ ಭಿನ್ನ ಸಂಯೋಜನೆಗಳು, ಅಮೂರ್ತ ಕಲೆಗಳು ಸೃಷ್ಟಿಗೊಂಡಿರುತ್ತವೆ. ತಮ್ಮ ಪರಿಸರದ ಹಿನ್ನೆಲೆಯಲ್ಲಿ ದಟ್ಟವಾದ ಅನುಭವಗಳನ್ನು ಅಭಿವ್ಯಕ್ತಿಗೆ ಮಾಧ್ಯಮವಾಗಿ ಬಳಸಿಕೊಳ್ಳುತ್ತಾ ಸಾಧನೆ ಮಾಡುತ್ತಾ ಸಾಗಿದ್ದಾರೆ. ಕ್ರಿಯಾಶೀಲರಾಗಿರುವ ಚಿ.ಸು.ಕೃಷ್ಣಸೆಟ್ಟಿರವರು ಪ್ರಯೋಗಶೀಲರು ಕೂಡ. ಅವರ ಅಭಿವ್ಯಕ್ತಿಯ ತೀವ್ರತೆ ಹಲವು ಬಗೆಯಿಂದ ಕೂಡಿರುತ್ತವೆ. ವಿವಿಧ ಘಟ್ಟಗಳಲ್ಲಿ, ವಿಭಿನ್ನ ಸಂವೇದನೆಗಳಿಗೆ ಒಳಗಾಗಿ ವೈವಿಧ್ಯಮಯವಾಗಿ ನವ್ಯಕಲಾ ಶೈಲಿಯಲ್ಲಿ ಅನೇಕ ಸಂಯೋಜನೆಯ ಕಲಾಕೃತಿಗಳನ್ನು ಸೃಷ್ಟಿಸಿದ್ದಾರೆ. ಅವರ ಸೃಜನ ಸಾಮರ್ಥ್ಯಕ್ಕೆ ಹಲವು ಭಾವಚಿತ್ರಗಳು ಹಾಗೂ ಮೂರ್ತ, ಅಮೂರ್ತ ನವ್ಯಕಲೆಯ ಶೈಲಿಯ ಸರಣಿ ಕಲಾಕೃತಿಗಳು ಸಾಕ್ಷಿಯಾಗಿವೆ.

ಪ್ರಮುಖವಾಗಿ ಅವರ ವರ್ಣ ಕಲಾಕೃತಿಗಳು ತೈಲವರ್ಣ ಹಾಗೂ ಅಕ್ರಲಿಕ್ ಮಿಶ್ರ ಮಾಧ್ಯಮದಲ್ಲಿದ್ದು ಅವು

ಅ. ಸಂಯೋಜನಾ ಚಿತ್ರಗಳು (ಸೃಜನಾತ್ಮಕವಾಗಿ)

ಆ. ಭಾವಚಿತ್ರಗಳು ಮತ್ತು ಪೂರ್ಣ ವ್ಯಕ್ತಿ ಚಿತ್ರಗಳು

ಎಂದು ವಿಂಗಡಿಸಿ ಅಧ್ಯಯನ ಮಾಡಲಾಗಿದೆ. ತೈಲವರ್ಣ ಚಿ.ಸು.ಕೃಷ್ಣಸೆಟ್ಟಿಯವರಿಗೆ ಸ್ವಲ್ಪ ಪ್ರಮಾಣದ ಪ್ರಿಯವಾದ ಮಾಧ್ಯಮವಾಗಿದೆ. ಚಿ.ಸು.ಕೃಷ್ಣಸೆಟ್ಟಿರವರು ೭೦ರ ದಶಕದಿಂದ ಪ್ರಸ್ತುತ ದಿನಗಳವರೆಗೂ ತೈಲವರ್ಣದ ಕಲಾಕೃತಿಗಳ ರಚನೆಯಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿ ಕೊಂಡಿದ್ದಾರೆ. ನವ್ಯ ಶೈಲಿಯಲ್ಲಿ, ವಿಭಿನ್ನ ಶೈಲಿಯಲ್ಲಿ ಹಾಗೂ ವಿಷಯಗಳಾಧಾರಿತ ಕಲಾಕೃತಿಗಳು, ಸಮಾಜದ ಹಿನ್ನೆಲೆಯಲ್ಲಿ ರಚನೆಗೊಂಡಿವೆ. ತೈಲವರ್ಣದಲ್ಲಿ ಚಿ.ಸು.ಕೃಷ್ಣಸೆಟ್ಟಿಯವರು ಆಧುನಿಕ ಶೈಲಿಯ ಸಂಯೋಜನೆಗಳೊಂದಿಗೆ, ಭಾವಚಿತ್ರಗಳನ್ನು ಸ್ವಲ್ಪ ಪ್ರಮಾಣದಲ್ಲಿ ರಚಿಸಿದ್ದಾರೆ. ಇತರೆ ಮಾಧ್ಯಮ ಗಳಲ್ಲೂ ಸ್ವಲ್ಪ ಪ್ರಮಾಣದಲ್ಲಿ ಕಲಾಕೃತಿಗಳು ಸೃಷ್ಟಿಯಾಗಿವೆ. ನಿಸರ್ಗ ಚಿತ್ರಗಳನ್ನು ಜಲವರ್ಣಗಳಲ್ಲಿ

ರಚಿಸಿದ್ದಾರೆ. ಮೆಟಲ್ಸ್ ಮ್ಯೂರಲ್, ಶಿಲ್ಪ ಕಲಾಕೃತಿಗಳನ್ನು ಸಿಮೆಂಟ್‌ನಲ್ಲಿ, ಮಣ್ಣಿನಲ್ಲಿ, ಪ್ಲಾಸ್ಟರ್ ಆಫ್ ಪ್ಯಾರೀಸ್ ಮಾಧ್ಯಮದಲ್ಲಿ ರಚಿಸಿದ್ದಾರೆ. ಪ್ರತಿಯೊಂದು ಕಲಾಕೃತಿಯ ರಚನೆಯ ಹಿನ್ನೆಲೆ ಮತ್ತು ದೃಷ್ಟಿಕೋನಗಳನ್ನು ಚಿ.ಸು.ಕೃಷ್ಣಸೆಟ್ಟಿರವರು ರಚಿಸಿರುವುದನ್ನು ಇಲ್ಲಿ ಕಾಣಬಹುದು.

ಕೃಷ್ಣಸೆಟ್ಟಿಯವರ ಪ್ರಕಾರ ಕಲಾವಿದರಲ್ಲಿ ಎರಡು ರೀತಿಯಲ್ಲಿ ಕೆಲಸಮಾಡ್ತಾರೆ, ಒಂದು ಟ್ರಾನ್ಸಿಟೀವ್ ಮತ್ತು ಇನ್ಟ್ರಾನ್ಸಿಟೀವ್(ಸಕರ್ಮಕ & ಅಕರ್ಮಕ) ಅಂತಾ, ಒಂದು ಗುಂಪಿನವರು ಮೊದಲು ಏನ್ ಮಾಡೋದು ಎಂಬ ಆಲೋಚನೆಯಲ್ಲಿ ತೊಡಗಿ, ರಫ್ ಸ್ಕೆಚ್ ಮಾಡಿಕೊಂಡು ಚಿತ್ರ ರಚನೆಮಾಡುತ್ತಾ ಅಭಿವೃದ್ಧಿಪಡಿಸಿಕೊಂಡು ಹೊಗ್ತಾಯಿರ್ತಾರೆ. ಇನ್ನೂ ಎರಡನೇ ರೀತಿಯಲ್ಲಿ ದೊಡ್ಡ ದೊಡ್ಡ ಕಲಾವಿದರೆಲ್ಲಾ ಬಹುಶಃ ಅಕರ್ಮಕ ಗುಂಪಿಗೆ ಸೇರುತ್ತಾರೆ. ಇದನ್ನು ಪ್ರಜ್ಞಾಪ್ರವಾಹ ತಂತ್ರ ಕರೆಯಬಹುದು. ಈ ಕಲಾವಿದರಿಗೆ ಹೇಗೆ..? ಏಕೆ..? ಇಮೇಜ್‌ಗಳು ಬರುತ್ತವೆ ಎಂಬ ಅರಿವಿರುವುದಿಲ್ಲ, ನನ್ನ ಇಡೀ ಕಲಾಕೃತಿಗಳನ್ನು ಗಮನಿಸಿದರೆ ಕುರ್ಚಿ ಬರುತ್ತದೆ. ಆ ಕುರ್ಚಿಯನ್ನು ಅಧಿಕಾರದ ಸಂಕೇತವಾಗಿ ಬಳಸಿರುತ್ತೇನೆ. ಎರಡನೆಯದಾಗಿ ಹಾವು ಹೆಚ್ಚು ಬರುತ್ತದೆ. ಹಾವು ಬಂದಿದ್ದು ಸೆಕ್ಸ್‌ನ ವಿಷಯವಾಗಿ ಅದು ಅದಾಗಿಯೇ ಉಳಿಯಲಿಲ್ಲ ಅಲ್ಲಿ ಹಾವು ಮುಖ್ಯವಾಗುತ್ತೇ ವಿನಃ ಸಿಂಬಲಿಸಂ ಆಗಿ ಉಳಿಯಲಿಲ್ಲ. ಅದರಲ್ಲಿ ಕೈಗಳು ಬಂದವು, ಬೇಸಿಕಲಿ ಕೈಗಳು ಕಲಾಕೃತಿಯಲ್ಲಿ ಬಂದದ್ದು, ಜೈಲಲಿದ್ದ ಸಂದರ್ಭವೂ ಸೇರಿದಂತೆ, ಮೊದಲಿನಿಂದಲೂ ಕಾಂಗ್ರೆಸ್ ವಿರೋಧಿ, ಕಾರಣ ಪ್ರತಿಭಟನೆಯ ಸಂದರ್ಭದಲ್ಲಿ ನನ್ನನ್ನ ಜೈಲಿಗೆ ಕಳುಹಿಸಿದ ಸಂದರ್ಭ ಇತ್ಯಾದಿ ಅದನ್ನೆ ಮುಖ್ಯವಾಗಿಟ್ಟುಕೊಂಡು ಕೈ ಸಿಂಬಲನ್ನು ಕೃಷ್ಣಸೆಟ್ಟಿಯವರು ತಮ್ಮ ಚಿತ್ರಗಳಲ್ಲಿ ಯಥೇಚ್ಛವಾಗಿ ತೋರಿಸಲಾಗಿರುತ್ತದೆ. ಆಗಿನ ಸಂದರ್ಭದಲ್ಲಿದ್ದ ಸರ್ಕಾರದ ಆಡಳಿತವನ್ನು ವಿರೋಧಿಸುವ ತಂತ್ರವನ್ನು ಚಿತ್ರಕೃತಿಯ ಮೂಲಕ ಹೊರಹಾಕಿರುವುದು.

ಲಲಿತಕಲೆಗಳಲ್ಲೊಂದಾದ ಚಿತ್ರಕಲೆ ತತ್‌ಕ್ಷಣಕ್ಕೆ ಕಣ್ಣಿಗೆ ಮುದವನ್ನು ನೀಡುತ್ತಾ ನಮ್ಮ ಭಾವ ಪ್ರಪಂಚವನ್ನು ಸೇರಿಕೊಳ್ಳುತ್ತದೆ. ಅಂತರಂಗದಲ್ಲಿ ಅದರ ಬಾಹ್ಯ ಸೌಂದರ್ಯ ಮತ್ತು ಆಂತರಿಕ ಅರ್ಥಗಳು ಬಹುಕಾಲದವರೆಗೆ ಉಳಿದು ಬಿಡುತ್ತದೆ. ಈ ದೃಶ್ಯ ಪ್ರಪಂಚವೆಲ್ಲಾ ಸೃಷ್ಟಿಕರ್ತನ ಒಂದು ಚಿತ್ರಕಲಾ ಶಾಲೆಯೇ ಆಗಿದ್ದು, ನಾವು ಕಣ್ಣು ತೆರೆದರೆ ಸಾಕು ಚಿತ್ರವೊಂದು ಕಣ್ಮುಂದೆ ಬಂದು ನಿಂತು ಬಿಡುತ್ತದೆ. ಚಿತ್ರಕಲಾವಿದನು ರೇಖೆ ಮತ್ತು ಬಣ್ಣಗಳಿಂದ ಒಂದು ವಿಶಿಷ್ಟವಾದ ವಸ್ತುವನ್ನು ಅನುಭವವನ್ನು ನಮ್ಮ ಮುಂದಿಟ್ಟು ಅಚ್ಚರಿಗೊಳಿಸುವನು ಹಾಗೆಯೇ ಆನಂದವನ್ನುಂಟು ಮಾಡುವನು. ಕೆಲವು ಚಿತ್ರಗಳು ನಮ್ಮನ್ನು ತನ್ಮಯಗೊಳಿಸಿ, ಸಮಾಧಿಸಕ್ತರನ್ನಾಗಿಸಿ ಮಾಡುವ ಸಾಮರ್ಥ್ಯವನ್ನು ಹೊಂದಿರುತ್ತವೆ. ಆಗಿನ ಅನುಭವ ಅವರ್ಣನೀಯವು ಆಗಿರುತ್ತದೆ. ಚಿತ್ರಕಲೆಯಲ್ಲಿ ರೇಖೆ ಮಹತ್ವವುಳ್ಳದ್ದಾಗಿದ್ದು, ಬಣ್ಣ ಯಾವುದೇ ವಸ್ತುವಿನ ಆಂತರಿಕ ಹಾಗೂ ಬಾಹ್ಯ ನಿರೀಕ್ಷಣೆಯಿಂದ

ಮನಸ್ಸಿನ ಮೇಲಾಗುವ ಪರಿಣಾಮವೇ ಭಾವ. ಈ ಭಾವ ಪ್ರಚೋದನೆಗೆ ವರ್ಣಗತಿಗಳು ಮುಖ್ಯಬಿಂದು. ರೇಖೆ, ವರ್ಣ, ಗಾತ್ರ, ರೂಪ, ಪ್ರಮಾಣ, ಭಾವ ಮತ್ತು ಸಾದೃಶ್ಯ ಮುಂತಾದವುಗಳು ಕಲಾವಿದನಿಗೆ ಮೂಲಭೂತವಾಗಿ ಗೊತ್ತಿರಬೇಕಾದ ಅಂಶಗಳು. ಇವೆಲ್ಲಾ ಹಿನ್ನೆಲೆಯಾಗಿ ಬಣ್ಣ ವಹಿಸುವ ಪಾತ್ರ ಅಸದೃಶ್ಯವಾದುದು. ಕೆಲವು ಸಲ ಬಣ್ಣಗಳನ್ನು ಭಾರ, ಹಗುರ ವರ್ಣಗಳೆಂದು, ಇನ್ನೂ ಕೆಲವೊಮ್ಮೆ ಹಿಂಜರಿತ ಮತ್ತು ಮುಂಜರಿತ ವರ್ಣಗಳೆಂದು ಹೇಳಲಾಗುತ್ತದೆ. ನೀಲಿ ಬಣ್ಣಕ್ಕೆ ಹಿಂಜರಿತವೆಂದು ಕರೆಯಲಾಗುತ್ತದೆ. ಅಂದರೆ ನೀಲಾಕಾಶ ಕೈಗೆಟುಕದೆ ದೂರ ಸರಿದಂತೆ ತೋರುತ್ತದೆ. ಕೆಂಪು ಮತ್ತು ಕಂದು ಬಣ್ಣಗಳನ್ನು ಮುಂಜರಿತ ವರ್ಣಗಳೆಂದು ಕರೆಯುತ್ತಾರೆ. ಏಕೆಂದರೆ ಇವು ಇತರ ಬಣ್ಣಗಳ ಮಧ್ಯದಲ್ಲಿಯೂ ಕೂಡ ಮುನ್ನುಗ್ಗಿ ನಮಗೆ ಎದ್ದು ಕಾಣಿಸುತ್ತದೆ. ಕಂದು ಬಣ್ಣ ಭಾರವಾದ ಬಣ್ಣವೆಂದು, ತಿಳಿನೀಲಿ ಹಾಗೂ ಕೆನೆ ಬಣ್ಣವನ್ನು ಹಗುರ ಬಣ್ಣವೆಂದು ಕರೆದರೆ ಇನ್ನೂ ಕೆಲವು ಮಂಕು ಬಣ್ಣಗಳಿವೆ. ಹಾಗೆಯೇ ಉತ್ಸಾಹ ಚೈತನ್ಯಮಯಿ ಬಣ್ಣಗಳೂ ಇವೆ. ಇನ್ನೂ ಕೆಲವು ಗ್ರಾಮೀಣ ಬಣ್ಣಗಳೆಂದು ವಿಂಗಡಿಸ ಬಹುದು. ಹೀಗೆ ಪ್ರತಿಯೊಂದು ಬಣ್ಣಗಳು ತನ್ನದೇಯಾದ ಅರ್ಥವನ್ನು ಹೊಂದಿವೆ. ಹೀಗಾಗಿ ಸಂಯೋಜನಾ ಕಲಾಕೃತಿಗಳಲ್ಲಿ ಹಾವ-ಭಾವಗಳನ್ನು ಪ್ರಧಾನವಾಗಿಸಲು ವರ್ಣಗಳು ತುಂಬಾ ಪ್ರಮುಖ ಪಾತ್ರವನ್ನು ವಹಿಸುತ್ತವೆ.

ಪ್ರಾಗೈತಿಹಾಸಿಕ ಕಾಲದಿಂದಲೇ ಗುಹೆಗಳಲ್ಲಿ ರೇಖಾ ಹಾಗೂ ವರ್ಣಚಿತ್ರಗಳ ರಚನೆಯಾಗಿರುವುದನ್ನು ನಾವು ಕಾಣಬಹುದು. ಇದಲ್ಲದೆ ಅಜಂತಾ, ಬಾಗ್ ಮುಂತಾದ ಗುಹೆಗಳಲ್ಲಿಯೂ ಕೂಡ ವರ್ಣಚಿತ್ರಗಳನ್ನು ಕಾಣಬಹುದು. ಇದಲ್ಲದೇ ರಾಜಮನೆತನಗಳಲ್ಲಿ ಹಲವಾರು ಕಲಾವಿದರಿಗೆ ಆಶ್ರಯವನ್ನು ನೀಡಿದ್ದರು. ಈ ಹಂತದಲ್ಲಿ ವರ್ಣಚಿತ್ರಗಳು ಹೆಚ್ಚಿನ ಪ್ರಮಾಣದಲ್ಲಿ ರಚನೆಗೊಂಡವು. ಹೀಗೆ ರಾಜಾಶ್ರಯವನ್ನು ಪಡೆದ ಹಲವಾರು ಚಿತ್ರಕಲಾವಿದರು ರಾಜಮನೆತನದ ರಾಜದರ್ಬಾರಿನ ಅರಮನೆಯ ಚಿತ್ರಗಳು, ರಾಜಮಹಾರಾಜರ ಭಾವಚಿತ್ರಗಳು, ಪೂರ್ಣ ಪ್ರಮಾಣದ ಜೀವ ಮಾಧರಿಯ ಕಲಾಕೃತಿಗಳು ಹೆಚ್ಚಿನ ಪ್ರಮಾಣದಲ್ಲಿ ರಚನೆಗೊಂಡವು. ಮುಂದೆ ಬ್ರಿಟಿಷರ ಆಗಮನದಿಂದಾಗಿ ನಮ್ಮ ಭಾರತದ ಕಲಾಕೃತಿಗಳಲ್ಲಿ ಪಾಶ್ಚಾತ್ಯರ ಪ್ರಭಾವವನ್ನು ಬೀರಿದ್ದನ್ನು ನಾವು ನೋಡಬಹುದಾಗಿದೆ.

ಬ್ರಿಟಿಷರಿಂದ ಮುಂಬೈನ ಸರ್ ಜೆ.ಜೆ.ಕಲಾಶಾಲೆ, ಮದ್ರಾಸ್‌ನ ಕಲಾಶಾಲೆ, ಕಲ್ಕತ್ತಾ ಕಲಾಶಾಲೆಗಳು ಹುಟ್ಟಿಕೊಂಡವು. ದೌರ್ಭಗ್ಯದ ಸಂಗತಿಯೆಂದರೆ ಮುಂಬಯಿ ಕಲಾಶಾಲೆ ಪಾಶ್ಚಾತ್ಯ ವಾಸ್ತವ ಸಂಪ್ರದಾಯದ ಶಿಕ್ಷಣವನ್ನು ನೀಡುತ್ತಿತ್ತು. ಮೈಸೂರು ಅರಸರಿಂದ ಹುಟ್ಟಿಕೊಂಡ ಮೈಸೂರು ಕಲಾಶಾಲೆ ಮುಂಬಯಿ ಶಾಲೆಯ ಶಾಖೆ ಅಲ್ಲದಿದ್ದರೂ ಅಲ್ಲಿಯ ಕಲಾ ಸಂಪ್ರದಾಯಕ್ಕೆ ಬದ್ಧ ಎಂಬಂತೆ ತನ್ನ ಶಿಕ್ಷಣಕ್ರಮವನ್ನು ರೂಢಿಸಿಕೊಂಡಿತ್ತು, ಕಲ್ಕತ್ತಾ ಕಲಾಶಾಲೆಯ ಪ್ರಿನ್ಸಿಪಾಲ್‌ರಾಗಿದ್ದ

ಪರ್ಸಿಬ್ರೌನ್ ಭಾರತದ ಎಲ್ಲಾ ದೇಶಿಯ ಕಲಾಸಂಪ್ರದಾಯಗಳನ್ನು ಅಧ್ಯಯನ ಮಾಡಿ, ಅವನೀಂದ್ರನಾಥ ಠಾಕೂರರ ಮಾರ್ಗದರ್ಶನದಲ್ಲಿ ಕಲ್ಕತ್ತಾ ಕಲಾಶಾಲೆ ಒಂದು ಭಾರತೀಯ ಶೈಲಿಯನ್ನು ರೂಢಿಸಿಕೊಳ್ಳಲು ಧಾರಾಳವಾಗಿ ಉತ್ತೇಜನ ನೀಡಿದ್ದರು. ಭಾರತೀಯ ಸಾಹಿತ್ಯ ಪ್ರಪಂಚದಲ್ಲಿ ನವೋದಯ ಕ್ರಾಂತಿ ಮೊದಲಾದದ್ದು ಬಂಗಾಳದಲ್ಲಿ, ಕಲಾಪ್ರಪಂಚದಲ್ಲಿ ಮಾಡಿದ ನವೋದಯ ಕ್ರಾಂತಿಗೂ ಬಂಗಾಳವೇ ತವರುಮನೆ. ಬಂಗಾಳಿ ಸಂಪ್ರದಾಯ ಒಂದು ಅಸ್ತಿತ್ವಕ್ಕೆ ಬರಲು ಪರ್ಸಿಬ್ರೌನ್ ವಾತಾವರಣವನ್ನು ಕಲ್ಪಿಸಿದರು. ರಾಜಸ್ಥಾನದ ದೇಸಿಕಲಾ ಪ್ರಗತಿ, ಮುಘಲ್ ಚಿತ್ರ ಸಂಪ್ರದಾಯ ಅಜಂತಾ ಗುಹೆಗಳ ಭಿತ್ತಿಚಿತ್ರ ಸಂಪ್ರದಾಯ(ಮ್ಯೂರಲ್ ಪೇಂಟಿಂಗ್) ಚೀನಾ ಮತ್ತು ಜಪಾನಿ ಕಲಾ ಸಂಪ್ರದಾಯ ಇವೆಲ್ಲದರ ಸಮ್ಮಿಶ್ರ ಪ್ರಭಾವದ ಶಿಸ್ತು ಬಂಗಾಳಿ ಸಂಪ್ರದಾಯ. ಇದರ ಜನ್ಮದಾತರು ಅವನೀಂದ್ರನಾಥ ಠಾಕೂರರು೩ ಇಂತಹ ದೇಸಿಯಾವಾದ ಕಲಾ ವಾತಾವರಣದಲ್ಲಿ ತಮ್ಮದೇ ಆದ ಒಂದು ಛಾಪನ್ನು ಮೂಡಿಸಿದ ಕಲಾವಿದರಲ್ಲಿ ರಾಜರವಿವರ್ಮ ಪ್ರಮುಖರು. ಪಾಶ್ಚಾತ್ಯರ ಪ್ರಭಾವದಿಂದ ಅನೇಕ ತೈಲಚಿತ್ರವನ್ನು ರಚಿಸಿ ತನ್ನದೇ ಪಾರಮ್ಯವನ್ನು ಮೆರೆದವರು. ೧೯ನೇ ಶತಮಾನದಲ್ಲಿ ಹೆಚ್ಚು ಕಲಾಕೃತಿಗಳನ್ನು ರಚಿಸಲು ತೈಲವರ್ಣವನ್ನೆ ಬಳಸು ತ್ತಿದ್ದರು. ಅದರಂತೆ ೮೦ರ ದಶಕದಿಂದ ಪ್ರಾರಂಭವಾದ ಚಿ.ಸು.ಕೃಷ್ಣಸೆಟ್ಟಿಯವರ ಚಿತ್ರಕಲಾಕೃತಿಗಳು ಹೆಚ್ಚು ತೈಲವರ್ಣ ಮತ್ತು ಅಕ್ರಾಲಿಕ್ ವರ್ಣದಿಂದಲೇ ರಚನೆಗೊಂಡಿವೆ. ನಮ್ಮ ನಡುವಿನ ಹಿರಿಯ ಕಲಾವಿದ, ಕಲಾಬರಹಗಾರ, ಮತ್ತು ಕಲಾವಿಮರ್ಶಕರೂ ಆಗಿರುವ ಶ್ರೀ ಚಿ.ಸು. ಕೃಷ್ಣಸೆಟ್ಟಿಯವರ ಕಲಾಕೃತಿಗಳು ವಿಭಿನ್ನವು ಮತ್ತು ತಾತ್ವಿಕವಾಗಿ ಚಿಂತನೆಗೀಡು ಮಾಡುವಂಥವು ಆಗಿರುತ್ತವೆ. ಕಾರಣ ಅವರಿಗಿರುವ ವಿಫುಲ ಅನುಭವ ಮತ್ತು ವ್ಯಾಪಕವಾದ ತಾತ್ವಿಕ ಹಿನ್ನೆಲೆ ಇರುವುದರಿಂದ ಅದು ಕಲಾಕೃತಿಗಳಲ್ಲಿ ಒಡಮೂಡಿಬರಲು ಕಾರಣವಾಗುತ್ತದೆ. ಕೆಲವು ಪ್ರತೀಕಗಳನ್ನಿಟ್ಟುಕೊಂಡು ಕೃಷ್ಣಸೆಟ್ಟಿಯವರು ಹಲವು ಗ್ರಹಿಕೆಗಳನ್ನು ನೋಡುಗನ ಮುಂದೆ ಹರವುತ್ತಾರೆ. ಇದರಲ್ಲಿ ಮನುಷ್ಯಜೀವಿಯ ವ್ಯುತ್ಪತ್ತಿಗೆ ಸಂಬಂಧಿಸಿದ್ದು ಒಂದಾಗಿದೆ. ಪ್ರಕೃತಿ–ಪುರುಷನ ಸಮಾಗಮವೇ ಮನುಷ್ಯ ಸೃಷ್ಟಿಗೆ ಕಾರಣವೆಂಬಂತೆ ಕಾಣಿಸುವ ಕಲಾಕೃತಿಯಲ್ಲಿ ಲಿಂಗಾಕಾರವೊಂದು ಪ್ರಧಾನವಾಗಿ ಎದ್ದು ಕಾಣಿಸುತ್ತದೆ. ನಮ್ಮಿಂದ ಪೂಜೆಗೊಳ್ಳುವ ಗಂಡುದೇವರುಗಳಲ್ಲಿ ಶಿವನ ಪ್ರತೀಕವಾಗಿ ಲಿಂಗದ ಆಕಾರವನ್ನು ಆರಾಧಿಸುವುದು ಕಾಣುತ್ತೇವೆ. ಈ ಲಿಂಗವೂ ಪುರುಷನ ಲಿಂಗವನ್ನೇ ಸೂಚಿಸುತ್ತದೆ. ಇದನ್ನೇ ಸೆಟ್ಟಿಯವರ ಕೃತಿಯು ಸ್ಪಷ್ಟವಾಗಿ ಹೇಳುತ್ತದೆ. ಲಿಂಗದ ಶಿಲ್ಪಗಳಲ್ಲಿ ಪಾಣಿಬಟ್ಟಲು ಇಲ್ಲದ ಸ್ವಯಂಭೂ ಲಿಂಗಗಳಂತೆ ಇದು ಕೂಡಾ ಪುರುಷ ಲಿಂಗಾಕಾರವನ್ನು ಕಂಡರಿಸುತ್ತದೆ. ದೇವಾಲಯಗಳಲ್ಲಿನ ಲಿಂಗರೂಪದ ಶಿಲ್ಪಗಳು ಒಂದಿಷ್ಟು ಅಮೂರ್ತವಾಗಿದ್ದರೆ, ಇಲ್ಲಿ ಕೃಷ್ಣಸೆಟ್ಟಿಯವರ ಕೃತಿಯಲ್ಲಿನ ಲಿಂಗಾಕಾರವು ಯಥಾವತ್ತಾಗಿ ಇದು ಪುರುಷನ ಲಿಂಗವೆಂದೆ ಗುರುತಿಸುವಷ್ಟು ಸ್ಪಷ್ಟವಾಗಿದೆ. ಇದನ್ನು ಶೀಲ–ಅಶ್ಲೀಲದ ಕಣ್ಣುಗಳಿಂದ ಕಾಣಬೇಕಿಲ್ಲ. 'ಲಿಂಗವಿಲ್ಲವೇ

ಸೀಮೆಯ ಕಲ್ಲಿನಲ್ಲಿ/ ಲಿಂಗವಿಲ್ಲವೇ ಪಶುವಿನ ತೊಡೆಯಲ್ಲಿ' ಎಂದು ಬಸವಣ್ಣ ಸೀಮೆಯ ಕಲ್ಲಿನ ಆಕಾರವನ್ನು, ಪಶುವಿನ ತೊಡೆಯ ಸಂದುಗಳಲ್ಲಿರುವ ಗಂಡು ಪಶುವಿನ ಲಿಂಗವನ್ನೂ ತಾನು ಪೂಜಿಸುವ ಇಷ್ಟಲಿಂಗವೆಂದೇ ಬಗೆದು ದೈವತ್ವಕ್ಕೆ ಏರಿಸಿದ್ದಾನೆ. ಬಸವಣ್ಣನ ದೃಷ್ಟಿಕೋನ ಭಕ್ತಿಮೂಲವಾದದ್ದು.

ಪ್ರಸ್ತುತ ಚಿತ್ರದಲ್ಲಿರುವ ಲಿಂಗ ಸೃಷ್ಟಿಮೂಲವಾದದ್ದು. ಇದು ಕಾಮವನ್ನು ಸೂಚಿಸುತ್ತದೆ. 'ಕಾಮ'ವೆಂದಾಕ್ಷಣ ಅದನ್ನು 'ಸೆಕ್ಸ್' ಎನ್ನುವ ಸೀಮಿತ ಅರ್ಥದಲ್ಲಿ ಕಾಣಬೇಕಿಲ್ಲ. ಪುರುಷಾರ್ಥಗಳಲ್ಲಿ ಕಾಮವೂ ಒಂದಾಗಿದೆ. ನಮ್ಮ ಆದಿಮ ಸಂಸ್ಕೃತಿಗಳಲ್ಲಿ ಮತ್ತು ಅನೇಕ ಪುರಾಣ ಕಾವ್ಯಗಳು ಸಹ ಮೋಕ್ಷವನ್ನು, ಪಾರಮಾರ್ಥವನ್ನು ಗಳಿಸಲು ಕಾಮವನ್ನು ತ್ಯಜಿಸಬೇಕೆಂದು ಹೇಳುವುದಿಲ್ಲ. ಆರೋಗ್ಯಕರವಾಗಿ ಅನುಭವಿಸುತ್ತ ಸದ್ಗತಿ ಹೊಂದಬಹುದೆಂದು ಸಾರುತ್ತವೆ.

ಇದನ್ನು ಆಧುನಿಕ ಮನೋವಿಜ್ಞಾನದ ಪ್ರಕಾರವೂ ನೋಡುವುದಾದರೆ-ಸಿಗ್ಮಂಡ್ ಫ್ರಾಯ್ಡ್ 'ಆದಿಕಾಮವು ಬದುಕಿನ ಮೂಲಶಕ್ತಿ' ಎನ್ನುತ್ತಾನೆ. ಫ್ರಾಯ್ಡ್‌ನ ಎಳೆಯನ್ನು ಹಿಡಿದುಕೊಂಡು ಆಲೋಚಿಸುವ ನಮ್ಮ ಕಥೆಗಾರ ವಸುಧೇಂದ್ರ ಕಾಮವನ್ನು ಜೀವದಾಯಿನಿಯ ಮೂಲವೆಂದೇ ಗ್ರಹಿಸುತ್ತಾರೆ. 'ಮನುಷ್ಯನ ಬದುಕಿನಲ್ಲಿ 'ಕಾಮ' ಆರಂಭದಲ್ಲಿ ಸಂಪೂರ್ಣ ಸ್ವಾರ್ಥದಿಂದಲೇ ಶುರುವಾಗುತ್ತದೆ. ಕೇವಲ ನನ್ನ ದೇಹದ ಬಯಕೆಯ ಪೂರೈಕೆ, ನನ್ನ ಮನಸ್ಸಿನ ಬೇಗುದಿಯ ಶಮನ, ನನ್ನ ವೈಯಕ್ತಿಕ ಜಗತ್ತಿಗೆ ಮಾತ್ರ ಸಂಬಂಧಿಸಿದ್ದು ಎನ್ನುವಂತೆ ಕಂಡರೂ, ಅನಂತರ ಅದು ಮದುವೆಯ ಮೂಲಕ ಮತ್ತೊಂದು ಜೀವದೊಡನೆ ಬಾಳನ್ನು ಹಂಚಿಕೊಳ್ಳುವುದು, ಸಂಸಾರ-ಮಕ್ಕಳು ಆದ ಮೇಲೆ ಜಗತ್ತಿನ ಜೊತೆಗೆ ಬದುಕನ್ನು ಹಂಚಿಕೊಳ್ಳುವುದಕ್ಕೂ ಶುರುವಾದಾಗ 'ಕಾಮ'ದ ಉದ್ಧೇಶವೇ ಬೇರೆಯಿತ್ತೇನೋ ಎನ್ನುವ ಭಾವನೆ ಮೂಡುತ್ತದೆ' ಎಂದು ಕಾಮದ ಉದಾತ್ತತೆಯನ್ನು ತೆರೆದಿಡುತ್ತಾರೆ.

ಸಾಹಿತ್ಯಕ ಕೃತಿಗಳಲ್ಲಿ ಹಾವನ್ನು ಕಾಮದ ಸಂಕೇತವೆಂದು ಪರಿಭಾವಿಸಲಾಗುತ್ತದೆ. ಅದನ್ನಿಲ್ಲಿ ಸ್ಪಷ್ಟೀಕರಿಸುವಂತೆ ಸೆಟ್ಟಿಯವರು ಹಾವಿನಾಕಾರವನ್ನು ಪುರುಷನ ವಿರ್ಯಾಣುವನ್ನು ಹೋಲುವಂತೆ ಕಾಣಿಸಿದ್ದಾರೆ. ಚಿತ್ರಭಿತ್ತಿಯಲ್ಲಿ ಲಿಂಗದ ಮುಂದೆ ಆವರಿಸಿರುವ ಹಳದಿ ಬಣ್ಣದ ವಲಯವೂ ಸಹ ಕಾಮದ ಸಂಕೇತವೇ ಆಗಿದೆ. ನಮ್ಮ ಸೃಷ್ಟಿ ಕ್ರಿಯೆಗೆ ಕಾರಣವಾಗುವ ಅಂಗಾಗಳ ಗೂಢತೆಯನ್ನು ಚಿತ್ರವೂ ಯಾವ ಮುಚ್ಚುಮರೆಯಿಲ್ಲದೆ ತೋರಿಸುತ್ತಾದರೂ ಕೃತಿ 'ಪುರುಷ ಪ್ರಧಾನ'ವಾಗಿ ಮಾತ್ರ ನಿಂತಂತೆ ಕಾಣುತ್ತದೆ. ಸೃಷ್ಟಿ ಕ್ರಿಯೆಯಲ್ಲಿ ಗಂಡಿನ ಪಾತ್ರದಷ್ಟೇ ಹೆಣ್ಣಿನ ಪಾತ್ರವೂ ಮಹತ್ವದ್ದಾಗಿದೆ. ಆ ಕಾರಣಕ್ಕಾಗಿ ದೇವಾಲಯಗಳಲ್ಲಿರುವ ಬಹುತೇಕ ಲಿಂಗಶಿಲ್ಪಗಳಲ್ಲಿ ಲಿಂಗದ ಕೆಳಗಿರುವ ಪಾಣಿಬಟ್ಟಲು ಸ್ತ್ರೀಯ ಯೋನಿಯನ್ನು ಸೂಚಿಸುತ್ತದೆ. ಒಂದು ಹೊಸ ಸೃಷ್ಟಿಗೆ ಎರಡೂ ಲಿಂಗದ (ಹೆಣ್ಣು ಮತ್ತು

ಗಂಡು) ಜೀವಿಗಳ ಆವಶ್ಯಕತೆಯನ್ನು ಇದು ಸಾರುತ್ತವೆ. ಸ್ತ್ರೀ ಸಂಕೇತವಾಗಿ ಚಿತ್ರದಲ್ಲಿ ನೆಲ ಮತ್ತು ಚಿಗುರುತ್ತಿರುವ ಹುಲ್ಲುಗರಿಕೆಯನ್ನು ನಿದರ್ಶಿಸಲಾಗಿದೆಯಾದರೂ ಅದಕ್ಕೆ ಇನ್ನಷ್ಟು ಒತ್ತು ನೀಡಿದ್ದರೆ ಬಹುಶಃ ಉಭಯ ಲಿಂಗಕ್ಕೂ ನ್ಯಾಯ ಒದಗಿಸಿದಂತಾಗುತ್ತಿತ್ತು.

ಇತರರು ಗುರುತಿಸುವಲ್ಲಿನ ಆಸಕ್ತಿಯು ಕಲಾಕೃತಿಗಳಲ್ಲಿ ಭಾರದಿಂದ ವ್ಯಕ್ತವಾದ ಟೆಕ್ಸಚರ್‌ಗಳ ವಿರೋಧಾಭಾಸವನ್ನು (ಸರಳದ ವಿರುದ್ಧ) ಸಮತಟ್ಟಾದ ಮೇಲ್ಮೈಯಲ್ಲಿ ತೇಲುತ್ತಿರುವಿಕೆಯನ್ನು ವ್ಯಾಖ್ಯಾನಿಸುತ್ತದೆ. ಆದರೆ ಫ್ಲಾಟ್ ಬಣ್ಣದ ಜಾಗಗಳ ಮೇಲೆ ವಿಶ್ರಾಂತಿ ಪಡೆಯುವುದು ಹಗುರವಾಗಿರುತ್ತದೆ. ಒಟ್ಟಾರೆಯಾಗಿ ವಸಾಹತುಗೊಳಿಸಿದ ವಿನ್ಯಾಸ ಪ್ರದೇಶವನ್ನು ಸೂಕ್ಷ್ಮದರ್ಶಕದಲ್ಲಿ ಕಾಣಿಸಿಕೊಳ್ಳುವಂತಹ ಅವಲೋಕನ ಅಸ್ಥಿತ್ವದ ದೃಷ್ಟಿಕೋನಗಳನ್ನು ಹೋಲುತ್ತದೆ ಇಲ್ಲವೇ ಹಿಂದೆಂದೂ ತಿಳಿಯಲಾಗದ ಐತಿಹಾಸಿಕ ಮನೋಭಾವನೆಗಳನ್ನು ಹೋಲುತ್ತವೆ. ಹಾಗೆಯೇ ದೃಷ್ಟಿಗೋಚರ ಮತ್ತು ಸಮಯದ ಅಂಶಗಳ ಮಾನವನ ಮಿತಿಯ ಕಾರಣದಿಂದ ಅವುಗಳನ್ನು ನೋಡದಂತೆ ನಾವು ಪ್ರತ್ಯೇಕಗೊಳಿಸುತ್ತೇವೆ. ಅಂದರೆ ಕಲಾವಿದನು ಅದೃಶ್ಯವಾಗಿರುವ ದೃಶ್ಯಗಳ ಸರಣಿಯನ್ನು ಪ್ರಸ್ತುತಪಡಿಸುತ್ತಾನೆ. ಅವುಗಳು ಪ್ರಚೋದಿಸುವ ಚಿತ್ರಣದೊಂದಿಗೆ ಸರಿಹೊಂದುವಂತೆ ನಿರಾಕರಿಸುವ ಸಮಯದಲ್ಲಿ ಅವುಗಳನ್ನು ಒದಗಿಸುತ್ತದೆ. ಅಂತಹ ಚಿತ್ರಗಳನ್ನು ಸೃಷ್ಟಿಸಿದ ದೃಷ್ಟಿಗೋಚರವು ಯಾವಾಗಲೂ ಕಾಣುವ ಬದಲು ನೋಡಬೇಕಾದದ್ದು ಎಂಬುದನ್ನು ತೋರಿಸುತ್ತದೆ. ಭಾರತೀಯ ಪ್ರಜೆಯಲ್ಲೊಬ್ಬನಾಗಿರುವ ಕಲಾವಿದ ಕೃಷ್ಣಸೆಟ್ಟಿ ರಾಜ್ಯಶಾಸ್ತ್ರ ಮತ್ತು ಸಮಾಜಶಾಸ್ತ್ರದ ಮೆಚ್ಚಿನ ವಿದ್ಯಾರ್ಥಿಗಳಲ್ಲೊಬ್ಬ ಇವುಗಳಲ್ಲಿ ಕಂಡುಕೊಂಡ ಕಲಾವಿದನ ಕಲ್ಪನೆ ಹೇಗಿರುತ್ತದೆ ಎಂಬುದನ್ನು ಈ ಚಿತ್ರಕಲಾವಿದ ತನ್ನ ಕಲಾಕೃತಿಗಳ ಮೂಲಕ ಸುಳಿವು ನೀಡಿದ್ದಾರೆ.

ಕಲಾವಿದರು ಸೂಕ್ಷ್ಮದರ್ಶಕ ದೃಷ್ಟಿಕೋನಿಗಳಾಗಿದ್ದು, ಮಾನವನಲ್ಲಿರುವ ಕೃತಕ ಕಣ್ಣಿನಲ್ಲಿ ಕಾಣಿಸದಂತಹದ್ದನ್ನು ಕಲಾವಿದ ವೀಕ್ಷಿಸಿ ಅವುಗಳನ್ನು ಗ್ರಹಿಸಬೇಕೆಂದು ತಿಳಿಸುತ್ತಾನೆ. ರಾಷ್ಟ್ರದ ರಚನೆಯಲ್ಲಿ ಘಟನೆಗಳನ್ನು ಒಂದು ನಿರ್ದಿಷ್ಟ ರೀತಿಯಲ್ಲಿ ಕಲ್ಪಿಸಿಕೊಳ್ಳುವುದನ್ನು ಕಲಾಕೃತಿಗಳ ಮೂಲಕ ಊಹಿಸಬಹುದು. ಅದೇ ರೀತಿ ಇಲ್ಲಿ ಕೃಷ್ಣಸೆಟ್ಟಿಯವರು ತಮ್ಮ ಕಲಾಕೃತಿಯಲ್ಲಿ ಹೆಚ್ಚು ಆಮೂರ್ತ ಚಿತ್ರಕೃತಿಗಳನ್ನು ರಚಿಸಿದ್ದು, ಅದರಲ್ಲಿ ರಾಷ್ಟ್ರದ ಇತಿಹಾಸದ ಪುಟಗಳನ್ನು ತಮ್ಮದೇ ಶೈಲಿಯಲ್ಲಿ ಪ್ರಸ್ತುತ ಪಡಿಸಿದ್ದು, ಅದರಲ್ಲಿ ಬಹು ಮುಖ್ಯವಾಗಿ ಶಾಸನಗಳ ಹೋಲಿಕೆಯನ್ನು ಗುರುತಿಸಲಾಗಿದೆ. ಈ ಕೃತಿಗಳಲ್ಲಿ ಬರುವಂತಹ ಚಿತ್ರಗಳಲ್ಲಿ ಪ್ಲಾಟ್ ಜಾಗದಲ್ಲಿ ಎಲ್ಲೆಡೆ ಬಣ್ಣಗಳು ತೇಲುತ್ತಿವೆ. ಮತ್ತೊಂದು ರೀತಿಯಲ್ಲಿ ಹೇಳುವುದಾದರೆ ಸಮತಟ್ಟಾದ ಬಣ್ಣದ ಕ್ಷೇತ್ರಗಳು ರಚನೆಯಾದ ಪ್ರದೇಶಗಳಲ್ಲಿರುತ್ತವೆ. ಜೊತೆಗೆ ಜವಾಬ್ದಾರಿ ಹೊಂದಿರುವುದರಿಂದ ಕ್ಯಾನ್ವಸ್ ಮೇಲಿನ ಚಿತ್ರ ಏನನ್ನು ಸೂಚಿಸಬಹುದು ಎಂಬುದನ್ನು ಸೂಕ್ಷ್ಮವಾಗಿ ಗ್ರಹಿಸಬಹುದು.

ಕಲಾವಿದರ ಕಲಾಕೃತಿಗಳ ಕಾರ್ಯತಂತ್ರ, ಉತ್ಪನ್ನ ಅವರು ಕಲಾಕೃತಿಗಳ ಮೂಲಕ ಹೇಳಬಯಸುವ ಸಂದೇಶದ ದೃಶ್ಯ, ಅವರ ಆರಂಭಿಕ ಕೃತಿಗಳು ನಂತರ ಆ ಕೃತಿಗಳಲ್ಲಿ ಕಂಡುಬರುವ ಸರಳ ಸ್ಟ್ರಚ್ಚರ್‌ಗಳು ಮೆಲ್ಮೈಯನ್ನು ಹೊಂದಿರುತ್ತವೆ. ಒಂದು ಅರ್ಥವು ಕಲಾವಿದನ ಒಳಗಿನಿಂದಲೇ ವಿಸ್ತರಿಸಿದ್ದಾದರೆ ಅವನ ತೋರಿಕೆಯ ವಾಚನ ಪುನರಾವರ್ತನೆ ಅಥವಾ ಹೋಲುವ ವರ್ಣಚಿತ್ರದ ಸ್ಟ್ರಚ್ಚರ್‌ಗಳ ಚಿಕಿತ್ಸೆಯು ಇದೇ ರೀತಿ ಕಾಣುವ ಉದ್ದೇಶದಿಂದ ವಿರೋಧಾಭಾಸವಾಗಿದೆ ಎನಿಸುತ್ತಿದೆ. ಇಲ್ಲಿ ಆಸಕ್ತಿದಾಯಕ ಪಾಠವೆಂದರೆ ತನ್ನ ಉದ್ದೇಶ ಮತ್ತು ಉದ್ದೇಶಪೂರ್ವಕವಾಗಿ ಅಥವಾ ಕಲಾವಿದರ ಕೃತಿಗಳಲ್ಲಿ ಸ್ಟೈಲಿಸ್ಟಿಕ್ ಕೋಟ್‌ಗಳ ನಡುವೆ ಉದ್ದೇಶ ಪೂರ್ವಕವಾಗಿ ಉತ್ತೇಜಿಸುವ ಪ್ರಯತ್ನ ನಿರರ್ಥಕ ಎನಿಸುತ್ತದೆ. ಕೃತಿಗಳಲ್ಲಿ ಶೈಲಿಗಳು ನಿರ್ದಿಷ್ಟ ದೃಷ್ಟಿಕೋನವನ್ನು ನಿರ್ಧರಿಸುತ್ತವೆ. ಜೊತೆಗೆ ರೆಂಡರಿಂಗ್ ಕ್ರಮವು ಬದಲಾಗುವುದಿಲ್ಲ. ಕಾರಣ ಇಲ್ಲಿ ಕಲಾವಿದ ಉದ್ದೇಶಪೂರ್ವಕವಾಗಿ ಮಾಡಿರುತ್ತಾನೆ. ಹಾಗೆಯೇ ಒಂದು ಉದ್ದೇಶದೊಂದಿಗೆ ಎಂದಿಗೂ ಬದಲಾಗದ ವಿಲೋಮ ಅನುಪಾತದಲ್ಲಿ ಶೈಲಿ ಮತ್ತು ತಂತ್ರ, ಉದ್ದೇಶವನ್ನು ಇಟ್ಟುಕೊಂಡಿರುವುದನ್ನು ಗಮನಿಸಬಹುದು.

ಕಲಾವಿದನ ಅಮೂರ್ತವಾದ ಅಭಿವ್ಯಕ್ತಿಗೆ ಸಂಬಂಧಿಸಿದ ಕೃತಿಗಳ ಪರಿಣಾಮವಾಗಿ ಕಾಣಿಸುವ ಅಥವಾ ಚಿತ್ರಣವನ್ನು ಅವರ ಕೆಲಸದ ಪ್ರಕ್ರಿಯೆಯಿಂದ ಕಡಿತಗೊಳಿಸಬಹುದು. ಏಕೆಂದರೆ ಅವರು ವೀಕ್ಷಕರು ತನ್ನ ಕೃತಿಗಳಿಂದ ಏನನ್ನು ನಿರೀಕ್ಷಿಸಬಹುದು ಎಂಬುದರ ಹಿನ್ನೆಲೆಯಲ್ಲಿ ಆಲೋಚನೆ ಮಾಡಬಹುದು. ಕೃಷ್ಣಸೆಟ್ಟಿಯವರ ಕಲಾಕೃತಿಗಳಲ್ಲಿ ರಾಷ್ಟ್ರದ ದೃಷ್ಟಿಗೋಚರ ಪ್ರಾತಿನಿಧ್ಯಕ್ಕೆ ಪ್ರಸ್ತುತ ವಿಧಾನವು ಕಡ್ಡಾಯವಾಗಿ ಹಿಂದೆ ನಡೆದ ಘಟನೆಯನ್ನು ಚಿತ್ರಿಸುವುದಲ್ಲದೇ ಉತ್ತಮ ಆಯ್ಕೆ ನಡೆದಿದೆ ಎಂಬುದನ್ನು ತನಗೆ ತಾನೇ ಬೆನ್ನುತಟ್ಟಿಕೊಂಡಂತಿದೆ. ಕಲಾವಿದ ಚಿ.ಸು ಕೃಷ್ಣಸೆಟ್ಟಿ ಒಬ್ಬ ವಿನ್ಯಾಸಕಾರರಾಗಿ, ವಿಮರ್ಶಕರಾಗಿ ಮತ್ತು ಕಲಾವಿದರಾಗಿ ಪೂರ್ವನಿಯೋಜಿತವಾಗಿ ಕೆಲಸಕಾರ್ಯವನ್ನು ಮಾಡಿರುತ್ತಾರೆ. ವ್ಯಕ್ತಿ ತನ್ನ ನಿಷ್ಠತೆಯಲ್ಲಿ ಬದ್ದತೆಯನ್ನು ತೋರಿರುತ್ತಾರೆ. ಅವುಗಳಲ್ಲಿ ಮುಖ್ಯವಾಗಿ

ಎ. ಭಾರತೀಯ ಬಲಪಂಥಿಯ ರಾಜಕೀಯದ ಸಬಲೀಕರಣ.

ಬಿ. ವಿದ್ಯಾರ್ಥಿ ಕಾರ್ಯಕರ್ತರಾಗಿ ಅವರು ಭಾಗವಹಿಸುವಿಕೆ.

ಸಿ. ಅವರ ಕಲಾತ್ಮಕ ನಿಲುವು ಒಂದು ಬ್ರೇಡ್ ರೀತಿಯಲ್ಲಿ ಒಟ್ಟಿಗೆ ನೇಯಲಾಗುತ್ತಿದೆ.

ಇದರ ಪರಿಣಾಮವಾಗಿ ತೀರಾ ಇತ್ತೀಚಿನ ಸರಣಿಯ ಕಲಾಕೃತಿಗಳು ಶಿಲಾಶಾಸನಗಳನ್ನು ಹೋಲುತ್ತವೆ ಎಂದು ಕಲಾವಿಮರ್ಶಕ ಎಚ್.ಎ.ಅನಿಲ್ ಕುಮಾರ್ ಅಭಿಪ್ರಾಯಪಡುತ್ತಾರೆ. ಅದೇರೀತಿ ಅವಶೇಷಗಳನ್ನು ನೆನಪಿಸುವುದುಂಟು. ಅಮೂರ್ತವಾದ ಅಭಿವ್ಯಕ್ತಿಗೆ ಸಂಬಂಧಿಸಿದ ಕೃತಿಗಳಿಗೆ ಸಂಬಂಧವನ್ನು ಹೊಂದಿವೆ. ಅಲ್ಲದೇ ನಿರ್ದಿಷ್ಟವಾಗಿ ರಾಷ್ಟ್ರದ ಅದೃಷ್ಟದ ಸೂಕ್ಷ್ಮದರ್ಶಕೀಯ ದೃಷ್ಟಿಕೋನಗಳು ಮತ್ತು ನಿರ್ದಿಷ್ಟವಾಗಿ ಮುಳ್ಳುಗಲ್ಲು ರೀತಿಯ ಚಿತ್ರಗಳನ್ನು ಮೌಖಿಕವಾಗಿ

ಪತ್ತೆಹಚ್ಚಲಾಗದಂತಹವು(ಹರಪ್ಪಾ–ಮೆಹೆಂಜೋದಾರೋ).ಇಲ್ಲಿನ ಕೆಲವು ಕೃತಿಗಳನ್ನು ಪರಿಗಣಿಸಿ ಇತಿಹಾಸವನ್ನು ಅರಿಯಬಹುದಾಗಿದೆ. ಅದಕ್ಕೆ ಪೂರಕವಾಗಿ ಇಲ್ಲಿ ಚಿತ್ರಗಳು ನಾಗರೀಕರ ಸ್ವದೇಶಿ ಆಯ್ಕೆಯ ಸ್ವಾತಂತ್ರ್ಯದಂತೆ ಬಿಂಬಿಸಿದ್ದು ಕಲಾವಿದ ಕೃಷ್ಣಸೆಟ್ಟಿಯವರು ಅವುಗಳ ಹಿನ್ನೆಲೆಯಲ್ಲಿ ತಮ್ಮ ಚಿತ್ರಕೃತಿಗಳಲ್ಲಿ ಇತಿಹಾಸದ ಬಿಂಬದ ನೆರಳನ್ನು ಕಾಣಿಸಿರಲೂಬಹುದು.

ಪ್ರಕೃತಿಯನ್ನು ತಮ್ಮ ಅಭಿವ್ಯಕ್ತಿಗೆ ಮೂಲ ಆಶ್ರಯವನ್ನಾಗಿಸಿಕೊಂಡ ಚಿ.ಸು.ಕೃಷ್ಣಸೆಟ್ಟಿ ತಾವು ಹುಟ್ಟಿದ ನೆಲ, ಜಲ, ಸುತ್ತ–ಮುತ್ತಲಿನ ಪರಿಸರದಲ್ಲಿ ಕಾಣಸಿಗುವ ಗಿಡ, ಮರ, ಪ್ರಾಣಿ, ಪಕ್ಷಿ ಜನರ ಬದುಕಿನಾಟಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಈ ಕಲಾವಿದ ತಮ್ಮ ಕಲಾಕೃತಿಗಳಲ್ಲಿ ಬಣ್ಣಗಳ ಮೂಲಕ ಚಿತ್ರವನ್ನು ಬಿಡಿಸುವುದರ ಮೂಲಕ ತನ್ನ ಭಾವನೆಗಳನ್ನು ಹಂಚಿಕೊಂಡವರು. ಇಂತಹ ಹಿನ್ನೆಲೆಯಲ್ಲಿ ಅನೇಕ ಸರಣಿಯ ರೂಪದಲ್ಲಿ ಸಂಯೋಜನೆ, ನವ್ಯಕಲೆಯಲ್ಲಿ ಕಲಾಕೃತಿಗಳು ರಚನೆಗೊಂಡಿವೆ. ಅವುಗಳಿಂದ ಆಯ್ದ ಕೆಲವು ಪ್ರಮುಖ ಕಲಾಕೃತಿಗಳ ವಸ್ತುವಿಷಯವನ್ನು ಇಲ್ಲಿ ಅಧ್ಯಯನದ ದೃಷ್ಟಿಯಿಂದ ವಿವರಿಸಲಾಗಿದೆ.

### ಶೀರ್ಷಿಕೆ ರಹಿತ ಕಲಾಕೃತಿಗಳು

ಇಲ್ಲಿ ಮುಖ್ಯವಾಗಿ ಸುಮಾರು ಮೂವತ್ತಕ್ಕೂ ಹೆಚ್ಚು ಚಿತ್ರಕೃತಿಗಳಿದ್ದು ಎಲ್ಲವೂ ಅಕ್ರಾಲಿಕ್ ವರ್ಣಗಳಿಂದ ಶೀರ್ಷಿಕೆರಹಿತ ರಚಿತ ಚಿತ್ರಕೃತಿಗಳಾಗಿರುತ್ತವೆ. ಈ ಚಿತ್ರಕೃತಿಗಳಲ್ಲಿ ದೃಶ್ಯಗಳಿಗೆ ಯಾವುದೇ ಚೌಕಟ್ಟಿಲ್ಲ. ಕಲಾವಿದರ ಭಿನ್ನ ಆಯಾಮದಲ್ಲಿ ಆಲೋಚನೆಗೆ ಮೀಸಲೆನಿಸದಂತೆ ರಚಿತವಾಗಿರುವ ಈ ಚಿತ್ರಗಳನ್ನು ಮೂರು, ಮೂರೂವರೆ ಅಡಿಯುಳ್ಳ ಕ್ಯಾನ್ವಸ್‌ನಲ್ಲಿ ರಚಿಸಲಾಗಿದೆ. ಅವುಗಳನ್ನು ಈ ಕೆಳಗಿನಂತೆ ವಿವರಣೆಯ ಮೂಲಕ ಕೃತಿಗಳನ್ನು ಗುರುತಿಸಲ್ಪಟ್ಟಿದೆ.

### ಚಿತ್ರ–೧

೩'x೪' ಅಳತೆಯಿರುವ ಈ ಕಲಾಕೃತಿಯನ್ನು ಅಕ್ರಾಲಿಕ್ ವರ್ಣಗಳಿಂದ ಚಿತ್ರಿಸಲಾಗಿದ್ದು, ಶೀರ್ಷಿಕೆ ರಹಿತವಾದ ತಮ್ಮದೇ ಕಲ್ಪನಾಶೈಲಿಯಲ್ಲಿ ಚಿತ್ರವನ್ನು ಚಿತ್ರಿಸಿರುತ್ತಾರೆ ಕಲಾವಿದ ಚಿ.ಸು.ಕೃಷ್ಣಸೆಟ್ಟಿಯವರು. ಇದರಲ್ಲಿ ಮುಖ್ಯ ಭಾಗವಾಗಿರುವ ಗಂಡು, ಹೆಣ್ಣಿನ ಮುಖಗಳು ಮತ್ತು ಕಪ್ಪು ಕೈಯಲ್ಲಿ ಹಾವಿನ ಆಕಾರದ ವಸ್ತುವನ್ನು ತೋರಿಸಿರುವುದು. ಗಂಡು ಹೆಣ್ಣಿನ ಸಂಬಂಧ ಎಷ್ಟು ಘಟ್ಟಿಯಾಗಿರುತ್ತದೆ ಎಂಬುದನ್ನು ತಮ್ಮದೇ ಶೈಲಿಯಲ್ಲಿ ಅವುಗಳಿಗೆ ಹೋಲಿಕೆಯ ನೆಪದಲ್ಲಿ ಕೈ ಮತ್ತು ಹಾವುಗಳನ್ನು ತೋರಿಸಿ, ಅವುಗಳನ್ನು ತಮ್ಮದೇ ಭಾವನೆಯಲ್ಲಿ ತೋರಿಸಿದ್ದಾರೆ ಎನಿಸುತ್ತಿದೆ. ಬದುಕು, ಬವಣೆಯ ನೇರ ನೋಟಕ್ಕೆ ತಲುಪುವ ಹಂತಗಳ ಸ್ವರೂಪ ಎಂತಹದ್ದು ಎಂಬುದನ್ನು ಇಲ್ಲಿ ವಿಸ್ತರಿಸಿದ್ದಾರೆ. ಕಪ್ಪು ಕೈ ಗಂಡು, ಹಾವು ಇಲ್ಲಿ ಹೆಣ್ಣು, ಈ ಹೆಣ್ಣು ಗಂಡಿನ ಮೇಲೆ ಸವಾರಿ

ಮಾಡುತ್ತಾರೆ ಎಂಬಂತಹ ಯೋಚನಾ ಸ್ಥಿತಿಯೂ ಕೂಡ ಬಂದಿರಬಹುದು.

ಸಮಾಜದಲ್ಲಿ ಗಂಡಿಗೆ ಹೆಣ್ಣು, ಹೆಣ್ಣಿಗೆ ಗಂಡು ತುಂಬ ಮುಖ್ಯವಾಗಿರುವಾಗ ಇವರಿಬ್ಬರ ಸಂಬಂಧ ಹಲಸಿನ ಹಣ್ಣಿನಂತಿರಬೇಕು ಅದಾದಾಗಲೇ ಜೀವನದಲ್ಲಿ ಸೌಖ್ಯವನ್ನುಣ್ಣಲು ಸಾಧ್ಯ ಎಂಬಂತೆ ಚಿತ್ರದಲ್ಲಿ, ಬಣ್ಣಗಳಲ್ಲಿ ಶ್ರೀಮಂತಿಕೆಯನ್ನು ತೋರಿಸಲಾಗಿರುತ್ತದೆ. ಇಲ್ಲಿ ಕಲಾವಿದ ಕ್ಯಾನ್ವಸ್‌ನ ಮೇಲೆ ಬ್ರೌನ್ ಮತ್ತು ನೀಲಿ, ಬಿಳಿ ಬಣ್ಣಗಳನ್ನು ಹರಿಬಿಟ್ಟಿರುವುದನ್ನು ಗಮನಿಸಿದರೆ ಜೀವನದ ತೊಳಲಾಟ ಒಂದು ಕ್ಷಣದ ಸುಖದಲ್ಲಿರುತ್ತದೆನೋ ಎಂಬ ದುಗುಡದಲ್ಲಿ ಯೊಚಿಸುತ್ತಿರುವಂತೆಯೋ, ಆಶ್ಚರ್ಯವಂತಿಕೆಯಲ್ಲಿಯೂ ಏನೊಂದು ಹೇಳುವ ಮೂಗಿನ ನೇರಕ್ಕೆ ಮಾತನಾಡುವ ಗೋಜಿಗೂ ಹೋಗದ ಸ್ಥಿತಿಯನ್ನು ತಮ್ಮ ಕಲಾಕೃತಿಯಲ್ಲಿ ಚಿತ್ರಿಸಿದಂತೆ ಭಾಸವಾಗಿರುತ್ತದೆ. ಕಲಾವಿದನ ಮನಸ್ಸು ಸದಾ ವಿಹಾರಿಯಾಗಿದ್ದು, ವಿವಿಧ ರೀತಿಯಲ್ಲಿ ಪ್ರಕೃತಿಯ ಸೊಬಗಿದೆ. ಆಕರ್ಷಣೆಗೊಳಗಾಗಿರುತ್ತದೆ. ಕಲಾವಿದನ ಸುಪ್ತ ಪ್ರಜ್ಞೆಯಲ್ಲಿ ಯಾವುದಾದರೂ ಒಂದು ವಸ್ತುವಿನ ಸೌಂದರ್ಯ ಸಮಾಜ ಇನ್ನಿತರ ಹುಡುಕಾಟವಿರುತ್ತದೆ. ಆ ಒಂದು ವಸ್ತು ಕಂಡೊಡನೆ ಅವನ ಸುಪ್ತಪ್ರಜ್ಞೆ ಜಾಗೃತಗೊಂಡು ಕಲಾಸೃಷ್ಟಿಗೆ ತೊಡಗುತ್ತದೆ.

ಚಿ.ಸು.ಕೃಷ್ಣಸೆಟ್ಟಿರವರು ರಚಿಸಿದ ಕಲಾಕೃತಿಯಲ್ಲಿ ದ್ವಿಮುಖ ಭಾವನೆ ಕಲಾಕೃತಿಗಳನ್ನು ಈಗಾಗಲೇ ನಾಡಿನ ಹಲವಾರು ಕಲಾವಿದರು ವಿನೂತನ ನೈಜ ಹಾಗೂ ನವ್ಯಶೈಲಿಯಲ್ಲಿ ಕಲಾಕೃತಿಗಳಲ್ಲಿ ದೃಶ್ಯಭಾಷೆಗಳಲ್ಲಿ ಸಾಮಾನ್ಯ ಜನರಿಗೆ ಅರ್ಥವಾಗುವ ಹಾಗೆ ರಚಿಸಿದ್ದಾರೆ. ಆದರೆ ಕಲಾವಿದ ನವ್ಯ ವಿನೂತನ ಕಾಲದಲ್ಲಿ ನೈಜ ಶೈಲಿಯನ್ನು ರಚಿಸದೇ ಅದನ್ನೇ ನವ್ಯ ಕಲಾಶೈಲಿಯಲ್ಲಿ ರಚಿಸಿ ವರ್ಣ ಸಂಯೋಜಿಸಿದ್ದಾರೆ. ಈಗ ಭೂಮಿಯ ಮೇಲೆ ವ್ಯಕ್ತಿಯೊಬ್ಬನು ಕಾಣಿಸುವನು. ಆ ವ್ಯಕ್ತಿಯ ಎದುರುಗಡೆ ಪರಿಸರ ದೃಶ್ಯ ಕಾಣುತ್ತದೆ. ಆ ಪರಿಸರ ಮರದ ಇಡೀ ವರ್ಷ ಏನು ಪರಿವರ್ತನೆಯಾಗುವುದು ಅದರ ಸಂವೇದನೆ ಅರಿವು ಹೀಗಿದೆ. ಬೇಸಿಗೆ, ಮಳೆಗಾಲ, ಚಳಿಗಾಲ ಮೂರು ಋತುಗಳು ಹೋಗುವ ಕಾಲಕ್ಕೆ ಅನುಗುಣವಾಗಿ ಅದರಲ್ಲಿ ಅನೇಕ ಪರಿವರ್ತನೆ ಆಗುವುದು. ಅದರಂತೆ ಹೆಣ್ಣನ್ನು ಕೂಡ ಗಿಡಕ್ಕೆ ಹೋಲಿಸಿ, ಆ ಗಿಡದಲ್ಲಿ ಸ್ತ್ರೀಯನ್ನು ಕೂಡಿಸಿದ್ದಾರೆ. ಆ ಹೆಣ್ಣಿನ ಸುತ್ತ ಅನೇಕ ಹೂಗಳು, ಮೊಗ್ಗುಗಳು, ಎಲೆಗಳು, ಚಿಗುರುವ ದೃಶ್ಯ, ಎಲೆ ಉದುರುವ ದೃಶ್ಯ, ನದಿಯಲ್ಲಿ ಮೀನು ಚಂಚಲತೆಯಿಂದ ತೇಲಾಡುವಂತೆ, ಎಲೆ, ಹೂಗಳು, ಹಣ್ಣು, ಟೊಂಗೆ, ಬೆಳೆಯುವ ಕಾಂಡ, ಹರಿಯುವ ನೀರು, ಎಲ್ಲವಕ್ಕೂ ಹೆಣ್ಣಿನ ಮೇಲೆ ಹೋಲಿಸಿ ತೋರಿಸುತ್ತಾರೆ. ಇದರ ತಾತ್ಪರ್ಯ ಇದಕ್ಕೆಲ್ಲ ಕಾರಣವಾಗಿ ದ್ವಿಮುಖ ಭಾವನೆ ಕಂಡುಬರುತ್ತದೆ. ಇದರಲ್ಲಿ ತಂತ್ರಗಾರಿಕೆಯು ಕೂಡ ಹೊಸ ತಂತ್ರಗಳಿಂದ ಕಲಾಕೃತಿಯನ್ನು ನಿರ್ಮಿಸಿ, ಕಲಾಪ್ರೇಮಿಗಳ ಮನಸ್ಸು ಸಾಧನೆಯ ಮೂಲಕ ಪಡೆದಿದ್ದಾರೆ. ವರ್ಣಗಳ ತಂತ್ರವೆನ್ನುವುದು ಇದು ನವ್ಯ, ನೈಜ

ಇದು ನವ್ಯಕಲೆಯೂ ಆಗಿರುವುದಿಲ್ಲ. ಆ ಕೃತಿಗಳ ಮೇಲೆ ಅಂತಹ ವರ್ಣ ತಂತ್ರಗಾರಿಕೆಯನ್ನು ನಿರ್ಮಾಣ ಮಾಡಿದ್ದು ಇದರಲ್ಲಿ ವರ್ಣಗಳ ಭೇದ, ಹಳದಿ ವರ್ಣ ಹಾಗೂ ಕೆಂಪು ವರ್ಣ ಬಳಸಿ ಅದರ ಸೌಂದರ್ಯ ಶ್ರೀಮಂತಗೊಳಿಸುವ ಕಡೆಯಿಂದ ಈ ಹಳದಿ ಕೆಂಪು ವರ್ಣಗಳನ್ನು ಬಳಸಿಕೊಂಡಿದ್ದಾರೆ. ಇದರ ಜೊತೆಗೆ ಬಿಳಿ ವರ್ಣವನ್ನು ಕೂಡ ಬಳಸಿದ್ದಾರೆ. ಭೂಮಿಯ ಮೇಲೆ ಇರುವಂತಹ ಆಕಾಶ ವರ್ಣ ಬಳಸಿಕೊಂಡಿದ್ದಾರೆ. ಒಟ್ಟಿನಲ್ಲಿ ಚಿ.ಸು.ಕೃಷ್ಣಸೆಟ್ಟಿರವರು ರಚಿಸಿದ ದ್ವಿಮುಖ ಭಾವನೆ ಕಲಾಕೃತಿಯನ್ನು ಸಂಯೋಜಿಸಿದ್ದು, ಇದು ನೋಡುವ ಪ್ಷೇಕ್ಷಕರ ಮನಸ್ಸು ಬೇರೆ ಕಡೆಗೆ ಹರಿದಾಡದ ಹಾಗೆ ಆ ಕಲಾಕೃತಿಯು ಪ್ರೇಕ್ಷಕರ ಮನಸ್ಸು ಕೇಂದ್ರೀಕೃತವಾಗುತ್ತದೆ. ಈ ಕಲಾಕೃತಿಯು ಕರ್ನಾಟಕ ಲಲಿತಕಲಾ ಅಕಾಡೆಮಿಯ ಬೆಂಗಳೂರಲ್ಲಿ ಸಂಗ್ರಹವಾಗಿದೆ.(೨೦೦೩)

**ಚಿತ್ರ–೨**

೩x೩ ಅಡಿ, ಅಳತೆಯಿರುವ ಅಕ್ರಾಲಿಕ್ ವರ್ಣಗಳಿಂದ ರಚಿಸಿರುವ ಶೀರ್ಷಿಕೆ ರಹಿತ ಕಲಾಕೃತಿ ಇದಾಗಿದ್ದು, ಬಿಡುಗಡೆಗೆ ಕಾಯ್ದಿರುವ ಮನುಷ್ಯ ಎಂಬಂತೆ ಇದು ಒಂದು ಶೀರ್ಷಿಕೆರಹಿತ ಕೃತಿಯಾದರೂ ಮೇಲ್ನೋಟಕ್ಕೆ ಇಲ್ಲಿರುವ ಒಬ್ಬ ವ್ಯಕ್ತಿ ನಿಂತಿರುವ ಭಂಗಿಯನ್ನು, ಕೊಟ್ಟಿರುವ ರೂಪಕಗಳನ್ನು ಗಮನಿಸಿದರೆ ನೋಡುಗನಿಗೆ ಹೀಗನ್ನಿಸುತ್ತದೆ. ಚಿತ್ರ ಪ್ರಬಂಧದಲ್ಲಿರುವುದು ಕೆಲವೇ ಕೆಲವು ರೂಪಕಗಳಾದರೂ ಅವು ಕಟ್ಟಿಕೊಡುವ ದೃಶ್ಯಾನುಭವ ಥಟ್ಟನೆ ದಕ್ಕುವಂಥದ್ದಲ್ಲ. ಸೂಕ್ಷ್ಮವಾಗಿ ಅವಲೋಕಿಸಿದಾಗ, ಇಲ್ಲಿರುವ ಕೆಲವು ಭೌತಿಕ ವಿವರಗಳನ್ನು ಗಮನಿಸಿದಾಗ ಬಂಧನ ಮತ್ತು ಬಿಡುಗಡೆ ಎಂಬೆರಡು ಅಂಶಗಳು ಇಲ್ಲಿರುವುದಾಗಿ ಕಾಣಿಸುತ್ತದೆ. ಅಕ್ವೇರಿಯಂನಲ್ಲಿ ಬಂಧಿತವಾಗಿರುವ ಮೀನಿನಂತೆಯೇ ಪಕ್ಕದಲ್ಲಿ ನಿಂತಿರುವ ವ್ಯಕ್ತಿಯ ಸ್ಥಿತಿಯೂ ಅದೇ ಆಗಿದೆ ಅನ್ನಿಸುತ್ತದೆ. ವ್ಯಕ್ತಿ ಕೈಕಟ್ಟಿಕೊಂಡು, ತಲೆಯನ್ನು ಪಕ್ಕಕ್ಕೆ ವಾಲಿಸಿಕೊಂಡು, ವಿನೀತನಾಗಿ ನಿಂತಿರುವುದನ್ನು ಕಂಡರೆ ಯಾರದೋ ಅಪ್ಪಣೆಗೆ ಕಾಯ್ದಿರುವವನಂತೆ ಕಂಡುಬರುತ್ತದೆ. ಬೆಳಕಿನ ಚುಕ್ಕಿಗಳ ನಡುವೆ ಅವನು ಕತ್ತಲೆಯಲ್ಲಿ ನಿಂತಿರುವಂತಿದೆ. ಬೆಳಕಿಗೆ ಬರುವ ಕಾಲಕ್ಕಾಗಿ ಅವನು ಕಾಯುತ್ತಿದ್ದಾನೆಂಬಂತೆ ಗಡಿಯಾರದ ಸಂಕೇತವೊಂದು ಇಲ್ಲಿ ಮೂಡಿಬಂದಿದೆ.

ಕೃಷ್ಣಸೆಟ್ಟಿಯವರ ಕೆಲವು ಕಲಾಕೃತಿಗಳನ್ನು ಗಮನಿಸಿದಾಗ ಒಂದೆರಡು ರೂಪಾಕಾರಗಳು ಪದೇಪದೇ ಬಳಕೆಯಾಗಿರುವುದನ್ನು ಕಾಣುತ್ತೇವೆ. ಉದಾಹರಣೆಗೆ: ಹಾವು, ಮೀನು, ಗೋಳಾಕಾರಗಳು. ಇವೆಲ್ಲ ಯಾವಾಗಲೂ ಒಂದೇ ಅರ್ಥವನ್ನು ಸೂಚಿಸುತ್ತವೆ ಅಂತಲ್ಲ. ಪ್ರಧಾನ ಆಕೃತಿಯ ಆಶಯ, ಸನ್ನಿವೇಶಗಳಿಗೆ ಅನುಗುಣವಾಗಿ ನೋಡುಗನ ಅರಿವಿನ ನೆರವಿಗೆ ನಿಲ್ಲುತ್ತವೆ. ಈ ಚಿತ್ರಕೃತಿಯಲ್ಲಿ ಮುಖ್ಯವಾಗಿ ನಿಂತಿರುವ ವ್ಯಕ್ತಿ ತನ್ನ ತೋಳುಗಳನ್ನು ಎದೆಗಂಟಿಸಿಕೊಂಡಿದ್ದು, ಮೈಮುಚ್ಚಿಕೊಳ್ಳುವ

ಹಪಾಹಪಿಯಲ್ಲಿರುವಂತೆ ಕತ್ತಲಲ್ಲಿ ಬೆಳಕನ್ನು ಹುಡುಕುವ ಪ್ರಯತ್ನದಂತೆ ಹೆಣ್ಣಿನ ಮೇಲೆ ಪ್ರತಿ ನಿತ್ಯ ನಡೆಯುವ ಶೋಷಣೆಗಳ ಕರಾಳಯಾತನೆಯು ನೀರಿನಲ್ಲಿರುವ ಮೀನಿಗೆ ಹೋಲಿಕೆ ಮಾಡಿದರೆ ಮತ್ತೊಂದು ಕಡೆ ಗೋಡೆಗಂಟಿಸಿರುವ ಗಡಿಯಾರದಂತೆ ಅದರಲ್ಲಿ ಉದುರುತ್ತಿರುವ ಕಪ್ಪು ವರ್ಣವೂ ನೋವು ಮತ್ತು ಅನ್ಯಾಯದ ಪರವಾದ ನಿಲುವಾಗಿರುತ್ತದೆ. ಒಟ್ಟಾರೆ ಈ ವ್ಯಕ್ತಿಯನ್ನು ಕೃಷ್ಣಸೆಟ್ಟಿಯವರು ಹೆಣ್ಣಿಗೆ ಹೋಲಿಸಿದ್ದು, ಸ್ಟ್ರಚ್ಚರ್ ಮೂಲಕ ದೇಹಕ್ಕೆ ಬಣ್ಣದಿಂದ ಅಲಂಕರಿಸಿರುತ್ತಾರೆ. ಮತ್ತೊಂದು ಕಡೆ ಹೆಣ್ಣು ಚಂಚಲೆ ಮನಸ್ಸಿನವಳಿರಬೇಕೆಂಬ ಆಲೋಚನೆಯಲ್ಲಿ ಮೀನನ್ನು ತೋರಿಸಿರಲೂಬಹುದು. ಮುಖ್ಯವಾಗಿ ಕಪ್ಪು, ಹಳದಿ, ಬಿಳಿ ಮತ್ತು ಹಸಿರು ವರ್ಣಗಳನ್ನು ಬಳಸಿರುವುದಾಗಿದ್ದು, ಈ ಚಿತ್ರಕೃತಿ ಸಂಯೋಜನೆಯಿಂದ ಕೂಡಿದ್ದಾಗಿರುತ್ತದೆ.

**ಚಿತ್ರ–೩**

೩x೩ ಅಡಿಯಿರುವ ಈ ಚಿತ್ರಕೃತಿಯು ಅಕ್ರಾಲಿಕ್ ವರ್ಣಗಳಿಂದ ರಚಿಸಲ್ಪಟ್ಟ ಶೀರ್ಷಿಕೆ ರಹಿತ ಈ ಕೃತಿಯಲ್ಲಿ ಮುಖ್ಯವಾಗಿ ಕಿರೀಟಧಾರಿ ಸ್ತ್ರೀ ಚಿತ್ರವಿದ್ದು, ಕೋರಳಲ್ಲಿ ತಾಳಿಯಿರುತ್ತದೆ. ಎದೆಯ ಭಾಗವೇ ಇಲ್ಲಿ ಸ್ತ್ರೀ ಎಂದು ಗುರುತಿಸಲು ಕಾರಣವಾಗಿರುತ್ತದೆ. ಚಿತ್ರದ ಎಡ ಭಾಗದ ಮೇಲಿಂದ ಚೆಲ್ಲಿರುವ ಬಣ್ಣ ಆ ಬಣ್ಣದ ಕಡೆ ಹರಿಯುತ್ತಿರುವ ಹಾವು ಅದನ್ನು ತಿನ್ನುವಂತೆ ವೇಗವಾಗಿ ಹರಿಯುತ್ತಿದೆ. ಮತ್ತೊಂದು ಕಡೆ ಬುಡಕಟ್ಟು ಮಹಿಳೆಯಂತಿರುವ ಸ್ತ್ರೀ ಹಣೆಯಲ್ಲಿ ಕುಂಕುಮವಿದ್ದು, ಆಗಲವಾದ ಕಣ್ಣುಗಳನ್ನು ಹೊಂದಿರುತ್ತಾಳೆ. ಬೆತ್ತಲ ದೇಹದಲ್ಲಿರುವ ಸ್ತ್ರೀಯೊಬ್ಬಳು ಹಾವು ಮತ್ತು ಬೀಳುತ್ತಿರುವ ಬಣ್ಣಗಳ ಕಡೆ ಮುಖ ಮಾಡಿರುತ್ತಾರೆ. ಒಟ್ಟು ಎರಡು ಹಾವುಗಳಿದ್ದು, ಬಿಳಿಯ ಬಣ್ಣಗಳಿಂದ ತೋರಿಸಿರುವುದನ್ನು ಗಮನಿಸದರೆ ಶಾಂತಪ್ರಿಯ ಹಾವುಗಳಂತೆ ಕಾಣಲ್ಪಟ್ಟಿವೆ. ಕ್ಯಾನ್ವಸ್‌ನ ಹಿಂಭಾಗದಲ್ಲಿ ಸ್ಟ್ರಚ್ಚರ್ ಮಾಡಲಾಗಿದ್ದು, ಚಿಪ್ಸ್‌ಗಳನ್ನು ಉಳಿಸಿಕೊಳ್ಳಲಾಗಿರುವುದರಿಂದ ನೋಡುಗನ ಕಣ್ಣು ಕಲಾಕೃತಿಯ ಎಲ್ಲಾ ಕಡೆ ಹರಿಯುತ್ತಿರುತ್ತದೆ. ಈ ಕೃತಿಯಲ್ಲಿ ನೀಲಿ, ಕಂದು, ಕಪ್ಪು, ಕೆಂಪು, ಬಿಳಿ ಬಣ್ಣಗಳನ್ನು ಹೆಚ್ಚಾಗಿ ಬಳಸಲಾಗಿದೆ.

**ಚಿತ್ರ–೪**

ಅಕ್ರಾಲಿಕ್ ವರ್ಣದಿಂದ ರಚಿತವಾದ ಈ ಕೃತಿಯಲ್ಲಿ ಪ್ರಮುಖವಾಗಿ ಮೂರು ಸ್ತ್ರೀಯರನ್ನು ಗುರುತಿಸಬಹುದು. ಕತ್ತಲೆಕೋಣೆಯಲ್ಲಿ ಬೆಳಕು ಅವರ ದೇಹ ಚಲಿಸಿರುವಂತೆ ಭಾಸವಾಗುತ್ತಿದೆ. ನೋಡಿದ ತಕ್ಷಣ ಯಾರನ್ನಾದರೂ ಕಾಯುತ್ತಿರಬಹುದೇ ಎಂಬ ಅನುಮಾನ ಮೂಡದೆಯಿರದು. ಅಷ್ಟರ ಮಟ್ಟಿಗೆ ನೋಡುಗನ ಭಾವನೆಯನ್ನು ಹಿಡಿದಿಡುವಷ್ಟು ಕೆಲಸ ಈ ಕಲಾಕೃತಿಯಲ್ಲಿ ಆಗಿರುತ್ತದೆ. ಮೂವರಲ್ಲಿ ಬಲದಿಂದ ಮೊದಲನೆಯವರು ಕೈಕಟ್ಟಿ ಬಲಕೈಯನ್ನು ದವಡೆಗಂಟಿಸಿಕೊಂಡು ಯೋಚನಾ

ಸ್ಥಿತಿಯಲ್ಲಿರುವಂತೆ ಭಾಸವಾಗುತ್ತಿದ್ದರೆ ಪಕ್ಕದ ಹೆಂಗಸು ಕೂಡ ಯೋಚನಾಲಹರಿಯಲ್ಲಿ ಯಾರನ್ನೋ ಕಾಯುತ್ತಿರುವಂತೆ ಹಾಗೆಯೇ ಮತ್ತೊಬ್ಬ ಹೆಂಗಸು ಛತ್ರಿಯನ್ನು ಹಿಡಿದು ನಿಂತಿರುವುದು. ಇಲ್ಲಿ ಒಂದಾಶ್ಚರ್ಯವೆನೆಂದರೆ ಕತ್ತಲ ಕೋಣೆಯಂತಿರುವ ಈ ದೃಶ್ಯದಲ್ಲಿ ಛತ್ರಿ ಹಿಡಿಯುವ ಅವಶ್ಯಕತೆ ಬೇಕಿತ್ತಾ ಅನ್ನೋದು. ಕಲಾವಿದನ ಕಲ್ಪನೆ ನಿಜಕ್ಕೂ ಇಲ್ಲಿ ವಿಸ್ಮಯದ ರೀತಿ ಗೋಚರಿಸಿದೆ. ಕಲ್ಪನೆಗೆ ಮಿತಿಯಿಲ್ಲ ಸರಿ ಆದರೆ ಆ ಕಲ್ಪನೆಗೆ ಜೀವವಂತೂ ಬೇಕಲ್ವಾ! ಕ್ಯಾನ್ವಸ್ ತುಂಬಾ ಬಣ್ಣಗಳನ್ನು ಚೆಲ್ಲಿರುವ ಕಲಾವಿದರು ಒಂದು ಕಡೆ ಫ್ಯಾನ್ ತೋರಿಸಲಾಗಿದೆ ಮತ್ತೊಂದು ಕಡೆ ಕೈಗಳನ್ನು ತೋರಿಸಿದ್ದಾರೆ ಈ ಮೂವರು ಹೆಂಗಸರ ಕೆಳಗೆ ಝರಿಯಂತೆ ಹರಿಯುತ್ತಿರುವ ಹಾವನ್ನು ತೋರಿಸಿದ್ದಾರೆ. ಒಟ್ಟಾರೆ ಕಲ್ಪನೆಗೆ ಮಿತಿಯಿಲ್ಲ ಈ ಕೃತಿಗೆ ಟೈಟಲ್ ಇರುವುದಿಲ್ಲ ನೋಡುವವನ ದೃಷ್ಟಿಗೆ ಬಿಟ್ಟಿರುತ್ತದೆ. ಹೆಚ್ಚಾಗಿ ನೀಲಿ, ಹಳದಿ, ಕೆಂಪು, ಕಪ್ಪು, ತಿಳಿಹಸಿರು ಬಣ್ಣಗಳನ್ನು ತೋರಿಸಲಾಗಿರುತ್ತದೆ.

**ಚಿತ್ರ–೫**

ಇದೊಂದು ಅಮೂರ್ತ ಚಿತ್ರಕೃತಿಯಂತೆ ಕಂಡರೂ ಇಲ್ಲಿ ಅನೇಕ ರೂಪಗಳಿರುವುದನ್ನು ಕಾಣಬಹುದು. ಈ ಕಲಾಕೃತಿಯಲ್ಲಿ ಬಹುಭಾಗ ಕಂದು, ಕಪ್ಪು, ಗಿಳಿ ಹಸಿರು ಮತ್ತು ನೀಲಿ ವರ್ಣದಿಂದ ಮಿಶ್ರಣವಾದ ದ್ವಿತೀಯ ವರ್ಣ ಲೇಪನವಿದೆ. ಸ್ಕಾರ್ಲೈಟ್, ಪರ್ಪಲ್ ನೀಲಿ, ಬಿಳಿ ಕ್ರಿಮ್ಸನ್ ಹೀಗೆ ಅನೇಕ ವರ್ಣಗಳಿಂದ ವಿವಿಧ ವಿಕೃತ ಆಕಾರ ವಿನ್ಯಾಸದ ಚಿತ್ರ ಮತ್ತು ಬಣ್ಣಗಳಿಂದ ರಚಿಸಿರುವರು. ಒಂದು ಮನಸ್ಸಿನ ಮೇಲೆ, ಅನೇಕ ವಿಷಯಗಳನ್ನು ಕಲ್ಪನೆಯ ಮೂಲಕ ದೃಷ್ಟಿಯ ಮೂಲಕ ಆಗುವ ಪರಿಣಾಮಗಳೂ, ಮೂರ್ತ, ಅಮೂರ್ತ ಅಸಂಖ್ಯಾತ ವಿಚಾರಗಳು ಕಲೆಯ ಅಭಿವ್ಯಕ್ತಕ್ಕೆ ಕಾರಣಗಳಾಗುತ್ತವೆ. ಧ್ವನಿ ಮೂಲಕವಾಗಲಿ, ರೇಖೆ ಅಥವಾ ಬಣ್ಣಗಳ ಮೂಲಕ ಸಂಕೀರ್ಣ ಸ್ವರೂಪವಾಗಿರುತ್ತವೆ. ವೃತ್ತಾಕಾರದ ವಿವಿಧ ಆಕಾರಗಳು, ಆಕಾರ ಕೆಟ್ಟ ವಿನ್ಯಾಸಗಳ ಚಿತ್ರ ಬಣ್ಣಗಳಿಂದ ರೂಪ ಪಡೆದುಕೊಂಡಿರುವುದು. ಮನಸ್ಸಿನ ನಡವಳಿಕೆ ಮೇಲೆ ಚಿತ್ರ ಅವಲಂಬಿಸಿರುತ್ತದೆ. ದಟ್ಟ ವಿಚಾರಗಳು ಗಟ್ಟಿಯಾದ ಚಿಂತನೆಗಳು, ದೇಹದ ಮನಸ್ಸು, ದೃಷ್ಟಿ ಮನುಷ್ಯ ಮತ್ತು ಪ್ರಕೃತಿ ಹಾಗೂ ಕಲ್ಪನೆಯ ವಾಸ್ತವಿಕತೆ, ವೈಜ್ಞಾನಿಕತೆ ಹಿಡಿತವನ್ನು ಸಾಧಿಸುವ ಕ್ರಿಯೆಗಳಲ್ಲಿ ಇತಿ ಮಿತಿಗಳ ಬಗ್ಗೆ ವಿವೇಚಿಸಿದ್ದಾರೆ. ಹೀಗೆ ಇತ್ತೀಚೆಗೆ ಚಿತ್ರಗಳನ್ನು ರಚಿಸಿರುವರು ಬ್ರೆಷ್ ಸೆಳೆತಗಳಿಂದ ನೈಜ ರೂಪದಲ್ಲಿ ವಕ್ರವಾಗಿ, ನೇರವಾಗಿ ಸೆಳೆಗಳನ್ನು ರೂಪಿಸಿದ್ದಾರೆ.

**ಚಿತ್ರ–೫.೧**

೨x೧/೨x೩ ಅಡಿವುಳ್ಳ ಈ ಕಲಾಕೃತಿಯು ಶೀರ್ಷಿಕೆ ರಹಿತ ಅಕ್ರಾಲಿಕ್ ವರ್ಣದಿಂದ ಚಿತ್ರಿತವಾಗಿದ್ದು, ಹೆಣ್ಣಿನ ದೊಡ್ಡದಾದ ಮುಖಭಾವ ಅದಕ್ಕೆ ಹೊಂದಿಕೊಂಡಂತೆ ಕಣ್ಣು, ಆ ಕಣ್ಣೊಳಗೆ

ನಕ್ಷತ್ರ, ಕೆನ್ನೆಗೆ ಅಂಟಿಕೊಂಡಿರುವ ಜೇಡ, ಆ ಮುಖಕ್ಕೆ ಕಣ್ಗಾವಲಾಗಿರುವ ಹಾವುಗಳು, ಚಿ.ಸು.ಕೃಷ್ಣಸೆಟ್ಟಿಯವರು ತಮ್ಮದೇ ಶೈಲಿಯಲ್ಲಿ ಚಿತ್ರಿಸಲಾಗಿರುವ ಈ ಕೃತಿಯು ನೋಡಲು ಸಾಮಾನ್ಯದಂತೆ ಕಂಡರೂ ಕಲಾವಿದನ ಭಾವನೆಗೆ ಪೂರಕವಾದ ವಿಷಯ ಮತ್ತು ರೇಖೆ ಸ್ಪಷ್ಟತೆಯ ಆಳ ವಿಸ್ತರಿಸಿರುವುದು ಉತ್ತಮ ಬೆಳವಣಿಗೆಯ ಹಾದಿ ಎಂದರೆ ಬಹುಶಃ ತಪ್ಪಾಗಲಿಕ್ಕಿಲ್ಲ. ಆಕರ್ಷಿಣೀಯವಾಗಿ ಜೇಡವನ್ನು ತೋರಿಸಲಾಗಿದ್ದು, ಅದು ಮುಖಕ್ಕಂಟಿಕೊಂಡಿರುವಂತೆ ಭಾಸವಾಗಿದ್ದು, ಹಾವುಗಳು ರಭಸದಿಂದ ಮೇಲೆ ಕೆಳಗೆ ಹರಿದಾಡುತ್ತಿರುವ ದೃಶ್ಯ ಗೋಚರಿಸುತ್ತದೆ. ದೊಡ್ಡದಾದ ಕಣ್ಣಿನಲ್ಲಿ ನಕ್ಷತ್ರವನ್ನು ಕಾಣಬಹುದು. ಕೆಂಪು ವರ್ಣವು ಭಯವನ್ನು ತೋರಿಸುವಂತಿದೆ. ನೀಲಿ ವರ್ಣವು ಮತ್ತು ಹಸಿರು ಸಮೃದ್ದಿಯನ್ನು ತೋರಿಸುತ್ತಿದೆ ಒಟ್ಟಾರೆ ಒಂದು ಸನ್ನಿವೇಶವನ್ನು ಕಟ್ಟಿಹಾಕಿರುವಂತೆ ಗೋಚರಿಸುತ್ತಿದೆ. ಮುಖ್ಯವಾಗಿ ಕಪ್ಪು, ನೀಲಿ, ತಿಳಿಹಸಿರು, ಕೆಂಪು ಮತ್ತು ಬಿಳಿ ಬಣ್ಣಗಳನ್ನು ಹೆಚ್ಚು ಬಳಸಿ ಚಿತ್ರಿಸಿದ್ದಾರೆ.



**ಚಿತ್ರ–೬**

೩x೩ ಅಡಿಯುಳ್ಳ ಈ ಕಲಾಕೃತಿಯು ಶೀರ್ಷಿಕೆ ರಹಿತ ಅಕ್ರಾಲಿಕ್ ವರ್ಣದಿಂದ ಚಿತ್ರಿತ ವಾಗಿದ್ದು, ಈ ಚಿತ್ರವೂ ವ್ಯಂಗ್ಯಚಿತ್ರದಂತೆ ಭಾಸವಾದರೂ ಇಲ್ಲಿ ಜನಪದ ಕಲಾವಿದನ ನಿಶ್ಯಬ್ದತೆ ಶ್ರೀಮಂತಿಕೆಯಿಂದ ಕೂಡಿದ್ದಾಗಿರುತ್ತದೆ. ಇಲ್ಲಿರುವ ವ್ಯಕ್ತಿಯ ತಲೆಯ ಟೊಪ್ಪಿಗೆಯನ್ನು ಗಮನಿಸಿದರೆ ಕೃಷ್ಣಸೆಟ್ಟಿಯವರು ಈ ಹಿಂದೆ ಹೆಣ್ಣಿಗೆ ತೊಡಿಸಿದ್ದ ಕಿರೀಟದಂತೆ ಭಾಸವಾಗುತ್ತಿದ್ದು, ಒಂದು ರೀತಿಯಲ್ಲಿ ಅಂಗವೈಕಲ್ಯವನ್ನು ಹೊಂದಿರುವ ವ್ಯಕ್ತಿಯಂತೆಯೂ ಗೋಚರವಾಗಿದೆ. ದಪ್ಪ ರೇಖೆಗಳನ್ನು ಹೊಂದಿರುವ ಚಿತ್ರದಲ್ಲಿ ರಂಗು ರಂಗಿನ ಬಣ್ಣದ ಲೇಪನವನ್ನು ಮಾಡಿರುತ್ತಾರೆ. ವಿಶೇಷವಾಗಿ ಕಲಾಕೃತಿಯ ಎಡಭಾಗದಲ್ಲಿ ಕಣ್ಣಿನಲ್ಲಿ ತೆಂಗಿನಕಾಯಿ ಮತ್ತು ಬಲಭಾಗದಲ್ಲಿ ಅರ್ಧಚಂದ್ರವನ್ನು ತೋರಿಸುವುದನ್ನು ನೋಡಿದರೇ ಬಹುಶಃ ಕಲಾವಿದನ ಕಲ್ಪನೆ ಏನಿರಬಹುದು ಎಂಬುದನ್ನು ಊಹಿಸಬಹುದಷ್ಟೇ ವಿನಃ ಇಂತಹದ್ದೇ ಎಂದು ಬಿಂಬಿಸುವುದು ಅಸಾಧ್ಯದ ಮಾತು. ಹಾಗೆಯೇ ಇದೇ ರೀತಿ ಮುಂದುವರಿದಂತೆ ಕಲೆಗೆ ಯಾವುದೇ ಅಡೆತಡೆಗಳಿರುವುದಿಲ್ಲ. ಅದರಂತೆ ಇಲ್ಲಿನ ಚಿತ್ರಕೃತಿಯಲ್ಲಿ ತಮ್ಮದೇ ಕಲ್ಪನೆಯಲ್ಲಿ ಚಿತ್ರವನ್ನು ಚಿತ್ರಿಸಲಾಗಿದೆ. ಮುಖ್ಯವಾಗಿ ಕಪ್ಪು, ಕೆಂಪು, ನೀಲಿ, ಹಳದಿ ಮತ್ತು ಬಿಳಿ ವರ್ಣಗಳನ್ನು ಹೆಚ್ಚಾಗಿ ಬಳಸಲಾಗಿದೆ.

**ಚಿತ್ರ–೭**

ಎರಡೂವರೆ ಮೂರು ಅಡಿವುಳ್ಳ ಈ ಕಲಾಕೃತಿಯು ಶೀರ್ಷಿಕೆರಹಿತ ಅಕ್ರಾಲಿಕ್ ವರ್ಣಗಳಿಂದ ರಚಿಸಲಾಗಿದ್ದು, ಇಲ್ಲಿ ಮನುಷ್ಯಾಕೃತಿ ಮತ್ತು ನಗ್ನ ಮಹಿಳೆಯಿರುವ ಭಾವಚಿತ್ರವಿದ್ದು, ದೊಡ್ಡದಾದ

ಕೈಗಳಲ್ಲಿ ಉದ್ದನೆಯ ಬೆರಳುಗಳನ್ನು ತೋರಿಸಲಾಗಿದ್ದು, ಆ ಕೈಯಲ್ಲಿ ಎರಡು ತಲೆಯ ಹಾವೊಂದನ್ನು ಚಿತ್ರಿಸಲಾಗಿದೆ, ಕೈ ಹತ್ತಿರ ಹಾರುವಂತಿರುವ ಗೂಬೆ ಕಪ್ಪು ಬಣ್ಣದಿಂದ ಚಿತ್ರಿಸಲಾಗಿರುತ್ತದೆ. ಗಂಭೀರವಾದ ಆರೋಪವೆಂದರೆ ಗೋಡೆಗೆ ನೇತಾಕಿರುವ ಮಾರ್ಡನ್ ಸ್ತ್ರೀಚಿತ್ರದ ಛಾಯಾಚಿತ್ರ, ದೊಡ್ಡದಾದ ಮನುಷ್ಯನಾಕೃತಿಯುಳ್ಳ ಬುರುಡೆ, ಇವುಗಳನ್ನೆಲ್ಲಾ ತನ್ನ ಮುಷ್ಟಿಯಲ್ಲಿ ಹಿಡಿದಿಡಬೇಕೆಂಬ ಹಂಬಲ ಯಾರದಿರಬಹುದು ಎಂಬ ಆಲೋಚನೆ ಸೂಕ್ಷ್ಮವಾಗಿ ಗಮನಿಸಿದವರಿಗೆ ಬರುತ್ತದೆ. ಒಟ್ಟು ಇಲ್ಲಿ ಕಲಾವಿದ ತನ್ನಲ್ಲಿರುವ ಭಾವನೆಗಳನ್ನು ಈ ರೀತಿಯಲ್ಲಿ ವ್ಯಕ್ತಪಡಿಸುತ್ತಾ ವರ್ಣಗಳಲ್ಲಿ ತನ್ನದೇ ಕಲ್ಪನೆಯನ್ನು ಬಿಚ್ಚಿಟ್ಟಿದ್ದಾರೆ ಎನ್ನಬಹುದು. ಕಪ್ಪು, ಬಿಳಿ, ಕೆಂಪು, ಹಳದಿ, ಹಸಿರು ವರ್ಣಗಳು ಹೆಚ್ಚು ಪ್ರಚಲಿತದಲ್ಲಿರುತ್ತವೆ.

**ಚಿತ್ರ–೮**

ಒಂದು ಕಲಾಕೃತಿ ರಚನೆಯಲ್ಲಿ ಪೂರ್ವ ಯೋಜನೆ ಅಗತ್ಯ. ಆದರೆ ಕೃಷ್ಣಸೆಟ್ಟಿ ಹೇಳುವ ಪ್ರಕಾರ ನಾನು ಯಾವುದೇ ಪೂರ್ವ ಯೋಜನೆ ಇಲ್ಲದೇ ಕಲಾಕೃತಿಯನ್ನು ರಚನೆ ಮಾಡುತ್ತೇವೆ. ಅದೇ ಸಾಕು ಎನಿಸಿದರೆ ನನ್ನ ಕಲಾಕೃತಿ ಪೂರ್ಣಗೊಂಡಂತೆ ಎನ್ನುವ ಇವರು ಅಮೂರ್ತ ಚಿತ್ರರಚನೆಯಲ್ಲಿ ಅದರಲ್ಲಿ ಪರಿಚಿತ ಅಥವಾ ಅಪರಿಚಿತ ಲೋಕದ ಆಕರಗಳು ಒಂದು ರೀತಿಯ ಅನುಭವವನ್ನು ನೀಡುತ್ತದೆ. ಸ್ವಾತಂತ್ರ್ಯ ಅರ್ಥಕ್ಕೆ ಸಾಕಷ್ಟು ಅವಕಾಶವಿರುತ್ತದೆ ಎನ್ನುವ ಇವರು ಕೆಲವಕ್ಕೆ ಅರ್ಥ ನೀಡಲು ಸಾಧ್ಯ ಇನ್ನು ಕೆಲವುಗಳಿಗೆ ಅರ್ಥ ಬೇಡ, ನೋಡುಗನಿಗೆ ಬಿಟ್ಟಿದ್ದು. ಇದರಂತೆ ಅಮೂರ್ತ ಚಿತ್ರವನ್ನು ರಚಿಸಲು ಕಷ್ಟ ಸಾಧ್ಯ. ನಮ್ಮ ಚಿತ್ರದಲ್ಲಿ ಈ ಮೊದಲೇ ಮೂಡಿದ್ದ ಆಕೃತಿಗಳು ಮೂಡಿಸಲು ಕಷ್ಟಸಾಧ್ಯ ಎನ್ನುವ ಇವರು ಈ ಚಿತ್ರದಲ್ಲಿ ಇದರಲ್ಲಿ ಪರಿಚಿತ ಲೋಕದ ಆಕೃತಿಗಳು ಕಾಣಿಸುವುದಿಲ್ಲ. ವೇಗದ ಚಿಟ್ಟೆಗಳು ಅಲ್ಲಲ್ಲಿ ಚದುರಿದ ಎಲೆಗಳು ಇರಬಹುದು ಕ್ಯಾನ್ವಸ್‌ನ ಹಿಂಭಾಗದಲ್ಲಿ ನೀಲಿವರ್ಣ ಸಮಾನಾಂತರದಲ್ಲಿ ಇದೆ. ಪ್ರಕೃತಿಯ ಒಂದು ನೋಟ ನೀರಿನ ಮೇಲೆ ತೇಲುವ ಎಲೆಗಳು ಎನ್ನಲೂ ಬಹುದು. ಗಂಭೀರ ನೆಲೆಯಲ್ಲಿ ರಚನೆಯಲ್ಲಿ ಪ್ರೌಢಿಮೆಯನ್ನು ಮೆರೆಸುವ ಗುಣ ಹೊಂದಿರುವವು. ಈ ಅಮೂರ್ತ ಕೃತಿ ನೋಡುಗರ ಹಾಗೂ ನಮ್ಮ ಗಮನವನ್ನು ಸೆಳೆಯುವಲ್ಲಿ ಸಂಶಯವಿಲ್ಲ.

**ಚಿತ್ರ–೯**

೩x೩ ಅಡಿಯಲ್ಲಿರುವ ಕಲಾಕೃತಿಯು ಶೀರ್ಷಿಕೆ ರಹಿತ ಅಕ್ರಾಲಿಕ್ ವರ್ಣಗಳಿಂದ ರಚಿತವಾಗಿದ್ದು, ಈ ಕಲಾಕೃತಿ ಅಪರಿಚಿತ ಲೋಕದ ಹಾಗೆ ಕಾಣುತ್ತದೆ. ಇಲ್ಲಿರುವ ಆಕೃತಿಗಳಿಗಿಂತ ವರ್ಣದಲ್ಲಿ ಆಕರ್ ಹೆಲೋ ವರ್ಣ ಕಣ್ಣಿಗೋ ಶ್ರೀಮಂತಿಕೆಯನ್ನು ತೋರಿಸುತ್ತದೆ ಉಳಿದ ಎಲ್ಲಾ ವರ್ಣಗಳು ಇದ್ದು ಕಪ್ಪು ವರ್ಣದಿಂದ ಗಿಟಾರಾಕಾರದ ಕೃತಿಯನ್ನು ಕಂಡರೂ ಅದರೊಳಗಿನ

ಅಂತರಂಗದ ಗುಣಗಳನ್ನು ಕಾಣಬಹುದು. ಕಲಾಕೃತಿಯ ಒಟ್ಟು ಸಾರ ನವ್ಯಕಲೆಯಲ್ಲಿನ ಭಾವಭಂಗಿಗಳ ಅನುಜಾತವನ್ನು ವಿಸ್ತರಿಸುವ ಹಿತದೃಷ್ಟಿಯಂತೆ ಕಲಾವಿದನ ಕಲ್ಪನೆಗೆ ಮಿತಿಯಿಲ್ಲವೆಂಬುದನ್ನು ಮತ್ತೆ ಮತ್ತೆ ಸಾರಿ ಹೇಳಿದ್ದಾರೆ ಚಿ.ಸು.ಕೃಷ್ಣಸೆಟ್ಟಿಯವರು. ಒಟ್ಟು ಚಿತ್ರವನ್ನು ತುಸು ದೂರದಿಂದ ನೋಡಿದಾಗ ಹೆಣ್ಣಿನ ಮೌನ ಮತ್ತು ಮುಖದ ಸೌಂದರ್ಯದ ಬಿಂಬವನ್ನು ತನ್ನದೇ ಕಲ್ಪನೆಯಡಿಯಲ್ಲಿ ವಿಸ್ತರಿಸಿದ್ದಾರೆನ್ನಬಹುದು. ಬಾಯ್ಬಿಟ್ಟಿರುವ ಕಣ್ಣುಗಳು ಪಕ್ಷಿಯ ರೆಕ್ಕೆಯಂತಿದ್ದು, ಶಂಕುವಿನಲ್ಲಿಯೇ ತುಟಿಯನ್ನು ತೋರಿಸಿ, ನೋಡುಗನ ಮುಖದಲ್ಲಿ ಭಿನ್ನತೆಯನ್ನು ಕಾಣಬೇಕೆಂಬ ಹಂಬಲ ಹೊತ್ತವರಂತೆ ಕ್ರಿಯೇಟಿವ್ ಮಾಡಿರುತ್ತಾರೆ. ಚಿತ್ರ ಅಸ್ಪಷ್ಟವಾಗಿ ಕಂಡರೂ ಅವರಿಗೆ ತಿಳಿದ ದಿಕ್ಕಿನಲ್ಲಿ ಸಾಗಿ ನಮ್ಮ ಗ್ರಹಿಕೆಗೆ ಹಲವು ರೀತಿಯಲ್ಲಿ ಗೊಂದಲವನ್ನು ಉಂಟು ಮಾಡುವ ಚಿತ್ರ ಇದಾಗಿದೆ. ಇಲ್ಲಿನ ವರ್ಗಗಳ ಮೇಳ ಶ್ರೀಮತಿಗೆ ತೋರಿಸಿದ್ದು, ಅವರದೆ ಅಭಿಪ್ರಾಯಕ್ಕೆ ಬಿಟ್ಟದ್ದು ಎನ್ನುವ ಕಲಾವಿದ ಕೃಷ್ಣಸೆಟ್ಟಿಯನ್ನು ವಿಭಿನ್ನವಾದ ಕಲಾಕೃತಿಯಲ್ಲಿ ತನ್ನನ್ನು ತಾನು ತಿಳಿದ ದಿಕ್ಕಿನಲ್ಲಿ ಆಕೃತಿ, ವಸ್ತು, ಬಣ್ಣ ಬಳಸಿ, ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಕಂದು ವರ್ಣದ ಆಶಯ ಹೆಚ್ಚಾಗಿದೆ.

**ಚಿತ್ರ-೧೦**

೩x೩ ಅಡಿಯಲ್ಲಿರುವ ಕಲಾಕೃತಿಯು ಶೀರ್ಷಿಕೆ ರಹಿತ ಅಕ್ರಾಲಿಕ್ ವರ್ಣಗಳಿಂದ ರಚಿತವಾಗಿದ್ದು, ಅನುಭವ ಅನ್ನುವುದೂ ಸಾಮಾನ್ಯದ್ದಲ್ಲ ಎಂಬುದಕ್ಕೊಂದು ಉದಾಹರಣೆ ಈ ಕೃತಿಯಾಗಿದೆ. ಇಲ್ಲಿ ಮೊದಲು ಕ್ಯಾನ್ವಸ್‌ಗೆ ಬಣ್ಣಗಳನ್ನು ಚೆಲ್ಲಿ ಅದರಿಂದ ಸ್ಟ್ರಚ್ಚರ್ ತೆಗೆದು ತಮಗೆ ಬೇಕಾದ ವಸ್ತುಗಳನ್ನು ಉಳಿಸಿಕೊಂಡು ಉಳಿದ ಭಾಗವನ್ನು ಆರೆಂಜ್ ವರ್ಣದಿಂದ ಸಂಪೂರ್ಣವಾಗಿ ಮುಚ್ಚಲಾಗಿದೆ. ಆದರೆ ಎರಡು ರೀತಿಯಲ್ಲಿ ಒಂದಕ್ಕೊಂದು ಸಂಬಂಧವನ್ನು ಕಲ್ಪಿಸಿರುವುದು ಮನಮೋಹಕ ಎನ್ನಬಹುದು. ಇದು ಒಂದು ಶೀರ್ಷಿಕೆ ರಹಿತ ಚಿತ್ರವೆಂದರೂ ನೋಡುಗ ಒಂದು ವಿಷಯವಾಗಿ ಗ್ರಹಿಸುವಂತೆ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ ಎಂದೇ ಭಾವಿಸಬಹುದು.

**ಚಿತ್ರ-೧೧**

೩x೩ ಅಡಿಯಲ್ಲಿರುವ ಕಲಾಕೃತಿಯು ಶೀರ್ಷಿಕೆ ರಹಿತ ಅಕ್ರಾಲಿಕ್ ವರ್ಣಗಳಿಂದ ರಚಿತ ವಾಗಿದ್ದು, ಹಿಂದಿನ ಚಿತ್ರದ ಯಥಾರೂಪದಂತಿರುವ ಈ ಚಿತ್ರಕೃತಿಯಲ್ಲಿ ಮೂರು ಭಾಗಗಳನ್ನು ರಚಿಸಿ, ಎರಡು ದುಂಡಾಕಾರದ ಶಿಲ್ಪ ಮತ್ತು ಅವುಗಳಲ್ಲಿ ಹರಿದಾಡುವ ಸಿಂಚನ ಚಲನವನಗಳಂತೆ ಸೋರುತ್ತಿರುವ ಬದುಕಿನ ಲಾಲಸೆಯ ನೆನಪನ್ನು ಈ ರೀತಿಯಲ್ಲಿ ವ್ಯಕ್ತಪಡಿಸಿರುವ ನೋಟವೂ ಇರಬಹುದು.

**ಚಿತ್ರ–೧೨**

೩x೩ ಅಡಿಯಲ್ಲಿರುವ ಕಲಾಕೃತಿಯು ಶೀರ್ಷಿಕೆ ರಹಿತ ಅಕ್ರಾಲಿಕ್ ವರ್ಣಗಳಿಂದ ರಚಿತವಾಗಿದ್ದು, ರಭಸದಿಂದ ಹಾವು ಚಲಿಸುತ್ತಿರುವಂತೆಯೂ ಅದರಿಂದ ಬರುವ ರಕ್ತ ಸುರಿಯುವಂತಿದ್ದು, ಅದರ ನೇರಕ್ಕೆ ಕೆಳಗಡೆ ಒಂದು ಹಂಸವಿದ್ದು, ಶಿಲ್ಪದಂತೆ ಗೋಚರಿಸುತ್ತದೆ. ನೀರನ್ನು ತಿಳಿನೀಲಿ ಬಣ್ಣದಲ್ಲಿ ತೊರಿಸಲಾಗಿದ್ದು, ನೈಜವಾದ ಹಾವಿನ ಬದಲು, ಹಾವಿನ ಆಕಾರದಂತೆ ತೋರಿಸಿರುವ ಕಲಾವಿದನ ಕಲ್ಪನೆ ನಿಜಕ್ಕೂ ಒಪ್ಪಬೇಕಾದದ್ದೇ ಆಗಿರುತ್ತದೆ.

**ಚಿತ್ರ–೧೩**

ಅಕ್ರಾಲಿಕ್ ವರ್ಣದಿಂದ ಕ್ಯಾನ್ವಾಸ್ ಮೂಲಕ ಚಿತ್ರಿಸಿರುವ ಈ ಕೃತಿಯಲ್ಲಿ ಹೆಚ್ಚು ಕಪ್ಪು ವರ್ಣಗಳದ್ದೇ ಸದ್ದು, ಹರಿಯುವ ನೀರಿನಲ್ಲಿ ದೋಣಿ ಸಾಗಿಸುತ್ತಿರುವ ನೋಟ ಒಂದು ಕಡೆಯಾದರೇ, ಅದರ ಮೇಲೆ ಬೆಳಕಿನಡಿಯಲ್ಲಿ ಎಲ್ಲೋ ಒಂದು ಕಡೆ ಗಾಳಿಯ ಜೊತೆ ವ್ಯಕ್ತಿ ಕುಸ್ತಿಯಲ್ಲಿ ನಿರತನಾಗಿದ್ದಾನೆ ಎಂಬಂತೆ ಗೋಚರವಾಗಿರುತ್ತದೆ. ಆದರೂ ಕಾರ್ಮೋಡದ ಮಧ್ಯೆ ನಸುನಗುವ ವರ್ಣಗಳ ಸದ್ದು, ಇಣುಕಿ ಇವರನ್ನೇ ನೋಡುತ್ತಾ ಅಣಕಿಸುವಂತಿದ್ದು, ಕತ್ತಲ ಪ್ರಪಂಚದಲ್ಲಿ ಯಾರಿಗೂ ಕಾಣದ ಭೂತ, ಪ್ರೇತದಂತೆ ಗಾಳಿಯಲ್ಲಿ ನಿಂತು ಕುಸ್ತಿಯಲ್ಲಿ ಸೆಣಸಾಡುವಂತಿದೆ. ಒಬ್ಬ ವ್ಯಕ್ತಿ ಮೂರು ವರ್ಣಗಳ ಉದ್ದನೆಯ ಜಡೆಯನ್ನುಳ್ಳ ವಸ್ತುವಿನೊಂದಿಗೆ ಸೆಣಸುತ್ತಿರುವುದು ತುಂಬಾ ಗಂಭೀರತೆಯನ್ನು ತೋರಿಸುತ್ತಿದ್ದು, ಕೆಂಪು, ಕಪ್ಪು, ಹಳದಿ, ವರ್ಣಗಳನ್ನು ಇದರಲ್ಲಿ ಹೆಚ್ಚು ಕಾಣಬಹುದು.

**ಚಿತ್ರ–೧೪**

೩x೩ ಅಡಿಯುಳ್ಳ ಅಕ್ರಾಲಿಕ್ ವರ್ಣಗಳಿಂದ ಚಿತ್ರಿಸಿರುವ ಈ ಕಲಾಕೃತಿಯಲ್ಲಿ ಚಿತ್ರಿತವಾಗಿ ರುವ ಚಿತ್ರಕೃತಿಯಲ್ಲಿ ಬುಡಕಟ್ಟು ಜನಾಂಗದವರ ಭಾವಚಿತ್ರಗಳಿದ್ದು, ವಿಶೇಷವಾಗಿ ಒಂದೇ ಮುಖದಲ್ಲಿ ಮೂರ್‍ನಾಲ್ಕು ಹೋಲಿಕೆಯ ರೂಪದಲ್ಲಿ ಮನುಷ್ಯ ಹೇಗೆಲ್ಲಾ ಬದುಕುತ್ತಿದ್ದಾನೆ ಎಂಬುದನ್ನು ಸರಳವಾಗಿ ತೋರಿಸಿರುವಂತೆ ಭಾಸವಾಗಿರುತ್ತದೆ.

**ಚಿತ್ರ–೧೫**

೩x೩ ಅಡಿಯುಳ್ಳ ಅಕ್ರಾಲಿಕ್ ವರ್ಣಗಳಿಂದ ಚಿತ್ರಿಸಿರುವ ಈ ಕಲಾಕೃತಿಯಲ್ಲಿ ಇಂದಿನ ಆಧುನಿಕ ಮಾನವನ ಮೆದುಳು ಒಂದು ರೀತಿಯಲ್ಲಿ ಯಾಂತ್ರಿಕೃತವಾಗಿದೆ. ಅವನ ಮೈ ಮನಸ್ಸು ಎಲ್ಲವೂ ಕೂಡ ಹೊಲಿಗೆಯನ್ನು ಹಾಕಿಕೊಂಡಿರುವಂತೆ ಭಾಸವಾಗುತ್ತದೆ(Youths unrest) ಯುವಕರ ಅಶಾಂತಿ ರೂಪದಲ್ಲಿ ಈ ಚಿತ್ರವು ಕಂಡುಬರುತ್ತದೆ.

ಒಂದು ಮನಸ್ಸು (ಪ್ರಜ್ಞಾವಸ್ಥೆ) ಇನ್ನೊಂದು ಮನಸ್ಸು (ಅರೆಪ್ರಜ್ಞಾವಸ್ಥೆ) ಇವೆರಡರ ದಾಳಿಯು ನಮ್ಮ ಮೆದುಳಿನ ಮೇಲೆ ದಟ್ಟವಾದ ಪ್ರಭಾವ ಬೀರುತ್ತದೆ. ನಮ್ಮ ಮನಸ್ಸು, ದೇಹ ಮೆದುಳಿನ ಮೇಲೆ ಚಾಕುವಿನಿಂದ ಇರಿದು ಕೊಯ್ದು ಹೊಲಿಗೆ ಹಾಕಿದಂತೆ ಆಗಿದೆ. ಮನುಷ್ಯನ ಆರೋಗ್ಯಕ್ಕೆ ಮುಖ್ಯವಾಗಿ ಮನಸ್ಸಿನ ಆರೋಗ್ಯ ಬಹಳ ಪ್ರಮುಖವಾಗುತ್ತದೆ. ಮನುಷ್ಯನ ಜೀವನವೇ ಬಿರುಕಿನಿಂದ ಕೂಡಿದೆ. ಮಾನವನ ಬದುಕು ಪರಿಪೂರ್ಣವಲ್ಲ ಎಲ್ಲಾ ಅಪೂರ್ಣತೆಯೆಡೆಗೆ ಸಾಗುತ್ತಿದೆ. ಇನ್ನೊಂದು ರೀತಿಯಲ್ಲಿ ಆಲೋಚನೆ ಮಾಡಿದರೆ ಹದಿಹರೆಯದ ವಯಸ್ಸಿನ ಹುಡುಗ ಹುಡುಗಿಯರ ಮನಸ್ಸು ಪ್ರೀತಿ ಎನ್ನುವ ವಿಚಾರದಲ್ಲಿ ಬಿದ್ದು ಎಲ್ಲಾ ಕೊಯ್ದು ಹೊಲಿಗೆ ಹಾಕಿದ ರೀತಿಯಲ್ಲಿದೆ ಎಂದು ಹೇಳಬಹುದು.

**ಚಿತ್ರ-೧೬**

೩x೩ ಅಡಿಯುಳ್ಳ ಅಕ್ರಾಲಿಕ್ ವರ್ಣಗಳಿಂದ ಚಿತ್ರಿಸಿರುವ ಈ ಕಲಾಕೃತಿಯಲ್ಲಿ ಒಂದು ವಸ್ತುವನ್ನು ತುಂಬಾ ಗಂಭೀರವಾಗಿ ನೋಡಬಹುದಾಗಿದೆ. ಕಲಾವಿದನ ಕಲ್ಪನೆ ಒಂದು ರೀತಿಯದ್ದಾದರೆ, ನೋಡುಗನ ಕಲ್ಪನೆ ಮತ್ತೊಂದು ರೀತಿಯ ವಿಭಿನ್ನ. ಹಾಗಾಗಿ ಕಲಾವಿದ ಮತ್ತು ನೋಡುಗನ ನೋಡುವೇ ಒಂದು ಕೊಂಡಿ ಬೆಸೆದಿರುತ್ತದೆ ಅದುವೇ ಸಾಮ್ಯತೆ. ಆ ಸಾಮ್ಯತೆಯ ಪ್ರತೀಕ ಕಲಾವಿದನ ಕಲಾಕೃತಿಯನ್ನು ಗಮನಿಸಿಯೂ, ಗಮನಿಸದೆಯೂ ಪ್ರತಿಕ್ರಿಯೆಯನ್ನು ನೀಡುತ್ತಾನೆ. ಅದೇರೀತಿ ಇಲ್ಲಿರುವ ಕೃತಿಯಲ್ಲಿ ಮೂರು ವಸ್ತುಗಳನ್ನು ಕಾಣಬಹುದು. ಒಂದು ದೃಷ್ಟಿಗೊಂಬೆಯಾಕಾರದ ಮನುಷ್ಯ, ಎರಡು ಕೈಗಳನ್ನು ಅಡ್ಡಚಾಚಿ ನಿಂತಿರುವಂತೆಯೂ, ಅವನ ಬಲಭುಜದ ಮೇಲೆ ಗುರುತಿಸಲಾರದ ಪಕ್ಷಿ, ಇವೆರಡರ ಗುರಿಯ ನೇರಕ್ಕೆ ಹರಿಯುತ್ತಿರುವಂತೆ ಕಾಣುತ್ತಿರುವ ಮಿಡಿ ನಾಗರಹಾವಿರುವಂತೆ ದೃಶ್ಯ ಕಂಡುಬರುತ್ತಿದೆ. ಸಾಮಾನ್ಯವಾಗಿ ಮನೆಯನ್ನು ಹೊಸದಾಗಿ ಕಟ್ಟುವಾಗ ಕಟ್ಟಿದ, ಕಟ್ಟುತ್ತಿರುವ ಮನೆಗೆ ಯಾರ ದೃಷ್ಟಿ ಬೀಳಬಾರದು, ಬಿದ್ದರೆ ಕೆಲಸವಾಗಲಾರದು ಎಂಬ ಆಲೋಚನೆಯಲ್ಲಿ ಇಂತಹ ಗೊಂಬೆಗಳನ್ನು ತಯಾರು ಮಾಡಿ ಕಟ್ಟಿರುವುದನ್ನು ಗಮನಿಸಿದ್ದೇವೆ. ಹಾಗೆಯೇ ಹೊಲ, ಗದ್ದೆಗಳಲ್ಲಿಯೂ ಇಲ್ಲಿ ಕಾಣುವ ಮೂರು ವಸ್ತುಗಳನ್ನು ಕಾಣಬಹುದು. ಬೆಳೆದ ಪೈರಿಗೆ ಪ್ರಾಣಿಗಳಿಂದ ಹಾನಿಯಾಗಬಾರದು ಎಂಬ ಕಾರಣಕ್ಕೂ ಈ ರೀತಿಯ ಗೊಂಬೆಗಳನ್ನು ನಿಲ್ಲಿಸಿರುವುದನ್ನು ಕಾಣಬಹುದು. ಒಟ್ಟಾರೆ ಇದು ಶೀರ್ಷಿಕೆ ರಹಿತ

ಚಿತ್ರವಾಗಿರು ವುದರಿಂದ ಇಂತಹದ್ದೆ ಎಂದು ಹೇಳಲು ಆಗುವುದಿಲ್ಲ. ಆದರೂ ಕಲಾವಿದನ ಕಲ್ಪನೆಯ ಹತ್ತಿರ ಹೆಜ್ಜೆಗಳನ್ನಿಡುವ ಪ್ರಯತ್ನವಂತೂ ಸಾಗಿರುತ್ತದೆ. ಈ ಕೃತಿಯಲ್ಲಿ ಹೆಚ್ಚು ಕಡು ಹಸಿರು, ನೀಲಿ, ಕೆಂಪು, ಕಪ್ಪು, ಆರೆಂಜ್, ಬಿಳಿ ಬಣ್ಣಗಳನ್ನು ಬಳಸಲಾಗಿದೆ.

**ಚಿತ್ರ-೧೭**

ಅಕ್ರಾಲಿಕ್ ವರ್ಣದಿಂದ ಕ್ಯಾನ್ವಾಸ್ ಮೂಲಕ ಚಿತ್ರಿಸಿರುವ ಈ ಕೃತಿಯಲ್ಲಿ ಹೆಚ್ಚು ಕಪ್ಪು, ನೀಲಿ ವರ್ಣಗಳದ್ದೇ ಸದ್ದು, ಛತ್ರಿಯಾಕಾರದ ದೃಶ್ಯದಲ್ಲಿ ಅದಕ್ಕಂಟಿಕೊಂಡಿರುವ ಮೂರು ಭಾವ ದೃಶ್ಯಗಳು. ಅದರ ಕೆಳಭಾಗದಲ್ಲಿ ಕಲ್ಪನೆಗೂ ಮೀರಿದ ಎರಡು ಹಾವಿನ ಚಿತ್ರಗಳು ಈ ಎರಡು ದೃಶ್ಯದ ಮಧ್ಯೆ ಮೂರು ನಕ್ಷತ್ರಗಳು ಈ ಕೃತಿಯಲ್ಲಿ ಮುಖ್ಯ ಭಾಗವಿರುತ್ತವೆ. ಎರಡು ಸ್ತ್ರೀ ಮುಖವಾಡಗಳು ಒಂದು ಪುರುಷ ಮುಖವಾಡ ಅವುಗಳತ್ತ ಈ ಬಣ್ಣದ ಹಾವುಗಳ ಬೆನ್ನತ್ತಿ ಬರುವಂತೆ ಅಷ್ಟೇ ವೇಗದ ಗತಿಯಲ್ಲಿ ಚಿತ್ರವನ್ನು ಕಲಾವಿದರು ರಚಿಸಿದ್ದಾರೆ. ಒಂದು ಪರಿಪೂರ್ಣ ನಕ್ಷತ್ರ ಮತ್ತೆರಡು ಅರ್ಧ ನಕ್ಷತ್ರವನ್ನು ಕಾಣಬಹುದು. ಈ ಕಲ್ಪನೆ ನೋಡಿದ ಎಂತಹವರಿಗೂ ಪರಿಪೂರ್ಣ ತೃಪ್ತಿಯಿಂದ ಸ್ವೀಕರಿಸುವ ಅಂಕುಶಕ್ಕೆ ಹೋಗದೇ ಆಶ್ಚರ್ಯದಿಂದ ಹೀಗೂ ಇರಬಹುದೆ ಎಂಬ ಅಂಶವನ್ನು ಎದೆಗಂಟಿಸಿಕೊಂಡು ಮುಂದೆ ಸಾಗುವಂತ ಗುಣವನ್ನು ಈ ಕೃತಿ ಹೊಂದಿದೆ ಎಂಬುದನ್ನು ಕಾಣಬಹುದು. ಬಹುಮುಖ್ಯವಾಗಿ ಕೆಂಪು, ಕಪ್ಪು, ಹಳದಿ, ವರ್ಣಗಳನ್ನು ಇದರಲ್ಲಿ ಹೆಚ್ಚು ಕಾಣಬಹುದು.

**ಚಿತ್ರ-೧೮**

ಪುರುಷ ಮತ್ತು ಮಹಿಳೆ ಅಂತರ್ಗತವಾಗಿರುವಂತೆ ಕಾಣುತ್ತದೆ. ಮಹಿಳೆಯ ಜಡೆಗಳು ಹಾವಿನ ರೀತಿಯಲ್ಲಿ ಪುರುಷನ ಕಡೆಗೆ ಮುಖಮಾಡಿವೆ. ಅವಳ ಸ್ತನಗಳು ದೊಡ್ಡವಾಗಿದ್ದು ತಾಯ್ತನಕ್ಕೆ ಸಿದ್ಧವಾಗಿರುವ ಮಹಿಳೆಯಂತೆ ಕಾಣುತ್ತದೆ. ಈ ಚಿತ್ರವು ಪುರುಷ ಮತ್ತು ಮಹಿಳೆಯು ಲೈಂಗಿಕ ಕ್ರಿಯೆಯಲ್ಲಿ ತೊಡಗಿರುವಂತೆ ಕಾಣುತ್ತದೆ. ಅಂಡಾಣು ಮತ್ತು ವೀರ್ಯಾಣುಗಳನ್ನು ಸೂಚಿಸುವ ಚಿತ್ರಗಳಿವೆ. ಅಂದರೆ ಸಂತಾನೋತ್ಪತ್ತಿ ಕ್ರಿಯೆ ನಡೆಯಲು ಇವೆರಡರ ಸಮಾಗಮ ಅತ್ಯಗತ್ಯ ಎನ್ನುವ ವಿಷಯವನ್ನು ತಿಳಿಸುತ್ತದೆ. ಇದೇ ದೃಶ್ಯದಲ್ಲಿ ಕೆಳಗೆ ಕಲ್ಲಿನ ಮೇಲೆ 2 ಹಾವುಗಳು ತಳುಕು ಹಾಕಿಕೊಂಡಿರುವಂತೆ ಕಂಡುಬರುತ್ತವೆ. ಅವುಗಳೂ ಕೂಡ ಲೈಂಗಿಕ ಕ್ರಿಯೆಯಲ್ಲಿ ತೊಡಗಿವೆ. ಲೈಂಗಿಕ ಕ್ರಿಯೆ ಎನ್ನುವುದು ಪ್ರತಿಯೊಬ್ಬ ವ್ಯಕ್ತಿಗೂ ಕೂಡ ಅವಶ್ಯಕ. ಮನುಕುಲದ ಅಳಿವು ಉಳಿವಿಗೆ

ಇದು ಪ್ರಮುಖ ಕಾರಣವಾಗುತ್ತದೆ. ಮನುಕುಲ ಅಷ್ಟೇ ಅಲ್ಲ ಪ್ರತಿಯೊಂದು ಜೀವಸಂಕುಲ (ಪ್ರಾಣಿ, ಪಕ್ಷಿ, ಸಸ್ಯ, ಮನುಷ್ಯ)ದ ಬೆಳವಣಿಗೆಗೆ ಲೈಂಗಿಕತೆ ಸಹಕಾರಿಯಾಗುತ್ತದೆ ಎಂಬ ಅಭಿಪ್ರಾಯದಂತೆ ಈ ಚಿತ್ರಕೃತಿಯಲ್ಲಿ ತಮ್ಮದೇ ಭಿನ್ನಶೈಲಿಯನ್ನು ಹೊರಹಾಕಲಾಗಿದೆ.

**ಚಿತ್ರ–೧೯**

೩x೩ ಅಡಿ ಅಳತೆಯುಳ್ಳ ಅಕ್ರಾಲಿಕ್ ವರ್ಣಗಳಿಂದ ತಯಾರಾದ ಈ ಕಲಾಕೃತಿಯಲ್ಲಿ ಗಂಭೀರ ಆಲೋಚನೆಯುಳ್ಳ ಗಟ್ಟಿ ವಸ್ತುವಿನ ವಿಷಯವಿರುತ್ತದೆ. ಈ ಮನುಷ್ಯನ ಬದುಕೇ ಒಂದು ರೀತಿಯಲ್ಲಿ ಹಾವು, ಏಣಿ ಆಟ ಎಂಬಂತೆ ಪ್ರತಿಕ್ಷಣವೂ ಬದಲಾಗುತ್ತಾ ಸಾಗುತ್ತಿರುತ್ತದೆ. ಇಂದು, ಈವಾಗ ಆದ ಅನುಭವ ನಾಳೆ, ಮತ್ತ್ಯಾವಾಗ್ಲಾದ್ರು ಆಗಬಹುದೇ ಎಂಬ ಆತಂಕ ಕಾಡದೇಯಿರದು. ಅಷ್ಟರ ಮಟ್ಟಿಗೆ ಮನುಷ್ಯನ ಜೀವನ ಕ್ಷಣಕ್ಷಣಕ್ಕೂ ಬದಲಾವಣೆಯನ್ನು ಕಾಣುತ್ತಿರುವ ಪ್ರಸ್ತುತ ದಿನಗಳಲ್ಲಿ ಬದುಕು ಸಾಗಿಸುವ ನೋಟವೂ ಕೂಡ ಒಂದು ಛಲ. ಅಂತಹ ಹೋರಾಟದ ಮಧ್ಯೆ ಏನೆಲ್ಲಾವನ್ನು ಆಲೋಚಿಸುವ ಮನಸ್ಸುಗಳು ನಮ್ಮ ನಡುವೆ ಇವೆ. ಅವುಗಳ ಚಲನೆ, ತುಲನೆಯ ಗಾಂಭೀರ್ಯತೆ ಎಂತಹದ್ದು ಎಂಬ ಮಾರ್ಮಿಕ ನೋಟ ಎಂತಹವರಿಗೂ ಕಾಡದೆಯಿರದು ಬಹುಶಃ ಆ ವಿಚಾರದಲ್ಲಿ ಈ ಕಲಾವಿದನಿಗೂ ಕಂಡಿರಬೇಕು. ಈ ಕೃತಿಯಲ್ಲಿ ಒಬ್ಬ ವ್ಯಕ್ತಿಯ ಭಾವಶಿಲ್ಪ ಹಾಸಿದ ರೊಟ್ಟಿನ ಮೇಲೆ ಕುಳಿತಿದ್ದು, ಬಾಯಿಗೆ ಸ್ಟಿಚ್ ಮಾಡಲಾಗಿದೆ. ಒಂದು ಕಡೆ ಮುಖವಿರುವುದರಿಂದ ದೊಡ್ಡದಾದ ಜೀವವಿರುವ ಕಣ್ಣಿನಂತಿದ್ದು, ಯಾವುದೋ ಯೋಚನಾ ಸ್ಥಿತಿಯಲ್ಲಿರುವಂತೆ ಭಾಸವಾಗುತ್ತಿದೆ.ಇನ್ನೂ ನಾಗರಕಲ್ಲು ಅದರ ಮೇಲೊಂದು ದೊಣ್ಣೆಕಟ್ಟ ಪಕ್ಕದ ಏಣಿಯನ್ನೇರಿ ಬರುವಂತಿರುವ ಹಾವನ್ನು ದಿಟ್ಟಿಸಿ ನೋಡುತ್ತಿರುವಂತೆ ಕಾಣುತ್ತಿದೆ. ಬಲಭಾಗದಲ್ಲಿ ಈ ಮನುಷ್ಯನ ತಲೆಯ ಕೆಳಭಾಗದಲ್ಲಿ ನೀರು, ಆ ನೀರಿನ ಮೇಲೆ ಹಳದಿ ಬಣ್ಣದ ಮೀನನ್ನು ತೋರಿಸಲಾಗಿರುತ್ತದೆ. ಒಟ್ಟಾರೆ ಹಾವೂ, ಏಣಿಯ ಆಟದಂತೆ ಮನುಷ್ಯನ ಬದುಕು ಎಚ್ಚರವಾಗಿದ್ದರೆ ಮಾತ್ರ ಸುವ್ಯವಸ್ಥಿತವಾಗಿ ಸಾಗಲು ಅನುವಾಗುತ್ತದೆ ಎಂಬುದಕ್ಕೊಂದು ಉದಾಹರಣೆಯಾಗಿರುತ್ತದೆ. ಇದರಲ್ಲಿ ಹೆಚ್ಚು ನೀಲಿ, ಕಪ್ಪು, ಹಳದಿ ಬಣ್ಣಗಳನ್ನು ಕಾಣಬಹುದು.

**ಚಿತ್ರ–೨೦**

ಕ್ಯಾನ್ವಸ್ ಮೇಲೆ ಅಕ್ರಾಲಿಕ್ ವರ್ಣಗಳಿಂದ ಚಿತ್ರಿತವಾಗಿರುವ ಈ ಕೃತಿಯಲ್ಲಿ ಸಮಯ ಪ್ರಜ್ಞೆ ಮನುಷ್ಯನಿಗೆ ಬಹುಮುಖ್ಯವಾಗಿರುತ್ತದೆ. ಅದೇ ವಿಷಯನ್ನೆ ಬಹುಮುಖ್ಯವಾಗಿ ಪರಿಗಣಿಸಿರು ವಂತಿರುವ ಕಲಾವಿದರು, ಈ ಕೃತಿಯಲ್ಲಿ ವಕ್ರಾಕಾರವಾಗಿ ಸುತ್ತಿರುವ ಗಡಿಯಾರದಲ್ಲಿ ಮನುಷ್ಯರ ಚಿತ್ರವನ್ನು ಹಾಕಿ, ಒಂದು ಸೆಕೆಂಡ್ ಮುಳ್ಳನ್ನು ನೇರವಾಗಿ ತೋರಿಸಲಾಗಿದೆ. ಈ ಗಡಿಯಾರ ವಕ್ರದಂತೆ

ಕಂಡರೂ ಅದರಲ್ಲಿ ಸಂಖ್ಯೆಗಳು ಸ್ಪಷ್ಟತೆಯಿಂದಿರುತ್ತವೆ. ಕಲಾವಿದನ ಕಲ್ಪನೆ ಸಮಾಜ ದಲ್ಲಾಗುವ ಸನ್ನಿವೇಶಗಳಿಗನುಗುಣವಾಗಿರಬಹುದಾದರೂ ನೋಡುಗನ ಮನಸ್ಸು ಸ್ವಲ್ಪ ಚಂಚಲ ಸ್ಥಿತಿಗೆ ಹೋಗುವ ಸಮಯವದು. ಆ ಮಟ್ಟಕ್ಕೆ ಚಿತ್ರ ನಿಶ್ಯಬ್ದತೆಯನ್ನು ತೋರುವಂತಿದೆ. ಇಲ್ಲಿ ಕೆಂಪು, ಹಸಿರು, ನೀಲಿಯನ್ನು ಹೆಚ್ಚು ಬಳಸಲಾಗಿರುತ್ತದೆ.

**ಚಿತ್ರ–೨೧**

ಎರಡೂವರೆ, ಮೂರು ಅಳತೆಯಿರುವ ಈ ಕೃತಿಯಲ್ಲಿ ಮೂರು ಮನುಷ್ಯರ ಕೃತಿಗಳಿದ್ದು, ಮಲಗಿರುವ ದೃಶ್ಯವನ್ನು ಕಾಣಬಹುದಾಗಿದೆ. ಅಕ್ರಾಲಿಕ್ ಬಣ್ಣವನ್ನು ಕ್ಯಾನ್ವಸ್ ಗೋಡೆಗೆ ಲೇಪಿಸಿ ನಂತರ ಕ್ರಾಯನ್ಸ್ ಮತ್ತು ಪೆನ್ಸಿಲ್‌ಗಳನ್ನು ಬಳಸಿ ಸ್ಕೆಚ್ ಮಾಡುವ ರೀತಿಯಲ್ಲಿ ಚಿತ್ರಿಸಿದ್ದಾರೆ. ಅಂತಹ ವಿಶೇಷತೆಯೇನಿರುವುದಿಲ್ಲ. ನಿದ್ದೆ ಸಂತೆಯಲ್ಲೂ ಬಂದರೆ ಹೇಗಿರುತ್ತೆ ಎಂಬರ್ಥವನ್ನು ಜ್ಞಾಪಿಸುವಂತೆ, ನಾಚಿಸುವಂತೆಯೂ ಕಂಡುಬರುತ್ತಿರುವುದು ವಿಶೇಷಗಳಲ್ಲೊಂದು.

**ಚಿತ್ರ–೨೨**

ಈ ಕಲಾಕೃತಿ ಭೇಟಿಯಂತೆ ಆರುವ ಮನಸ್ಸಿಗೆ ಸಂಬಂಧಿಸಿದ್ದಂತೆ ತೋರುತ್ತದೆ. ವಿಶೇಷವೆಂದರೆ ಹಾರುವ ಹಕ್ಕಿಯ ರೆಕ್ಕೆಯಲ್ಲಿ ಜೀವನದ ಬಗ್ಗೆ ತಿಳಿಸುವ ಪ್ರಯತ್ನ ಮಾಡಿದಂತಿರುವ ಈ ಕೃತಿಯಲ್ಲಿ ಬಲದಿಯ ರೆಕ್ಕೆಯಲ್ಲಿ ಕತ್ತಲ ಹೊತ್ತಿನಲ್ಲಿ ದೋಣಿ ಸಾಗಿಸುವಂತೆ ತೋರಿ, ಆ ದೃಶ್ಯ ವಿಪತ್ತಿಗೆ ಸಿಲುಕಿದಂತೆ ಕಾಣಬಹುದು. ಇನ್ನೊಂದು ಕಡೆ ಎಡರೆಕ್ಕೆಯಲ್ಲಿ ಸಾಲುಗಳು ಭಯ ಭೀತಿಯಿಂದ ಹರಿದಾಡುತ್ತಿರುವುದನ್ನು ಕಾಣಬಹುದು. ಅದರ ಕೆಳಭಾಗದಲ್ಲಿ ಒಬ್ಬ ಮನುಷ್ಯನನ್ನು ಹಗ್ಗದಲ್ಲಿ ಕಟ್ಟಿ ಕೆಳಕ್ಕೆ ಹಿಡಿದಿರುವಂತೆ ಕಂಡುಬಂದರೆ, ಜೀವನದಲ್ಲಿ ಮನುಷ್ಯನ ಹೋರಾಟದ ಬಗ್ಗೆ ಜೀವನದ ಮೌಲ್ಯವನ್ನು ಪ್ರತಿಬಿಂಬಿಸುವಂತೆ ರಚಿಸಲಾಗಿದೆ. ಹಿನ್ನೆಲೆಯಲ್ಲಿನ ವರ್ಣಗಳು ಹಳದಿ, ಕೆಂಪು, ಕಪ್ಪು ಹಾಗೂ ನೀಲಿ ವರ್ಣವನ್ನು ಬಳಸಿ ಚಿತ್ರಿಸಿರುವುದು ತುಂಭಾ ವಿಶೇಷವಾದದ್ದಾಗಿದೆ. ಜೀವನದ ಈ ಬದುಕಿನಲ್ಲಿ ಮನುಷ್ಯನು ದಿನಾಲೂ ಹರಿಯುತ್ತಿರು ಹಾವಿನಂತೆ ಭಾಸವಾಗಿರುವುದು ಒಂದಾದರೆ ಮತ್ತೊಂದು ಕಡೆ ಧ್ಯಾನ, ಕನಸು ಎಂಬ ಕಲ್ಪನೆಯ ಗೆರೆಗಳು ನೆನಪಿಸುವಂತಿವೆ. ಇಲ್ಲಿರುವ ಆಧುನಿಕ ಶೈಲಿಯ ಪಕ್ಷಿಯಲ್ಲಿ ತಲೆ ಆ ತಲೆಯಲ್ಲಿ ಕಿರೀಟ, ಎಡ ರೆಕ್ಕೆಯಲ್ಲಿ ಗಿಡ, ಮರ ಮತ್ತು ಹಾವುಗಳ ಸದ್ದು, ಬಲ ರೆಕ್ಕೆಯಲ್ಲಿ ನದಿಯಲ್ಲಿ ಒಂಟಿದೋಣಿ ಜೊತೆಗೆ ಒಬ್ಬ ಮನುಷ್ಯ ಇವರಿಬ್ಬರ ನಡುವೆ ಮೇಲೆ ಅರ್ಧಚಂದ್ರ ಮಿನುಗುತ್ತಿದ್ದಾನೆ. ಈ ದೃಶ್ಯದ ಕೆಳಗೆ ಸತ್ತ ಶವದಂತೆ ಮಲಗಿರುವ ಮನುಷ್ಯನಾಕೃತಿ ಕಪ್ಪುವರ್ಣದಿಂದ ಚಿತ್ರಿಸಲಾಗಿದೆ. ಒಂದು ರೀತಿಯಲ್ಲಿ ಗ್ರಾಫಿಕ್ ಕೃತಿಯಂತೆ ಕಂಡು ಬಂದರೂ ಇಲ್ಲಿ ಅದು ಅಪ್ರಸ್ತುತ. ಕಾರಣ ಕೆಲ ಪುಸ್ತಕದಲ್ಲಿನ ಚಿತ್ರವನ್ನು ಅಂಟಿಸಿ ಅದಕ್ಕೆ

ಪೂರಕವಾಗಿ ಸಂಯೋಜನೆಯನ್ನು ಮಾಡಿರುವಷ್ಟರ ಮಟ್ಟಿಗೆ ಕಲಾವಿದ ಚಿ.ಸು.ಕೃಷ್ಣಸೆಟ್ಟಿ ತಮ್ಮ ಕಲಾಕೃತಿಯಲ್ಲಿ ತನ್ನ ಕಲ್ಪನೆಯನ್ನು ಹೊರಚಾಚಿರುತ್ತಾರೆ.

**ಚಿತ್ರ-೨೩**

ಈ ಕಲಾಕೃತಿಯು ಚಿಟ್ಟೆಗೆ ಸಂಬಂಧಿಸಿದ ಕಲಾಕೃತಿಯಾಗಿದ್ದು ಎರಡು ಜೀವಗಳ ಮಿಲನದಂತೆ ತೋರುತ್ತದೆ. ಹಾಗೂ ಅದರ ಕೆಳಭಾಗದಲ್ಲಿ ನಾಗರಕಲ್ಲನ್ನು ಕಾಣಬಹುದು. ಸಾಮಾನ್ಯವಾಗಿ ಎಲ್ಲಾ ದೇವಾಲಯಗಳಲ್ಲಿ ಕಾಣುವ ನಾಗರಕಲ್ಲಿನಂತೆ ಇಲ್ಲಿ ಚಿತ್ರಿಸಿದ್ದಾರೆ ನೋಡುಗ ಆ ಕಲ್ಪನೆಗೆ ಜಾರಬಹುದು. ಪ್ರಕೃತಿಯ ಸಹಜ ಲೈಂಗಿಕತೆಯನ್ನು ಮನುಷ್ಯ ಜೀವಿ ಅಷ್ಟೆ ಅಲ್ಲ ಪ್ರತಿಯೊಂದು ಜೀವಸಂಕುಲಗಳಲ್ಲೂ ಕಾಣಬಹುದು. ಇದು ಪ್ರಕೃತಿಯ ನಿಯಮವನ್ನು ಹೋಲುತ್ತದೆ ಎಂದು ತಮ್ಮ ಕಲಾಕೃತಿಯ ಮೂಲಕ ತಿಳಿಸಲಾಗಿದೆ. ಕಲಾಕೃತಿಯ ಹಿಂಬದಿಯಲ್ಲಿ ಪ್ರಕೃತಿಯ ಸಹಜವರ್ಣ ಹಸಿರನ್ನು ಬಳಸಲಾಗಿದೆ. ಚಿಟ್ಟೆಗಳ ಗೂಡಿನಂತೆಯು ಹಿನ್ನೆಲೆ ಚಿತ್ರಿಸಿ ಖಾಲಿ ಪೇಜ್‌ನಿಂದ ಗೆರೆಗಳನ್ನು ಎಳೆಯಲಾಗಿದೆ. ಪ್ರತಿಯೊಂದು ಜೀವಿಯು ತನ್ನ ಬದುಕಿಗೆ ಆಸರೆಯಾಗಿ ಮನೆಯನ್ನು ಕಟ್ಟಿಕೊಂಡು ಸುಖವನ್ನನುಭವಿಸಿ ಅಂತ್ಯಗೊಳ್ಳುತ್ತದೆ ಎಂಬ ನೀತಿಯನ್ನು ಅನುಸರಿಸಿದಂತೆ ಕಾಣುವ ಕಲಾವಿದರು, ತನ್ನ ಮನಸ್ಸಿನ ಭಾವನೆಗಳನ್ನು ಚಿತ್ರ ಕಲಾಕೃತಿಯ ಮೂಲಕ ತಿಳಿಸಲಾಗಿದೆ. ಪ್ರಕೃತಿಯನ್ನು ವೀಕ್ಷಿಸಿದ ಪ್ರತಿಯೊಬ್ಬ ಕಲಾವಿದನ ಮನಸ್ಸಿನಲ್ಲಿ ಈ ರೀತಿಯ ಭಾವನೆ ಮೂಡುವುದು ಸಹಜವೂ ಕೂಡ. ಆದರೆ ಕಲಾಕೃತಿ ರಚನೆಯಲ್ಲಿ ಭಿನ್ನತೆಗಳಿದ್ದು, ಕೆಲವು ವಸ್ತುಗಳನ್ನು ವಿಷಯಕ್ಕೆ ಅನುಗುಣವಾಗಿ ಚಿತ್ರಿದ್ದಾರೆ. ಒಟ್ಟಾರೆಯಾಗಿ ಪ್ರಕೃತಿದತ್ತ ಕಲಾಕೃತಿಯಲ್ಲಿ ಇದೊಂದಾಗಿದೆ.

**ಚಿತ್ರ-೨೪**

ಮೂರು, ಮೂರುವರೆ ಅಡಿಯಿರುವ ಕ್ಯಾನ್ವಸ್‌ನಲ್ಲಿ ರಚಿಸಿರುವ ಕಲಾಕೃತಿಯಲ್ಲಿ ನಾಗರ ಕಲ್ಲು ಆ ಕಲ್ಲಿನ ಕಡೆ ಹಾರುತ್ತಿರುವ ಕಪ್ಪು ವರ್ಣದ ಬೆಕ್ಕಿನಲ್ಲಿ ಆಕ್ರೋಶ ಹೆಚ್ಚಾದಂತಿದೆ. ಈ ಬೆಕ್ಕಿನ ಹೊಟ್ಟೆಯಲ್ಲಿ ಒಂದು ಪಕ್ಷಿಯನ್ನು ಕಾಣಿಸಿದ್ದಾರೆ. ನಾಯಿ ಬಾಲ ಯಾವತ್ತಿದ್ರೂ ಡೊಂಕು ಎಂಬಂತೆ ಈ ದೃಶ್ಯದಲ್ಲಿನ ಬೆಕ್ಕಿನಬಾಲವೂ ಕೂಡ ಸೆಟೆದು ನಿಲ್ಲುವ ಪ್ರಯತ್ನ ಸಾಗಿದಂತೆ ಕಂಡುಬರುತ್ತಿದೆ. ಸೂಕ್ಷ್ಮವಾಗಿ ಗಮನಿಸುತ್ತಾ ಹೋದರೆ ಇಲ್ಲಿ ಎರಡು ಕ್ಯಾನ್ವಸ್‌ನ್ನು ಕೂಡಿಸಲಾಗಿದೆಯೇ ಎಂಬ ಅನುಮಾನ ಬರುತ್ತಿದೆ. ಆದರೂ ಅದನ್ನು ನೋಡುವ ಕಣ್ಣುಗಳಿಗಿಲ್ಲಿ ಬಣ್ಣಗಳು ಅವಕಾಶ ಕೊಟ್ಟಿಲ್ಲ. ಕಲಾವಿದರ ಕಣ್ಣು ಹಾವಿನ ಕಡೆ ನೆಟ್ಟಿದೆ ಅನಿಸುತ್ತಿದೆ. ದೇವಾಲಯಗಳ ಮುಂದೆ ಇರುವಂತಹ ಕಲ್ಲು ನಾಗರವನ್ನು ತಮ್ಮದೇ ಶೈಲಿಯಲ್ಲಿ ತೋರಿಸಿರುವ ಕಲಾವಿದರು ಮೂಢನಂಬಿಕೆಯ ಪ್ರಭಾವ ಬಿದ್ದಿರುವಂತೆ ಕಂಡುಬರುತ್ತಿದೆ. ಸಮಾಜದಲ್ಲಿ ಈ ಜನ ಮೂಢನಂಬಿಕೆಗೆ ಮಾರುಹೋಗಿದ್ದಾರೆ

ಎಂಬ ದೃಷ್ಟಿಯಿಂದ ಈ ಸನ್ನಿವೇಶವನ್ನು ಸೃಷಿಸಿದಂತೆ ಭಾಸವಾಗುತ್ತಿದೆ. ಕಪ್ಪು, ಕೆಂಪು, ಹಳದಿ, ತಿಳಿನೀಲಿ, ಹಸಿರು, ಬಿಳಿ ವರ್ಣಗಳನ್ನು ಹೆಚ್ಚಾಗಿ ಕಾಣಬಹುದು.

**ಚಿತ್ರ–೨೫**

ಎರಡು, ಎರಡೂವರೆ ಅಡಿಯಿರುವ ಈ ಕೃತಿಯಲ್ಲಿ ರುಡಾಲಿ ಎಂಬ ಹೆಸರನ್ನಿಟು ಗಂಡು, ಹೆಣ್ಣಿನ ಭಾವಚಿತ್ರದ ಜೊತೆಗೆ ಗುಡಿಸಲಿನ ಮನೆ, ದೊಡ್ಡದಾದ ಒಂದೇ ಕಣ್ಣು, ಎರಡು ಗುಡ್ಡೆಗಳನ್ನು ತೋರಿಸಿದ್ದಾರೆ. ಒಂದು ದೃಶ್ಯವನ್ನು ವೀಕ್ಷಿಸಿದ ಕಲಾವಿದರು ಅದನ್ನೇ ತನ್ನ ಕಲಾಕೃತಿಯಲ್ಲಿ ಬಿಂಬಿಸಿದರೆ ಹೇಗಿರಬಹುದು ಎಂಬ ಉತ್ಸಾಹದಲ್ಲಿ ಈ ಚಿತ್ರ ಮೂಡಿರಬಹುದು. ಸಂಸಾರ ನಾವಂದುಕೊಂಡಷ್ಟು ಸುಲಭವಲ್ಲ. ಸುಖಕ್ಕಿಂತ ದುಃಖಕ್ಕೆ ಇಲ್ಲಿ ಜಾಗ ಎಂಬಂತೆ ಇಲ್ಲಿನ ಗಂಡ, ಹೆಂಡತಿಯ ಇಬ್ಬರ ಕಣ್ಣಲ್ಲೂ ನೀರು ಸುರಿಯುತ್ತಿರುವಂತೆ ಚಿತ್ರಿಸಿದ್ದಾರೆ ಕಲಾವಿದರು. ಇದು ಅವರು ನೋಡಿರುವ ದೃಶ್ಯವಾದರೂ ಕಲ್ಪನೆಗೆ ಮತ್ತು ಕಲೆಗೆ ಗೌರವ ನೀಡಲೇಬೇಕು. ನೋಡುಗ ಈ ಕಲಾಕೃತಿಯನ್ನು ನೋಡಿದ ತಕ್ಷಣ ಆ ಎರಡು ಮುಖ್ಯ ವಿಷಯಗಳ ಕಡೆ ಕಣ್ಣುಯಿಸುವಂತಹ ಪ್ರಯತ್ನ ಈ ಕಲಾಕೃತಿಯಲ್ಲಿ ಮಾಡಿರುವುದನ್ನು ಕಾಣಬಹುದು. ಕೆಂಪು, ಕಪ್ಪು, ಬಿಳಿ ಬಣ್ಣಗಳೆ ಈ ಕೃತಿಯಲ್ಲಿ ಹೆಚ್ಚು ಕಾಣಲಾರಂಭಿಸಿವೆ.

**ಚಿತ್ರ–೨೬**

ಎರಡೂವರೆ ಎರಡು ಅಡಿಯಿರುವ ಈ ಚಿತ್ರಕೃತಿಯಲ್ಲಿ ಒಬ್ಬ ಮನುಷ್ಯನ ಭಾವಚಿತ್ರವನ್ನು ಬಿಂಬಿಸಲಾಗಿದ್ದು, ತಲೆಗೆ ಕಿರೀಟ, ದಪ್ಪನೆಯ ಮೂಗು, ಕಣ್ಣು, ಚಿಕ್ಕದಾದ ತುಟಿ ಮತ್ತು ಕತ್ತು, ಆ ಕತ್ತಿಗೆ ಕಪ್ಪು ಹಾವನ್ನು ಸುತ್ತುವರಿದು ಬಲಭಾಗಕ್ಕೆ ಹೆಡೆ ಎತ್ತಿ ನಿಂತಿರುವಂತೆ ಚಿತ್ರಿಸಲಾಗಿದೆ. ತಲೆಯ ನೆತ್ತರಕ್ಕೆ ಹಾರುತ್ತಿರುವ ಗಾಳಿಪಟದ ಬಾಲ ಹಾವಿನದ್ದಾಗಿದೆ. ಹಾಗೆಯೇ ಕೆಳಭಾಗದ ಎಡಭಾಗದಲ್ಲಿ ನಾಗರ ಕಲ್ಲನ್ನು ಸೃಷ್ಟಿಸಿದ್ದಾರೆ. ಒಟ್ಟು ಈ ಕೃತಿಯಲ್ಲಿ ಮೂರು ಹಾವುಗಳಿರುವುದು ವಿಶೇಷ. ಯಾವ ದೃಷ್ಟಿಕೋನವನ್ನಿಟ್ಟುಕೊಂಡು ಚಿತ್ರವನ್ನು ರಚಿಸಿದ್ದಾರೆ ಎಂಬುದು ಕಲಾವಿದರಿಗೆ ಬಿಟ್ಟ ವಿಚಾರವಾದರೂ ನೋಡುಗನ ದೃಷ್ಟಿ ಕಲಾಕೃತಿಯ ವಸ್ತುಸ್ಥಿತಿಯ ಕಡೆ ವಾಲುವುದಂತೂ ದಿಟ. ಕಾರ್ಟೂನ್‌ನಂತೆ ಬಿಂಬಿತವಾಗಿರುವ ಭಾವಚಿತ್ರಕ್ಕೆ ಕಿರೀಟ ಯಾವ ಸಂದೇಶವನ್ನು ನೀಡಬಹುದು. ಜಯದ ಸಂಕೇತವಾ! ನಾನೇ ಎಲ್ಲಾ ಎಂಬ ಹುಂಬತನದ ಸಂಕೇತವಾ! ತಿಳಿಯದಾಗಿದೆ. ಕಲಾವಿದರನ್ನು ಕೇಳಿದರೆ ಸನ್ನಿವೇಶವನ್ನು ನನ್ನದೇ ಕಲ್ಪನೆಯಲ್ಲಿ ಸೆರೆಹಿಡಿದ್ದೇನೆ ಎನ್ನುತ್ತಾರೆ. ಈ ಮಾತಿನಂತೆ ಅವರ ಕಲ್ಪನೆಗೆ ರೇಖೆ ಮತ್ತು ಬಣ್ಣಗಳು ಮಾತನಾಡಿದ್ದಾವೆ. ಕೆಂಪು, ನೀಲಿ, ಕಪ್ಪು, ಬಿಳಿ ಬಣ್ಣಗಳಿಂದ ಕೃತಿಯನ್ನು ಪೂರ್ಣಗೊಳಿಸಲಾಗಿದೆ.

**ಚಿತ್ರ-೨೭**

ಎರಡೂವರೆ, ಮೂರು ಅಳತೆಯಿರುವ ಈ ಚಿತ್ರಕೃತಿಯಲ್ಲಿ ಒಂದು ಮುಖವಾಗಿ ಮನುಷ್ಯನ ಭಾವಚಿತ್ರದಲ್ಲಿ ಗಡಿಯಾರವನ್ನು ತೋರಿಸಲಾಗಿದೆ. ಈ ವಸ್ತುವನ್ನು ಕಲಾಕೃತಿಯ ಮಧ್ಯಭಾಗದಲ್ಲಿ ಬಿಂಬಿಸಲಾಗಿದ್ದು, ಸುತ್ತಲೂ ಕತ್ತಲಾವರಿಸಿದೆ. ಮನುಷ್ಯನಿಗೆ ಸಮಯ ಪ್ರಜ್ಞೆ ತುಂಬಾ ಇರಬೇಕಾಗುತ್ತದೆ ಎಂಬುದನ್ನು ಸೂಚಿಸುವಂತೆ ಭಾಸವಾಗುವ ಈ ಕೃತಿಯಲ್ಲಿ ಗಡಿಯಾರದ ಮುಳ್ಳುಗಳನ್ನು ಕನ್ನಡದ ಅಂಕಿಯಲ್ಲಿ ತೋರಿಸಿರುವುದು ಕನ್ನಡದ ಮೇಲಿನ ಅಭಿಮಾನವನ್ನು ಮತ್ತು ಸಮಯದ ಬಗ್ಗೆ ಇರುವ ಕಾಳಜಿಯನ್ನು ಇಲ್ಲಿ ಗುರುತಿಸಬಹುದು. ಕಡುಕಪ್ಪು ವರ್ಣಗಳಿಂದಲೇ ಆವೃತವಾಗಿರುವ ಈ ಕೃತಿಯ ಅಲ್ಲಲ್ಲಿ ಕೆಂಪು, ನೀಲಿ ಮತ್ತು ಹಳದಿ ಮುಖ್ಯ ವರ್ಣಗಳಾಗಿ ಕಂಡುಬರುತ್ತಿವೆ.

**ಚಿತ್ರ-೨೮**

ಈ ಚಿತ್ರಕೃತಿಯಲ್ಲಿ ಒಂದು ಅಸ್ಥಿಪಂಜರದ ಜೊತೆಗೆ ಏಳು ಕೈಗಳು ತಲೆಯೆತ್ತಿ ನಿಂತಿರುವ ದೃಶ್ಯವನ್ನು ನಾವಿಲ್ಲಿ ಕಾಣಬಹುದು. ತುಂಬಾ ನೈಜತೆಯಲ್ಲಿರುವ ಅಸ್ಥಿಪಂಜರಕ್ಕೆ ಗಟ್ಟಿಮೂಳೆಗಳನ್ನು ಹೊಲೆದಿರುವ ರೀತಿಯಲ್ಲಿ ಚಿತ್ರಿಸಿದ್ದಾರೆ. ಸ್ಪಷ್ಟತೆ ಬೇಕಿತ್ತು ಎನ್ನುವಾಗ ವಿಷಯಕ್ಕೆ ಅನುಗುಣವಾಗಿ ಬೇಕಿರುವಷ್ಟು ಸಾಧ್ಯತೆಯನ್ನು ತಿಳಿಸಿಕೊಟ್ಟಿದ್ದಾರೆ. ನೆಲದಿಂದ ದಿಢೀರನೇ ಎದ್ದು ನಿಂತಂತಿರುವ ಕೈಗಳನ್ನು ತೋರಿಸಿದ್ದು. ಭೂಮಿ ಬಿರುಕೊಡೆದು ಕೈ ಸ್ಪಷ್ಟವಾಗಿ ಕಾಣಿಸುತ್ತಿವೆ. ಸತ್ತ ಶವಗಳು ಕೂಡ ತಮ್ಮ ಬೆಂಬಲವನ್ನು ನಿಡುವತ್ತ ಮನಸ್ಸು ಮಾಡುತ್ತಿವೆಯೇನೋ ಎಂಬುವಷ್ಟು ಸಾಧ್ಯತೆ ಈ ರಾಜಕೀಯದಲ್ಲಿದೆ ಎಂಬುದನ್ನು ಹೇಳಿರುವ ದಾಟಿಯಲ್ಲಿ ಚಿತ್ರವಿದೆ ಎಂಬುದು ನಮ್ಮ ಊಹೆಯಷ್ಟೇ. ಇದರ ನೈಜ ಚಿತ್ರಣ ರಚಿಸಿದ ಕಲಾವಿದರಿಗೆ ಬಿಟ್ಟಿರುತ್ತದೆ. ಇಲ್ಲಿ ನೀಲಿ, ಕಪ್ಪು, ಬಿಳಿ, ಕೆಂಪು, ಹಳದಿ ಬಣ್ಣಗಳನ್ನು ಬಳಸಿ ಚಿತ್ರಕೃತಿಯನ್ನು ಪೂರ್ಣಗೊಳಿಸಲಾಗಿರುತ್ತದೆ.

**ಚಿತ್ರ-೨೯**

ಈ ಚಿತ್ರಕೃತಿಯೂ ಕೂಡ ಗ್ರಾಫಿಕ್ ಮಾಧ್ಯಮದಿಂದ ರಚಿಸಲ್ಪಟ್ಟಿದ್ದು, ಮಧ್ಯಭಾಗದಲ್ಲಿ ಒಂದು ತಟ್ಟೆ, ಎರಡು ಚಮಚಗಳಿದ್ದು ಅದರ ಹಿಂದುಗಡೆ ಆರು ಮಾನವನ ಬುರುಡೆಗಳಿರುತ್ತವೆ. ಇದು ತಮ್ಮದೇ ಕಲ್ಪನೆಯಲ್ಲಿ ರಚಿಸಿರುವುದರಾದರೂ ಸಂಯೋಜನೆಯಲ್ಲಿ ಕಲಾವಿದರು ಗೆದ್ದಿರುತ್ತಾರೆ. ತುಂಬಾ ನೈಜತೆಯಿಂದಲೇ ಚುಕ್ಕಿಗಳ ಪ್ರಭಾವವನ್ನು ಬಳಸಿ ರಚಿಸಲಾಗಿರುವ ಈ ಚಿತ್ರದಲ್ಲಿ ಕಪ್ಪು, ನೀಲಿ, ಕೆಂಪು, ವರ್ಣಗಳನ್ನು ಹೆಚ್ಚು ಬಳಸಿದ್ದಾರೆ. ಇದು ಕೂಡ ಶೀರ್ಷಿಕೆ ರಹಿತ ಚಿತ್ರಕೃತಿಯಾಗಿದ್ದು, ತಮ್ಮದೇ ಭಿನ್ನ ಆಯಾಮಗಳಲ್ಲಿ ಚಿತ್ರವನ್ನು ರಚಿಸಿರುತ್ತಾರೆ.

**ಚಿತ್ರ–೩೦**

ಈ ಚಿತ್ರಕೃತಿಯಲ್ಲಿ ಹಾರುತ್ತಿರುವ ಎರಡು ಮುಖಗಳುಳ್ಳ ಹೆಣ್ಣಿನ ಚಿತ್ರವನ್ನು ಕಾಣಬಹುದು. ಇದು ಕಲಾವಿದರ ಕಲ್ಪನೆ. ಶೀರ್ಷಿಕೆ ರಹಿತ ಚಿತ್ರವಾಗಿರುವುದರಿಂದ ನೋಡುಗ ತನ್ನದೇ ಕಲ್ಪನೆಯಲ್ಲಿ ಈ ಕೃತಿಯನ್ನು ಕಾಣಬಹುದು. ಅದರಂತೆ ಮುಖ್ಯ ವಿಷಯವಾಗಿರುವ ಹೆಣ್ಣು ಚಿಟ್ಟೆಗೆ ಹೋಲಿಸಬಹುದು. ಬಣ್ಣ ಬಣ್ಣ ಈ ಚಿಟ್ಟೆ ಹಾರುತ್ತಿರುವ ಹಕ್ಕಿಯಂತೆ, ಬಲಗೈಯಲ್ಲೊಂದು ಕೆಂಪು ಹೂ, ಎಡಗೈಯಲ್ಲೊಂದು ಬಲೂನು ಹಿಡಿದಿದ್ದು, ನಾನೇ ರಾಣಿ ಎಂಬ ಹೆಮ್ಮೆಯಿಂದ ಹಾರುತ್ತಿರುವ ಈ ದೃಶ್ಯದಲ್ಲಿ ಚಿಟ್ಟೆಯ ಆಕಾರವನ್ನು ಕೊಟ್ಟಿದ್ದಾರೆ. ಎದೆಯ ಭಾಗದಲ್ಲಿ ಮೂರು ಬಲೂನುಗಳನ್ನು ಸೃಷ್ಟಿಸಿದ್ದಾರೆ. ಚಿಟ್ಟೆಯ ಮುಖಕ್ಕೆ ಮತ್ತೊಂದು ಮುಖವನ್ನು ಅಂಟಿಸಿದಂತಿರುವ ಆ ಭಾವ ಚಿತ್ರದಲ್ಲಿ ದಪ್ಪನೆಯ ಕಣ್ಣುಗಳು ತಲೆಗೆ ಕಿರೀಟ ತೋರಿಸಲಾಗಿದೆ. ಕನ್ನಡ ಭಾವುಟದ ಬಣ್ಣಗಳಾದ ಕೆಂಪು ಮತ್ತು ಹಳದಿ ಬಣ್ಣಗಳನ್ನೇ ಮುಖ್ಯವಾಗಿ ಬಿಂಬಿಸಿರುವ ಈ ಚಿತ್ರಕೃತಿಯಲ್ಲಿ ಕನ್ನಡದ ಮೇಲಿನ ಪ್ರೀತಿಯೂ ಇಲ್ಲಿ ಸೋರಿರುವಂತೆ ಭಾಸವಾಗುತ್ತಿದೆ. ಕಲಾವಿದರ ಕಲ್ಪನೆಗೆ ಬಣ್ಣವನ್ನೇ ಜೀವಾಳವಾಗಿಸಿಕೊಂಡು ಕಲಾಕೃತಿಗೆ ಜೀವವನ್ನಿಟ್ಟಿದ್ದಾರೆ. ಹಳದಿ, ಕೆಂಪು, ನೀಲಿ, ಹಸಿರು ಮತ್ತು ಕಪ್ಪು ಬಣ್ಣಗಳನ್ನು ಇಲ್ಲಿ ಗುರುತಿಸಬಹುದು.

**ಚಿತ್ರ–೩೧**

ಈ ಕೃತಿಯಲ್ಲಿ ವಸ್ತುಗಳಿಗೆ ಜೀವ ತುಂಬಿರುವ ಕಾರಣ ಇದೊಂದು ಶೀರ್ಷಿಕೆ ರಹಿತ ಚಿತ್ರವೆಂದರೆ ಬಹುಶಃ ತಪ್ಪಾಗಲಿಕ್ಕಿಲ್ಲ. ಮುಖ್ಯವಾಗಿ ಅಸ್ಥಿಪಂಜರದ ಮುಖದ ಮುಂದೆ ಒಂದು ಬಿಳಿ ಪಾರಿವಾಳವನ್ನು ಮನುಷ್ಯ ತನ್ನ ಕಾಣದ ಮುಖದ ನಡುವೆಯೂ ಕೈಯಲ್ಲಿ ಹಿಡಿದಿದ್ದಾನೆ. ಅಂತ ಥಟ್ಟನೆ ಅಂದುಕೊಂಡರೂ, ಅದು ಸ್ಪಿಲ್ ಆಗಿರುವ ಕೈಯಲ್ಲಿ ಪಾರಿವಾಳ ಬಂದು ಕುಳಿತಂತೆ ಕಂಡುಬರುತ್ತಿದೆ. ಇದನ್ನು ನೋಡುಗ ಗಮನಿಸಿದಾಗ ಮಾತ್ರ ಅದರ ಅರಿವು ಆಗಬಹುದು.ಮೊದಲು ಬಣ್ಣವನ್ನು ಕ್ಯಾನ್ವಸ್‌ಗೆ ಲೇಪಿಸಿ ನಂತರ ಪೆನ್ನಿನಿಂದ ಚಿತ್ರವನ್ನು ಪೂರ್ಣಗೊಳಿಸಲಾಗಿದೆ. ಇಲ್ಲಿಯು ಕೂಡ ಕಲಾವಿದ ಪರಿಸರದಲ್ಲಿ ಬೇಕಾಗುವ ಎರಡು ವಸ್ತುಗಳನ್ನು ಸೆರೆಹಿಡಿದಿದ್ದಾರೆ ಅವುಗಳೆಂದರೆ ಒಂದು ಪಾರಿವಾಳ ಮತ್ತೊಂದು ವಾಚ್. ಈ ಎರಡು ಕೂಡ ಮನುಷ್ಯನಿಗೆ ಒಳ್ಳೆಯ ಸಂದೇಶ ನೀಡುವ ವಸ್ತುಗಳು. ಪಾರಿವಾಳ ಶಾಂತಿ ಸಂಕೇತ ನೀಡಿದರೆ, ವಾಚ್ ಸಮಯ ಪ್ರಜ್ಞೆಯನ್ನು ತೋರಿಸುತ್ತದೆ. ಈ ಎರಡು ಮನುಷ್ಯನಿಗೆ ಬೆಳಕಾಗಿಸುತ್ತವೆ ಎಂಬುದನ್ನು ತಿಳಿಯಬಹುದು. ಬಿಳಿ, ಕಪ್ಪು, ನೀಲಿ, ಕೆಂಪು ವರ್ಣಗಳನ್ನು ಮುಖ್ಯವಾಗಿ ಬಳಸಿಕೊಳ್ಳಲಾಗಿದೆ.

**ಚಿತ್ರ–೩೨**

ಶೀರ್ಷಿಕೆ ರಹಿತ ಈ ಚಿತ್ರಕೃತಿಯಲ್ಲಿ ಬೆಕ್ಕು, ಮೀನು, ಹಸ್ತಗಳು ಪ್ರಮುಖವಾಗಿದ್ದು, ಒಬ್ಬ ಮನುಷ್ಯ ಬೋಲ್‌ನಲ್ಲಿರುವ ಮೀನನ್ನು ಸೇರಿ ಎದೆಗಪ್ಪಿಕೊಂಡಿರುವಂತೆ ದೃಶ್ಯವನ್ನು ಚಿತ್ರಿಸಿದ್ದು,

ಬೆಕ್ಕು ಮೀನಿನ ಕಡೆ ದೃಷ್ಟಿಯಿಟ್ಟಿರುವುದನ್ನು ಕಾಣಬಹುದು. ಬಕೆಟ್‌ನಲ್ಲಿ ಮನುಷ್ಯನ ತಲೆಯನ್ನು ಬಿಂಬಿಸಿ ಮನುಷ್ಯನ ದೇಹವನ್ನು ಸೃಷಿಸಿದ್ದಾರೆ. ತಲೆಯಂತಿರುವ ಬಕೆಟ್‌ನಲ್ಲಿ ಮೂರು ಬಾವುಟಗಳನ್ನು ಇಡಲಾಗಿದ್ದು, ಅವು ಕೇಸರಿ, ಬಿಳಿ ಮತ್ತು ಹಸಿರು ಬಣ್ಣಗಳನ್ನು ಹೊಂದಿರುತ್ತವೆ. ಕಲಾವಿನ ಕಲ್ಪನೆಯಲ್ಲಿ ಹುಟ್ಟಿಕೊಂಡಿರುವ ಈ ಕೃತಿಯಲ್ಲಿ ವಿಷಯವೂ ತುಂಬಾ ಗಂಭೀರತೆಯನ್ನು ಪಡೆದುಕೊಂಡಿದೆ. ಕ್ಯಾನ್ವಸ್‌ನಲ್ಲಿ ರಚಿತಗೊಂಡಿರುವ ದೃಶ್ಯವನ್ನು ಬಣ್ಣದಿಂದ ಮತ್ತು ಪೆನ್ನಿನಿಂದ ಪೂರ್ಣಗೊಳಿಸಲಾಗಿದೆ. ಕಪ್ಪು, ಬಿಳಿ, ಕೆಂಪು, ಹಸಿರು, ಕೇಸರಿ ವರ್ಣಗಳನ್ನು ಇಲ್ಲಿ ಕಾಣಬಹುದು.

**ಚಿತ್ರ–೩೩**

ಶೀರ್ಷಿಕೆ ರಹಿತವಾಗಿರುವ ಈ ಕೃತಿಯಲ್ಲಿ ಕಲಾವಿದ ತನ್ನದೇ ಕಲ್ಪನೆಯಲ್ಲಿ ಒಂದು ವಿಷಯವನ್ನು ಪ್ರಸ್ತಾಪಿಸಿರುವುದನ್ನು ಕಾಣಬಹುದು. ತನ್ನದೇ ಬುರುಡೆಯನ್ನು ಒಂದು ಪುಟ್ಟಿಯಲ್ಲಿ ಹಾಕಿ ಹಿಡಿದಿರುವಂತಿರುವ ಈ ಚಿತ್ರಕೃತಿಯನ್ನು ಕಲಾವಿದ ಭಿನ್ನ ಆಯಾಮದಲ್ಲಿ ತೋರಿಸಿದಂತಿದೆ. ಕತ್ತಲ ಹೊರ ಜಗತ್ತಿನಲ್ಲಿ ಆಲೋಚನೆಗಳಿಗೆ ಮಿತಿಯಿಲ್ಲ. ಅದರ ಬದಲಾಗಿ ಕಲ್ಪನೆಗೂ ಮಿತಿಯಿಲ್ಲ ಎಂಬಂತೆ ಇಲ್ಲಿ ಕಲಾವಿದ ಚಿ.ಸು.ಕೃಷ್ಣಸೆಟ್ಟಿಯವರದ್ದು ಅಲ್ಪ ಭಿನ್ನವಾದ ಕಲ್ಪನೆಯೆನ್ನಬಹುದು. ಸಮಸ್ಯೆಗಳು ಮನುಷ್ಯನ ಬೆನ್ನೇರಿದಾಗ ಆಗುವ ತೊಳಲಾಟಕ್ಕೆ ಏನು ಮಾಡಿದರೂ ಪ್ರಯೋಜನಕ್ಕೆ ಬಾರದ ಸ್ಥಿತಿಯಲ್ಲಿ ಮನುಷ್ಯ ತುಂಬಾ ಆಳವಾದ ನೋವಿನಲ್ಲಿ ತೊಡಗುವುದು ಸಹಜ, ಇಂತಹ ಮಾನಸಿಕ ಸ್ಥಿತಿಯಲ್ಲಿ ಯಾವ ಪರಿಣಾಮಕ್ಕೂ ತಿರುಗುವಂತಹ ತಿರುವನ್ನು ಕೃತಿಯಲ್ಲಿ ತೋರಿಸಿದಂತೆ ಭಾಸವಾಗುತ್ತಿದೆ. ಬಣ್ಣ ಮತ್ತು ಪೆನ್ನಿನಿಂದ ಕಲಾಕೃತಿಯನ್ನು ಪೂರ್ಣಗೊಳಿಸಲಾಗಿದೆ.

**ಚಿತ್ರ–೩೪**

ಈ ಚಿತ್ರವೂ ಕೂಡ ಗ್ರಾಫಿಕ್ ಕಲೆಯಲ್ಲಿ ಒಂದು. ಕುರ್ಚಿ ಮತ್ತು ಮನುಷ್ಯನ ನಡುವೆ ಏನೆಲ್ಲಾ ಕಸರತ್ತು ನಡೆಯಬಹುದು ಎಂಬುದನ್ನು ಸೂಕ್ಷ್ಮವಾಗಿ ಗುರುತಿಸಿದ್ದಾರೆ ಎನಿಸುತ್ತಿದೆ. ಮತ್ತೊಂದು ಕಡೆ ಇಲ್ಲಿ ಕೈ ಮತ್ತು ಕಾಲುಗಳನ್ನು ಸಹ ತೋರಿಸಿದ್ದಾರೆ. ಕುರ್ಚಿ ಮನುಷ್ಯನ ತಲೆಮೇಲೆ ಬೀಳುವಂತೆ ಗೋಚರಿಸುತ್ತಿದ್ದು, ಅದರಿಂದ ಮನುಷ್ಯನ ಆ ಬುರುಡೆ ಒಡೆದು ಎರಡು ಹೋಳು ಆಗಿರುವಂತೆ ಕಂಡುಬರುತ್ತಿದೆ. ಮನುಷ್ಯನ ಮುಖದಲ್ಲಿ ತುಂಬಾ ಬದಲಾವಣೆಗಳನ್ನು ಕಾಣಬಹುದು. ಕಣ್ಣಿನ ಜಾಗದಲ್ಲಿ ತುಟಿಗಳನ್ನು, ಮೂಗಿನ ಜಾಗದಲ್ಲಿ ಕಿವಿಗಳನ್ನು, ತುಟಿಗಳ ಜಾಗದಲ್ಲಿ ಕಣ್ಣುಗಳನ್ನು ಕಿವಿಯ ಜಾಗದಲ್ಲಿ ಮೂಗನ್ನು ತೋರಿಸಿರುತ್ತಾರೆ. ಅಂದರೆ ಮನುಷ್ಯನ ಅಂಗಾಂಗಗಳು ಸರಿಯಾದ ಜಾಗದಲ್ಲಿರುವುದಿಲ್ಲ ಎಂಬುದು ಸ್ಪಷ್ಟವಾಗಿ ಗೋಚರವಾಗಿರುತ್ತದೆ. ಇನ್ನೂ ಉದ್ದನೆಯ ಕೈಯನ್ನು ಕಾಲಿನ ರೂಪದಲ್ಲಿ, ಕಾಲನ್ನು ಕೈರೂಪದಲ್ಲಿ ತೋರಿಸಿರುತ್ತಾರೆ. ಕುರ್ಚಿಮಾತ್ರ ಇದ್ದ ಹಾಗೆ ಇರುತ್ತದೆ. ಅಂದರೆ ರಾಜಕೀಯಕ್ಕೆ ಸಂಬಂಧಿಸಿದಂತೆ ಈ ದೃಶ್ಯದಲ್ಲಿ

ಅಧಿಕಾರದ ಕುರ್ಚಿ ಬಂದಾಗ ಮನುಷ್ಯನಿಗೆ ಪ್ರಜ್ಞೆಯೆಂಬುದಿರುವುದಿಲ್ಲ. ಯಾವುದು ಎಲ್ಲೆಲ್ಲಿರುತ್ತೆ ಎಂಬುದೇ ತಿಳಿಯದ ಪರಿಸ್ಥಿತಿ ಬಂದೊದಗುತ್ತದೆ ಎಂಬುದನ್ನು ತೋರಿಸಿರುವಂತೆ ಭಾಸವಾಗಿರುತ್ತದೆ. ಕಪ್ಪು, ಬಿಳುಪಿನಿಂದ ಕೂಡಿರುವ ಈ ಚಿತ್ರಕೃತಿಯೂ ಸಂಯೋಜನೆಯಿಂದ ಕೂಡಿದೆ ಎಂಬುದನ್ನು ಹೇಳಬಹುದು.

**ಚಿತ್ರ–೩೫**

ಈ ಚಿತ್ರದಲ್ಲಿ ಸ್ಪಷ್ಟತೆಯಿಲ್ಲದ ಕುರ್ಚಿ, ಅದರಲ್ಲೊಂದು ಮುಖವಿಲ್ಲದ ಅಸ್ಥಿಪಂಜರವನ್ನು ಬಿಗಿಯಾಗಿ ಹಿಡಿದು ಕಟ್ಟಿರುವಂತೆ ಭಾಸವಾಗಿರುತ್ತದೆ. ಇದು ಕೂಡ ಕಲಾವಿದರ ಕಲ್ಪನೆಯೇ. ಮತ್ತೊಂದು ಒಳಭಾಗದಲ್ಲಿ ತಲೆಯಿಲ್ಲದ ಮಾನವ ನಿಂತಿರುವುದು. ವಿಶೇಷವೆಂದರೆ ಕುಳಿತಿರುವ ಅಸ್ಥಿಪಂಜರದ ಕಾಲುಗಳಿಗೆ ಕಾಲುಚೀಲ ಮತ್ತು ಬಣ್ಣದ ಶೂಗಳನ್ನು ಹಾಕಲಾಗಿದೆ ಎಂಬುದನ್ನು ಹೇಳಬಹುದೇ ವಿನಃ ಅದರ ಕುರಿತು ವಿವರವಾದ ವಿಷಯವೂ ಅಪ್ರಸ್ತುತ ಎನ್ನುವಷ್ಟರ ಮಟ್ಟಿಗೆ ಚಿತ್ರಿತವಾಗಿದೆ. ಆದರೂ ಕಲಾವಿದನ ಕಲ್ಪನೆಗೆ ಮಿತಿಯಿಲ್ಲವಲ್ಲವೇ ಎಂಬುದಂತೂ ಸತ್ಯ.

**ಚಿತ್ರ–೩೬**

ಶೀರ್ಷಿಕೆ ರಹಿತ ಈ ಚಿತ್ರದಲ್ಲಿ ಕಮಾಂಡೋ ಟೊಪ್ಪಿ ಮತ್ತು ಅಸ್ತಿಪಂಜರದ ಮುಖವಾಡ ವಿರುವ ದೇಹ, ಜೀವವಿರುವ ಮನುಷ್ಯ ಮುಖವಾಡಧರಿಸಿ ಏನೆಲ್ಲಾ ಡಂಬಾಚಾರಗಳನ್ನು ಮಾಡುತ್ತಾರೆ ಎಂಬುದಕ್ಕೊಂದು ಉದಾಹರಣೆಯಂತಿದೆ.! ಇಲ್ಲಿ ಗರ್ಜಿಸುವ ಕಮಾಂಡೋ ಗಂಡಲ್ಲ ಅದು ಹೆಣ್ಣಿನ ದೇಹವನ್ನು ಹೊಂದಿದ್ದು ಸ್ಟ್ರಚ್ಚರ್ ಮೂಲಕ ಬಣ್ಣವನ್ನು ಅರ್ಧ ದೇಹಕ್ಕೆ ತೋರಿಸಿರುವುದು ಒಂದು ಕಡೆಯಾದರೆ, ಮತ್ತೊಂದು ಕಡೆ ಮುಖದಲ್ಲಿ ಹಲ್ಲುಗಳಿಗೆ ಮತ್ತು ಕಣ್ಣುಗಳಿಗೆ ಬಣ್ಣವನ್ನು ಲೇಪಿಸಿ ಹೈಲೈಟ್ ಮಾಡಿರುವುದು ತುಂಬಾ ವಿಶೇಷವಾಗಿರುತ್ತದೆ.

**ಚಿತ್ರ–೩೭**

ಈ ಕಲಾಕೃತಿಯಲ್ಲಿ ಮನುಷ್ಯ ಭಾವಚಿತ್ರವನ್ನು ಚಿತ್ರಿಸಲಾಗಿದ್ದು, ಮುಖದಲ್ಲಿ ಅರ್ಧಭಾಗ ರೋಬೋ ಇನ್ನರ್ಧ ಭಾಗ ಅಸ್ಥಿಪಂಜರದ ಮುಖ. ಮನುಷ್ಯನ ವರ್ತನೆಯನ್ನು ಹಾಗೂ ಅವನನ್ನು ಮರು ಸೃಷ್ಟಿಯನ್ನು ಮಾಡಬಹುದೆಂಬುದನ್ನು ತನ್ನದೇ ಕಲ್ಪನೆಯಲ್ಲಿ ತೋರಿಸಿದಂತೆ ಭಾಸವಾಗುತ್ತಿದೆ. ಜೀವಿಗಳಲ್ಲೇ ಮಾನವ ಅದ್ಭುತ ಶಕ್ತಿ ಮತ್ತು ಬುದ್ದಿಯನ್ನು ಹೊಂದಿರುತ್ತಾನೆ ಎಂಬುದನ್ನು ರೋಬೋಗಳಿಗೆ ಹೋಲಿಸಿ ಜೀವ ಕೊಟ್ಟಿರುತ್ತಾರೆ. ಅದರಲ್ಲೂ ಒಂದು ಕಡೆ ನಗುವಿದ್ದರೆ ಮತ್ತೊಂದು ಕಡೆ ನಗು ಮಾಯವಾಗಿದೆ. ಒಟ್ಟಾರೆ ಮನುಷ್ಯ ಸುಖ, ದುಃಖಗಳೆರಡನ್ನು ಅನುಭವಿಸಿಯೇ ತೀರುತ್ತಾನೆ ಎಂಬುದಕ್ಕೆ ಇದೊಂದು ಉದಾಹರಣೆಯಾಗಿ ಕಲಾವಿದ ತನ್ನ ಕಲ್ಪನೆಯಲ್ಲಿ ಗ್ರಾಫಿಕ್

ಚಿತ್ರಕೃತಿಯನ್ನು ಬಿಡಿಸಿರುತ್ತಾರೆ ಎಂಬುದು ನನ್ನ ಸಾಮಾನ್ಯ ಗ್ರಹಿಕೆಯಷ್ಟೆ. ಅಂತಹ ಗಂಭೀರವಾದ ಚಿತ್ರ ಅನ್ನುವುದಕ್ಕಿಂತ ಸರಳವಾದ ಕಲಾವಿದನ ಕೃತಿ ಎನ್ನುವುದು ಒಂದು ರೀತಿಯ ಅನುಭವದ ಮಾತು ಅಷ್ಟೇ. ಇಲ್ಲಿಯೂ ಕೂಡ ಬಿಳಿ ಮತ್ತು ಕಪ್ಪು ಬಣ್ಣಗಳಿಂದ ಚಿತ್ರಕೃತಿಯನ್ನು ಪೂರ್ಣಗೊಳಿಸಲಾಗಿರುತ್ತದೆ.

**ಅಮೂರ್ತ ಚಿತ್ರಕೃತಿಗಳು.**

**ಚಿತ್ರ-೧**

೩x೩ ಅಡಿ ಆಳತೆಯಿರುವ ಕ್ಯಾನ್ವಸ್ ಮೇಲೆ ಅಕ್ರಾಲಿಕ್ ವರ್ಣಗಳಿಂದ ಶೀರ್ಷಿಕೆ ರಹಿತ ಚಿತ್ರಕೃತಿ ಇದಾಗಿದ್ದು, ಮನೆಯ ಆವರಣದ ಚಿಕ್ಕ ಚಿಕ್ಕ ತೂಬುಗಳಿರುವ ಗೋಡೆಯ ದೃಶ್ಯವನ್ನು ಈ ಚಿತ್ರ ನೆನಪಿಸುವಂತಿದೆ. ಮತ್ತೊಂದೆಡೆ ಒಡೆದ ಕನ್ನಡಿಯ ಚೂರುಗಳಲ್ಲಿ ಗೋಡೆಯ ಮೇಲಿನ ವರ್ಣದ ಕಲರವವನ್ನು ಹೀಗೂ ಕಾಣಬಹುದೇ ಎಂಬಂತಹ ದೃಶ್ಯವನ್ನು ನಾವಿಲ್ಲಿ ಕಾಣಬಹುದು. ಅಂತಹದ್ದೇನೂ ಆಶ್ಚರ್ಯ ಸೂಚಕವಾದ ಚಿತ್ರವಲ್ಲವಾದರೂ, ಬಣ್ಣ ಮತ್ತು ರೇಖೆಗಳಿಗೆ ಒಬ್ಬ ಕಲಾವಿದ ಜೀವ ತುಂಬಬಲ್ಲ ಎನ್ನುವುದಕ್ಕೆ ಈ ಒಂದು ಚಿತ್ರವೂ ಕಾರಣವಿರಬಹುದು. ಬಣ್ಣ, ಬ್ರೆಶ್‌ಗಳಲ್ಲಿ ಹೆಚ್ಚು ಅನುಭವವಿರುವ ಕಲಾವಿದನಿಗೆ ತನ್ನದೇ ಕಲ್ಪನೆ ಹೇಗೆಲ್ಲಾ ಬರಬಹುದು ಎಂಬುದನ್ನು ಕೂಡ ಈ ಚಿತ್ರ ಎತ್ತಿತೋರಿಸುವಂತಿದೆ. ವರ್ಣಗಳ ಮತ್ತು ದಪ್ಪ ರೇಖೆಗಳಲ್ಲಿ ಕಂಡುಬರುವ ಜೀವಂತಿಕೆಯ ಕಲಾಕೃತಿಯ ಸೌಂದರ್ಯವನ್ನು ಎತ್ತಿ ಹಿಡಿಯುವಲ್ಲಿ ಸಫಲವಾಗಿರುತ್ತದೆ. ಪ್ರಮುಖವಾಗಿ ಇಲ್ಲಿ ನೀಲಿ, ಹಳದಿ, ಕೆಂಪು, ಬಿಳಿ, ಕಪ್ಪು ಬಣ್ಣಗಳನ್ನು ಹೆಚ್ಚು ಬಳಸಿ ಕಲಾಕೃತಿಯನ್ನು ಪೂರ್ಣಗೊಳಿಸಲಾಗಿದೆ.

**ಚಿತ್ರ-೨**

ಈ ಮೇಲೆ ತಿಳಿಸಿರುವಂತೆ ಚಿತ್ರಿಸಿರುವ ಕಲಾವಿದರೂ ಶೈಲಿಯಲ್ಲಿ ತನ್ನನ್ನ ತಾನೂ ಪರೀಕ್ಷಿಸಿಕೊಂಡಂತೆ ಕಂಡುಬರುತ್ತಿದೆ. ಇವರ ಕೆಲವು ಚಿತ್ರಗಳಲ್ಲಿ ಹೆಣ್ಣಿನ ಯೋನಿಯ ದೃಶ್ಯವನ್ನು ತೋರಿಸಿರುವ ಕಲಾವಿದರು ಅದರ ರೂಪವನ್ನೇ ಯಥಾವತ್ತು ಬಣ್ಣಗಳ ಮೂಲಕ ತರಲು ಪ್ರಯತ್ನಿಸಿದ್ದಾರೆ. ಅದೇ ಕವಡೆಗೆ ಬಣ್ಣವನ್ನು ಹಾಕಿದರೆ ಎಷ್ಟರ ಮಟ್ಟಿಗಿರಬಹುದು ಎಂಬ ತಮ್ಮ ಕಲ್ಪನೆಗೆ ಜೀವ ತುಂಬಿದ್ದಾರೆ. ಮುಖ್ಯವಾಗಿ ಇಲ್ಲಿ ಕಡು ನೀಲಿ, ತೆಳು ನೀಲಿ, ಕೆಂಪು, ಮಿಂಚುವ ಹಳದಿ, ಕಪ್ಪು, ಬಿಳಿ ಬಣ್ಣಗಳನ್ನು ಇದರಡಿಯಲ್ಲಿ ಕಾಣಬಹುದು.

**ಚಿತ್ರ-೩**

೩x೩ ಅಡಿಯಿರುವ ಈ ಕಲಾಕೃತಿಯು ಅಕ್ರಾಲಿಕ್ ವರ್ಣಗಳಿಂದ ರಚನೆಯಾಗಿದ್ದು, ನಿರ್ದಿಷ್ಟ ಇಂತಹದ್ದೆ ಎಂಬ ವಿಷಯವೂ ಕೂಡ ಇದಕ್ಕಿರುವುದಿಲ್ಲ. ಹಾಗಾಗಿ ಕ್ಯಾನ್ವಸ್ ಮೇಲೆ

ತೆಳ್ಳಗೆ ಒಂದು ಕೋಟ್ ಬಣ್ಣವನ್ನು ಚೆಲ್ಲಿ ಅದರಲ್ಲಿ ಕಾಣುವ ಆಕಾರಗಳನ್ನೇ ಹುಡುಕುವ ಪ್ರಯತ್ನ ಕಲಾವಿದರು ಮಾಡಿರುತ್ತಾರೆ. ಪ್ರಮುಖವಾಗಿ ಒಬ್ಬ ಸ್ತ್ರೀ ಮುಖಭಾವನೆ ಡೆಕೋರೇಟೀವ್ ವಿಧಾನದಲ್ಲಿ ಕಂಡುಬಂದರೂ ಸಾಮಾನ್ಯರಿಗೆ ಅದರ ಅರಿವಾಗುವುದಿಲ್ಲ. ಅವರೆ ಹೇಳುವಂತೆ ನಾನು ಯಾರನ್ನೂ ಮೆಚ್ಚಿಸುವ ಭರಾಟೆಗೆ ಹೋಗಲ್ಲ, ನನ್ನ ಹಿತದೃಷ್ಟಿ ಮತ್ತು ಸಂತೋಷಕ್ಕೆ ಬಣ್ಣ ಮತ್ತು ಬ್ರಷ್‌ಗಳ ಮೂಲಕ ಆಟವಾಡುತ್ತೇನೆ. ಏನಾದರೂ ಕಲಿಯಬೇಕೆಂಬ ಹಂಬುತನವಿದೆ ಎನ್ನುವ ಹಾಗೇ ಅದು ಸತ್ಯವೂ ಕೂಡ. ಆದಕ್ಕೆ ಪೂರಕವಾಗಿಯೇ ರಚಿಸಲಾಗಿರುವ ಈ ಕೃತಿಯಲ್ಲಿ ಹೆಣ್ಣು ದುಃಖವನ್ನನುಭವಿಸುವ ಸಂದರ್ಭದ ಸೂಚಕವಾಗಿ ಅಲ್ಲಲ್ಲಿ ಕಣ್ಣ ನೀರು ಸುರಿಸುವ ರೀತಿಯಲ್ಲಿ ಬಣ್ಣವನ್ನು ಹರಿಸಿರುತ್ತಾರೆ. ಕಪ್ಪು, ನೀಲಿ, ಹಳದಿ ಮತ್ತು ಹಸಿರು ಬಣ್ಣಗಳನ್ನು ಹೆಚ್ಚಾಗಿ ಬಳಸಿಕೊಂಡಿರುತ್ತಾರೆ.

**ಚಿತ್ರ–೪**

ಚಿತ್ರಕಲಾ ಶಿಕ್ಷಣ ಕ್ರಮದಂತೆ ನಿಗದಿತವಾಗಿ ಪರೀಕ್ಷೆಗಳಿಗೆ ಪೂರಕವಾಗಿಯೇ ಚಿತ್ರ ರಚನೆಯನ್ನು ಮಾಡುತ್ತೇವೆ. ನಂತರ ಆರ್ಡರ್ ನೀಡಿದರೆ ಚಿತ್ರ ಅವರಿಗೆ ಒಪ್ಪುವ ಹಾಗೆ ಬರೆದುಕೊಡುತ್ತೇವೆ. ಇಂತಹ ಎಲ್ಲ ಸಂದರ್ಭಗಳಿಂದ ಹೊರ ಬಂದ ಮೇಲೆ ಸೃಜನಶೀಲ ಕಲಾಕೃತಿಗಳನ್ನು ರಚಿಸಬೇಕೆಂಬ ಹಂಬಲ ಎಲ್ಲ ಕಲಾವಿದರಲ್ಲಿ ಇದ್ದಂತೆ ಕೃಷ್ಣಸೆಟ್ಟಿಯವರಲ್ಲೂ ಕಾಣಬಹುದು. ಎಲ್ಲ ಪಾಶ್ಚಾತ್ಯ ಕಲಾಕೃತಿಗಳು ಹಾಗೂ ಭಾರತೀಯ ಕಲಾಕೃತಿಗಳನ್ನು ನೋಡಿದ ಮತ್ತು ಕಲಾಕೃತಿಗಳು ವಿಮರ್ಶೆ ಚರ್ಚೆ ಮಾಡಿದ ಇವರು ಅವರ ಕಲಾಕೃತಿಯಲ್ಲಿ ತನ್ನದೇ ಆದ ಶೈಲಿಯನ್ನು ಉಡುಕುತ್ತ ಅವರನ್ನು ಅನುಸರಿಸದೇ ಅವರೆ ಒಂದು ಅಮೂರ್ತ ಚಿತ್ರಗಳನ್ನು ರಚಿಸಲು ಪ್ರಾರಂಭಿಸಿದರು. ನಮ್ಮಲ್ಲಿ ಅಮೂರ್ತ ಚಿತ್ರಗಳೆಂದರೆ ಕೆಲವು ತಪ್ಪು ಕಲ್ಪನೆಗಳಿವೆ. ಆಕಾರದಿಂದ ನಿರಾಕಾರಕ್ಕೆ ಬರುವುದು. ನಿರಾಕಾರವೆಂದರೆ ಬಹಳಷ್ಟು ಜನ ಅದನ್ನು ಅಮೂರ್ತ ಎಂದು ತೆಗೆದುಕೊಳ್ಳುತ್ತಾರೆ. ಆದರೆ ಅಮೂರ್ತ ಎಂದರೆ ಏನು? ಚಿತ್ರವೊಂದರಲ್ಲಿ ಆಕೃತಿಗಳು, ವರ್ಗಗಳು ಇವೆ. ಎಂದ ಮಾತ್ರಕ್ಕೆ ಅಮೂರ್ತವಾಗುವುದಿಲ್ಲ. ಅಮೂರ್ತತೆಯ ಕುರಿತು ನಮಗೆ ಅಂದಿನ ಸಂದರ್ಭದಲ್ಲಿ ತಿಳುವಳಿಕೆ ಹೇಗಿತ್ತು ಎಂದರೆ ಜಗತ್ತಿನಲ್ಲಿ ಯಾವ ವಸ್ತು ಹೋಲಿಕೆಗೆ ಬರಲಾರದು. ತನ್ನ ಹೋಲಿಕೆಯನ್ನು ಕಳೆದುಕೊಂಡು ಒಂದು ಚಿತ್ರವಾಗಿ ಉಳಿದಾಗ ಅದು ಅಮೂರ್ತ ಕೃತಿಯಾಗುತ್ತದೆ. ಎಂಬ ಕಲ್ಪನೆ ಎಲ್ಲಾ ಕಲಾವಿದರಲ್ಲಿತ್ತು. ಆದರೆ ಅಮೂರ್ತತೆಯನ್ನು ವಿರೂಪಗೊಳಿಸುವುದು, ಮೊಟಕುಗೊಳಿಸುವುದು ಹಾಗೂ ಬೆಳೆಸುವುದು ಕೂಡ ಅಮೂರ್ತ ಪ್ರಜ್ಞೆಯನ್ನು ಸೃಷ್ಟಿಸುತ್ತದೆ. ಎಂಬುದು ಈಗ ನಮಗೆ ಗೊತ್ತಿರುವಂತಹ ವಿಚಾರವಾಗಿರುತ್ತದೆ.[೨೪]

೨೪. ಡಾ.ಸಿದ್ದಲಿಂಗಸ್ವಾಮಿ ಅ.ಹಿರೇಮಠ: ಕಲಾವಿದ ಆರ್.ಎಂ.ಹಡಪದ, ಪು.೧೯೪

**ಚಿತ್ರ–೫**

ಕೃಷ್ಣಸೆಟ್ಟಿಯವರ ಕಲಾಕೃತಿಗಳಲ್ಲಿ ಶೀರ್ಷಿಕೆ ರಹಿತ ಕಲಾಕೃತಿಗಳೇ ಹೆಚ್ಚು ಕಾಣಸಿಗುತ್ತವೆ. ಶೀರ್ಷಿಕೆ ಇಲ್ಲದೆ ಇದ್ದರೂ ಒಂದು ರೀತಿಯ ಅನುಭವವನ್ನು ಕೊಡುವ ಕೃತಿ ಇವಾಗಿವೆ. ಕಲಾಕೃತಿಗಳು ಶಬ್ದಕ್ಕೂ ನಿಲುಕಲಾರವು. ಒಂದು ವೇಳೆ ಶಬ್ದಕ್ಕೂ ನಿಲುಕಿ ಅದಕ್ಕೆ ಕಲ್ಪನೆ ಕೊಟ್ಟರೂ ಅದು ಗೌಣ ಆಗುತ್ತದೆ. ಇಲ್ಲಿ ಅಂದರೆ ಅಮೂರ್ತ ಕಲೆಯಲ್ಲಿ ಅನುಭವವೇ ಪ್ರಧಾನ ಆಳ ಹರಿವನ್ನು ಮೂಡಿಸುತ್ತದೆ. ಈ ಹಿಂದಿನ ಚಿತ್ರದಲ್ಲಿ ದೇವಬಟ್ಟೆ, ದೈವ ಕಲ್ಪನೆಯನ್ನು ಸೃಷ್ಟಿಸಿದ ಕಲಾಕೃತಿ ಈ ಚಿತ್ರದಲ್ಲಿ ಅದೇ ಕಲ್ಲುಗಳೆನಿಸುವ ಸಣ್ಣ ಸಣ್ಣ ಕಲ್ಲುಗಳನ್ನು ದೂರ ದೂರವಿಟ್ಟು ಒಂದಕ್ಕೊಂದು ಸಂಬಂಧವೆನ್ನುವ ಹಾಗೆ ಗೆರೆಗಳನ್ನು ಮೂಡಿಸಿದ್ದಾರೆ. ಅದೇ ರೀತಿಯ ವರ್ಣದ ಬಳಕೆ ಆದರೆ ಹಿಂಬದಿಯಲ್ಲಿ ಸಮತಟ್ಟಾದ ವರ್ಣ ಕಪ್ಪು ಹಾಗೂ ಮೇಲ್ಭಾಗದಲ್ಲಿ ಸಿಮೆಂಟಿನ ಬಣ್ಣಗಳನ್ನು ಕಾಣಬಹುದು. ಪೂರ್ಣದ ಸಿದ್ಧತೆ, ಅನುಭವ, ರೂಢಿಗತ, ಭಾವನೆಗಳು ಸಂಬಂಧ ಕಡಿಮೆಯಾಗುತ್ತ ಹೋಗಿದೆ. ಒಂದೇ ರೀತಿಯ ಬಣ್ಣ, ಛಾಯೆ, ಆಕೃತಿಗಳು, ಬೇರೆ ಬೇರೆ ಅನುಭವ ನೀಡುತ್ತದೆ. ಬಣ್ಣಗಳ ವೈವಿಧ್ಯತೆ ತೀವ್ರ ಚಾಂಚಲ್ಯನುಭವವಾಗುತ್ತದೆ. ಪ್ರಧಾನವಾಗಿ ಕಪ್ಪು ಬಣ್ಣದ್ದು, ನಂತರದಲ್ಲಿ ಸ್ಟೆಚರ್ ತೆಗೆದ ಕೆಲವು ಕಡೆ ಬಂಡೆಗಳ ಆಕಾರದ ಕೃತಿಗಳು ಕಣ್ಣುಗಳಿಗೆ ಕುಕ್ಕುವ ಎರಡು ಗೆರೆಗಳು ಒಟ್ಟು ನೋಟದ ಏಕತಾನತೆ ಮುರಿಯಲು ಮಾತ್ರ ಬೇಕು ವಿವ್ಯಂತದ ಪ್ರಾಬಲ್ಯ ಹಾಗೂ ಅಲ್ಲಲ್ಲಿ ಮಿಶ್ರವರ್ಣಗಳು ನಿರ್ದಿಷ್ಟ ಅಂಚುಗಳ ಸೀಮೆಗೆ ಸ್ಥಿರಸ್ವ ರೂಪಗಳಿಂದ ಈ ಸಂಯೋಜನೆಯ ಚೌಕಟ್ಟಿನಲ್ಲೇ ದೃಷ್ಟಿ ಕೇಂದ್ರೀಕೃತವಾಗುತ್ತದೆ. ಗೆರೆ, ಗುರುತು, ಆಕಾರಗಳು ಅದರದೇ ಆದ ಸ್ವತಂತ್ರ್ಯ ಅಸ್ತಿತ್ವ ಲಕ್ಷಣಗಳನ್ನು ಹೊಂದಿದೆ.

**ಚಿತ್ರ–೬**

ಈ ಚಿತ್ರವು ಕೂಡು ಚಿತ್ರ ಒಂದು ಆಕಾರವನ್ನು ಹೊಂದಿದರೂ ನೊಡಲು ಕಲ್ಲಿನ ಮೀನುಗಳು ಮೇಲುಭಾಗದಲ್ಲಿ ಮನುಷ್ಯನ ತಲೆಯನ್ನು ಕಾಣುವಂತಹ ಆಕೃತಿ ನೋಡುಗರಿಗೆ ಗೋಚರವಾಗುತ್ತದೆ. ಬಹು ವರ್ಣಗಳ ಮೇಳ ಕೆಲವೆಡೆಗೆ ಕಾಣಬಹುದು. ಕಪ್ಪು ಮತ್ತು ಹಸಿರು ಬಣ್ಣಗಳು ಹೆಚ್ಚು ಆದರೆ ಇಲ್ಲಿನ ರೂಪ ಆಕೃತಿಗಳು ಹಿಂದೆ ಹೇಳಿದಂತೆ ವೈವಿಧ್ಯಪೂರ್ಣವಾದ ದೃಶ್ಯಾನುಭವವನ್ನು ವಿಭಿನ್ನವಾಗಿ ನಾವು ಗ್ರಹಿಸಬಹುದು. ಚಿ.ಸು.ಕೃಷ್ಣಸೆಟ್ಟಿಯಲ್ಲಿ ವಿಷಯಗಳಿಗೆ ಅಂದರೆ ಸ್ತ್ರೀ ಶೋಷಣೆ, ರಾಜಕೀಯ, ಕಾಮ ಹೀಗೆ ವಿಡಂಬನೆಯ ಹಾಗೂ ಪ್ರತಿಭಟನೆಯಂತಹ ವಸ್ತುಗಳನ್ನು ಇಟ್ಟುಕೊಂಡು ಕಲಾಕೃತಿಯನ್ನು ರಚಿಸುವ ಇವರು ಕಲಾಕೃತಿಗಳಿಗಿಂತ ಈ ಅಮೂರ್ತ ಚಿತ್ರಗಳು ಸಾಕಷ್ಟು ಚರ್ಚೆಗೆ ಅವಕಾಶವನ್ನು ನೀಡುತ್ತವೆ. ಒಂದು ಬಗೆಯ ತೊಳಲಾಟಗಳು, ತುಡಿತಗಳು ಪ್ರಕಟವಾಗಿವೆ ಎಂದರೆ ತಪ್ಪಾಗಲಾರದು. ಇವರ ಕಲಾಕೃತಿ ಯಾವುದೇ ಬಂಧನ, ದಿಗ್ಬಂಧನಗಳಾಗಿ ಇಲ್ಲಿರುವ

ಆಕೃತಿಗಳಿಗಂತೂ ಇಲ್ಲವೇ ಇಲ್ಲ ಈ ಕ್ಯಾನ್ವವಾಸ್‌ನಲ್ಲಿ ತಮಗೆ ತಿಳಿದ ದಿಕ್ಕಿನಲ್ಲಿ ಸಾಗಿ ನೋಡುಗರ ಗ್ರಹಿಕೆಗೆ ಹಲವು ರೀತಿಯ ಕಸರತ್ತುಗಳನ್ನು ಕೊಡುತ್ತವೆ. ಒಂದು ಬಗೆಯ ಉದ್ವೇಗದೊಂದಿಗೆ ವಿಭಿನ್ನವಾದ ತೊಳಲಾಟಗಳು ಪ್ರಕಟಗೊಂಡಿವೆ. ಎಂದೆನಿಸುತ್ತದೆ. ಈ ಮೀನುಗಳು (ಕಲ್ಲು) ಸೇರಿ ಆ ಮಾನವ ತಲೆಯನ್ನು ತಿನ್ನುವ ಪ್ರಯತ್ನಕ್ಕೆ ಒಂದಕ್ಕೊಂದು ಸ್ಪರ್ಧೆಯಲ್ಲಿರುವಂತೆ ಕಾಣುತ್ತದೆ. ಆ ಮನುಷ್ಯನ ಮುಖ ನೋವಿನಿಂದ ತುಂಬಿದೆ ಎನ್ನುವ ಹಾಗೆ ವರ್ಗಗಳಿಂದ ಅವನ ನೋವನ್ನು ಹೊರಹಾಕಲಾಗಿದೆ.

**ಚಿತ್ರ-೭**

ಕ್ಯಾನ್ವಸ್‌ನ ಮೇಲೆ ರಚಿಸಲಾಗಿರುವ ಈ ಕೃತಿಯನ್ನು ಅಕ್ರಾಲಿಕ್ ವರ್ಣಗಳಿಂದ ಸಂಯೋಜಿಸಿದ್ದಾರೆ. ಈ ಕೃತಿಯಲ್ಲಿ ಕಲಾವಿದರು ನವ್ಯಕಲೆಯಲ್ಲಿ ರಚಿತವಾಗಿರುವ ಈ ಕಲಾಕೃತಿಯಲ್ಲಿ ಜೀವ ಎಂಬ ವಿಷಯವನ್ನು ಬಳಸಿಕೊಂಡಿದ್ದಾರೆ. ಕಲಾವಿದನ ಮನಸ್ಸು ವಿಶಾಲವಾಗಿದ್ದರೂ ಅವನ ಕಲಾಕೃತಿಯ ಅಳತೆಯಲ್ಲಿ ಇರುವಂತಹ ಕ್ಯಾನ್ವಸ್‌ದ ಮೇಲೆ ತನ್ನ ಭಾವನೆಗಳನ್ನು ವ್ಯಕ್ತಪಡಿಸಿರುತ್ತಾನೆ. ಈ ಕೃತಿಯಲ್ಲಿ ವಸ್ತು ವಿಷಯಕ್ಕೆ ತಕ್ಕಂತೆ ವರ್ಣಗಳನ್ನು ಬಳಸಲಾಗಿದೆ. ಮುಖ್ಯವಾಗಿ ಹಸಿರು, ಹಳದಿ, ಕಂದು, ಕೆಂಪು ಮತ್ತು ಕಪ್ಪುವರ್ಣವನ್ನು ಸರಳವಾಗಿ ಉಪಯೋಗಿಸಿದ್ದಾರೆ. ಜೊತೆಗೆ ಏರಿಳಿತ ಕೂಡ ಇದ್ದು, ಕೈ,ಕಾಲು, ಮುಖಗಳನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಇದರಲ್ಲಿ ವಿಶೇಷವಾಗಿ ತನ್ನ ತಂತ್ರಗಾರಿಕೆಯನ್ನು ಬಳಸಿದ್ದಾರೆ. ಒಟ್ಟಾರೆ ಈ ಕಲಾಕೃತಿಯು ಸಂಯೋಜನೆಯಿಂದಿದ್ದು ನವ್ಯಕಲೆಯಲ್ಲಿ ಚಿತ್ರಿಸಿರುವುದರಿಂದ ನೋಡುಗ ಹುಡುಕಾಟದಲ್ಲಿರುವಂತೆ ತಡಬಡಾಯಿಸುತ್ತಾನೆ.

**ಚಿತ್ರ-೮**

ಇದೊಂದು ಸಹ ಅಮೂರ್ತ ಚಿತ್ರವಾಗಿದ್ದು ಚಿತ್ರದಲ್ಲಿ ಪ್ರಕೃತಿಯ ಹಲವಾರು ಆಯಾಮಗಳು ಗೋಚರವಾಗುತ್ತವೆ. ಮುಳ್ಳು, ಮರ, ಬಂಡೆ, ಬೆಟ್ಟ, ಕ್ಯಾನ್ವವಾಸ್‌ನ ಮೂಲೆಗಳಲ್ಲಿ ಬೆಟ್ಟದಂತೆ ತೋರುತ್ತದೆ. ಕ್ಯಾನ್ವವಾಸ್ ಅದೇ ಹಿಂದಿನ ಕಲಾಕೃತಿಯಂತೆ ಸ್ಟ್ರೆಚ್ಚರ್ ಶೈಲಿಯಲ್ಲಿದ್ದು, ನಂತರ ಕೆಂಪು, ಬಿಳಿ ಹಾಗೂ ಕಪ್ಪು ವರ್ಣದಿಂದ ಪೇರ್ ಮಾಡಿಕೊಂಡು ಕೆಲವು ಅಮೂರ್ತ ವಸ್ತುಗಳಿಗೆ ಹೊತ್ತು ನೋಡಲಾಗಿದೆ. ಎಡಬದಿಯಲ್ಲಿ ಕೆಂಪು ಗೆರೆಯನ್ನು ಕಾಣಬಹುದು ಇದರ ಅರ್ಥ ಕಲಾವಿದ ನೋಡುಗನಿಗೆ ಪ್ರಶ್ನೆ ಹುಟ್ಟಿಸುವಂತಿದೆ. ಆದಿ ಮಾನವನ ಆಯುಧಗಳಂತೆ ಕೆಲವು ವಸ್ತುಗಳು ಕಾಣುತ್ತವೆ. ಹಲವಾರು ಅನುಭವಗಳನ್ನು ನೀಡುತ್ತದೆಯಲ್ಲದೇ ಇಲ್ಲಿರುವ ವಸ್ತುಗಳು ದೃಶ್ಯಾನುಭವವನ್ನು ನೀಡುತ್ತವೆ. ಮಹಾ ದಾರ್ಶನಿಕ ಪ್ಲೇಟೋನ ಶಿಷ್ಯನಾಗಿದ್ದ ಅರಿಸ್ಟಾಟಲ್ (ಕ್ರಿ.ಪೂ.

೩೮೦) ಕಲೆಯ ಉಗಮ, ಸ್ವರೂಪ ಹಾಗೂ ಕಾರ್ಯದ ಬಗ್ಗೆ ಹೇಳುತ್ತಾ "ಸೃಷ್ಟಿ ಸೌಂದರ್ಯಕ್ಕೆ ಪೂರಕವಾಗುವ ಅಥವಾ ಅದರ ಸೌಂದರ್ಯಾನುಭೂತಿಗೆ ಹತ್ತಿರವಾಗುವ ಮಾನವ ನಿರ್ಮಿತ ಕಲಾಸೃಷ್ಟಿ ಶುಭ ಗ್ರಹ್ಯವಾದದ್ದು ಆದರೆ ಕೆಳದರ್ಜೆಯ ವಸ್ತುಗಳ ಉತ್ತಮವಾದುದ್ದನ್ನು ಅನುಕರಣೆ ಮಾಡಿದ್ದಾರೆ... ಅಥವಾ ಆ ಉತ್ತಮವಾದುದ್ದರ ಗುಣವಿಶೇಷವನ್ನು ತನ್ನಲ್ಲಿಯೇ ಪ್ರತಿಬಿಂಬಿಸಿದರೆ ಅದು ಕಲಾಕೃತಿಯಾಗುತ್ತದೆ[೨೫] ಎಂಬ ಅಂಶವನ್ನು ಗಮನಿಸಿದರೆ ಇದು ನಿಜದ ಸಂಗತಿ ಎಂದೆನಿಸುತ್ತದೆ. ಇಂತಹ ಅಂಶಗಳನ್ನು ಕೃಷ್ಣಸೆಟ್ಟಿಯವರು ಬರೆಯುವುದರ ಜೊತೆಗೆ ತನ್ನ ಕಲಾಕೃತಿಯಲ್ಲಿಯೂ ಕಾಣಬಹುದಾಗಿರುತ್ತದೆ.

**ಚಿತ್ರ–೯**

ಈ ಕಾಲಾಕೃತಿಯನ್ನು ಗಮನಿಸಿದಾಗ ತಕ್ಷಣಕ್ಕೆ ರೋಮಾಂಚನಗೊಳ್ಳುವ ಕ್ಷಣಕ್ಕೆ ಸಾಕ್ಷಿಯಾಗುತ್ತದೆ. ಇಲ್ಲಿ ಯಾವುದೇ ರೇಖೆಗಳಲ್ಲಿ ಆಯಾಮಗಳಿಲ್ಲ. ಕಲಾವಿದನ ಚಾಣಾಕ್ಷತನವನ್ನು ಬಣ್ಣಗಳಲ್ಲಿ ತೋರಿಸಿದ್ದಾರೆ. ಎರಡು, ಎರಡೂವರೆ ಇರುವ ಕಲಾಕೃತಿಯಲ್ಲಿ ಹಿಂಭಾಗಕ್ಕೆ ಗಾಡ ಹಸಿರನ್ನು ಚೆಲ್ಲಿ ನೀಲಿವರ್ಣದಿಂದ ಸ್ಟ್ರೇಚರ್ ತೆಗೆಯುವ ಪ್ರಯತ್ನದಲ್ಲಿ ಸಫಲರಾಗಿದ್ದಾರೆ. ಈ ಕಲೆ ಸಾಮಾನ್ಯವಾಗಿ ಎಲ್ಲರಲ್ಲೂ ಬರುವುದಿಲ್ಲ. ಆದರೆ ಚಿ.ಸು.ಕೃಷ್ಣಸೆಟ್ಟಿಯವರು ಬಣ್ಣಗಳ ಮೂಲಕ ಕಲಿಯಲು ಯತ್ನಿಸಿ, ಕಲಾಕೃತಿಗೊಂದು ರೂಪವನ್ನು ನೀಡುತ್ತಾರೆ. ಅದೇ ದಾರಿಯಲ್ಲಿ ಸಾಗಿರುವ ಈ ಕೃತಿಯು ವಿಷಯದಲ್ಲಿ ಶೂನ್ಯ. ಆದರೆ ಕಲಾಕೃತಿಯಲ್ಲಿ ಜೀವವಡಗಿದೆ. ಸೌಂದರ್ಯ ತುಂಬಿದೆ, ನೀಲಿ ಹಸಿರುಗೂ ಸಂಬಂಧವನ್ನು ಕಲ್ಪಿಸಿ ಯಶಸ್ವಿಯಾಗಿರುವ ಕಲಾವಿದರ ತಮ್ಮದೇ ದಾಟಿಯಲ್ಲಿ ಕೃತಿಯನ್ನು ರಚಿಸಿ ಪೂರ್ಣಗೊಳಿಸಿರುತ್ತಾರೆ. ಪ್ರಮುಖವಾಗಿ ಎರಡೇ ಬಣ್ಣಗಳು ಇಲ್ಲಿದ್ದು ನೀಲಿ+ ಹಸಿರು= ನೀಲಸಿರು ವರ್ಣವೂ ಕಲಾಕೃತಿಯಲ್ಲಿ ರರಾಜಿಸುತ್ತದೆ.

**ಚಿತ್ರ–೧೦**

ಈ ಕಲಾಕೃತಿಯಲ್ಲಿ ನೋಡಿದ ತಕ್ಷಣ ಎರಡು ರೀತಿಯ ಭಾವನೆಗಳು ವ್ಯಕ್ತವಾಗುತ್ತವೆ. ಒಂದು ಭತ್ತದ ತೆನೆಗಳ ನೋಟ. ಇನ್ನೊಂದು ಕಡಲತೀರದ ಸಮುದ್ರದಲ್ಲಿ ಹಿಡಿದ ಮೀನನ್ನು ಎಳೆ ಬಿಸಿಲಿನಲ್ಲಿ ಹಾಕಿ ಅದಕ್ಕೆ ನೆರಳು–ಬೆಳಕಿನ ಆಟದ ರಸದೌತಣಕ್ಕೆ ಸಿಕ್ಕ ಮಹತ್ವದ ಅಭಿರುಚಿಗಳು ಎಂತಹವರಿಗೂ ಕಾಡದೇ ಇರದು. ಅಷ್ಟರಮಟ್ಟಿಗೆ ಈ ಚಿತ್ರಕೃತಿ ಪ್ರಭಾವ ಬೀರಿದ್ದಾಗಿದೆ. ವಿವಿಧ ಬಣ್ಣಗಳನ್ನು ಕ್ಯಾನ್ವಸ್‌ನಲ್ಲಿ ಸುರಿದು ಸ್ಟ್ರಚ್ಚರ್ ತೆಗೆದಿರುವ ಕಲಾವಿದರು ಗೊಂದಲಗಳಿಗೆ ಅವಕಾಶ ಕೊಟ್ಟಿರುವುದಿಲ್ಲ. ಅನುಭವದ ನೆಲೆಯಲ್ಲಿ ರೇಖೆಯನ್ನು ತೋರ್ಪಡಿಸಿದಂತೆ ಮೇಲ್ನೋಟಕ್ಕೆ

೨೫. ಚಿ.ಸು.ಕೃಷ್ಣಸೆಟ್ಟಿ : ದೃಶ್ಯಕಲೆ ಎಂದರೇನು?, ಪು.೧೧

ಕಂಡುಬರುತ್ತಿದೆ. ಆಮೂರ್ತ ಚಿತ್ರ ಕೃತಿಯಲ್ಲಿ ನೋಡುಗ ಹುಡುಕಿದಷ್ಟು ವಸ್ತುಗಳು ಜಾರುತ್ತಿತುತ್ತವೆ. ಅದೇ ಮಾರ್ಗದಲ್ಲಿ ಸಾಗಿರುವ ಕಲಾವಿದ ಚಿ.ಸು.ಕೃಷ್ಣಸೆಟ್ಟಿ ಈ ಕೃತಿಯಲ್ಲಿ ವಸ್ತುಗಳನ್ನು ಹುಡುಕಲು ಪ್ರಯತ್ನಿಸಿದ್ದಾರೆ.

ಸ್ವತಃ ವಿಷಯವನನ್ನು ಅಲಂಕರಿಸುವ ಮತ್ತು ವಿಷಯವನ್ನು ಪೂರ್ವಭಾವಿಯಾಗಿಟ್ಟುಕೊಂಡು ಚಿತ್ರವನ್ನು ರಚಿಸುತ್ತೇನೆ ಎಂಬಂಶವನ್ನು ಈ ಚಿತ್ರ ವಿನಮ್ರದಿಂದಲೇ ತಿರಸ್ಕರಿಸುವಂತಿದೆ. ನೋಡುಗರಿಗೆ ಮನಪೂರ್ವಕವಾಗಿ ಮನಸ್ಸೊಳಗೆ ಪ್ರವೇಶ ಮಾಡುವ ಹಂತಕ್ಕೆ ಸಂಯೋಜನೆಗೊಂಡಿರುತ್ತದೆ. ನೆರಳು–ಬೆಳಕಿನ ನಡುವಿನ ಸಾಮ್ಯತೆ ಕಲಾಕೃತಿಗೊಂದು ಮೆರಗು ನೀಡಿರುತ್ತದೆ. ಮುಖ್ಯವಾಗಿ ಕಪ್ಪು, ಕಂದು, ಬಿಳಿ, ಹಳದಿ, ಕೆಂಪು ವರ್ಣಗಳನ್ನು ಕಾಣಬಹುದು.

**ಚಿತ್ರ–೧೧**

ಪ್ರತಿನಿತ್ಯ ನೆಡೆಯುವ ವಿವಿಧ ಘಟನೆಗಳು, ದುರಂತಗಳು, ಸಾವು–ನೋವು ಇನ್ನಿತರೆ ವಿಷಯಗಳ ಬಗ್ಗೆ ಕಲಾವಿದ ಯೋಚಿಸುತ್ತಿರುವಾಗಲೇ ಆತನ ಮನಸ್ಸಿನಲ್ಲಿ ವಸ್ತು ವಿಷಯಗಳ ಭಾವನೆಗಳನ್ನು ಕಲಾಕೃತಿಯಲ್ಲಿ ಬಿಂಬಿಸುವುದರ ಮೂಲಕ ಅಭಿವ್ಯಕ್ತಿಸಿರುತ್ತಾರೆ. ಇಲ್ಲಿ ಕಲಾವಿದ ಚಿ.ಸು.ಕೃಷ್ಣಸೆಟ್ಟಿ ರೇಖೆ ಮತ್ತು ವರ್ಣವನ್ನು ಸಮತಟ್ಟಾಗಿ ಈ ಕೃತಿಯಲ್ಲಿ ಬಳಸಿಕೊಂಡಿರುತ್ತಾರೆ. ಮನಸ್ಸಿನ ಕಲ್ಪನೆಗಳು ಹೇಗೆ ಭಿನ್ನವಾಗಿರುತ್ತವೆ ಎಂಬುದಕ್ಕೆ ಇಲ್ಲಿನ ಕಲಾಕೃತಿ ನಿದರ್ಶನವೆಂದರೆ ತಪ್ಪಲ್ಲ, ಈ ಕಲಾಕೃತಿಯನ್ನು ತುಂಬಾ ಆಳವಾಗಿ ಕಣ್ಣಾಡಿಸುತ್ತಾ ಹೋದಗೆಲ್ಲಾ ಅಗೋಚರ ರೀತಿಯಲ್ಲಿಯೇ ಭಯಾನಕ ದೃಶ್ಯಗಳು ಕಣ್ಮುಂದೆ ಹಾದು ಹೋಗುವ ಅನುಭವ ಬರುತ್ತದೆ. ದೊಡ್ಡ ಕಾಡು, ಅಲ್ಲಿ ಬಹುದೂರ ಅಂದರೆ ನೂರಾರು ಅಡಿ ಎತ್ತರ ಪ್ರದೇಶದಲ್ಲಿದ್ದು ಇಣುಕಿ ಹಾಕಿದಾಗ ಆಗುವ ಕ್ಷಣಗಳ ಭಾವನೆಗೆ ಇಲ್ಲೊಂದು ಉತ್ತರ ತೆರೆದಿಡುತ್ತದೆ ಎಂಬ ಭಾವನೆಯ ಲಹರಿ ತನ್ನಿಂತಾನೆ ಹುಟ್ಟಿಕೊಂಡು ಪ್ರಾಪಂಚಿಕವಾಗಿ ಸುತ್ತುವರಿದ ಸಮಾಜದಲ್ಲಿ ಈ ತರದ ಗೊಂದಲದ ಗೂಡುಗಳು ಸಾಮಾನ್ಯವೆಂಬಂತೆ ಬಿಂಬಿಸುತ್ತಿರುವುದು ನಿಜಕ್ಕೂ ಕಲಾವಿದನ ಕಲ್ಪನೆಗೂ ಮಿಗಿಲಾದದ್ದಾಗಿದೆ. ಒಟ್ಟಾರೆ ಈ ಕಲಾಕೃತಿಯನ್ನು ನೋಡಿದಾಗ ವಿವಿಧ ಸ್ಥಳಾವಕಾಶ, ಸಾಮಾಜಿಕ ವ್ಯವಸ್ಥೆ, ಶಾಶ್ವತ ಪರಿಹಾರ ಮತ್ತು ಉದಾಸವು ದೂರ ಸಮೀಪ ಅಂತರವನ್ನು ಸಮರ್ಪಕವಾಗಿ ತನ್ನ ಕಲಾಕೃತಿಯಲ್ಲಿ ತೋರಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಕಪ್ಪುರೇಖೆ ವರ್ಣಗಳು, ಕಂದುಗೆಂಪು, ನೀಲಿ ಮತ್ತು ಹಳದಿ, ಹಸಿರು ವರ್ಣಗಳನ್ನು ಬಳಸಲಾಗಿದೆ. ಈ ಕಲಾಕೃತಿಯನ್ನು ವೀಕ್ಷಿಸುವ ಪ್ರೇಕ್ಷಕನು ಅಲ್ಪ ಕಾಲ ನಿಂತು ತನ್ನಲ್ಲೇ ಕಲ್ಪನೆಯನ್ನು ನೈಜರೂಪಕ್ಕೆ ತಂದು ಸಮಾಜದಲ್ಲಿ ನೆಡೆಯುತ್ತಿರುವ ಘಟನೆಗಳನ್ನು ಮನನ ಮಾಡಿಕೊಳ್ಳುವ ಮಟ್ಟಕ್ಕೆ ತಂದು ನಿಲ್ಲಿಸುವಂತಿದೆ.

**ಚಿತ್ರ-೧೨**

ಈ ಚಿತ್ರಕೃತಿಯನ್ನು ತಕ್ಷಣಕ್ಕೆ ನೋಡಿದರೇ ಅಶ್ಚರ್ಯ ತನ್ನಿಂದತಾನೆ ಬರುತ್ತದೆ. ಪಾಶ್ಚಾತ್ಯ ಕಲಾವಿದರು ತಮ್ಮ ಕಲಾಕೃತಿಗಳಲ್ಲಿ ಹಿಂಬದಿಗೆ ಬಣ್ಣಗಳನ್ನು ಎಸೆದು ಅದರಲ್ಲಿ ವಸ್ತುಗಳನ್ನು ಹುಡುಕುತ್ತಿರುವಾಗ ಕಾಣುವ ವಸ್ತುಗಳನ್ನು ನೋಡಿ, ಅವರಿಗವರೇ ಮೈಮರೆತು ಹೋಗುತ್ತಿದ್ದರಂತೆ, ಅಂತಹ ದೃಶ್ಯಗಳು ತಮ್ಮ ಚಿತ್ರಗಳಲ್ಲಿ ಕಾಣುತ್ತಿದ್ದವು. ಅವುಗಳನ್ನು, ಅದೇ ಬಣ್ಣವನ್ನು ಉಳಿಸಿಕೊಳ್ಳುತ್ತಾ ಚಿತ್ರವನ್ನು ತೆಗೆಯುವುದಿದೆಯಲ್ಲ ಅದು ಅಸಾಮಾನ್ಯನ ಕೆಲಸವಾಗಿದೆ. ಈ ದೃಷ್ಟಿಯಲ್ಲಿಯೇ ಸಾಗಿರುವ ಚಿ.ಸು.ಕೃಷ್ಣಸೆಟ್ಟಿಯವರ ಚಿತ್ರಕೃತಿಗಳಲ್ಲೊಂದು ಇಲ್ಲಿರುವ ಚಿತ್ರ ಬಿಳಿಗೋಡೆ ಮೇಲೆ ಕಡುನೀಲಿಯಿಂದ ಬಳಿದು ಅದಕ್ಕೆ ಮಂಜುಗಡ್ಡೆಯ ನೋಟವನ್ನು ಬಿಂಬಿಸಿದಂತಿದೆ. ಮಡಿಚಿದ ಬಟ್ಟೆಯನ್ನು ಹೋಲುವ, ಮನುಷ್ಯಾಕೃತಿಗಳನ್ನೋಲುವ, ರಬ್ಬರನ್ನು ಹೋಲುವ ಒಟ್ಟಾರೆ ಎಲ್ಲಿಯೂ ಕೂಡ ಚಿತ್ರ ಸೋತಿದೆ ಎನ್ನುವಂತೆ ಭಾಸವಾಗುವುದಿಲ್ಲ ಅಷ್ಟರ ಮಟ್ಟಿಗೆ ಸಂಯೋಜನೆ ಕೂಡಿರುತ್ತದೆ. ಈ ಕೃತಿಯ ರಚನೆಗೆ ಅಕ್ರಾಲಿಕ್ ಮಾಧ್ಯಮ ಬಳಸಿದ್ದು ಹೆಚ್ಚು ನೀಲಿ, ಬಿಳಿ, ತಿಳಿ ನೀಲಿ ಬಣ್ಣಗಳಿಂದ ಮುಗಿಸಲಾಗಿದೆ. ನೋಡಿದಾಗ ಗುಹೆಯ ದೃಶ್ಯದಂತೆ ಕಂಡುಬರುತ್ತಿದೆ. ಭಿತ್ತಿಚಿತ್ರದ ಆಗರವಾಗಿರುವ ಅಜಂತಾ, ಎಲ್ಲೋರ ಗುಹೆಯಲ್ಲಿನ ಪ್ರದೇಶದಲ್ಲಿನ ದೃಶ್ಯವೂ ಕೂಡ ಕಾಣಬಹುದು. ತುಂಬಾ ಸೂಕ್ಷ್ಮಸ್ವಭಾವದಿಂದ ಕಲಾಕೃತಿಯ ಹಿಂಬದಿಯಲ್ಲಿನ ಬಣ್ಣಗಳಿಂದ ರೂಪಿಸಿದ ಕೃತಿಯಲ್ಲಿ ತೆಳುವಾಗ ಬಣ್ಣವನ್ನು ಬಿಳಿ ಕ್ಯಾನ್ವಸ್‌ಗೆ ಎರಚಿರುವುದು ಜೀವದ ಕಳೆ ತುಂಬಿದೆ. ಅಜಂತಾ ಗುಹೆಯಲ್ಲಿನ ಬಣ್ಣದ ಚಿತ್ರಗಳಿಗೂ ಇಲ್ಲಿರುವ ಚಿತ್ರಕ್ಕೂ ಸಾಮ್ಯತೆ ಯನ್ನು ತೋರಿಸಿದ್ದಾರೆ. ಕಲಾವಿದರು ಎಂಬುದು ಬಹಳ ಮುಖ್ಯವಾಗುತ್ತದೆ ಎಂದು ಹೇಳಬಹುದು.

**ಚಿತ್ರ-೧೩**

ಚಿ.ಸು.ಕೃಷ್ಣಸೆಟ್ಟಿಯವರ ಕಲಾಕೃತಿಗಳಲ್ಲಿ ವಿಶೇಷವೆನ್ನಬಹುದಾದ ಪ್ರಕೃತಿಯ ಹಲವು ಆಯಾಮಗಳು ಗೋಚರವಾಗುತ್ತವೆ. ನಿಜರೂಪ ಆಕೃತಿಗಳು ನಮ್ಮಿಂದ ಮರೆಮಾಚಿರುವ ಹಲವಾರು ಅನುಭವಗಳನ್ನು ಕೊಡುತ್ತದೆ ಅಲ್ಲದೇ ಭಾವವನ್ನು ಸೃಷ್ಟಿಸುವ ಸಾಧ್ಯತೆಗಳನ್ನು ಕಾಣಬಹುದು. ಕಲ್ಲುಗಳ ಆಕಾರದ ಆಕೃತಿಗಳು ಹಲವಾರು ರೀತಿಯ ಸಂಶಯಗಳನ್ನು ಸೃಷ್ಟಿಸುವುದರ ಜೊತೆಗೆ ಅವು ಬಣ್ಣದ ಮೀನ ಆಕೃತಿ, ಕಲ್ಲಿನ ಆಕೃತಿ, ಬಾಳೆ ಎಲೆಯ ಆಕೃತಿ, ಮತ್ತು ದೇವರ ಕಲ್ಲುಗಳ ಆಕೃತಿ, ದೃಶ್ಯಾನುಭವವನ್ನು ನೀಡುತ್ತದೆ. ಇವರು ಬಳಸುವ ವರ್ಗಗಳು ಹಲವಾರು ಸಂಶಯಗಳನ್ನು ಹುಟ್ಟಿಸಿದರೂ, ಅಂತಿಮವಾಗಿ ಸೌಂದರ್ಯ ರಸಾನುಭವವನ್ನು ನೋಡುಗನಿಗೆ ಕೊಡುತ್ತದೆ. ಇವರ ಚಿತ್ರ ರಚನೆಯಲ್ಲಿ ಕವರ್‌ನಿಂದ ಮೊದಲು ತೆಗೆದುಕೊಂಡು ಸ್ಟೆಚರ್‌ರವು ಉಳಿಸಿಕೊಂಡು ಬೇಡವಾದ

ಕಡೆಗೆ ಟೇನ್ ಕಲರ್ ಮಾಡಿದ್ದರೆ ಇವರು ಒಂದರ ಮೇಲೊಂದು ವರ್ಗಗಳ ಆಕಾರ ಹಿನ್ನೆಲೆ ಮುನ್ನೆಲೆಯ ಹಂತವನ್ನು ಸೃಷ್ಟಿಸಿದ್ದರೆ ಒಂದು ರೀತಿಯ ಬಂಡೆಗಳ ಸೀಳುವೆಕ್ಕೆಯನ್ನು ಹುಟ್ಟುಹಾಕುವ ಕಪ್ಪು ವರ್ಣದ ಛಾಯೆ ಹೆಚ್ಚು ಕಂಡುಬಂದರೂ ಉಳಿದ ಎಲ್ಲ ವರ್ಣಗಳನ್ನು ಬಂಡೆಯಂತಿರುವ ಆಕೃತಿಯಲ್ಲಿ ಕಾಣಸಿಗುತ್ತದೆ. ಅತ್ಯಂತ ಚರ್ಚಾಸ್ಪದವೆನಿಸುವ ಈ ಅಮೂರ್ತ ಕೃತಿಯು ಕಲಾವಿದನ ತೊಳಲಾಟವನ್ನು ಹೊರಹಾಕಲು ಮಾಡಿದ ಪ್ರಯತ್ನ ಎನ್ನಬಹುದು ಈ ಕಲಾಕೃತಿ ನಿಜವಾದ ಗ್ರಹಿಕೆಗೆ ನಿಲುಕದ ಒಂದು ಕಲಾಕೃತಿಗಳಾಗಿವೆ.

**ಚಿತ್ರ-೧೪**

ಚಿತ್ರಕಲಾವಿದರೇ ಹೇಳುವಂತೆ ಮೊದಲೇ ಚಿತ್ರಕಲಾ ಶಿಕ್ಷಣದ ಕ್ರಮವೇ ನಿಗದಿತವಾಗಿ ಪರೀಕ್ಷೆಗೆ ಪೂರಕವಾಗಿಯೇ ಚಿತ್ರ ರಚನೆಯನ್ನು ಮಾಡುತ್ತಿರುತ್ತೇವೆ. ನಂತರ ಆರ್ಡರ್ ನೀಡಿದರೆ ಅವರಿಗೆ ಒಪ್ಪುವ ಹಾಗೆ ಚಿತ್ರವನ್ನು ಬರೆದುಕೊಡುತ್ತೇವೆ. ಇಂತಹ ಎಲ್ಲ ಸಂದರ್ಭಗಳಿಂದ ಹೊರಬಂದ ಮೇಲೆ ಸೃಜನಶೀಲ ಕಲಾಕೃತಿಗಳನ್ನು ರಚಿಸಬೇಕೆಂಬ ಹಂಬಲ ಪ್ರತಿಯೊಬ್ಬ ಕಲಾವಿದರಲ್ಲಿದ್ದಂತೆ ಕೃಷ್ಣಸೆಟ್ಟಿಯವರಲ್ಲೂ ಕಾಣಬಹುದು. ಪಾಶ್ಚಾತ್ಯ ಕಲಾಕೃತಿಗಳನ್ನು ಹಾಗೂ ಭಾರತೀಯ ಕಲಾಕೃತಿಗಳನ್ನು ನೋಡಿದ ಮತ್ತು ಕಲಾಕೃತಿಗಳನ್ನು ವಿಮರ್ಶೆ, ಚರ್ಚೆ ಮಾಡಿದ ಇವರು ಅವರಲ್ಲಿನ ಕಲಾಕೃತಿಯಲ್ಲಿ ತನ್ನದೇ ಆದ ಶೈಲಿಯನ್ನು ಹುಡುಕುತ್ತಾ ಅದನ್ನು ಅನುಸರಿಸದೆ ಅವರೇ ಒಂದು ಅಮೂರ್ತ ಚಿತ್ರಗಳನ್ನು ರಚಿಸಲು ಪ್ರಾರಂಭಿಸಿದರು. ನಮ್ಮಲ್ಲಿ ಅಮೂರ್ತ ಚಿತ್ರಗಳೆಂದರೆ ಕೆಲವು ತಪ್ಪು ಕಲ್ಪನೆಗಳಿವೆ. ಆಕಾರದಿಂದ ನಿರಾಕಾರಕ್ಕೆ ಬರುವುದು. ನಿರಾಕಾರವೆಂದರೆ ಬಹಳಷ್ಟು ಜನ ಅದನ್ನು ಅಮೂರ್ತ ಎಂದು ತಿಳಿದುಕೊಳ್ಳುತ್ತಾರೆ. ಆದರೆ ಅಮೂರ್ತ ಎಂದರೆ ಏನು? ಚಿತ್ರವೊಂದರಲ್ಲಿ ಆಕೃತಿಗಳು, ವರ್ಣಗಳಿವೆ ಎಂದ ಮಾತ್ರಕ್ಕೆ ಅವು ಅಮೂರ್ತವಾಗುವುದಿಲ್ಲ. ಅಮೂರ್ತತೆಯ ಕುರಿತು ನಮಗೆ ಅಂದಿನ ಸಂದರ್ಭದಲ್ಲಿ ತಿಳುವಳಿಕೆ ಹೇಗಿತ್ತು ಎಂದರೆ ಜಗತ್ತಿನಲ್ಲಿ ಯಾವ ವಸ್ತುವೂ ಹೋಲಿಕೆಗೆ ಬರಲಾರದು, ತನ್ನ ಹೋಲಿಕೆಯನ್ನು ಕಳೆದುಕೊಂಡು ಒಂದು ಚಿತ್ರವಾಗಿ ಉಳಿದಾಗ ಅದು ಅಮೂರ್ತ ಕೃತಿಯಾಗುತ್ತದೆ. ಎಂಬ ಕಲ್ಪನೆ ಎಲ್ಲಾ ಕಲಾವಿದರಲ್ಲಿತ್ತು. ಆದರೆ ಅಮೂರ್ತತೆಯನ್ನು ವಿರೂಪಗೊಳಿಸುವುದು, ಮೊಟಕುಗೊಳಿಸು ವುದು ಹಾಗೂ ಬೆಳೆಸುವುದು ಕೂಡ ಅಮೂರ್ತ ಪ್ರಜ್ಞೆಯನ್ನು ಸೃಷ್ಟಿಸುತ್ತದೆ ಎಂಬುದು ಈಗ ನಮಗೆ ಗೊತ್ತಿರುವಂತಹ ವಿಚಾರವಾಗಿರುವಂತೆ[೨೬] ಇಂತಹ ಆಕೃತಿಗಳಿರುವುದನ್ನು

೨೬. ಡಾ.ಸಿದ್ದಲಿಂಗಸ್ವಾಮಿ, ಅ.ಹಿರೇಮಠ: ಕಲಾವಿದರ ಆರ್.ಎಂ.ಹಡಪದ, ಪು.೧೪೯

ಚಿ.ಸು. ಕೃಷ್ಣಸೆಟ್ಟಿಯವರ ಕಲಾಕೃತಿಗಳಲ್ಲಿ ಕಾಣಬಹುದು. ಪ್ರಕೃತಿಯ ಹಲವು ಆಯಾಮಗಳು ಗೋಚರವಾಗುತ್ತವೆ. ಕಲ್ಲು, ಬಂಡೆ, ಚೂರು-ಪಾರು ಅಂಟಿಸಿರುವುದು ಹೀಗೆ ಕೆಲವು ಅಗೋಚರವೆನ್ನುವ ಆಕಾರಗಳು, ನಿಜರೂಪ ಆಕೃತಿಗಳು ನಮ್ಮಿಂದ ಮರೆಮಾಚಿರುವ ಹಲವಾರು ಅನುಭವಗಳನ್ನು ಕೊಡುತ್ತದೆ. ಅಲ್ಲದೇ ಭಾವವನ್ನು ಸೃಷ್ಟಿಸುವ ಸಾಧ್ಯತೆಗಳನ್ನು ಕಾಣಬಹುದು. ಕಲ್ಲುಗಳ ಆಕಾರದ ಆಕೃತಿಗಳು ಹಲವಾರು ರೀತಿಯ ಸಂಶಯಗಳನ್ನು ಸೃಷ್ಟಿಸುವುದರ ಜೊತೆಗೆ ಅವು ಅಂದದ ಮೀನಿನ ಆಕೃತಿ, ಕಲ್ಲಿನ ಆಕೃತಿ, ಬಾಳೆ ಎಲೆಯಾಕೃತಿ ಮತ್ತು ದೇವರ ಕಲ್ಲುಗಳ ಆಕೃತಿ, ದೃಶ್ಯಾನುಭವವನ್ನು ನೀಡುತ್ತದೆ. ಅವರು ಬಳಸಿರುವ ವರ್ಣಗಳು ಹಲವಾರು ಸಂಶಯಗಳನ್ನು ಹುಟ್ಟಿ ಹಾಕಿದರೂ ಅಂತಿಮವಾಗಿ ಸೌಂದರ್ಯ ಕಲಾನುಭವವನ್ನು ನೋಡುಗನಿಗೆ ಕೊಡುತ್ತದೆ. ಅಂತಹ ಸಮೃದ್ಧ ಕಲಾಕೃತಿಯನ್ನು ಇವರ ನೀಡಿರುತ್ತಾರೆ.

**ಚಿತ್ರ-೧೫**

ಈ ಚಿತ್ರವು ಕೂಡ ಒಂದು ಆಕಾರವನ್ನು ಹೊಂದಿದ್ದರೂ ನೋಡಲೂ ಕಲ್ಲಿನ ಮೀನುಗಳು ಮೇಲ್ಭಾಗದಲ್ಲಿ ಮನುಷ್ಯನ ತಲೆಯನ್ನು ಕಾಣುವಂತಹ ಆಕೃತಿ. ನೋಡುಗರಿಗೆ ಗೋಚರವಾಗುತ್ತದೆ. ಬಹುವರ್ಣಗಳ ಮೇಳ ಕೆಲವೆಡೆ ಕಾಣಬಹುದು. ಕಪ್ಪು ಮತ್ತು ಹಸಿರು ಬಣ್ಣಗಳು ಹೆಚ್ಚು ಆದರೆ ಇಲ್ಲಿನ ರೂಪ ಆಕೃತಿಗಳು ಒಂದೆಳೆದಂತೆ ವೈವಿಧ್ಯಪೂರ್ಣವಾದ ದೃಶ್ಯಾನುಭವವನ್ನು ವಿಭಿನ್ನವಾಗಿ ನಾವು ಗ್ರಹಿಸಬಹುದು. ಚಿ.ಸು.ಕೃಷ್ಣಸೆಟ್ಟಿಯವರಲ್ಲಿ ವಿಷಯಗಳಿಗೆ ಅಂದರೆ ಸ್ತ್ರೀ ಶೋಷಣೆ, ರಾಜಕೀಯ, ಕಾಮ ಹೀಗೆ ವಿಡಂಬನೆಯ ಹಾಗೂ ಪ್ರತಿಭಟನೆಯಂತಹ ವಸ್ತುಗಳನ್ನು ಇಟ್ಟುಕೊಂಡು ಕಲಾಕೃತಿಯನ್ನು ರಚಿಸುವ ಇವರು ಕಲಾಕೃತಿಗಳಿಗಿಂತ ಈ ಅಮೂರ್ತ ಚಿತ್ರಗಳು ಸಾಕಷ್ಟು ಚರ್ಚೆಗೆ ಅವಕಾಶವನ್ನು ನೀಡುತ್ತವೆ. ಒಂದು ಬಗೆಯ ತೊಳಲಾಟಗಳು, ತುಡಿತಗಳು ಪ್ರಕಟವಾಗಿವೆ. ಎಂದರೆ ತಪ್ಪಾಗಲಾರದು. ಇವರ ಕಲಾಕೃತಿ ಯಾವುದೇ ಬಂಧನ, ದಿಗ್ಬಂಧನಗಳಾಗಿ ಇಲ್ಲಿರುವ ಆಕೃತಿಗಳಿಗಂತೂ ಇಲ್ಲವೇ ಇಲ್ಲ ಈ ಕ್ಯಾನುವಾಸ್‌ನಲ್ಲಿ ತಮಗೆ ತಿಳಿದ ದಿಕ್ಕಿನಲ್ಲಿ ಸಾಗಿ ನೋಡುಗರ ಗ್ರಹಿಕೆಗೆ ಹಲವು ರೀತಿಯ ಕಸರತ್ತುಗಳನ್ನು ಕೊಡುತ್ತವೆ. ಒಂದು ಬಗೆಯ ಉದ್ವೇಗದೊಂದಿಗೆ ವಿಭಿನ್ನವಾದ ತೋಟಗಳು ಪ್ರಕಟಗೊಂಡಿವೆ. ಎಂದೆನಿಸುತ್ತದೆ. ಈ ಮೀನುಗಳು(ಕಲ್ಲು) ಸೇರಿ ಆ ಮಾನವ ತಲೆಯನ್ನು ತಿನ್ನುವ ಪ್ರಯತ್ನಕ್ಕೆ ಒಂದಕ್ಕೊಂದು

ಸ್ಪರ್ಧೆಯಲ್ಲಿರುವಂತೆ ಕಾಣುತ್ತದೆ. ಆ ಮನುಷ್ಯನ ಮುಖ ನೋವಿನಿಂದ ತುಂಬಿದೆ ಎನ್ನುವ ಹಾಗೆಯೇ ವರ್ಣಗಳಿಂದ ಅವನ ನೋವನ್ನು ಹೊರಹಾಕಲಾಗಿದೆ.

**ಚಿತ್ರ–೧೬**

ಈ ಕಲಾಕೃತಿ ಅಪರಿಚಿತ ಲೋಕದ ಹಾಗೆ ಕಾಣುತ್ತದೆ. ಇಲ್ಲಿರುವ ಆಕೃತಿಗಳಿಗಿಂತ ವರ್ಣದಲ್ಲಿ ಆಕಾರ್ ಎಲ್ಲೋ ವರ್ಣ ಕಲ್ಲಿಗೆ ಶ್ರೀಮಂತಿಕೆಯನ್ನು ತೋರಿಸುತ್ತದೆ. ಉಳಿದ ಎಲ್ಲಾ ವರ್ಣಗಳು ಇಲ್ಲಿದ್ದು, ಕಪ್ಪು ವರ್ಣ ಹೆಚ್ಚು ಮನುಷ್ಯ ಕೃತಿಯನ್ನು ಕಂಡರೂ ಸಮಾಜದಲ್ಲಿ ಅವನ ಅಂತರಂಗದ ಗುಣಗಳನ್ನು ಕಾಣಬಹುದು. ಕಲಾಕೃತಿಯ ಬಲಬದಿಯಲ್ಲಿ ಮನುಷ್ಯನಂತೆ ತೋರುವ ಆಕೃತಿ ಬರಡಾದ ಮರವನ್ನು ನೋಡುತ್ತಾ ಕುಳಿತಿರುವ ಹಾಗೆ ನೋಡುಗನ ಗಮನ ಸೆಳೆಯುತ್ತಲೇ ಇಲ್ಲಿನ ಆಕೃತಿಗಳು ಒಟ್ಟು ಅವಕಾಶವನ್ನು ಆವರಿಸಿ ಕೊಂಡಿದ್ದು, ಆಲೋಚನೆಯ ದೃಶ್ಯಾನುಭವವನ್ನು ಕಾಣುತ್ತೇವೆ. ಮುಖದಲ್ಲಿ ಭಿನ್ನತೆಯನ್ನು ಕಾಣಬಹುದು. ಚಿತ್ರ ಅಸ್ಪಷ್ಟವಾಗಿ ಕಂಡರೂ ಕಲಾವಿದರಿಗೆ ತಿಳಿದ ದಿಕ್ಕಿನಲ್ಲಿ ಸಾಗಿ ನಮ್ಮ ಗ್ರಹಿಕೆಗೆ ಹಲವು ರೀತಿಯಲ್ಲಿ ಗೊಂದಲವನ್ನು ಉಂಟುಮಾಡುವ ಚಿತ್ರ ಇದಾಗಿದೆ. ಕಲ್ಲಿನ ವರ್ಣಗಳ ಮೇಳ ಶ್ರೀಮಂತಿಕೆಗೆ ತೋರಿಸಿದ್ದು, ಅವರದೆ ಅಭಿಪ್ರಾಯಕ್ಕೆ ಬಿಟ್ಟದ್ದು ಎನ್ನುವ ಕಲಾವಿದ ಕೃಷ್ಣಸೆಟ್ಟಿಯನ್ನು ವಿಭಿನ್ನವಾದ ಕಲಾಕೃತಿಯಲ್ಲಿ ತನ್ನನ್ನು ತಾನು ತಿಳಿದ ದಿಕ್ಕಿನಲ್ಲಿ ಆಕೃತಿ ವಸ್ತು, ಬಣ್ಣ ಬಳಸಿ ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಬಹುಮುಖ್ಯವಾಗಿ ಕಡುವರ್ಣದ ಆಶಯ ಹೆಚ್ಚಾಗಿದೆ.

**ಚಿತ್ರ–೧೭**

ಒಂದು ಕಲಾಕೃತಿ ರಚನೆಯ ಪೂರ್ವ ಯೋಜನೆಯಲ್ಲಿ ಅಗತ್ಯವಾದ ವಸ್ತು, ವಿಷಯಗಳು ಬೇಕು. ಆದರೆ ಕೃಷ್ಣಸೆಟ್ಟಿಯವರು ಹೇಳುವ ಪ್ರಕಾರ ನಾನು ಯಾವುದೇ ಪೂರ್ವ ಯೊಜನೆ ಇಲ್ಲದೆ ಕಲಾಕೃತಿಯನ್ನು ರಚನೆ ಮಾಡುತ್ತೇನೆ. ಕಲಾಕೃತಿ ರಚಿಸುವಾಗ ಸಾಕೆನಿಸಿದರೆ ಅಲ್ಲಿಗೆ ನನ್ನ ಕಲಾಕೃತಿ ಪೂರ್ಣಗೊಂಡಂತೆ ಎನ್ನುವ ಇವರು ಅಮೂರ್ತ ಚಿತ್ರ ರಚನೆಯಲ್ಲಿ ಅದರಲ್ಲೂ ಪರಿಚಿತ ಅಥವಾ ಅಪರಿಚಿತ ಲೋಕದ ಆಕಾರಗಳು ಒಂದು ರೀತಿಯ ಅನುಭವವನ್ನು ನೀಡುತ್ತದೆ. ಸ್ವಾತಂತ್ರ್ಯ ಅರ್ಥಕ್ಕೆ ಸಾಕಷ್ಟು ಅವಕಾಶವಿರುತ್ತದೆ. ಎನ್ನುವ ಈ ಕಲಾವಿದರು ಮಾಡುವ ಕೆಲಸಕ್ಕೆ ಅರ್ಥ ನೀಡಲು ಸಾಧ್ಯ. ಇನ್ನು ಕೆಲವುಗಳಿಗೆ ಅರ್ಥ ಬೇಡ. ಅದು ನೋಡುಗನಿಗೆ ಬಿಟ್ಟಿದ್ದು. ಇದರಂತೆ ಅಮೂರ್ತ ಚಿತ್ರವನ್ನು

ರಚಿಸಲು ಕಷ್ಟಸಾಧ್ಯ. ನಮ್ಮ ಚಿತ್ರದಲ್ಲಿ ಈ ಮೊದಲೇ ಮಾಡಿದ್ದ ಆಕೃತಿಗಳು ಮಾಡಿದರು ಕಷ್ಟಸಾಧ್ಯ ಎನ್ನುವ ಇವರು ಈ ಚಿತ್ರದಲ್ಲಿ ಪರಿಚಿತ ಲೋಕದ ಆಕೃತಿಗಳು ಕಾಣಿಸುವುದಿಲ್ಲ. ವೇಗದ ಪಟಗಳು ಅಲ್ಲಲ್ಲಿ ಚದುರಿದ ಎಲೆಗಳು ಇರಬಹುದು ಕ್ಯಾನ್‌ವಾಸ್‌ನ ಹಿಂಭಾಗದಲ್ಲಿ ವರ್ಣವನ್ನು ಸಮಾನಾಂತರದಲ್ಲಿ ಹಚ್ಚಲಾಗಿದೆ. ಪ್ರಕೃತಿಯ ಒಂದು ನೋಟ ನೀರಿನ ಮೇಲೆ ತೇಲುವ ಎಲೆಗಳು ಎನ್ನಲೂಬಹುದು. ಗಂಭೀರವಾದ ರಚನೆಯಲ್ಲಿ ಪ್ರೌಢಿಮೆಯನ್ನು ಮೆರೆಸುವ ಗುಣ ಹೊಂದಿರುವವು. ಈ ಅಮೂರ್ತ ಕೃತಿ ನೋಡುಗರ ಹಾಗೂ ನಮ್ಮ ಗಮನವನ್ನು ಸೆಳೆಯುವಲ್ಲಿ ಸಂಶಯವಿಲ್ಲ. ಈ ಕೃತಿಯಲ್ಲಿ ಹೆಚ್ಚು ನೀಲಿ ಮತ್ತು ಹಸಿರು ವರ್ಣವನ್ನು ಬಳಸಲಾಗಿರುತ್ತದೆ.

**ಚಿತ್ರ–೧೮**

ಈ ಕಲಾಕೃತಿ ಮೊದಲಿಗೆ ಸ್ಟ್ರಚ್ಚರ್ ವರ್ಣಗಳಿಂದ ತೆಗೆದುಕೊಂಡು ನಂತರ ಅದನ್ನು ಆಕೃತಿಗೊಳಿಸಲಾಗಿದೆ. ನೋಡಿದ ತಕ್ಷಣ ನಮ್ಮ ಮನಸ್ಸಿಗೆ ಹಲವು ಬಗೆಯ ದೃಶ್ಯಾನುಭವವನ್ನು ನೀಡುವ ಇಲ್ಲಿನ ಆಕೃತಿಗಳು ನಿಂತಿರುವ ಬಂಡೆಗಳಂತೆ ಒಂದು ಅಮೂರ್ತ ಚಿತ್ರ ಕಲ್ಪಿಸುವ ವಿವಿಧ ಅರ್ಥ ಸಾಧ್ಯತೆಗಳನ್ನು ಕಾಣಬಹುದು. ಈ ಕಲಾಕೃತಿಯಲ್ಲಿಯೇ ಕಪ್ಪು ಮತ್ತು ಹಸಿರು ಬಹು ಹೆಚ್ಚು ಬಳಕೆಯಾಗಿದ್ದು ಹಳದಿ ಮತ್ತು ಕೆಂಪು ಬಣ್ಣಗಳು ಕಣ್ಣಿಗೆ ದೈವ ಭಾವವನ್ನು ಮೂಡಿಸುತ್ತದೆ. ಇವುಗಳನ್ನು ಇನ್ನೊಂದು ದೃಷ್ಟಿಯಲ್ಲಿ ವೀರಗಲ್ಲುಗಳ ಅನುಭವ, ದೈವಕಲ್ಲುಗಳು ಅನುಭವವನ್ನು ದೃಷ್ಟಿಯಿಂದಲೂ ಈ ಕೃತಿ ಗಮನಾರ್ಹವೆನಿಸುವ ಲಕ್ಷಣಗಳನ್ನು ಹೊಂದಿದೆ. ಚಿತ್ರದಲ್ಲಿ ಆಕೃತಿಗಳನ್ನು ಮತ್ತೆ ಮತ್ತೆ ನೋಡಬೇಕು ಇವು ಏನಿರಬಹುದು? ಇದರ ಅರ್ಥವೇನು? ಎನ್ನುವ ಹಲವಾರು ಪ್ರಶ್ನೆಗಳು ನೋಡುಗರಿಗೆ ಎದುರಾಗಿರುತ್ತದೆ. ಹೀಗೆ ಪ್ರಶ್ನೆಯನ್ನು ಹುಟ್ಟಿಸುವ ಜೊತೆಗೆ ಸಂಯೋಜನೆಯ ದೃಷ್ಟಿಯಿಂದಲೂ ಈ ಕೃತಿ ಗಮನಾರ್ಹವನಿಸುವ ಲಕ್ಷಣಗಳನ್ನು ಹೊಂದಿದೆ. ಪಾರದರ್ಶಕ ತಂತ್ರವನ್ನು ಉಪಯೋಗಿಸಿ ಮಾಡಿದ ಚಿತ್ರ–ಕೇವಲ ರೂಪಾಂಶಗಳ ಪ್ರಾಬಲ್ಯದಿಂದ ಕೂಡಿದ್ದು ವರ್ಣಗಳು ಪ್ರಕೃತಿ ದೇವತೆಯ ರೂಪ, ತಾಯಿ, ಎನ್ನುವುದನ್ನು ನಾವು ಗಮನಿಸಬಹುದು. ಇವರ ಈ ಎಲ್ಲ ಚಿತ್ರಗಳು ಹಸಿರು ಸಮೃದ್ಧಿಯಿಂದ ಕೂಡಿದ ಕೃತಿಗಳು. ನಮ್ಮ ಪ್ರಕೃತಿಯ ವರ್ಣವನ್ನು ಅಂದರೆ ಹಸಿರು ಬಣ್ಣ ನಮ್ಮ ನಿತ್ಯ ಜೀವನದಲ್ಲಿ ಕ್ಷಣ ಕ್ಷಣದಲ್ಲಿ ನೋಡುವಂತಹ ವರ್ಣ ಮನುಷ್ಯನಿಗೆ ಅತ್ಯವಶ್ಯಕವಾಗಿ ಬೇಕಾದ ಪ್ರಕೃತಿಯ ಕುರುಹುಗಳನ್ನು ತಮ್ಮ ಕಲಾಕೃತಿಯಲ್ಲಿ

ಅಮೂರ್ತ ರೂಪದಲ್ಲಿ ಬಳಸಿ ರಚಿಸಿದ ಚಿತ್ರದಲ್ಲಿ ಭಕ್ತಿಯ ಗೌರವವನ್ನು ಸೂಚಿಸುವ ಚಿತ್ರ ಇದಾಗಿದೆ.

**ಚಿತ್ರ–೧೯**

ಕೃಷ್ಣಸೆಟ್ಟಿಯವರ ಕಲಾಕೃತಿಗಳಲ್ಲಿ ಶೀರ್ಷಿಕೆ ರಹಿತ ಕಲಾಕೃತಿಗಳೇ ಹೆಚ್ಚು ಕಾಣಸಿಗುತ್ತವೆ. ಶೀರ್ಷಿಕೆ ಇಲ್ಲದೆ ಇದ್ದರೂ ಒಂದು ರೀತಿಯ ಅನುಭವವನ್ನು ಕೊಡುವ ಕೃತಿ ಇದಾಗಿದೆ. ಕಲಾಕೃತಿಗಳು ಯಾವುದೇ ಶಬ್ದಕ್ಕೂ ನಿಲುಕಲಾರವು. ಒಂದು ವೇಳೆ ಶಬ್ದಕ್ಕೂ ನಿಲುಕಿ ಅದಕ್ಕೆ ಕಲ್ಪಿಸಿಕೊಟ್ಟರೂ ಅದು ಗೌಣ ಆಗುತ್ತದೆ. ಇಲ್ಲಿ ಅಮೂರ್ತ ಕಲೆಯಲ್ಲಿ ಅನುಭವವೇ ಪ್ರಧಾನ ಆಳ, ಹರಿವನ್ನು ಮೂಡಿಸುತ್ತದೆ. ಈ ಹಿಂದಿನ ಚಿತ್ರದಲ್ಲಿ ದೇವಬಟ್ಟೆ, ದೈವಕಲ್ಪನೆಯನ್ನು ಸೃಷ್ಟಿಸಿದ ಕಲಾಕೃತಿ ಈಚಿನಲ್ಲಿ ಅದೇ ಕಲ್ಲುಗಳೆನಿಸುವ ಸಣ್ಣ ಸಣ್ಣ ಕಲ್ಲುಗಳನ್ನು ದೂರವಿಟ್ಟು ಒಂದಕ್ಕೊಂದು ಸಂಬಂಧವೆನ್ನುವ ಹಾಗೆ ಗೆರೆಗಳನ್ನು ಮೂಡಿಸಿದ್ದಾರೆ. ಅದೇ ರೀತಿಯ ವರ್ಣದ ಬಳಕೆ ಅದರ ಹಿಂಬದಿಯಲ್ಲಿ ಸಮತಟ್ಟಾದ ವರ್ಣ ಕಪ್ಪು ಹಾಗೂ ಮೇಲ್ಭಾಗದಲ್ಲಿ ಸಿಮೆಂಟಿನ ಬಣ್ಣಗಳನ್ನು ಕಾಣಬಹುದು. ಪೂರ್ಣದ ಸಿದ್ಧತೆ, ಅನುಭವ, ರೂಢಿಗತ, ಭಾವನೆಗಳ ಸಂಬಂಧ ಕಡಿಮೆಯಾಗುತ್ತ ಹೋಗಿದೆ. ಒಂದೇ ರೀತಿಯ ಬಣ್ಣ, ಛಾಯೆ, ಆಕೃತಿಗಳು ಬೇರೆ ಬೇರೆ ಅನುಭವ ನೀಡುತ್ತದೆ. ಬಣ್ಣಗಳ ವೈವಿಧ್ಯತೆ ತೀವ್ರ ಚಾಂಚಲ್ಯ ಅನುಭವಾಗುತ್ತದೆ. ಪ್ರಧಾನವಾಗಿ ಕಪ್ಪು ಬಣ್ಣದ್ದು, ನಂತರದಲ್ಲಿ ಸ್ಕೆಚರ್ ತೆಗೆದ ಕೆಲವು ಕಡೆ ಬಂಡೆಗಳ ಆಕಾರದ ಕೃತಿಗಳು ಕಣ್ಣುಗಳಿಗೆ ಕುಕ್ಕುವ ಎರಡು ಗೆರೆಗಳು, ಒಟ್ಟು ನೋಟದ ಏಕತಾನತೆ ಮುರಿಯಲು ಮಾತ್ರ ಬೇಕು. ದ್ವಿವರ್ಣದ ಪ್ರಾಬಲ್ಯ ಹಾಗೂ ಅಲ್ಲಿ ಮಿಶ್ರವರ್ಣಗಳು ನಿರ್ದಿಷ್ಟ ಅಂಚುಗಳ ಸೀಮೆಗೆ ಸ್ಥಿರಸ್ವರೂಪಗಳಿಂದ ಈ ಸಂಯೋಜನೆಯ ಚೌಕಟ್ಟಿನಲ್ಲಿ ದೃಷ್ಟಿ ಕೇಂದ್ರೀಕೃತವಾಗುತ್ತದೆ. ಗೆರೆ, ಗುರುತು, ಆಕಾರಗಳು ಅದರದೇ ಆದ ಸ್ವಾತಂತ್ರ್ಯ ಅಸ್ತಿತ್ವ ಲಕ್ಷಣಗಳನ್ನು ಹೊಂದಿದೆ. ಈ ಕೃತಿಯಲ್ಲಿ ಹೆಚ್ಚು ಕಡುಹಸಿರು ಮತ್ತು ಸಿಮೆಂಟ್ ಬಣ್ಣಗಳನ್ನು ಬಳಸಿರುತ್ತಾರೆ.

**ಚಿತ್ರ–೨೦**

ಈ ಕಲಾಕೃತಿಯನ್ನು ಗಮನಿಸಿದಾಗ ಕೌಟುಂಬಿಕ ಜೀವನದ ದುಃಖ ಹೊಂದಿದ ಕಲಾಕೃತಿ ಎಂದೆನಿಸುತ್ತದೆ. ಶೀರ್ಷಿಕೆ ಇಲ್ಲದ ಈ ಕಲಾಕೃತಿ ನೋಡಿದಾಗ ನನಗೆ ಅನಿಸಿದ ಅಭಿಪ್ರಾಯದಂತೆ ನಿಸರ್ಗನಿಯಮ ಸಾವು ಎನ್ನುವಂತಿದೆ. ಕಲಾಕೃತಿ ಹಿನ್ನೆಲೆಯಲ್ಲಿ

ಸಮೃದ್ಧಿ ಯಾದ ಹಸಿರು, ಮನುಷ್ಯನಾಕೃತಿ ಎನಿಸುವ ಆಕಾರಗಳು ಕಂದು ಹಾಗೂ ಕೆಂಪು ಬಣ್ಣದಲ್ಲಿದ್ದು ಮುಂದೆ ಒಂದು ಬಟ್ಟೆಯಲ್ಲಿ ಮುದುಡಿದ ಸಣ್ಣ ಮನುಷ್ಯನ ಆಕಾರ ಅದರಲ್ಲಿ ಹಿನ್ನೆಲೆಯಲ್ಲಿ ಹಾಗೂ ಮನುಷ್ಯರಲ್ಲಿ ಇರುವ ಬಣ್ಣಗಳು ಎಲ್ಲವನ್ನು ಕಾಣಬಹುದು. ಕೆಲವೆ ವರ್ಣಗಳಿಂದ ರಚಿತವಾದ ಕಲಾಕೃತಿ ಅಪರಿಚಿತ ಲೋಕದ ಆಕೃತಿಗಳು ದುಃಖದಿಂದ ಕೂಡಿದ ಒಂದು ಗಾಂಭೀರ್ಯತೆಯುಳ್ಳ ಚಿತ್ರ ಇದಾಗಿದೆ. ಕೌತುಕಮಯ ಅನುಭವಗಳನ್ನು ನೀಡುವ ಚಿತ್ರ ಅಪರಿಚಿತವಿದ್ದರೂ ಅಪರಿಚಿತ ಲೋಕದ ಆಕೃತಿಗಳನ್ನು ನಮ್ಮ ಮುಂದೆ ತೆರೆದಿಡುತ್ತದೆಯಲ್ಲದೇ ಆಲೋಚನೆಗಳು, ಗಾಢವಾದ ನಂಬಿಕೆಗಳನ್ನು ಹಾಗೂ ಅಪನಂಬಿಕೆಗಳನ್ನು ಮೂಡಿಸುವ ಈ ಕಲಾಕೃತಿಯಲ್ಲಿ ಮಧ್ಯೆ ಒಂದು ಗೆರೆಯನ್ನು ಆಕರ್‌ಎಲ್ಲೋ ವರ್ಣದಿಂದ ಎಳೆಯಲಾಗಿದೆ. ಮುಖ್ಯವಾಗಿ ಈ ಕೃತಿಯನ್ನು ಎರಡು ಕೋನಗಳಿಂದ ನೋಡಬಹುದು. ಹಲವು ಲಯಗಳ ಸಂಯೋಗವನ್ನು ಮಾಡುವ ಪ್ರಯತ್ನ ಮಾಡಿದ್ದರೆ ಮನುಷ್ಯ ಕೃತಿಯಲ್ಲಿ ಬಿಂದು ಸ್ಪಷ್ಟವೆನಿಸುವ ಕೃತಿಯಲ್ಲಿ ಕೆಂಪಿನ ರಕ್ತಗೆಂಪಿನ ಬಟ್ಟೆ ಎನಿಸುವ ಆದರೆ ಬಟ್ಟೆ ಅಲ್ಲದೆ ವಸ್ತು ನೋಡುಗರ ಕಣ್ಣುಗಳನ್ನು ಸೆಳೆಯುತ್ತವೆ. ಮೊದಲ ನೋಟಕ್ಕೆ ನಮ್ಮ ಗಮನ ಆ ಕೆಂಪು ಬಣ್ಣದ ಮೇಲೆ ಬೀಳುತ್ತದೆ. ಒಟ್ಟಾರೆಯಲ್ಲಿ ಅಮೂರ್ತ ಕಲೆಯ ಅಂಶಗಳೂ ಎಷ್ಟು ಕಾಣಿಸುತ್ತವೆಯೋ ಅಷ್ಟು ಇಲ್ಲಿ ಗಾಂಭೀರ್ಯತೆಯನ್ನು ಕಾಪಾಡಬಹುದು.

**ಚಿತ್ರ-೨೧**

ಇದು ಸಹ ಅಮೂರ್ತ ಚಿತ್ರವಾಗಿದ್ದು ಚಿತ್ರದಲ್ಲಿ ಪ್ರಕೃತಿಯ ಹಲವಾರು ಆಯಾಮಗಳು ಗೋಚರವಾಗುತ್ತವೆ. ಮುಳ್ಳು, ಮರ, ಬಂಡೆ, ಬಟ್ಟೆ ಕ್ಯಾನ್ವಸ್‌ನ ಮೂಲೆಗಳಲ್ಲಿ ಬೆಟ್ಟದಂತೆ ತೋರುತ್ತದೆ. ಇಡೀ ಕ್ಯಾನ್ವಸ್ ಅದೇ ಇಂದಿನ ಕಲಾಕೃತಿಯಂತೆ ಸ್ವಚ್ಛರ್ ಸ್ಟೈಲಿನಲ್ಲಿದ್ದು ನಂತರ ಆಕರ್‌ಎಲ್ಲೋ ಹಾಗೂ ಕಪ್ಪು ವರ್ಣದಿಂದ ಸ್ಕೇಚ್ ಮಾಡಿ ಕೊಂಡು ಕೆಲವು ಅಮೂರ್ತ ವಸ್ತುಗಳಿಗೆ ಒತ್ತು ನೀಡಲಾಗಿದೆ. ಚಿತ್ರಕೃತಿಯ ಎಡಬದಿಯಲ್ಲಿ ಕೆಂಪುಗೆರೆಯನ್ನು ಕಾಣಬಹುದು. ಇದರ ಅರ್ಥ ಕಲಾವಿದ ನೋಡುಗನಿಗೆ ಪ್ರಶ್ನೆ ಉಳಿಸುವಂತಿದೆ. ಆದಿಮಾನವನ ಆಯುಧಗಳಂತೆ ಕೆಲವು ವಸ್ತುಗಳು ಕಾಣುತ್ತವೆ. ಹಲವಾರು ಅನುಭವಗಳನ್ನು ನೀಡುತ್ತದೆಯಲ್ಲದೆ ಇಲ್ಲಿರುವ ವಸ್ತುಗಳು ದೃಶ್ಯಾನುಭವವನ್ನು ನೀಡುತ್ತದೆ. ಮಹಾದಾರ್ಶನಿಕ ಪ್ಲೇಟೋನ ಶಿಷ್ಯನಾಗಿದ್ದ ಅರಿಸ್ಟಾಟಲ್(ಕ್ರಿ.ಪೂ. ೩೮೦) ಕಲೆಯ ಉಗಮ, ಸ್ವರೂಪ ಹಾಗೂ ಕಾರ್ಯದ ಬಗ್ಗೆ ಹೇಳುತ್ತಾ "ಸೃಷ್ಟಿ ಸೌಂದರ್ಯಕ್ಕೆ ಪೂರಕವಾಗುವ ಅಥವಾ

ಅದರ ಸೌಂದರ್ಯಾನುಭೂತಿಗೆ ಹತ್ತಿರವಾಗುವ ಮಾನವ ನಿರ್ಮಿತ ಕಲಾಸೃಷ್ಟಿ ಶುಭ ಗ್ರಹ್ಯವಾದದ್ದು ಆದರೆ ಕೆಳದರ್ಜೆಯ ವಸ್ತುಗಳು ಉತ್ತಮವಾದುದ್ದನ್ನು ಅನುಕರಣೆ ಮಾಡಿದ್ದಾರೆ. ಅಂತಹ ಉತ್ತಮವಾದುದ್ದರ ಗುಣವಿಶೇಷವನ್ನು ತನ್ನಲ್ಲಿಯೇ ಪ್ರತಿಬಿಂಬಿಸಿದರೆ ಅದು ಕಲಾಕೃತಿಯಾಗುತ್ತದೆ[೨೭] ಎಂಬ ಅಂಶವನ್ನು ಗಮನಿಸಿದರೆ ಬಹುಶಃ ಇಲ್ಲಿ ನೀಡುವುದರ ಜೊತೆಗೆ ತನ್ನ ಕಲಾಕೃತಿಯಲ್ಲಿಯೂ ಕಾಣಬಹುದಾಗಿರುತ್ತದೆ. ಎಂಬುದನ್ನು ಮನಗಾಣಬೇಕು. ಕಲಾಕೃತಿಯ ಹಿಂಬದಿಯಲ್ಲಿ ಎಲ್ಲೋ ಆಕಾರ್ ಮತ್ತು ಕಡುಹಸಿರು ಬಣ್ಣವನ್ನು ಬಳಸಿರುವುದಕ್ಕೆ ಅಲ್ಲಿನ ಸ್ಟ್ರಕ್ಚರ್ ಸುಂದರವಾಗಿ ಕಾಣಲು ಸಾಧ್ಯವಿರಬಹುದು.

**ಮಿಶ್ರ ಮಾಧ್ಯಮದ ಕಲಾಕೃತಿಗಳು**

ವಿವಿಧ ವಸ್ತುಗಳನ್ನು ಬಳಸಿ ಕಲಾಕೃತಿಗಳನ್ನು ರಚಿಸಿರುವುದನ್ನೇ ಪ್ರಮುಖವಾಗಿ ಮಿಶ್ರಮಾಧ್ಯಮವೆಂದು ಕರೆದಿರುವುದು ಒಂದಾದರೆ ಮತ್ತೊಂದು ಅಕ್ರಾಲಿಕ್ ಮತ್ತು ಪೋಸ್ಟರ್ ವರ್ಣಗಳನ್ನು ಬಳಸಿರುವುದು ಕೂಡ ವಿಶೇಷವೆನ್ನಬಹುದು. ಈ ಕೆಳಗೆ ಕಂಡುಬರುವ ಚಿತ್ರ ಕೃತಿಗಳೆಲ್ಲವೂ ಆಳತೆಯಲ್ಲಿ ಒಂದೇ ಇದ್ದು, ವಿಷಯಗಳಲ್ಲಿ ಮಾತ್ರ ಭಿನ್ನವಾಗಿರುತ್ತವೆ. ಆ ಕಾರಣವಾಗಿಯೇ ಕಲಾಕೃತಿಗಳ ವಿಮರ್ಶೆಯಲ್ಲಿ ಕಲಾಕೃತಿಗಳ ವಸ್ತುಸ್ಥಿತಿಯನ್ನು ಮಾತ್ರ ತಿಳಿಸಲಿಚ್ಚಿಸಿರುತ್ತೇನೆ. ಕಲಾಕೃತಿಗಳ ಅಳತೆ ಮೂರು ಅಡಿ ಆಗಲ, ಮೂರುವರೆ ಅಡಿ ಉದ್ದ ಇರುತ್ತದೆ. ಕೆಲವೊಂದು ಚಿತ್ರಕೃತಿಗಳಿಗೆ ಮಾತ್ರ ಶೀರ್ಷಿಕೆಯನ್ನು ಕೊಟ್ಟಿರುತ್ತಾರೆ ಅದನ್ನೇ ಇಲ್ಲಿ ಬಳಸಿ ಅವುಗಳ ವಸ್ತು ಸ್ಥಿತಿಯನ್ನು ಹೇಳಲಾಗಿದೆ.

**ಚಿತ್ರ-೧**

ಪ್ರಕೃತಿದತ್ತವಾಗಿ ಲಭ್ಯವಾಗುವ ಕೆಲವು ವಸ್ತುಗಳನ್ನು ಬಳಸಿದ ಚಿತ್ರಕಲಾಕೃತಿ ಇದಾಗಿದೆ. ಮಿಶ್ರ ಮಾಧ್ಯಮದಲ್ಲಿಯೇ ವಿಭಿನ್ನವಾದ ಮೂರ್ತ ಚಿತ್ರವಿದು. ಈ ಚಿತ್ರದಲ್ಲಿ ಗ್ಲೌಸ್ ಹಾಗೂ ನವಿಲುಗರಿಯನ್ನು ಪ್ರಧಾನವಾಗಿ ಕಾಣಿಸುವಂತೆ ಯಥಾವತ್ತಾಗಿ ಹಚ್ಚಲಾಗಿದೆ. ಈ ಎರಡು ವಸ್ತುಗಳ ಮೇಲೆ ಬಕೇಟ್‌ನಂತೆ ಕಾಣಿಸುವ ಚಿತ್ರದಲ್ಲಿ ಒಂದು ಮೀನು ಸತ್ತಿರುವುದನ್ನು ಗಮನಿಸಬಹುದು. ಕ್ಯಾನ್ವಸ್ ಸುತ್ತಲೂ ಒಂದು ರೀತಿಯ ಆಕೃತಿಗಳು ಅಸ್ಪಷ್ಟವಾಗಿ ಗೋಚರ ವಾಗುವಂತೆ ಕಂಡುಬರುತ್ತಿದ್ದು, ಹಲವು ಬಗೆಯ ದೃಶ್ಯಾನುಭವಗಳನ್ನು ನೀಡುವ ಈ ಚಿತ್ರದಲ್ಲಿ ಮಿತವಾಗಿ ಹಾಗೂ ಗಾಢವಾಗಿ ದುಡಿಸಿಕೊಂಡ ವರ್ಣಗಳು ಸಂಯೋಜನೆಯ ಪಟ್ಟಿಕೆಯಲ್ಲಿ ನೋಡುಗನ ಕಣ್ಣಿಗೆ ಇದು ಅರ್ಥವನ್ನು ಹುಡುಕುವಂತೆ ಮಾಡುತ್ತದೆ. ಮೀನನ್ನು ಹೆಣ್ಣಿಗೆ ಹೋಲಿಸುವ ಕಲಾವಿದ ಚಿ.ಸು.ಕೃಷ್ಣಸೆಟ್ಟಿ ಇದಕ್ಕೆ ಯಾವುದೇ ವಿವರಣೆಗಳನ್ನು ನೀಡಲಾರರು. ಏಕೆಂದರೆ ಅದು ಅವರವರ ಭಾವಕ್ಕೆ ಬಿಟ್ಟಿದ್ದು

೨೭. ಚಿ.ಸು.ಕೃಷ್ಣಸೆಟ್ಟಿ : ದೃಶ್ಯಕಲೆ ಎಂದರೇನು? ಪು : ೧೧

ಎನ್ನುವುದು ಅವರ ವಾದ. ಇದನ್ನು ಸೂಕ್ಷ್ಮವಾಗಿ ಗಮನಿಸಿದ ಮನುಷ್ಯ ತನ್ನ ಕೈಗೆ ತಾನೇ ಗ್ಲೌಸ್ ಹಾಕಿಕೊಂಡು ಹೆಣ್ಣನ್ನು(ಮೀನು) ಹಿಂಸೆಗೈಯುವಂತೆ ದೃಶ್ಯ ಗೋಚರವಾಗುತ್ತಿದೆ. ಮತ್ತೊಂದು ಅರ್ಥದಲ್ಲಿ ಹೆಣ್ಣನ್ನು ಬಲವಂತಿಕೆಯಿಂದ ಲೈಂಗಿಕವಾಗಿ ಬಳಸಿಕೊಳ್ಳುವುದರ ಅರ್ಥವನ್ನು ಕೊಡುವಂತಿದೆ. ಇನ್ನೊಂದು ದೃಷ್ಟಿಯಿಂದ ಗಮನಿಸಿದರೆ ಈ ಪ್ರಪಂಚದಲ್ಲಿ ಹೆಣ್ಣಿನ ಶೋಷಣೆಯ ಬಗ್ಗೆ ಸಾರುವ ಕಲಾಕೃತಿಯಂತೆ ಕಾಣುತ್ತದೆ. ಇಲ್ಲಿ ಕೆಂಪು ವರ್ಣವನ್ನು ರಕ್ತದಂತೆ ತೋರಿಸಿರುವುದು ನೈಜತೆಗೆ ಹತ್ತಿರವಾಗಿರುತ್ತದೆ. ಹಾಗೂ ನೀಲಿವರ್ಣವನ್ನು ಹಾಗೂ ಕಪ್ಪು ಮಿಶ್ರಿತ ವರ್ಣಗಳನ್ನು ಕಲಾಕೃತಿಗಳ ಹಿನ್ನೆಲೆಯಲ್ಲಿ ಬಳಸಲಾಗಿದೆ. ಒಟ್ಟಾರೆಯಾಗಿ ಹಲವಾರು ಪ್ರಶ್ನೆಗಳನ್ನು ಹುಟ್ಟುಹಾಕುವ ಕಲಾಕೃತಿಗಳ ಸಾಲಲ್ಲಿ ಇದೂ ಒಂದಾಗಿದೆ.

**ಚಿತ್ರ-೨**

ಈ ಕಲಾಕೃತಿಯಲ್ಲಿಯೂ ಸಹ ಹಿಂದಿನ ಕಲಾಕೃತಿಯಂತೆ ಗ್ಲೌಸ್ ಮತ್ತು ಸತ್ತಿರುವ ಮೀನಿನ ಅಸ್ಥಿಪಂಜರವಿರುವುದನ್ನು ಕಾಣಬಹುದು. ವಿಶೇಷವಾಗಿ ಇದರಲ್ಲಿ ಕೆಲವು ವಸ್ತುಗಳನ್ನು ಯಥಾವತ್ತಾಗಿವಾಗಿ ಬಳಸಿರುವುದು ಕಾಣುತ್ತವೆ. ಆ ಕಾರಣಕ್ಕಾಗಿಯೇ ಈ ಕೃತಿಯನ್ನು ಮಿಶ್ರಮಾಧ್ಯಮ ಎಂದು ಕರೆದಿರುವುದು. ಈ ಕ್ಯಾನ್ವಸ್ ಮೇಲೆ ಮುಖ್ಯವಾಗಿ ಎಳ ಅಳತೆಯ ಸಾದಾ ರಟ್ಟು ಅದರ ಮೇಲೆ ನೀಲಿ ವರ್ಣದ ಗ್ಲೌಸು, ಅದರ ಮೇಲೆ ಹಳದಿ ಮತ್ತು ಕೆಂಪು ಪಟ್ಟಣಗಳಂತಿರುವ ಡಬ್ಬಿ ಅದರಲ್ಲಿ ಯಾವುದೋ ವಸ್ತು ಇರುವುದು ಕಾಣುತ್ತಿದೆ. ಇದರ ಸುತ್ತಾ ನಾಲ್ಕು ಮೂಲೆಗೊಂದರಂತೆ ಒಂದೊಂದು ಬೀಗದ ಕೀಗಳನ್ನು ಅಂಟಿಸಲಾಗಿದೆ. ಅಂಟಿಸಿದ ರಟ್ಟಿನ ಕೆಳಭಾಗದಲ್ಲಿ ಕೆಂಪು ಬಟ್ಟೆಯ ವಸ್ತ್ರ ಅದರ ಮಧ್ಯ ಒಂದು ಪುಸ್ತಕದ ಮುಖಪುಟವನ್ನು ಹಾಗೇ ಇರುವಂತೆ ಕಿತ್ತು ಹಚ್ಚಲಾಗಿದೆ. ಅದರಕ್ಕೆ ಕಪ್ಪು ವರ್ಣಗಳಿಂದ ಬಾರ್ಡರ್ ಹಾಕಲಾಗಿರುತ್ತದೆ. ಅದೇ ಕೆಂಪು ವಸ್ತ್ರದಲ್ಲಿ ಮೀನಿನ ಅಸ್ಥಿಪಂಜರವನ್ನು ಯಥಾವತ್ತಾಗಿ ಅಂಟಿಸಲಾಗಿದೆ. ಇದರ ಹಿನ್ನೆಲೆಯಲ್ಲಿ ಹಲವು ಆಕೃತಿಗಳಿರುವುದನ್ನು ಕಾಣಬಹುದು ಅವು ಅಮೂರ್ತ ರೂಪದಲ್ಲಿ ಚಿತ್ರಿಸಿ ಕೆಲವು ವರ್ಣವನ್ನು ಮೇಲಿನಿಂದ ನೀರಿನಂತೆ ಹರಿಸಲಾಗಿದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಚಿತ್ರದೊಳಗೆ ಒಂದು ಚೌಕಟ್ಟು, ಆ ಚೌಕಟ್ಟನ್ನು ವಿಂಗಡಿಸುವುದು ದಾರಿ ದಾರಿಯ ಕುರುಹುಗಳು ಅವಶೇಷಗಳನ್ನು ಪುನರ್ ನಿರ್ಮಿಸುವ ಆಶಯ ಇಲ್ಲಿನ ಅಸ್ಪಷ್ಟ ಆಕೃತಿಗಳಲ್ಲಿ ಒಂದು ಅಮೂರ್ತ ಚಿತ್ರಕ್ಕೆ ವೈವಿಧ್ಯಮಯ ಕಲ್ಪನೆ. ಇದು ಇಲ್ಲಿನ ಕಲಾತ್ಮಕ ಆಶಯವನ್ನಿಟ್ಟುಕ್ಕೊಂಡು ಚಿತ್ರಿಸಿ ಅದರ ಮೇಲೆ ನೈಜವಾಗಿ ಸಿಗುವ ವಸ್ತುಗಳನ್ನು ಬಳಸಿ ತನ್ನದೇ ಆದ ಶೈಲಿಯಲ್ಲಿ ಕಲಾಕೃತಿ ರಚಿಸಿದ್ದಾರೆ ಚಿ.ಸು.ಕೃಷ್ಣಸೆಟ್ಟಿ. ಇದೊಂದು ಆಮೂರ್ತ ಕಲಾಕೃತಿಯೆಂದು ತೋರಿದರೂ ಹಲವು ಪ್ರಶ್ನೆಗಳನ್ನು ಮೂಡಿಸುವ ಕಲಾಕೃತಿಯಾಗಿರುತ್ತದೆ ಎಂಬುದಂತೂ ಸ್ಪಷ್ಟ.

**ಚಿತ್ರ–೩**

ಅಮೂರ್ತ ಚಿತ್ರವೆಂಬಂತೆ ಮೊದಲು ಚಿತ್ರಿಸಿ, ನಂತರ ನೋಡುಗನಿಗೆ ಹಲವು ಭಾವನೆಗಳನ್ನು ಮೂಡಿಸುವಂತೆ ಈ ಕಲಾಕೃತಿಯನ್ನು ಚಿತ್ರಿಸಲಾಗಿದೆ. ಇದರಲ್ಲಿ ಯಾವುದೇ ವರ್ಣಗಳು ದಟ್ಟವಾಗಿ ಕಂಡು ಬಂದಂತೆ ಕಾಣುವುದಿಲ್ಲ. ಕೆಲವು ವರ್ಣಗಳು ನೇರವಾಗಿ ಅನಿಸಿದವಾದರೂ ಅವು ಕೂಡ ಇರುವ ವರ್ಣಗಳ ಜೊತೆ ಹೊಂದಿಕೊಂಡು ಹೋಗುವ ಮಟ್ಟಕ್ಕೆ ಸಂಯೋಜಿಸಿದ್ದಾರೆ ಕಲಾವಿದರು. ಇದರಲ್ಲಿ ಬಹು ಮುಖ್ಯವಾಗಿ ಅನುಭವ ಎದ್ದು ಕಾಣುತ್ತಿದ್ದು, ಅದು ಸಂಯೋಜನೆಯಲ್ಲಿರಬಹುದು, ವರ್ಣಗಳನ್ನು ಹೊಂದಿಸಿರುವುದರಲ್ಲಿರಬಹುದು, ವಸ್ತುಗಳನ್ನು ಜೋಡಿಸಿರುವ ನೋಟವಿರಬಹುದು, ಒಟ್ಟಾರೆ ವಸ್ತುಗಳಲ್ಲಿನ ಸಂಬಂಧದ ತಿರುವನ್ನು ಗಟ್ಟಿಗೊಳಿಸುವತ್ತ ಹೆಜ್ಜೆ ಇಟ್ಟಿರುವಂತೆ ಭಾಸವಾಗುತ್ತಿದೆ. ಅಷ್ಟರ ಮಟ್ಟಿಗೆ ಸಂಯೋಜಿಸಲಾಗಿದೆ. ಕಲಾಕೃತಿಯನ್ನು ನೊಡಿದ ತಕ್ಷಣ ತಿರುವಿ ಹಾಕಿರಬಹುದೇನೋ ಎಂಬ ಊಹೆ ಸಾಮಾನ್ಯವಾಗಿ ತನ್ನ ಮನಸ್ಸೊಳಗೆ ಹರಿದಾಡುವಂತೆ ಕಂಡುಬಂದರೂ ಕಲಾವಿದ ಇಲ್ಲಿ ಅಸ್ಪಷ್ಟತೆಯಲ್ಲಿ ತನ್ನದೇ ಭಾವನೆ, ನನ್ನದೇ ಕಲ್ಪನೆ ಎಂಬಂತೆ ನೊಡುಗ ತನ್ನ ಅಭಿಪ್ರಾಯವನ್ನು ಗೌಣವಾಗಿಯೇ ಮನಸ್ಸಿನಲ್ಲಿ ಮಾತಾಡಿ ಮುಂದಿನ ಕಲಾಕೃತಿಯತ್ತ ಮುಖಮಾಡಬೇಕು ಅಷ್ಟರ ಮಟ್ಟಿಗೆ ಕಲಾಕೃತಿಯನ್ನು ಸಂಯೋಜಿಸಿದ್ದಾರೆ ಚಿ.ಸು.ಕೃರವರು.

ಈ ಕಲಾಕೃತಿಯಲ್ಲಿ ಮುಖ್ಯವಾಗಿ ಹಿಂದಿನ ಕಲಾಕೃತಿಯಲ್ಲಿ ನೋಡಿದಂತೆ ಮೂರು ಗ್ಲೌಸು ಅವುಗಳನ್ನು ಒಂದರ ಮೇಲೊಂದು ಅಂಟಿಸಿ ವರ್ಣವನ್ನು ಲೇಪಿಸಲಾಗಿದೆ. ಅವುಗಳ ಬೆರಳುಗಳನ್ನು ಭೂಮಿಯ ಕಡೆ ಮುಖಮಾಡಲಾಗಿದ್ದು ಮೇಲ್ಭಾಗದಲ್ಲಿ ಇವುಗಳನ್ನು ಹಿಡಿದಿರುವಂತೆ ಒಂದು ಅಡ್ಡಪಟ್ಟಿಯನ್ನು ಹಾಕಿ ಅದಕ್ಕೆ ಭಾರತದ ದ್ವಜದ ಬಣ್ಣಗಳಾದ ಕೇಸರಿ, ಬಿಳಿ, ಹಸಿರುಗಳನ್ನು ಬಳಿಯಲಾಗಿರುತ್ತದೆ. ಅದರ ಮೇಲೆ ತಲೆ ಎತ್ತಿರುವ ಒಂದು ನಿರೋದ್ ತಟಸ್ಥವಾಗಿರುವಂತೆ ಕಂಡುಬರುತ್ತಿದೆ. ಇನ್ನೂ ಕೆಳಭಾಗದಲ್ಲಿ ಹತ್ತು ನಿರೋಧ್‌ಗಳನ್ನು ಅಂಟಿಸಿ ಅದರ ಮೇಲೆ (ಬಿಳಿ)ಬ್ಯಾಂಡೇಜ್ ಬಟ್ಟೆಯನ್ನು ಅಂಟಿಸಲಾಗಿದೆ. ಒಂದು ಕಡೆ ನಮ್ಮ ಭಾರತ ದೇಶದಲ್ಲಿ ನಿರೋಧ್ ಬಳಕೆ ಬಗ್ಗೆ ಪ್ರಜ್ಞೆ ಮೂಡಿಸುವ ಆರೋಗ್ಯದ ಕಾಳಜಿಯ ಬಗ್ಗೆ ನಿಗಾ ವಹಿಸುವ ಚಿತ್ರಕಲಾಕೃತಿಯಂತೆ ತೋರುತ್ತದೆ. ಈ ಚಿತ್ರದಲ್ಲಿ ಆರೋಗ್ಯದ ಕಾಳಜಿ ಅಥವಾ ನಮ್ಮ ದೇಶದ ಪರಿಸ್ಥಿತಿಯ ಬಗ್ಗೆ ತಿಳಿಹೇಳಲೂ ಚಿತ್ರಿಸಿದ ಕಲಾಕೃತಿ ಎಂದೆನಿಸುತ್ತದೆ. ನಮ್ಮ ಯುವಕ, ಯುವತಿಯರು ನಮ್ಮ ದೇಶದ ಕರ್ತವ್ಯ ಹಾಗೂ ಅವರು ಮಾಡಬೇಕಾದ ದೇಶಭಕ್ತಿ, ಪ್ರೇಮ, ಗೌರವ, ಇತ್ಯಾದಿಗಳನ್ನು ಮರೆತು ಇಂದಿನ ಪೀಳಿಗೆಯಲ್ಲಿ ತಮ್ಮ ಸುಖ ಸಂತೋಷಗಳಲ್ಲಿ ತಲ್ಲೀನರಾಗಿರುವಂತೆ ಹಾಗೂ ಸದ್ಯದ ಪರಿಸ್ಥಿತಿಗೆ ಸುಖ ಜೀವನವನ್ನು ನಡೆಸುವ ನಿಟ್ಟಿನಲ್ಲಿ ದೇಶದ ಆಗುಹೋಗುಗಳನ್ನು ಮರೆತು

ಕೇವಲ ದೈಹಿಕ ಸುಖವನ್ನು ಅನುಭವಿಸುವ ಜನರಿಗೆ ಉತ್ತಮ ಸಂದೇಶವನ್ನು ಸಾರುವ ಚಿತ್ರವಿದಾಗಿದೆ. ಇಂದಿನ ಪೀಳಿಗೆಯ ಮನಸ್ಸಿನ ಸ್ಥಿತಿಗತಿಗಳನ್ನು ಅರಿತು ಚಿತ್ರಿಸಿದ ಚಿತ್ರಕಲಾಕೃತಿ ಇದಾಗಿದೆ ಎಂದು ತೋರುತ್ತದೆ.

**ಚಿತ್ರ–೪**

ಈ ಕೃತಿಯಲ್ಲಿ ಮುಖ್ಯವಾಗಿ ಕ್ಯಾನ್ವಸ್‌ನ ಮೇಲ್ಭಾಗದಲ್ಲಿ ಆರು ಗ್ಲೌಸ್‌ಗಳನ್ನು ಯಥಾವತ್ತಾಗಿ ಅಂಟಿಸಲಾಗಿದ್ದು, ಬಿಳಿ ಬಣ್ಣದ ಗ್ಲೌಸ್‌ಗಳಿಗೆ ನೀಲಿ ಮತ್ತು ಕೆಂಪು ವರ್ಣಗಳನ್ನು ಲೇಪಿಸಿ ಅವುಗಳನ್ನು ಇಲ್ಲಿ ಅಂಟಿಸಲಾಗಿರುತ್ತದೆ.. ಅದರ ಕೆಳಭಾಗದಲ್ಲಿ ಯಥಾವತ್ತಾಗಿ ಶಿಲ್ಪದ ಫೋಟೋವನ್ನು ಅಂಟಿಸಲಾಗಿದ್ದು, ಆ ಶಿಲ್ಪದ ಸೊಂಟಕ್ಕೆ ಚಡ್ಡಿಯನ್ನು ಅಂಟಿಸಿ ಅದರೊಳಗೆ ಒಂದು ಗ್ಲೌಸನ್ನು ಇಳಿಬಿಟ್ಟಿದ್ದಾರೆ ಕಲಾವಿದ ಕೃಷ್ಣಸೆಟ್ಟಿ. ಈ ಕಲಾಕೃತಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪ್ರಾಚೀನ ದೇವಾಲಯಗಳಲ್ಲಿ ಲೈಂಗಿಕ ಶಿಲ್ಪ ಮತ್ತು ಚಿತ್ರಗಳನ್ನು ಕೆತ್ತನೆ ಮಾಡಿದ ಹೆಜ್ಜೆಗುರುತುಗಳು ಸಾಕಷ್ಟಿವೆ, ಆದರೆ ಸಾಮಾಜಿಕ ಮತ್ತು ಸಂಸ್ಕೃತಿಗೆ ಇಂತಹ ದೃಶ್ಯಗಳು ಕೆಟ್ಟಪರಿಣಾಮ ಬೀರುವುದಿಲ್ಲವೆ ಎಂಬುದು ಬಲವಾದ ವಾದವಿರಬಹುದೆಂಬುದು ನಮ್ಮ ಊಹೆಯಷ್ಟೇ. ಯಾಕೆಂದರೆ ಇಲ್ಲಿ ಒಂದು ಶೈವ ದೇವರಿಗೆ ಈ ರೀತಿಯ ಚಟ್ಟಿಯನ್ನು ಹಾಕಿ ಆಧುನಿಕ ಜೀವನ ಶೈಲಿ ಮತ್ತು ಸಂಸ್ಕೃತಿಯ ನಡೆಯನ್ನು ಕಲಾವಿದ ಪ್ರಶ್ನಿಸಿರುವಂತೆ ಈ ಕೃತಿ ಭಾಸವಾಗುತ್ತಿದೆ. ಮೇಲೆ ಗಾಢವಾದ ವರ್ಣವನ್ನು ಹಿಂಬದಿಗೆ ಹಚ್ಚಿ ವಿವಿಧ ವರ್ಣಗಳಿಂದ ಸೋರಿಸಲಾಗಿದೆ. ಅದರ ಹಿಂಬದಿಯಲ್ಲಿ ಇಂದು ಬಣ್ಣದ ಲೋಕವಿರಬಹುದು ಎಂಬಂತಹ ಕಲ್ಪನೆ ಕಲಾವಿದರಲ್ಲಿ ಮತ್ತು ನೋಡುಗನಲ್ಲಿ ಕಾಣಬಹುದು. ಅಷ್ಟರ ಮಟ್ಟಿಗೆ ಈ ಕಲಾಕೃತಿ ಕಂಡುಬರುತ್ತಿದೆ. ಇನ್ನೊಂದು ದೃಷ್ಟಿಯಲ್ಲಿ ಸ್ವಯಂ ದೈಹಿಕ ಸುಖವನ್ನು ಅನುಭವಿಸುವ ರೀತಿಯಲ್ಲಿಯು ಅರ್ಥೈಸುತ್ತದೆ. ನಮ್ಮ ಪ್ರಾಚೀನ ದೇವಾಲಯಗಳನ್ನು ಭಕ್ತಿಯ ಸಂಕೇತವಾಗಿರುವ ಸ್ಥಳಗಳಲ್ಲಿ ಲೈಂಗಿಕ ಚಿತ್ರಗಳನ್ನು ರಚಿಸುತ್ತಿದ್ದರೆ ಕಾರಣ ಭಕ್ತನ ಮನಸ್ಸು ಎಷ್ಟೇ ಚಂಚಲದಲ್ಲಿದ್ದರು ದೇವರ ಆಸ್ಥಾನಕ್ಕೆ ಬಂದಾಗ ಏಕಾಗ್ರತೆಯನ್ನು ಮೂಡಿಸುವ ಶಕ್ತಿ ಮನುಷ್ಯ ಹಾಗೂ ದೇವರ ನಡುವಿನ ಸಂಬಂಧವನ್ನು ಗಟ್ಟಿಗೊಳಿಸುವ ತಂತ್ರವೂ ಕೂಡ ಇದಾಗಿರುತ್ತಿತ್ತು. ಆ ಹಿನ್ನೆಲೆಯಲ್ಲಿ ರಚಿಸಿದ ಈ ಕಲಾಕೃತಿಯನ್ನು ಮಾರ್ಡನ್ ಮಿಶ್ರ ಮಾಧ್ಯಮದಲ್ಲಿ ರಚಿಸಿ, ಒಟ್ಟು ಅವಕಾಶವನ್ನು ಸೀಮಿತಗೊಳಿಸುವ ಉದ್ದೇಶ ಹೊಂದಿದೆ ಎಂದರೆ ಬಹುಶಃ ತಪ್ಪಾಗಲಿಕ್ಕಿಲ್ಲ.

**ಚಿತ್ರ–೫**

ಮಿಶ್ರ ಮಾಧ್ಯಮ ಕಲಾಕೃತಿಗಳಲ್ಲಿ ಈ ಕಲಾಕೃತಿಯನ್ನು ಗಮನಿಸಿದಾಗ ಒಂದು ಪ್ಲೇವುಡ್‌ನ್ನು ನೇರವಾಗಿ ಕ್ಯಾನ್ವಸಿಗೆ ಅಂಟಿಸಿ ಅದಕ್ಕೆ ಗ್ಲೌಸ್‌ನ್ನು ಇಡಲಾಗಿದೆ. ಅದರ ಕೆಳಭಾಗದಲ್ಲಿ ಹಸ್ತದ

ಮುದ್ರೆ ಮತ್ತು ಅದರ ಅಕ್ಕಪಕ್ಕದಲ್ಲಿ ರೋಟ್ ಮ್ರಾಕ್ ತೋರಿಸಿ ಅದರ ಮೇಲೆ ಮೀನಿನ ಮೂಳೆಯನ್ನು ನೇರವಾಗಿ ಅಂಟಿಸಲಾಗಿದೆ. ಇದನ್ನು ಮಾಡುವ ಮೊದಲು ಕ್ಯಾನ್ವಸ್‌ನಲ್ಲಿ ಅಮೂರ್ತ ಚಿತ್ರವನ್ನು ರಚಿಸಿ ನಂತರ ನೀರಿನಂತೆ ಅಥವಾ ದಾರಗಳಂತೆ ಕಾಣುವ ಬಣ್ಣದ ಸೋರಿಕೆಯನ್ನು ಕಾಣಬಹುದು ಈ ಚಿತ್ರವನ್ನು ಗಮನಿಸಿದಾಗ ತನ್ನ ಕೈಯನ್ನು ಹಿಡಿತದಲ್ಲಿ ಇಟ್ಟುವಂತೆ ಹಾಗೂ ಕೈಗಳ ಮಹತ್ವದ ಬಗ್ಗೆ ತಿಳಿಸಲಾಗಿದೆ. ಇನ್ನೊಂದು ದೃಷ್ಟಿಯಿಂದ ನೋಡಿದಾಗ ಕಲಾವಿದ ಕೃಷ್ಣಸೆಟ್ಟರು ಮೀನುಗಳನ್ನು ಹೆಣ್ಣಿಗೆ ಹೋಲಿಸುವ ಹೆಣ್ಣಿನ ಶೋಷಣೆಯ ಬಗ್ಗೆ ಅವು ಬೇರೆ ಕೈಗಳಿಂದ ಹಾಗೂ ದೌರ್ಜನ್ಯದ ಬಗ್ಗೆ ಹೇಳುವ ಪರಿ ಈ ಮಿಶ್ರ ಮಾಧ್ಯಮದಲ್ಲಿ ಕಾಣಬಹುದು. ಬಣ್ಣಗಳನ್ನು ಗಮನಿಸಿದರೆ ನೀಲಿ ಹಾಗೂ ಕೆಂಪು, ಮಿಶ್ರ ಹಳದಿ ವರ್ಣಗಳನ್ನು ಹೆಚ್ಚಾಗಿ ಬಳಸಲಾಗಿದೆ. ವರ್ಣಗಳು ಸಹ ಕಾಮ ಮತ್ತು ಭಯವನ್ನು ಉಂಟುಮಾಡುವ ವರ್ಣಗಳನ್ನು ಈ ಕಲಾಕೃತಿಯಲ್ಲಿ ಬಳಸಿರುವುದು ಗಮನಿಸಿದಾಗ ಹೆಣ್ಣಿನ ಹಲವು ದೃಖ್ ಹಾಗೂ ವೇದನೆಯ ಹಾಗೂ ಪುರುಷನ ಸುಖ ಸಂತೋಷವನ್ನು ವ್ಯಕ್ತಪಡಿಸುವ ಮಿಶ್ರ ಮಾಧ್ಯಮದ ಕಲಾಕೃತಿ ಇದಾಗಿದೆ. ಒಟ್ಟಾರೆಯಾಗಿ ಕಲಾವಿದರ ದೃಷ್ಟಿ ಏನೇ ಇರಲಿ ನೋಡುಗ ಈ ಕಲಾಕೃತಿಯನ್ನು ಯಾವ ರೀತಿಯಾದರೂ ಅರ್ಥೈಸಿಕೊಳ್ಳಬಹುದು. ಅವರವರ ವಯಸ್ಸಿನ ಭಾವಕ್ಕೆ ಸಂಬಂಧಿಸಿದಂತೆ ಕಲಾಕೃತಿಯ ಹೊಸ ಪ್ರಯೋಗವನ್ನು ನಾವು ಕಾಣಬಹುದು. ಇದು ನೋಡುಗನಿಗೆ ಗೊಂದಲವೆನಿಸಿದರೂ ಇದರ ಒಟ್ಟು ಕಲ್ಪನೆ ಕಲಾಕೃತಿ ರಚಿಸಿದ ಕಲಾವಿದರಿಗೆ ಅವರ ಹೊಸ ಪ್ರಯತ್ನಗಳಲ್ಲಿ ಇದು ಒಂದಾಗಿದೆ.

**ಚಿತ್ರ–೬**

ಈ ಕಲಾಕೃತಿ ಹಿಂದಿನ ಕಲಾಕೃತಿಗಿಂತ ಭಿನ್ನವಾದ ಕಲಾಕೃತಿಯಾಗಿದೆ. ಕಾರಣ ಇದರಲ್ಲಿ ಗೋಡೆಗೆ ಅಂಟಿಕೊಂಡಿರುವ ಕನ್ನಡಿಯಂತೆ ಕ್ಯಾನ್ವಾಸ್‌ನಲ್ಲಿ ತೋರಿಸಲಾಗಿದೆ. ಇದು ನೈಜರೂಪವಾಗಿ ಆ ಡಿಸೈನ್ ಮಧ್ಯ ಗ್ಲಾಸನ್ನು ತೆಗೆದು ಕೆಂಪು ಬಣ್ಣವನ್ನು ಲೇಪಿಸಿ ಅದರ ಗ್ಲೌಸನ್ನು ಹಚ್ಚಲಾಗಿದ್ದು, ಆ ಗ್ಲೌಸಿಗೆ ಬಣ್ಣವನ್ನು ಬಳಿದಿದ್ದು ರೇಖೆಗಳಿರುವುದನ್ನು ಗಮನಿಸಬಹುದು. ಕೆಲವೊಂದು ಬೆರಳನ್ನು ಕತ್ತರಿಸಲಾಗಿದೆ. ಹಾಗೆಯೇ ಕೆಳಗಡೆ ಕನ್ನಡಿಯ ಕೆಳಭಾಗದಲ್ಲಿ ಎರಡು ಬ್ಯಾಂಡೇಜ್ ಬಟ್ಟೆಯನ್ನು ಅಡ್ಡಪಟ್ಟಿಯಂತೆ ಅಂಟಿಸಿ ಅದರ ಮೇಲೆ ಒಣಗಿದ ನಿಂಬೆಹಣ್ಣನ್ನು ಇಡಲಾಗಿದೆ. ಆ ಬಟ್ಟೆಯ ಮೇಲೂ ವಿವಿಧ ವರ್ಣಗಳಿರುವುದನ್ನು ಗಮನಿಸಬಹುದು. ಕ್ಯಾನ್ವಸ್ ಹಿಂಬದಿಯಲ್ಲಿ ಅಮೂರ್ತ ಚಿತ್ರಕೃತಿಯನ್ನು ರಚಿಸಲಾಗಿದೆ. ಇಲ್ಲಿ ನಿಂಬೆಹಣ್ಣು ನೋಡಿದ ತಕ್ಷಣ ಸಮಾಜದಲ್ಲಿ ಮೂಢನಂಬಿಕೆಗೆ ಬಹಳ ಪ್ರಾಮುಖ್ಯತೆ ನೀಡುತ್ತಿದ್ದು, ಅದರ ಮೇಲೆ ಅತಿಯಾದ ನಂಬಿಕೆ ಇರುವ ಕಾರಣ ಕಲಾವಿದರು ಇದಕ್ಕೆ ಸಂಬಂಧಿಸಿದ ಕಲಾಕೃತಿಯನ್ನು ಮಿಶ್ರ ಮಾಧ್ಯಮದಲ್ಲಿ ನೇರವಾಗಿ ತೋರಿಸುವ ಪ್ರಯತ್ನ ಮಾಡಿದ್ದಾರೆ ಎಂದೆನಿಸುತ್ತದೆ. ಸುಲಭವಾಗಿ ಜನರನ್ನು ಮೋಸಮಾಡುವ ಹಾಗೂ ಭಯವನ್ನು

ಉಂಟು ಮಾಡುವ ಇಂತಹ ಮೂಢನಂಬಿಕೆ ಇರುವುದನ್ನು ಗಮನಿಸಿ, ಜನರಿಗೆ ಇದು ಒಂದು ತಪ್ಪು ಮಾರ್ಗ ಎನ್ನುವ ಹಾಗೆ ತಮ್ಮ ಕಲಾಕೃತಿಯ ಮೂಲಕ ತಿಳಿ ಹೇಳಲು ಪ್ರಯತ್ನಪಟ್ಟಂತಿದೆ. ಆದರೂ ಇದನ್ನು ನೋಡುಗ ತನ್ನ ಮನಸ್ಸಿನ ಮೇಲೆ ಯಾವ ರೀತಿಯ ಪರಿಣಾಮಗಳನ್ನು ಬೀರುವ ರೀತಿಯಲ್ಲಿ ಕೊಂಡೊಯ್ಯಬಹುದು ಎಂಬುದನ್ನು ಊಹಿಸಬಹುದಷ್ಟೇ! ಒಟ್ಟಾರೆಯಾಗಿ ಕಲಾವಿದರ ಹೊಸ ಹೊಸ ಪ್ರಯೋಗದಲ್ಲಿ ರಚಿತವಾಗಿರುವ ಕಲಾಕೃತಿಗಳಲ್ಲಿ ಇದೂ ಒಂದು.

**ಚಿತ್ರ–೭**

ಆಧುನಿಕ ಕಲಾರಚನೆಯ ಮಿಶ್ರ ಮಾಧ್ಯಮದಲ್ಲಿ ರಚಿಸಿರುವ ಈ ಕಲಾಕೃತಿಯಲ್ಲಿ ಗ್ಲೌಸ್ ಮತ್ತು ಮೀನಿನ ಮೂಳೆ(ಡೇಡ್ ಫಿಶ್) ಅನ್ನು ಬಳಸಿ ಚಿತ್ರ ರಚನೆ ಮಾಡಿದ ಕಲಾವಿದರು ಈ ಕಲಾಕೃತಿಯನ್ನು ವಿಭಿನ್ನವಾದ ರಚನೆಯಲ್ಲಿ ಗಮನ ಸೆಳೆದಿದೆ. ಈ ಕೃತಿಯಲ್ಲಿ ಮೂರು ವಸ್ತುಗಳಿರು ವುದನ್ನು ಕಾಣಬಹುದು. ಒಂದು ಗ್ಲೌಸ್ ಮತ್ತು ಕೈ, ಎರಡು ಕ್ಯಾಲ್ಕುಕ್ಯುಲೇಟರ್ ಮೂರು ಮೊಬೈಲ್ ಈ ಮೂರು ನಿರ್ಜೀವಿ ವಸ್ತುಗಳಾದರೂ ಅವುಗಳಿಗೆ ತನ್ನದೇ ಕಲ್ಪನೆಯಲ್ಲಿ ಜೀವತುಂಬಲು ಪ್ರಯತ್ನಿಸಿದ್ದಾರೆ ಕಲಾವಿದರು.

ಮೂರು, ಮೂರುವರೆ ಅಡಿಯುಳ್ಳ ಕ್ಯಾನ್ವಸ್ ಮೇಲೆ ಹಳದಿ, ಕೆಂಪು, ಹಸಿರು ಮತ್ತು ಆರೆಂಜ್ ವರ್ಣಗಳನ್ನು ಬಳಸಿ ಮೇಲಿನಿಂದ ಇಳಿಬಿಟ್ಟು ರೇಖೆಗಳನ್ನು ಸೃಷ್ಟಿಮಾಡಿರುವ ಕಲಾವಿದರು ಕಲಾಕೃತಿಯಾಗಲು ಒಂದು ರೂಪವನ್ನು ಕಲ್ಪಿಸಿದ್ದಾರೆ. ನಂತರ ಕೆಳಗಡೆ ತಿಳಿಹಸಿರಿನಿಂದ ಅಡ್ಡ ಪಟ್ಟಿಯನ್ನು ರಚಿಸಿ ಅದರಲ್ಲಿ ಮೀನಿನ ಆಕಾರವನ್ನು ರೇಖೆಗಳ ಮೂಲಕ ತೋರಿಸಿದ್ದಾರೆ. ಈ ಪ್ಟಿಗೆ ತಿಳಿಹಳದಿಯಿಂದ ಬಾರ್ಡರನ್ನು ಹಾಕಲಾಗಿದ್ದು, ಇದು ಈ ಕೃತಿಯ ಮೊದಲ ಹೆಜ್ಜೆ. ನಂತರ ಮೇಲೆ ತಿಳಿಸಿದ ಹಾಗೆ ಮೂರು ವಸ್ತುಗಳಿಗೆ ಅವರದೇ ಆದ ಕಲ್ಪನೆಯಲ್ಲಿ ಒಂದಕ್ಕೊಂದು ಲಿಂಕನ್ನು ಕೊಟ್ಟಿರುತ್ತಾರೆ. ಕಪ್ಪು ಬಣ್ಣದಿಂದ ಅದ್ದಿದ ಕೈ ಹಸ್ತವನ್ನು ಕ್ಯಾನ್ವಾಸ್‌ಗೆ ಒತ್ತಿದ್ದಾರೆ ಅದರ ಮೇಲೆ ಈ ಕ್ಯಾಲ್ಕುಕ್ಯುಲೇಟರನ್ನು ಇಟ್ಟು ಅದರ ಕೆಳಗೆ ಬಿಳಿ ಬಣ್ಣವನ್ನು ಸುರಿಸಿದ್ದಾರೆ. ಆ ಬಣ್ಣ ಮೊಬೈಲ್‌ನಲ್ಲಿರುವ ದೃಶ್ಯದ ಮೇಲೆ ಚೆಲ್ಲಿರುತ್ತದೆ. ಇವೆರಡಕ್ಕೂ ಅವಿನಾಭಾವ ಸಂಬಂಧವಿದೆ ಎಂಬುದನ್ನು ಗ್ರಹಿಸಿರುವ ಕಲಾವಿದ ಮತ್ತೊಂದು ಕಡೆ ಒಂದು ವೃತ್ತ ಆ ವೃತ್ತದಲ್ಲಿ ಗ್ಲೌಸ್ ಆ ಗ್ಲೌಸ್‌ಗೆ ಹೆಬ್ಬೆರಳು ಬಿಟ್ಟು ಒಳಗಡೆ ಬ್ಯಾಂಡೇಜ್ ಮಾಡಲಾಗಿರುತ್ತದೆ. ಈ ಗ್ಲೌಸ್ ಕ್ರಿಕೆಟ್ ಆಡುವಾಗ ಬಳಸಿಕೊಳ್ಳುವಂತದ್ದು, ಸಾಮಾನ್ಯವಾಗಿ ಕೆಲಸದಲ್ಲಿ ದಣಿವಾಗಿ ಕೈಗೆ ನೋವಾಗಿರಬಹುದು, ಬೊಬ್ಬೆ ಬಂದಿರಬಹುದು ಎನ್ನುವುದನ್ನು ಊಹಿಸಿದರೂ ಯಾವುದೇ ಕೆಲಸ ಸಾಮಾನ್ಯವಲ್ಲ, ಎಲ್ಲಾ ಕೆಲಸಗಳು ಶ್ರಮದಿಂದಲೇ ಕೂಡಿರುತ್ತವೆ ಎಂಬುದನ್ನು ಈ ರೀತಿ ಕಲಾವಿದರು ತಮ್ಮದೇ ಭಿನ್ನ ಅಭಿಪ್ರಾಯವನ್ನು ಕಲಾಕೃತಿಯಲ್ಲಿ ವ್ಯಕ್ತಪಡಿಸಿರಬಹುದು.

**ಚಿತ್ರ–೮**

ಇದೊಂದು ಅಮೂರ್ತ ಕಲಾಕೃತಿ. ಆದರೆ ನೋಟಕ್ಕೆ ಮಿಶ್ರ ಮಾಧ್ಯಮವನ್ನು ಬಳಸಿ ರಚಿಸಿದ ಚಿತ್ರವಾಗಿರುತ್ತದೆ. ಈ ಚಿತ್ರಕೃತಿಯಲ್ಲಿಯೂ ಗ್ಲೌಸ್ ಮತ್ತು ಸತ್ತಿರುವ ಮೀನಿನ ಮೂಳೆಯನ್ನು ಕಾಣಬಹುದಾಗಿದೆ. ಹಿಂಬದಿಯಲ್ಲಿ ನೀಲಿ ಹಾಗೂ ಅಲ್ಲಲ್ಲಿ ಕೆಂಪು ವರ್ಣವನ್ನು ಬಳಸಿ ಅಮೂರ್ತ ಚಿತ್ರವನ್ನು ರಚಿಸಿ ಬಳಿಕ ಗ್ಲೌಸ್‌ನ್ನು ಅಂಟಿಸಲಾಗಿದೆ. ಅದರ ಕೆಳಭಾಗದಲ್ಲಿ ಮೀನಿನ ಮೂಳೆಯನ್ನು ಅಂಟಿಸಿ ರಕ್ತ ಸೋರುವಂತೆ ತೋರಿಸಲಾಗಿದ್ದು, ಇದನ್ನು ಸೂಕ್ಷ್ಮವಾಗಿ ನೋಡಿದಾಗ ಲೈಂಗಿಕತೆಗೆ ಸಂಬಂಧಿಸಿದ ಚಿತ್ರ ಎನಿಸುತ್ತದೆ. ವಿವಿಧ ವಸ್ತುಗಳನ್ನು ಅಂಟಿಸಿರುವ ಮೈವಳಿಕೆ ವೈವಿಧ್ಯಮಯ ಈ ಕಲಾಕೃತಿಯಲ್ಲಿ ಕಾಣುವುದಿಲ್ಲವಾದರೂ ಪ್ರಮುಖವಾಗಿ ಎರಡು ವಸ್ತುಗಳನ್ನು ಕಾಣಬಹುದು. ಒಂದು ಗ್ಲೌಸ್ ಮತ್ತೊಂದು ಸತ್ತ ಮೀನಿನ ಅಸ್ಥಿಪಂಜರ. ಗಾಢವಾದ ಬಣ್ಣವನ್ನು ಹಿಂಬದಿಯಲ್ಲಿ ಬಳಸಿ, ಕಪ್ಪು ಬಣ್ಣದಿಂದ ಮೇಲಿನಿಂದ ನೀರಿನಂತೆ ಹರಿಸಿರುತ್ತಾರೆ. ಥಟ್ಟಂತ ನೋಡಿದಾಕ್ಷಣ ಈ ಎರಡು ವಸ್ತುಗಳು ಕಣ್ಣಿಗೆ ಬೀಳುತ್ತವೆ ವಿನಃ ಅದರ ಹಿಂಬದಿಯಲ್ಲಿನ ದೃಶ್ಯ ತುಂಬಾ ಸೂಕ್ಷ್ಮವಾಗಿ ಕಂಡುಬರುತ್ತದೆ. ಕ್ಯಾನ್ವಸ್‌ನ ಅಲ್ಲಲ್ಲಿ ಕೆಂಪು ಗೆರೆಗಳು, ಬಲೆಯಾಕಾರದ ದೃಶ್ಯವಿರುವುದನ್ನು ತುಂಬಾ ಸೂಕ್ಷ್ಮವಾಗಿ ಗಮನಿಸಿದರೆ ಕಾಣಬಹುದು. ಇಡೀ ಇವರ ಈ ಸರಣಿ ಚಿತ್ರದುದ್ದಕ್ಕೂ ಈ ಎರಡು ವಸ್ತುಗಳನ್ನು ತೋರಿಸಿ ರಚಿಸಿರುವ ಕಲಾಕೃತಿಗಳಲ್ಲಿ ವಿಷಯ ಒಂದೇ. ಆದರೆ ಆಲೋಚನೆಯಲ್ಲಿ ಭಿನ್ನತೆಯಿರುತ್ತದೆ ಎಂಬುದನ್ನು ಈ ಕಲಾಕೃತಿಯ ಮೂಲಕ ತಿಳಿಯಬಹುದು.

**ಚಿತ್ರ–೯**

ಈ ಕಲಾಕೃತಿಯಲ್ಲಿಯೂ ಲೈಂಗಿಕತೆಗೆ ಸಂಬಂಧಿಸಿದ ಅಂಶಗಳು ಕಾಣಸಿಗುತ್ತವೆ. ಇಲ್ಲಿ ಹೆಚ್ಚಾಗಿ ಯಾವುದೇ ವಸ್ತುಗಳು ಕಾಣಸಿಗದು. ಗ್ಲೌಸ್‌ನ್ನು ಕ್ಯಾನ್ವಸ್‌ಗೆ ಅಂಟಿಸಿ, ಆ ಗ್ಲೌಸ್‌ನ ಬೆರಳುಗಳಿಗೆ ಕಾಂಡುಂಗಳನ್ನು ಬೆರಳಿನಲ್ಲಿ ಸೇರಿಸಿ, ಅದಕ್ಕೆ ಮೇಲ್ಬಾಗದಲ್ಲಿ ಕಪ್ಪು ಬಣ್ಣವನ್ನು ಲೇಪಿಸಿ ಅದರ ಮೇಲೆ ಮೀನಿನ ಮೂಳೆಯ ರೇಖಾ ಚಿತ್ರವನ್ನು ಚಿತ್ರಿಸಲಾಗಿದೆ. ಸುತ್ತಲೂ ಹೆಣ್ಣು ಹಾಗೂ ಗಂಡಿನ ಹಸ್ತವನ್ನು ಕಾಣಬಹುದು. ಮುದ್ರೆಯ ರೂಪದಲ್ಲಿ ಗಂಡು ಹೆಣ್ಣಿನ ಮಿಲನಕ್ಕೆ ಸಂಬಂಧಿಸಿದ್ದಂತೆ ತೋರಿದರೂ ಅದನ್ನು ನೇರವಾಗಿ ಹೇಳಲೂ ಪ್ರಯತ್ನಿಸಿಲ್ಲ. ಮಿಶ್ರಮಾಧ್ಯಮವನ್ನು ಬಳಸಿರುವುದು ಒಂದು ಕಡೆಯಾದರೆ ಮತ್ತೊಂದು ಕಡೆ ನೋಡುಗರ ದೃಷ್ಟಿಯಲ್ಲಿ ಲೈಂಗಿಕತೆಗೆ ಸಂಬಂಧಿಸಿದ ಚಿತ್ರ ಎಂದು ಕಾಂಡೊಂಗಳನ್ನು ನೋಡಿದರೆ ಮಾತ್ರ ಅರ್ಥವಾಗುವಂತಿದೆ. ಇವರ ಎಲ್ಲ ಕಲಾಕೃತಿಗಳಲ್ಲಿ ಬಳಕೆಗೊಂಡಿರುವ ಕಾಂಡೊಂ ಹಾಗೂ ಮೀನು ಎಂದರೆ ಹೆಣ್ಣು ಎನ್ನುವ ಕಲಾವಿದರ ಕಲ್ಪನೆಯನ್ನು ಗಮನಿಸಿದರೆ ನಿಸರ್ಗದ ಹಾಗೂ ಪ್ರಕೃತಿದತ್ತವಾಗಿರುವ ಮಿಲನವನ್ನು

ವಸ್ತು ವಿಷಯವಾಗಿಟ್ಟುಕೊಂಡು ಈ ಕಲಾಕೃತಿ ರಚಿಸಿದ್ದಾರೆ ಎಂದು ಸೂಕ್ಷ್ಮವಾಗಿ ಗಮನಿಸಿದರೆ ಅರ್ಥವಾಗುತ್ತದೆ. ಕಲಾವಿದನ ಮನಸ್ಸಿನ ಭಾವನೆ ಹಾಗೂ ಅವರ ದೃಷ್ಟಿಗೆ ಸಂಬಂಧಿಸಿದಂತೆ ಈ ಕಲಾಕೃತಿ ಹೊರಹೊಮ್ಮಿಸುವುದು ವ್ಯಕ್ತವಾಗುತ್ತದೆ.

**ಚಿತ್ರ–೧೦**

ಮಿಶ್ರ ಮಾಧ್ಯಮದ ಕಲಾಕೃತಿಯಲ್ಲಿ ಇದು ಸಹ ಒಂದಾಗಿದ್ದು, ಈ ಕಲಾಕೃತಿಯಲ್ಲಿ ಇಬ್ಬರು ಪುರುಷರು ತಮ್ಮ ಬೆರಳುಗಳ ತುದಿಯನ್ನು ಸ್ಪರ್ಶಿಸುವ ಭಿತ್ತಿ ಚಿತ್ರದ ಫೋಟೋವನ್ನು ಯಥಾವತ್ತಾಗಿ ಅಂಟಿಸಲಾಗಿದ್ದು, ಅದರ ಕೆಳಭಾಗದಲ್ಲಿ ಎರಡು ಗ್ಲೌಸ್‌ಗಳನ್ನು ಮೇಲಿನ ಚಿತ್ರದಂತೆ ಒಂದಕ್ಕೊಂದು ಸ್ಪರ್ಶಿಸುವಂತೆ ಅಂಟಿಸಲಾಗಿದೆ. ಒಂದು ಗ್ಲೌಸ್‌ಗೆ ಮತ್ತೊಂದು ಸ್ವಲ್ಪ ಅಂತರವಿರುವುದನ್ನು ಕಾಣಬಹುದು. ಇದರ ಹಿನ್ನೆಲೆಯಲ್ಲಿ ಮೊದಲಿಗೆ ಅಮೂರ್ತ ಚಿತ್ರವನ್ನು ರಚಿಸಿ ಅದರ ಮೇಲೆ ಬಿಳಿ ವರ್ಣವನ್ನು ಸೋರಿಸಲಾಗಿರುವುದನ್ನು ಇಲ್ಲಿ ಸೂಕ್ಷ್ಮವಾಗಿ ಗಮನಿಸ ಬಹುದು. ಭಿತ್ತಿಚಿತ್ರದ ಪ್ರಭಾವದಿಂದ ಪ್ರೇರಿತವಾಗಿ ಈ ಕಲಾಕೃತಿ ರಚಿಸಿದಂತೆ ಕಾಣುತ್ತದೆ. ಒಬ್ಬರನ್ನೊಬ್ಬರು ಮುಟ್ಟುವ ಪ್ರಯತ್ನವಿದ್ದಂತೆ ಮಿಶ್ರ ಮಾಧ್ಯಮದಲ್ಲಿ ಚಿತ್ರಿಸಲಾಗಿದೆ. ಒಟ್ಟಾರೆ ಈ ಕೃತಿಯಲ್ಲಿ ಲೈಂಗಿಕತೆಯ ಸಂಬಂಧ ಗಂಡಾದರೇನು, ಹೆಣ್ಣಾದರೇನು ಎಂಬಂತೆ ಇಬ್ಬರ ನಡುವಿನ ಸ್ಪರ್ಷತೆ ಮತ್ತೇನನ್ನೂ ಅನುಭವವನ್ನು ನೀಡಬಲ್ಲದು ಎಂಬಂತೆ ಕಾಣಬಹುದು ಎಂಬ ಕಲಾವಿದ ಭಾವನೆ ಅವರ ಭಾವನೆಗೆ ಬಿಟ್ಟ ವಿಚಾರ ಎಲ್ಲಾ ಕೃತಿಗಳಂತೆ ಇಲ್ಲಿಯೂ ಕೂಡ ಅದೇ ರಾಗ ಅದೇ ಹಾಡು ಎಂಬಂತೆ ಭಿನ್ನ ಆಯಾಮದಲ್ಲಿ ಚಿತ್ರಕೃತಿಯನ್ನು ರಚಿಸಿದ್ದಾರೆ ಚಿ.ಸು.ಕೃಷ್ಣಸೆಟ್ಟಿಯವರು.

**ಚಿತ್ರ–೧೧**

ಈ ಕಲಾಕೃತಿಯನ್ನು ನೋಡಿದ ತಕ್ಷಣ ವಿವಿಧ ಬಣ್ಣಗಳಿಂದ ದಾರವನ್ನು ಪೋಣಿಸುತ್ತಿರುವಂತೆ ಗ್ರಾಸವಾಗುತ್ತಿದೆ. ಅದರ ಮೇಲೆ ನಾಲ್ಕು ಪಟ್ಟಿಗಳನ್ನು ಹಾಕಲಾಗಿದ್ದು, ಆ ಪಟ್ಟಿಗಳಿಗೆ ಬಿಳಿ ಬಣ್ಣಗಳಿಂದ ಚೌಕವನ್ನು ಕಟ್ಟಲಾಗಿದೆ. ಕಲಾವಿದ ತನ್ನ ಭಾವನೆಗಳು ಮತ್ತು ಅನುಭವಗಳ ಮಧ್ಯೆ ಏನೆಲ್ಲಾವನ್ನು ನೋಡುವ ಸಾಧ್ಯತೆಯಿರುತ್ತದೆ ಎಂಬುದಕ್ಕೆ ಸಾಕ್ಷಿ ಎನಿಸಿದೆ ಈ ಕಲಾಕೃತಿ.

ಕಲಾವಿದ ತನ್ನ ಕಲಾಕೃತಿ ರಚನೆಯಲ್ಲಿ ತನಗನಿಸಿದ್ದನ್ನು ರಚಿಸುವ ಗೋಜಿಗೆ ಹೋಗಿದ್ದಾರಾದರೂ ಬಣ್ಣಗಳ ನಡುವೆ ಏನೆಲ್ಲಾ ಸೃಷ್ಟಿ ಮಾಡಬಹುದು ಎಂಬುದನ್ನು ಅರಿತು ಚಲನಶೀಲತೆಗೆ ಒತ್ತು ಕೊಟ್ಟಿರುವಂತೆ ಭಾಸವಾಗುತ್ತಿದೆ. ಪ್ರಮುಖವಾಗಿ ಈ ಕೃತಿಯಲ್ಲಿ ಕೇಂದ್ರ ಬಿಂದುವೆನಿಸಿದ **'ಆಕಾರ್ ಎಲ್ಲೋ'** ಬಣ್ಣದಲ್ಲಿ ತನ್ನ ಕೈ ಅದ್ದಿಕೊಂಡು ಅದರ ನೆರಳಚ್ಚನ್ನು ಕ್ಯಾನ್ವಾಸ್‌ನಲ್ಲಿ ಹೊತ್ತಿಸಿದಾಗ ಸೃಷ್ಟಿಯಾದ ಕೈ ಚಿತ್ರದ ಕೆಳಗೆ ಒಂದು ಹಳದಿ ಗ್ಲೌಸ್‌ನ್ನು ಅಂಟಿಸಿದ್ದಾರೆ

ಇದು ಬಂದಿದ್ದರಿಂದಲೇ ಈ ಕೃತಿ ಮಿಶ್ರ ಮಾಧ್ಯಮವಾಗಿರುವುದು. ಚಿತ್ರಕೃತಿಯ ಪ್ರಮುಖಾಂಶವಿರುವುದೇ ಇಲ್ಲಿ. ಕಲಾವಿದರು ಬಳಸಿರುವ ಈ ಗ್ಲೌಸ್‌ನ್ನು ಧರಿಸುವುದು ಹೆಚ್ಚು ಆಸ್ಪತ್ರೆಗಳಲ್ಲಿ, ಅಂದ್ರೆ ಈ ಗ್ಲೌಸ್‌ನಿಂದ ಮತ್ತೆ ಒಂದಿಷ್ಟು ಹೊಸತನ ಹೊರಬರುತ್ತಿದೆ. ಅದುವೇ ಚಿಗುರು.

ಬೆಳೆಯುತ್ತಿರುವ ಮೊಳಕೆಯಲ್ಲಿ ಎಂಬುವುದಕ್ಕೆ ಈ ಭೂಮಿಗೆ ಹುಟ್ಟುವ ಮೊದಲು ಅದರ ಸೌಂದರ್ಯ ಘಮ ಘಮಿಸುತ್ತಲೇ ಸೌಂದರ್ಯವನ್ನು ಬೀರುತ್ತದೆ ಎಂತಲೇ ಐದು ಬೆರಳ ಗ್ಲೌಸ್‌ಗೆ ಹೆಬ್ಬೆರಳ ನೋಟಕ್ಕೆ ಲಿಪ್‌ನ್ನು ಹಾಕಿರುತ್ತಾರೆ. ಇದರ ಒಳ ಅರ್ಥ ಕಲಾವಿದರ ಕಲ್ಪನೆಗೆ ಬಿಟ್ಟಿದ್ದು. ನನ್ನ ಪ್ರಕಾರ ಜನಿಸಿದ ಮಗುವಿಗೆ ತಾಯಿಯ ಮೊಲೆ ಹಾಲು ಗಟ್ಟಿಗೊಳ್ಳುವುದಕ್ಕೆ ಆಸರೆಯಾಗುತ್ತದೆ. ಸಮೃದ್ಧಿಯಾಗಿ ಬೆಳೆಯಲು ಪ್ರೇರಕ ಶಕ್ತಿ ಎಂಬುದನ್ನು ತೋರಿಸುವಂತಿದೆ. ಹಾಗೆಯೇ ಅದರ ನೇರಕ್ಕೆ ಕೆಳಗಡೆ ಬಂದರೆ ದುಂಡಾದ ವೃತ್ತದಲ್ಲಿ ಬಣ್ಣ ಬಣ್ಣದಲೋಕ, ಅಲ್ಲಿ ಸುಖ-ದುಃಖ ಎಲ್ಲವೂ ರಾರಾಜಿಸುತ್ತಿವೆ. ಅದರಲ್ಲೊಂದು ಬಿಳಿಯ ಬಾರ್ಡರ್ ಅಂದರೆ ಮನುಷ್ಯ ಏನೇ ಮಾಡಲು ಹೋದರೂ ಅದಕ್ಕೊಂದು ಸೀಮಿತ ಅನ್ನೋದು ಇರುತ್ತೆ ಮತ್ತು ಜೀವನ ಅನ್ನೋದು ಬಣ್ಣಗಳ ಲೋಕ. ಇಲ್ಲಿ ಎಲ್ಲಾದೂ ಇರುತ್ತೆ ಅದನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳಬೇಕಷ್ಟೆ ಎಂಬುದು. ಬಣ್ಣಗಳ ಮೇಲೆ ಬಣ್ಣ ಅದು ಕಪ್ಪು, ಕಪ್ಪುವಿನ ಮೇಲೆ ಆಕಾರ ಎಲ್ಲೊ, ಸಮೃದ್ಧಿಯ ಸಂಕೇತ ತೋರಿಸಿದ್ದಾದರೂ ಕಷ್ಟ-ಸುಖ ಎರಡೂ ಕೂಡ ಒಂದೇ ದೋಣಿಯಲ್ಲಿ ಪ್ರಯಾಣಿಸುತ್ತವೆ ಎಂಬುದನ್ನು ಪ್ರತಿಬಿಂಬಿಸಿದಂತಿದೆ. ಈ ಕೃತಿಯಲ್ಲಿ ಹಳದಿ, ನೀಲಿ, ಕೆಂಪು, ಆಕಾರ್ ಎಲ್ಲೊ, ಬಿಳಿ ಬಣ್ಣಗಳನ್ನು ಹೆಚ್ಚು ತೋರಿಸಲಾಗಿದ್ದು ಕ್ಯಾನ್ವಾಸ್‌ನ್ನು ಪರಿಪೂರ್ಣವಾಗಿ ಬಳಸಿಕೊಳ್ಳಲಾಗಿದೆ. ಕಲಾವಿದನ ಕಲ್ಪನೆಗೆ ಮಿತಿಯಿಲ್ಲ ಎಂಬುದಕ್ಕೊಂದು ಸಾಕ್ಷಿಯಾದಂತಿದೆ ಈ ಕಲಾಕೃತಿ,

**ಚಿತ್ರ-೧೨**

ಜನಪದ ಶೈಲಿಯನ್ನು ಪ್ರತಿಬಿಂಬಿಸುವ ಈ ಕಲಾಕೃತಿ, ಶುಭ ಹಾಗೂ ಅಶುಭ ಶಕುನದ ಸಂಕೇತವನ್ನಿಟ್ಟುಕೊಂಡು ರಚಿಸಿದ ಕಲಾಕೃತಿ ಇದಾಗಿದ್ದು, ಇಲ್ಲಿ ಕ್ಯಾನ್ವಸ್ ಒಂದು ಪೂರ್ಣಪ್ರಮಾಣದಲ್ಲಿ ಬಳಕೆಯಾಗಿರುವುದನ್ನು ಗಮನಿಸಬಹುದು. ಕಲಾಕೃತಿಯ ಮಧ್ಯದಲ್ಲಿ ವಿಕೃತ ಪಕ್ಷಿಯ ಮುಖವನ್ನು ರಚಿಸಿ ಬಲ ಹಾಗೂ ಎಡಬದಿಯಲ್ಲಿ ಕಾಗೆ ಹಾಗೂ ಅಲ್ಲಿಯ ಸಂಕೇತವನ್ನು ಜನಪದರು ನಂಬುವ ಹಾಗೆ ಜೀವನದಲ್ಲಿ ಎಲ್ಲವೂ ನಂಬುವ ಒಳ್ಳೆಯ ಹಾಗೂ ಕೆಟ್ಟ ಪರಿಣಾಮಗಳ ಸೂಚನೆಯನ್ನು ನಂಬುವುದು ಹಿಂದಿನಿಂದಲೂ ಬಂದಿದೆ. ಅದಕ್ಕೆ ಪೂರಕವಾಗಿಯೇ ಮೂಢನಂಬಿಕೆಯು ಸಮಾಜದಲ್ಲಿ ಎಷ್ಟರ ಮಟ್ಟಿಗೆ ಪ್ರಭಾವ ಬೀರಿದೆ ಎಂಬುದನ್ನು ತಮ್ಮದೇ ಶೈಲಿಯಲ್ಲಿ ಚಿತ್ರದ ಮೂಲಕ ವಿವರಿಸಿದ್ದಾರೆ.

**ಚಿತ್ರ–೧೩**

ಈ ಚಿತ್ರಕೃತಿಯನ್ನು ತಕ್ಷಣಕ್ಕೆ ನೋಡಿದರೆ ಕೊಲೈಜ್‌ನಂತೆ ಕಂಡುಬರುತ್ತದೆ. ಏಕೆಂದರೆ ಹಳೆಯ ಫೋಟೋ ಅಥವಾ ಪೇಪರ್‌ನಂತೆ ತೋರುವ ವಸ್ತುಗಳನ್ನು ಕತ್ತರಿಸಿ ಅಂಟಿಸಲಾಗಿದೆ. ಇದರಲ್ಲಿ ರಾಜಕೀಯ ಗುಣಗಳು ಎದ್ದು ಕಾಣುತ್ತವೆ. ದೊಡ್ಡದಾದ ಕುರ್ಚಿ ಅದರ ಮೇಲೆ ವೈನ್‌ನ ಬಾಟಲ್‌ಗಳನ್ನು ಚಿತ್ರಿಸಲಾಗಿದೆ. ಅವುಗಳು ಬಿಡಿಬಿಡಿಯಾಗಿ ಅರ್ಧ ಕತ್ತರಿಸುವಂತೆ ರಚಿಸಲಾಗಿದೆ. ದೊಡ್ಡ ದೊಡ್ಡ ಅಧಿಕಾರಿಗಳು ಲೈಫ್‌ನ ಬಗ್ಗೆ ತಿಳಿದುಕೊಂಡು ಅವರಿವರ ಮನಸ್ಸಿನ ಭಾವನೆಯನ್ನು ಈ ಕಲಾಕೃತಿಯಿಂದ ಹೊರತರಲಾಗಿದೆ. ಈ ಕೃತಿಯಲ್ಲಿನ ವರ್ಣಗಳನ್ನು ಗಮನಿಸಿದಾಗ ಕತ್ತಲೆಯ ವಾತಾವರಣದಲ್ಲಿ ನಡೆಯುವ ಐಷಾರಾಮಿ ಜೀವನವನ್ನು ಸರಳವಾಗಿ ಎರಡೆ ವಸ್ತುಗಳನ್ನು ಆಧಾರವಾಗಿಟ್ಟುಕೊಂಡು ಚಿತ್ರಿಸುವ ಪ್ರಯತ್ನ ಮಾಡಲಾಗಿದೆ ಎನಿಸುತ್ತಿದೆ. ಕಣ್ಣಿಗೆ ಹೆಚ್ಚು ಗೊಂದಲವೆನಿಸದಂತೆ ಎಲ್ಲಾ ಕಡೆ ಸಮ ಪ್ರಮಾಣದಲ್ಲಿ ವರ್ಣ ಹಾಗೂ ವಸ್ತುವಿನ ಬಳಕೆ ಮಾಡಿದ್ದು, ಕೊಲೈಜ್‌ನ ಆಧಾರವನಿಟ್ಟುಕೊಂಡು ಮಿಶ್ರ ಮಾಧ್ಯಮದ ಮೂಲಕ ಹೊಸರೂಪವನ್ನು ಕೊಟ್ಟಂತೆ ಭಾಸವಾಗುತ್ತದೆ. ಒಟ್ಟಾರೆಯಾಗಿ ಈ ಕಲಾಕೃತಿ ರಾಜಕೀಯದ ಆಸಕ್ತಿಯನ್ನು ಸೂಚಿಸುತ್ತದೆ ಅದನ್ನು ಹತ್ತಿರದಿಂದ ಕಂಡಂತಹ ಅನುಭವವನ್ನು ಚಿತ್ರದ ಮೂಲಕ ಹೊರಹಾಕಿರಲೂಬಹುದು.

**ಚಿತ್ರ–೧೪**

ಈ ಕಲಾಕೃತಿಯನ್ನು ಆಕ್ರಲಿಕ್ ವರ್ಣಗಳಿಂದ ರಚಿಸಲ್ಪಟ್ಟಿದ್ದು, ಇದು ಕಲಾವಿದನ ಕಲ್ಪನೆಗೆ ಸೀಮಿತವಾಗಿದ್ದಾಗಿರುತ್ತದೆ. ಮೋಡಕವಿದ ವಾತಾವರಣದಲ್ಲಿ ಮಿನುಗುವ ನಕ್ಷತ್ರಗಳು, ಭೂಮಿಗೆ ಅಪ್ಪಳಿಸುವಂತೆ ಗ್ರಾಸವಾಗುತ್ತಿದೆ. ಆಕಾಶದಲ್ಲಿರುವ ನಕ್ಷತ್ರಗಳಲ್ಲಿ ಒಂದು ನಕ್ಷತ್ರ ಭೂಮಿಗೆ ಪರಕಾಯ ಪ್ರವೇಶ ಮಾಡುತ್ತಿರುವಂತೆ ಗೋಚರಿಸಿದ್ದು, ಆ ನಕ್ಷತ್ರಕ್ಕೆ ಬಲೆಯಾಗಿ ಹಿಡಿದಿಡುವ ಪ್ರಯತ್ನ ಸಾಗಿ ಕಲಾವಿದ ತನ್ನ ಕಲ್ಪನೆಯಲ್ಲಿ ಯಶಸ್ಸನ್ನು ಕಂಡಿದ್ದಾರೆ ಎಂದರೆ ಬಹುಶಃ ತಪ್ಪಾಗಲಿಕ್ಕಿಲ್ಲ!. ಅತಿವೇಗವಾಗಿ ಚಲಿಸುತ್ತಿರುವವರಿಗೆ ಅಡ್ಡಿ ಆತಂಕಗಳು ಸಾಮಾನ್ಯವಾಗಿ ಬರಬಹುದು ಎಂಬ ಆಲೋಚನೆಯಲ್ಲಿ ಈ ಕೃತಿಯನ್ನು ಕಟ್ಟಿಕೊಟ್ಟಿರಬಹುದು.

ನಕ್ಷತ್ರ ಅಂದ್ರೆ ಐದು ಮೂಲೆಗಳಿರುತ್ತವೆ ಆದರೆ ಇಲ್ಲಿ ಮೂರು ಮೂಲೆಗಳಿಂದ ಸೃಷ್ಟಿಸಲ್ಪಟ್ಟು ಅವುಗಳಿಗೆ ಕೆಂಪು ಮತ್ತು ಹಳದಿ ಬಣ್ಣಗಳನ್ನು ಲೇಪಿಸಲಾಗಿದೆ. ಮತ್ತೊಂದು ರೀತಿಯಲ್ಲಿ ಯೋಚನೆ ಮಾಡುವುದಾದರೆ ಕಲಾವಿದರು ಹೆಚ್ಚು ಆಧುನಿಕ ಶೈಲಿಯಲ್ಲಿ ಮೀನುಗಳನ್ನು ತೋರಿಸಿರುವುದನ್ನು ಗಮನಿಸಿದರೆ ಬಲೆಯೊಳಗೆ ಬಣ್ಣದ ಮೀನು ಇರಬಹುದೇನೋ ಎಂಬ ಆಲೋಚನೆ ಭಾರದೇಯಿರದು. ಕಲ್ಪನೆಗೆ ಇಲ್ಲಿ ಮಿತಿಯಿಲ್ಲ. ಹಾಗಂತ ಎಲ್ಲವನ್ನು ಸೌಂದರ್ಯ ಅಂತ ಬಿಂಬಿಸಲು ಸಾಧ್ಯವಿಲ್ಲ. ಕಲಾವಿದನ ಚೌಕಟ್ಟು ಸೌಂದರ್ಯದ ಒಳಗಿನ ಒಳಿತನ್ನು ಗ್ರಹಿಸಿ ಸಂಬೋಧಿಸಿದಲ್ಲಿ ಉತ್ತಮೋತ್ತಮ

ಕೃತಿಗಳು ಬೆಳಕಾಗುತ್ತವೆ. ಅದೇ ಮಾರ್ಗ ಅನುಸರಿಸುವ ಕಲಾವಿದರು ಕಲ್ಪನೆಗಳ ಮತ್ತು ಸಮಾಜದಲ್ಲಿ ನಡೆಯುವ ಸಂದರ್ಭಗಳನ್ನು ಸೋಸಿ ಕಲಾಕೃತಿಯಲ್ಲಿ ಅಭಿವ್ಯಕ್ತಿಸಿರುವುದುಂಟು! ಅದೇ ಮಾರ್ಗದಲ್ಲಿ ಸಾಗಿರುವಂತೆ ಕಂಡುಬಂದಿರುವ ಕಲಾವಿದ ಚಿ.ಸು.ಕೃಷ್ಣಸೆಟ್ಟಿಯವರ ಕಲ್ಪನಾ ಲೋಕಕ್ಕೆ ಬಣ್ಣದ ಮೆರಗನ್ನು ನೀಡಿ, ಇಂತಹದ್ದೇ ಕಲೆಯಲ್ಲ. ಕಲೆಗೆ ಚೌಕಟ್ಟಿಲ್ಲ ಅದು ಕಲಾವಿದನ ಸ್ವಾತಂತ್ರ್ಯ ಮನಸ್ಸಿನ ಭಾವನೆ, ಭಿನ್ನ ಆಲೋಚನೆ ಈ ರೀತಿಯಲ್ಲೂ ಉದ್ಭವವಾಗಬಹುದು ಎಂಬುದನ್ನು ತೋರಿಸಿದ್ದಾರೆ. ಆದರೂ ಬಲೆಯೊಳಗೆ ಮೀನು ಎತ್ತಲು ಸರಿದಾಡಲು ಆಗದು. ಮೀನಿನ ಬದುಕೆ ಅಷ್ಟು. ಆದರೆ ಮನುಷ್ಯನಿಗೆ ಯಾವುದೇ ಬಲೆಗಳಿರುವುದಿಲ್ಲ. ಬಲೆಯಲ್ಲಿ ಬಿದ್ದರೂ ಸರಿದುಕೊಳ್ಳುವ ಬುದ್ಧಿವಂತಿಕೆ ಅವನಲ್ಲಿದೆ ಎಂಬುದನ್ನು ನಾವುಗಳು ಅರಿಯಬೇಕಾಗಿದೆ. ಸುಂದರವಾದ ಮೋಡ, ಚೆಂದದ ನಕ್ಷತ್ರಗಳು, ಕೆಂಪು, ಹಳದಿ, ಕಪ್ಪು, ಬಿಳಿಬಣ್ಣಗಳನ್ನು ಈ ಕೃತಿಯಲ್ಲಿ ಕಾಣಬಹುದು.

**ಚಿತ್ರ–೧೫**

ಗ್ಲೌಸ್ ಮತ್ತು ಸತ್ತ ಮೀನು ಒಳಗೊಂಡ ಮಿಶ್ರಮಾಧ್ಯಮದ ಚಿತ್ರಕಲಾಕೃತಿ ಇದಾಗಿದ್ದು, ಇದೊಂದು ರೀತಿಯಲ್ಲಿ ಸೇಡಿನ ಕಲಾಕೃತಿಯಂತೆ ತೋರುತ್ತದೆ. ಯಾಕೆಂದರೇ ಒಂದು ವೃತ್ತಾಕಾರವನ್ನು ಮಾಡಿ ಅದರ ಮಧ್ಯದಲ್ಲಿ ಕೈ ಗ್ಲೌಸ್‌ನ್ನು ಅಂಟಿಸಲಾಗಿದೆ. ಮತ್ತು ಅದರ ಕೆಳಭಾಗದಲ್ಲಿ ಚೌಕವನ್ನು ರಚಿಸಿ ಅದರ ಮೇಲೆ ಸತ್ತ ಮೀನಿನ ಮೂಳೆಯನ್ನು ಇಡಲಾಗಿರುತ್ತದೆ. ಈ ಕ್ಯಾನ್ವಸ್‌ನ ಎಡಬದಿಯಲ್ಲಿ ಗ್ಲೌಸ್‌ನ ಬಲಭಾಗಕ್ಕೆ ನೇರವಾಗಿ ಪಿಸ್ತೂಲನ್ನು ಅಂಟಿಸಲಾಗಿರುತ್ತದೆ. ಅದರ ಹಿಂಬದಿಯಲ್ಲಿ ಬ್ಯಾಂಡೇಜ್‌ನಂತೆ ತೋರುವ ಪಟ್ಟಿಯಲ್ಲಿ ಮೀನಿನ ಮೂಳೆಗಳ ಸಾಲು ಸಾಲು ಕ್ಯಾನ್ವಸ್‌ನಲ್ಲಿ! ಅಲ್ಲಲ್ಲಿ ಕೈಗಳ ಗುರುತು ಒಟ್ಟಾರೆಯಾಗಿ ಕಲಾಕೃತಿಯನ್ನು ಮೊದಲೂ ಅಮೂರ್ತ ಚಿತ್ರರಚನೆ ಮಾಡಿ ನಂತರ ಸಮಾಜದಲ್ಲಿ ನಡೆಯುತ್ತಿರುವ ಭ್ರಷ್ಟಾಚಾರದ ವಿರುದ್ಧ ಹೋರಾಟದ ಬದುಕನ್ನು ಕಾಣುವುದು ಅನಿವಾರ್ಯವೂ ಕೂಡ ಎಂಬಂತೆ, ಮತ್ತೊಂದುಕಡೆ ಹೆಣ್ಣಿನ ಮೇಲೆ ಶೋಷಣೆಯಾಗುವುದನ್ನು ಹೇಗೆ ತಡೆಯಬಹುದು ಎಂಬ ಗಾಢ ಆಲೋಚನೆಯಲ್ಲಿ ಕಲಾವಿದರು ಈ ವಿಷಯವನ್ನು ಆಯ್ಕೆಮಾಡಿಕೊಂಡಿರುವ ಸಾಧ್ಯತೆಗಳಿರಬಹುದು. ಕ್ಯಾನ್ವಸ್ ತುಂಬಾ ಕೈಗಳ ಸದ್ದು, ಅದು ತಮ್ಮದೇ ಶೈಲಿಯಲ್ಲಿ ರಚಿತವಾಗಿರುತ್ತದೆ. ಮುಖ್ಯವಾಗಿ ಈ ಕೃತಿಯಲ್ಲಿ ಕಪ್ಪು, ಬಿಳಿ, ಕೆಂಪು, ಹಳದಿ, ನೀಲಿ, ಹಸಿರು ಮತ್ತು ಆಕಾರ್ ಎಲ್ಲೋ ವರ್ಣಗಳನ್ನು ಬಳಸಿಕೊಳ್ಳಲಾಗಿದೆ.

**ಚಿತ್ರ–೧೬**

ಇದು ಮಿಶ್ರ ಮಾಧ್ಯಮದಿಂದ ಕೂಡಿದ ಚಿತ್ರಕೃತಿಯಾಗಿದ್ದು, ಸುಂದರ ಕುಂಡಲದಲ್ಲಿರುವ ಹೂವಿನ ಗೊಂಚಲಂತೆ ಭಾಸವಾಗುತ್ತಿದೆ. ಕ್ಯಾನ್ವಸ್‌ನಲ್ಲಿ ರಚಿತವಾಗಿರುವ ವಿವಿಧ ಆಕಾರದ ಹೂವಿನ ನೋಟವನ್ನು ಸೃಷ್ಟಿಸಲು ಕಲಾವಿದ ತನ್ನ ಕ್ರಿಯೇಟಿವಿಟಿಯನ್ನು ಉಪಯೋಗಿಸಿದ್ದಾನೆ. ಸೈಕಲ್ ತಂತಿ. ಸಣವಿನ ಧಾರ, ಬಟ್ಟೆತುಂಡುಗಳನ್ನು ಉಪಯೋಗಿಸಿ ಅದಕ್ಕೆ ಪೂರಕವಾಗಿರುವಂತೆ ಅಕ್ರಾಲಿಕ್

ಬಣ್ಣವನ್ನು ಲೇಪಿಸಿದ್ದಾರೆ. ಬ್ರೇಷ್‌ನಿಂದ ರಚಿಸುವ ಮಾಧ್ಯಮ ಒಂದಾದರೆ ಈ ರೀತಿಯ ನಿರುಪಯೋಗಿ ವಸ್ತುಗಳಿಂದ ಉಪಯುಕ್ತವೆನಿಸುವ ಕಲೆಯನ್ನು ಸೃಷ್ಟಿಸುವುದು ಕಲಾವಿದನ ಚಟುವಟಿಕೆಯಲ್ಲಿನ ಒಂದು ಮಾರ್ಗವೂ ಹೌದು. ಅದೇ ರೀತಿ ಇಲ್ಲಿನ ತಂತ್ರಗಳಲ್ಲಿ ವಿಶಿಷ್ಟತೆಯನ್ನು ಬಳಸಿಕೊಂಡಿರುವ ಕಲಾವಿದರು ತಮ್ಮದೇ ಭಿನ್ನ ಆಯಾಮ ಮತ್ತು ಶೈಲಿಗಳನ್ನು ಈ ಕೃತಿಯಿಂದ ಹೊರಹಾಕಿರುತ್ತಾರೆ. ಕೆಂಪು, ಹಳದಿ, ನೀಲಿ, ಬಿಳಿ ಮತ್ತು ಕಪ್ಪು ವರ್ಣಗಳನ್ನು ಹೆಚ್ಚು ಬಳಸಿರುತ್ತಾರೆ.

**ಚಿತ್ರ–೧೭**

ಈ ಕಲಾಕೃತಿಯಲ್ಲಿ ಶೇ೮೦ರ ಭಾಗ ಒಂದು ದಪ್ಪನೆಯ ಮುಖಭಾವವನ್ನು ನೋಡಬಹುದು. ಹಣೆಯ ಮೇಲೆ ಹಾವನ್ನು ತೋರಿಸಿರುವುದು ವೇಗದ ಸಂಕೇತವೆನ್ನಬಹುದು. ಬುದ್ಧಿ, ಶಕ್ತಿ, ಮಾನವನಿಗೆ ಅತ್ಯಾವಶ್ಯಕ. ಅದರಿಂದ ರಾಜಕೀಯವೂ ಸೇರಿದಂತೆ ಮತ್ಯಾವುದೇ ಕ್ಷೇತ್ರದಲ್ಲಾದರೂ, ಮನುಷ್ಯ ತನ್ನದೇ ಆಲೋಚನೆಯಲ್ಲಿ ಬುದ್ಧಿವಂತಿಕೆಯಲ್ಲಿ ಮೇಲೆ ಬಂದಿರುತ್ತಾನೆ. ಅದಕ್ಕೆ ಅಡ್ಡಿ ಆತಂಕಗಳು ಸಾಕಷ್ಟಿದ್ದರೂ ಅದಕ್ಕೆಲ್ಲ ಪರಿಹಾರ ಧ್ಯಾನವೆಂಬುದು, ಶಾಂತಚಿತ್ತದ ವರ್ತನೆಗಳು ಬುದ್ಧಿಶಕ್ತಿಯನ್ನು ವೇಗವಾಗಿ ಸೃಷ್ಟಿಮಾಡುತ್ತವೆ ಎಂಬುದಂತಿದ್ದು, ಹಲ್ಲಿಯನ್ನು ತೋರಿಸಿರುವುದು ಮುಖದಲ್ಲಿರುವ ಜೇಡಹುಳುವನ್ನು ತಿನ್ನುವತ್ತಾ ಆಸ್ಥೆ ವಹಿಸಿದೆ. ಕೆಡುಕು ಬಯಸುವವರು ಸಾಕಷ್ಟಿದ್ದರೂ ಅಂತಹವರಿಗಾಗಿಯೇ ಸಮಯ ಮೀಸಲಿರುತ್ತೆ. ಈ ಸಮಾಜದಲ್ಲಿ ಅನ್ಯಾಯ, ದುಷ್ಟತನ, ದುರಹಂಕಾರ ಯಾವುದೂ ಶಾಶ್ವತವಲ್ಲ. ಮನುಷ್ಯನನ್ನು ಪರಿಸ್ಥಿತಿ ಕೆಡಿಸಬಹುದೇ ವಿನಃ ಮನುಷ್ಯನಿಂದ ಯಾವುದು ಅಸಾಧ್ಯವಾದುದ್ದಿಲ್ಲ ಎಂಬಂತೆ. ಹಿಡಿದ ಕೆಲಸವನ್ನು ಶ್ರದ್ಧಾ ಭಕ್ತಿಯಿಂದ ಸಾಧಿಸಿದರೆ ಜಯ ಕಟ್ಟಿಟ್ಟಬುತ್ತಿ ಎಂಬಂತೆ ಈ ಕಲಾಕೃತಿಯಲ್ಲಿ ಅವರದೇ ಆದ ಕಲ್ಪನೆಯನ್ನು ಸೃಷ್ಟಿಸಿ ಹೇಳಿದ್ದಾರೆ. ಪ್ರತಿ ಮಾತಿಗೂ ಕ್ಯಾನ್ವಸ್ ಮುಂದೆ ಕುಳಿತಾಗ ಉದ್ಭವವಾಗುವ ಕನಸ್ಸುಗಳನ್ನೇ ಯಥಾ ರೀತಿ ತರುವಂತಹ ಪ್ರಯತ್ನ ಮಾಡುತ್ತೇನೆ ಎನ್ನುವ ಕೃಷ್ಣಸೆಟ್ಟಿಯವರು ಇಂತಹ ವಿಷಯದ್ದೆ ಎಂದು ಯಾವುದಕ್ಕೂ ಹೇಳಿರುವುದಿಲ್ಲ. ಬದಲಾಗಿ ಸನ್ನಿವೇಶಗಳಲ್ಲಿ ಆಗುವ ಗೊಂದಲಗಳಿಗೆ ಚಿತ್ರದ ಮೂಲಕ ತಮ್ಮ ವೇದನೆಯ ಪರಿಯನ್ನು ಹಂಚಿಕೊಳ್ಳುವ ಪ್ರಯತ್ನ ಎಂಬುದನ್ನು ಸ್ಪಷ್ಟಪಡಿಸಿದಂತೆ ಈ ಕಲಾಕೃತಿ ನನ್ನ ಕಣ್ಣಿಗೆ ಕಾಣುತ್ತಿದೆ.

ತಲೆಗೆ ಕಿರೀಟ, ಹಣೆಯಲ್ಲಿ ಮೂರನೆ ಕಣ್ಣು, ಕೆಂಪಾದ ಉದ್ದನೆಯ ಮೂಗು, ಮುಚ್ಚಿದ ಕಣ್ಣುಗಳು, ಬಿಚ್ಚದ ರೀತಿಯಲ್ಲಿರುವ ತುಟಿಗಳು ಮತ್ತು ಕತ್ತಿನಲ್ಲಿ ದಪ್ಪನೆಯ ಚೈನು ಇಷ್ಟೆಲ್ಲಾ ಗಾಂಭೀರ್ಯತೆಯಿಂದ ಕೂಡಿದ ಭಾವಚಿತ್ರದಲ್ಲಿ ಕಪ್ಪು ಜೇಡ ಅಂಟಿಕೊಂಡಿದೆ ಅದರತ್ತ ರಬ್ಬರ್ ಅಲ್ಲಿ ನೋಟ! ಹಣೆಯ ಕೆಳಗಡೆ ಬಲದಿಂದ ಎಡಕ್ಕೆ ವೇಗವಾಗಿ ಹರಿಯುತ್ತಿರುವ ಹಾವಿನ ದೃಶ್ಯ.

ಇವುಗಳನ್ನೆಲ್ಲಾ ಗಮನಿಸುತ್ತಿದ್ದರೆ ಥಟ್ಟನೆ ನೆನಪಾಗುವುದು ಮನುಷ್ಯನ ಆಲೋಚನೆಯಲ್ಲಿ ಎಂತಹ ಶಕ್ತಿಯಿರುತ್ತದೆ ಎಂದು. ಶಿವ ಮೂರನೇ ಕಣ್ಣು ಬಿಟ್ಟರೇ ಏನೆಲ್ಲಾ ನಡೆಯಬಹುದು ಎಂಬ ಕಥೆಗೆ ಪೂರಕವಾಗಿಯೇ ಕಲಾವಿದ ಇಲ್ಲಿ ತನ್ನ ಕಲ್ಪನೆಯಲ್ಲಿ ಮನುಷ್ಯನನ್ನು ಕೂಡ ಮನಸ್ಸು ಮಾಡಿದರೆ ಏನೆಲ್ಲಾ ಮಾಡಬಹುದು ಎಂಬುದನ್ನು ಊಹಿಸಿದ್ದಾರೆ. ಇದು ಅವರ ಆಲೋಚನೆಯಾದರೂ ನೋಡಿದವರು ಗಂಭೀರವಾಗಿ ಚಿಂತಿಸಬಹುದು ಅಷ್ಟರ ಮಟ್ಟಿಗೆ ಕಲಾಕೃತಿಯನ್ನು ಕಟ್ಟಿಕೊಟ್ಟಿದ್ದಾರೆ. ಈ ಕೃತಿಯಲ್ಲಿ ಕಪ್ಪು, ನೀಲಿ, ಬಿಳಿ, ಹಳದಿ, ಕೆಂಪು, ಹಸಿರು ವರ್ಣಗಳನ್ನು ಹೆಚ್ಚು ಬಳಸಿರುತ್ತಾರೆ. ಇದೊಂದು ಅರ್ಥಪೂರ್ಣ ಕಲಾಕೃತಿಯಾಗಿರುತ್ತದೆ.

**ಚಿತ್ರ–೧೮**

ಕ್ಯಾನ್ವಸ್‌ನಲ್ಲಿ ಆಕ್ರಲಿಕ್ ವರ್ಣದಿಂದ ರಚಿತವಾಗಿರುವ ಈ ಕಲಾಕೃತಿಯನ್ನು ಮಿಶ್ರ ಮಾಧ್ಯಮಕ್ಕೆ ಹೋಲಿಸುವುದು ಅನಿವಾರ್ಯವೂ ಕೂಡ. ರಬ್ಬರ್ ಹಲ್ಲಿಯನ್ನು ಕ್ಯಾನ್ವಾಸ್‌ನ ಎಡಗಡೆ ಮೂಲೆಯಲ್ಲಿ ಅಂಟಿಸಲಾಗಿದೆ. ಒಂದು ಅಮೂರ್ತ ಭಾವನೆಯ ಚಿತ್ರಕೃತಿಯಿದ್ದು, ಮುಖ, ಎರಡು ಕಿವಿ, ದುಂಡನೆಯ ಕಣ್ಣು, ಉದ್ದನೆಯ ಮೂಗು ಅದರ ಪಕ್ಕ ಹರಿಯುತ್ತಿರುವ ಹಾವು ಮತ್ತು ಕೆಳಗೆ ಎರಡು ಕಾಲುಗಳನ್ನು ಜೋಡಿಸಲಾಗಿದೆ. ಈ ದೃಶ್ಯವನ್ನು ನೋಡಿದಾಕ್ಷಣ ರಾತ್ರಿಯೇ ಹಗಲೆನಿಸಿಕೊಂಡ ಗೂಬೆ ಪಕ್ಷಿಯ ನೆನಪು ಕಾಡುತ್ತಿದೆ. ಆ ಕಣ್ಣು ಮುಖ ಭಾವ ಅಷ್ಟೇ ಪರಿಣಾಮಕಾರಿಯಾಗಿ ಬೀರಿರುತ್ತದೆ. ಇದರ ಮೇಲೆ ಒಂದು ಹೆಣ್ಣಿನ ದೃಶ್ಯ ಹಾಗೆಯೇ ಕೆಳಗೆ ಕಾಗೆಯ ದೃಶ್ಯವನ್ನಿಲ್ಲಿ ಕಾಣಬಹುದು. ಇದು ಕಲಾವಿದನ ಕಲ್ಪನೆ. ಹಾವು ವಿಷಜಂತಾದರೂ ಬಿಳಿ ಬಣ್ಣದಿಂದ ಚಿತ್ರಿಸಿರುವುದು ನೋಡಿದರೇ ಅದಕ್ಕೆ ಯಾವ ಮಹತ್ವ ನೀಡಲಾಗಿದೆ ಎಂಬುದು ಯೋಚಿಸಬೇಕಾದ ಸಂಗತಿಯಾದರೂ ಬಣ್ಣಗಳಿಗೆ ಎಷ್ಟರ ಮಟ್ಟಿಗೆ ಮಹತ್ವ ನೀಡಿದ್ದಾರೆ ಎಂಬುದನ್ನು ಗಮನಿಸಬಹುದು. ಕಾಗೆ ಕಪ್ಪು ಬಣ್ಣ ಅದರ ಮೇಲೆ ಬಿಳಿ ಬಣ್ಣದ ಹಾವೂ ಇದು ಏನನ್ನು ಸೂಚಿಸಬಹುದು ಎಂಬುದು ಅಸ್ಪಷ್ಟದ ಸಂಗತಿ. ಒಟ್ಟಾರೆ ಈ ಕಲಾಕೃತಿಯೂ ಸಂಯೋಜನೆಯಲ್ಲಿ ಪರಿಪೂರ್ಣತೆ ಹೊಂದಿದೆಯಾದರೂ ವಿಷಯದಲ್ಲಿ ಗೊಂದಲವಿರುವುದು ಸತ್ಯ. ಕಲಾವಿದರು ಬಣ್ಣಗಳಿಗೂ ಅಷ್ಟಾಗಿ ಮಹತ್ವ ಕೊಟ್ಟಿಲ್ಲವೇನೋ ಅನಿಸದೆಯಿರದು! ಅಪಶಕುನ ಎನ್ನುವ ಮೂರು ವಸ್ತುಗಳನ್ನು ಕಾಣಿಸಿರುವ ಕಲಾವಿದರು, ಗೂಬೆ, ಕಾಗೆ ಮತ್ತು ಹಲ್ಲಿಯಿಂದಾಗುವ ದುಷ್ಪರಿಣಾಮಗಳೇನು ಎಂಬುದನ್ನು ಹೇಳಲು ಹಿಂದೇಟು ಹಾಕಿದ್ದಾರೆ ಎನಿಸುತ್ತಿದೆ. ಇವರೊಬ್ಬ ಸಾಹಿತಿಯಾಗಿರುವ ಕಾರಣ ಕಥೆ, ಕಾದಂಬರಿಗಳನ್ನು ಓದುವಾಗ ಸಿಕ್ಕಂತಹ ದೃಶ್ಯವನ್ನೆ ಕಲಾಕೃತಿಯಲ್ಲಿ ತಂದಿರಬಾರದೇಕೆ ಎಂಬ ಆಲೋಚನೆ ನೋಡುಗನಿಗೆ ಬಂದರೂ ಆಶ್ಚರ್ಯವೇನಿಲ್ಲ. ಬಿಳಿ, ಕಪ್ಪು, ಹಳದಿ ಮತ್ತು ನೇರಳೆ ಬಣ್ಣಗಳನ್ನು ಬಳಸಿರುವುದನ್ನು ಗುರುತಿಸಬಹುದು.

## ಗ್ರಾಫಿಕ್ ಮಾಧ್ಯಮ ಚಿತ್ರಕೃತಿಗಳು

ದೃಶ್ಯಕಲೆಯ ಮಾಧ್ಯಮಗಳಾದ ರೇಖಣಿ, ಚಿತ್ರಕಲೆ ಮತ್ತು ಶಿಲ್ಪದ ರೀತಿಯಲ್ಲಿ ಮುದ್ರಣ ಮಾಧ್ಯಮ ಸಹ ಅತ್ಯಂತ ಪ್ರಭಾವಶಾಲಿ ಅಭಿವ್ಯಕ್ತಿ ಸಾಧನ. ಪ್ರಿಂಟ್ ಮೇಕಿಂಗ್ ಅಥವಾ ಗ್ರಾಫಿಕ್ ಕಲೆ ಎಂದು ಕರೆಯಲ್ಪಡುವ ಇದಕ್ಕೆ ಇತರ ಮಾಧ್ಯಮಗಳಂತೆ ತನ್ನದೇ ಆದ ಅನನ್ಯ ಸಾಧ್ಯತೆಗಳೂ, ಅನೇಕ ಮಿತಿಗಳೂ ಇವೆ. ತಾಂತ್ರಿಕ ಮಾಧ್ಯಮವಾದ ಮುದ್ರಣದ ತಂತ್ರಗಳೊಡ್ಡುವ ಅನೇಕ ಮಿತಿಗಳ ನಡುವೆಯೂ ಚುರುಕಾದ, ಮನಮುಟ್ಟುವ ಅಭಿವ್ಯಕ್ತಿಯನ್ನು ಸಾಧಿಸುವುದು ಸುಲಭವಾದ ಕೆಲಸವಲ್ಲ. 'ಮುದ್ರಣ ಕಲೆ'(ಗ್ರಾಫಿಕ್ ಕಲೆ) ಎನ್ನುವಾಗ ಅನೇಕರು ವಾಣಿಜ್ಯ ಮುದ್ರಣವೆಂದು ಕಲ್ಪಿಸಿಕೊಳ್ಳುತ್ತಾರೆ. ಆದರೆ ವಾಣಿಜ್ಯ ಮುದ್ರಣಕ್ಕೂ, ಮುದ್ರಣ ತಂತ್ರಗಳನ್ನು ಕಲೆಯ ಮಾಧ್ಯಮವಾಗಿ ಬಳಸಿಕೊಂಡು ಕೃತಿ ರಚಿಸುವುದಕ್ಕೂ ಬಹಳ ವ್ಯತ್ಯಾಸವಿದೆ. ವಾಣಿಜ್ಯ ಮುದ್ರಣದಲ್ಲಿ ಛಾಯಾಚಿತ್ರಗಳನ್ನು, ಪಾಠವನ್ನು ಮೂಲದಿಂದ ಮರು ಮುದ್ರಿಸುತ್ತಾರೆ. ಅದನ್ನು ಪುನರ್ ಮುದ್ರಣ, ಪುನರುತ್ಪತ್ತಿ ಎನ್ನಬಹುದು. ಆದರೆ ಮುದ್ರಣ ಕಲೆಯಲ್ಲಿ ಪ್ರತಿ ಎನ್ನುವ ಪದದ ಹಿಂದೆ ಭಿನ್ನವಾದ ಆಯಾಮವಿರುತ್ತದೆ. ಅದೇ ರೀತಿ ಮುದ್ರಣ ಕಲೆಯಲ್ಲಿ ಇಂದು ಹೊಸ ಹೊಸ ಮಾಧ್ಯಮಗಳೂ, ತಂತ್ರಗಳೂ ಸೇರಿಕೊಳ್ಳುತ್ತಾ ನಡೆದಿವೆ. ಆದರೆ ಇವಾವುವೂ ಸಾಂಪ್ರದಾಯಿಕ ಮುದ್ರಣದ ವ್ಯಾಖ್ಯಾನದ ವ್ಯಾಪ್ತಿಯಲ್ಲಿ ಬರುವುದಿಲ್ಲ. ಹಾಗಾಗಿ ಯಾವುದು ಮೂಲಪ್ರತಿ(ನಮ್ಮ ಕಾಲಕ್ಕೆ)ಎಂಬುದನ್ನು ನಿರ್ಧರಿಸಲು ವೃತ್ತಿಪರ, ಸಂಸ್ಥೆಗಳು, ಮ್ಯೂಸಿಯಂಗಳು, ಗ್ಯಾಲರಿಗಳು, ಅಂತರಾಷ್ಟ್ರೀಯ ವೇದಿಕೆಗಳು, ಚರ್ಚೆ, ವಿಮರ್ಶೆಗಳನ್ನು ನಡೆಸಿ ಹೆಣಗುತ್ತಲೇ ಇವೆ.

ಇಲ್ಲಿರುವ ಕೃಷ್ಣಸೆಟ್ಟಿಯವರ ಎಚ್ಚಿಂಗ್ ಕಲಾಕೃತಿ ಅಸಹಜವಾಗಿ ಕಾಣಿಸುವ, ವಿಕಾರಗೊಂಡ ಆಕೃತಿಗಳನ್ನು ಹೊತ್ತ ಎಚ್ಚಿಂಗ್ ಕಲಾಕೃತಿಗಳು ಮೂರು ಮುಖ್ಯ ಅಂಶಗಳನ್ನು ಧ್ವನಿಸುತ್ತವೆಂದನಿಸುತ್ತದೆ.

೧. ಮನುಷ್ಯನ ಅಧಿಕಾರ ಲಾಲಸೆ

೨. ಲಿಂಗಭೇದ

೩. ಈ ಹೊತ್ತಿನ ಮನುಷ್ಯನ ವಿಲಕ್ಷಣತೆ.

ಮನುಷ್ಯ ಅಧಿಕಾರಕ್ಕಾಗಿ ಹಪಹಪಿಸುವುದು, ಅಧಿಕಾರ ಪಡೆದ ನಂತರ ಬೀಗುವ ಸ್ಥಿತಿಯನ್ನು ಒಂದೆಡೆ ತೋರಿಸಲಾಗಿದೆ. ಇದಕ್ಕಾಗಿ ರೂಪಿಸಿರುವ ಪೀಠವಂತೂ ವಿಶಿಷ್ಟವಾಗಿದೆ. ಅಧಿಕಾರದ ಶ್ರೇಣೀಕರಣವನ್ನೂ, ಅಂತಸ್ತನ್ನು ಮೆಟ್ಟಿಲುಗಳ ಮೂಲಕ ಕಾಣಿಸಲಾಗಿದೆ. ಉನ್ನತ ಪೀಠದಲ್ಲಿ ಕೈಯನ್ನು ತೋರಿಸಿರುವುದು ಅಧಿಕಾರಕ್ಕೇರಿದ ನಮ್ಮ ಜನಪ್ರತಿನಿಧಿಗಳು ಸ್ಪಂದನಶೀಲತೆಯನ್ನು

ಕಳೆದುಕೊಂಡು 'ಕೈ ಕೊಡುವ' ಚಾಳಿಯ ವ್ಯಂಗವಾಗಿದೆ. ಇನ್ನೂ ಪೂರ್ಣಪ್ರಮಾಣದ ಮನುಷ್ಯಾಕೃತಿಗಳಿದ್ದು ಅವುಗಳಲ್ಲಿ ಸ್ತ್ರೀಯ ಲಕ್ಷಣದ ಅಂಗಾಕಾರಗಳನ್ನು ಪುರುಷಾಕೃತಿಗೂ, ಪುರುಷ ಲಕ್ಷಣದ ಆಕಾರಗಳನ್ನು ಸ್ತ್ರೀಯಾಕೃತಿಗೂ ಅಳವಡಿಸಲಾಗಿದೆ. ಇದು ನಮ್ಮ ಸಮಾಜದಲ್ಲಿರುವ ಲಿಂಗಭೇದದ ಅಣಕವಾಗಿದೆ. ಇಂದು ನಮ್ಮ ಸ್ತ್ರೀವಾದಿ ಚಿಂತಕರು ಸಮಾನ ಹಕ್ಕಿಗಾಗಿ ಒತ್ತಾಯಿಸುತ್ತಿದ್ದರೆ ಇದಕ್ಕೂ ಮೊದಲೇ ವಚನಕಾರರು ಮನುಷ್ಯನ ಲಿಂಗ ಸಂಗತಿಗಳನ್ನು ಅಲ್ಲಗಳೆದು ಆತ್ಮ ಒಂದೇ ಎಂದು ಪ್ರತಿಪಾದಿಸಿದ್ದಾರೆ. 'ಮೊಲೆ ಮುಡಿ ಬಂದರೆ ಹೆಣ್ಣೆಂಬರು/ ಗಡ್ಡ ಮೀಸೆ ಬಂದರೆ ಗಂಡೆಂಬರು/ ನಡುವೆ ಸುಳಿವಾತ್ಮನು ಹೆಣ್ಣು ಅಲ್ಲ ಗಂಡು ಅಲ್ಲ' ಎಂಬ ದಾಸಿಮಯ್ಯನ ವಚನವನ್ನು ದೃಶ್ಯೀಕರಿಸಿದಂತೆಯೇ ಇಲ್ಲಿ ಕಂಡು ಬರುತ್ತದೆ. ಉಭಯ ಲಿಂಗದ ಭೇದವನ್ನು ಅಳಿಯಲೆತ್ನಿಸಿರುವಂತೆ; ಮನುಷ್ಯರೂಪಗಳಿಗೆ ಕೈಗಳಿಗೆ ಪಾದಗಳನ್ನು, ಕಾಲುಗಳಿಗೆ ಹಸ್ತವನ್ನು ಲಗತ್ತಿಸಲಾಗಿದೆ. ಇದು ಈ ಹೊತ್ತಿನ ಮನುಷ್ಯನ ವಿಲಕ್ಷಣವಾಗಿ ಗೋಚರಿಸುತ್ತದೆ. ಇನ್ನೊಂದು ಪ್ರಧಾನ ಆಕೃತಿಯಲ್ಲಿ ಕಿವಿ ಇರಬೇಕಾದಲ್ಲಿ ಮೂಗು, ಮೂಗು ಇರಬೇಕಾದಲ್ಲಿ ಕಿವಿಯೂ ಇದೆ ಹಾಗೆ ಕಣ್ಣು ಇರುವೆಡೆಯಲ್ಲಿ ಬಾಯಿ, ಬಾಯಿ ಇರುವೆಡೆಯಲ್ಲಿ ಕಣ್ಣು ಇದೆ. ಈ ಕಾರಣಕ್ಕಾಗಿಯೇ ಕೃತಿಗಳಿಗೆ 'ರೂಪಾಂತರ' ಎಂದು ಹೆಸರಿಸಲಾಗಿದೆ. ವಾಸ್ತವವಾಗಿ ಮನುಷ್ಯನ ಆಯಾ ಅಂಗಗಳು ಮಾಡಬೇಕಾದ ಕ್ರಿಯೆಗಳಿಗೆ ಬದಲಾಗಿ ಇನ್ನ್ಯಾವುದೋ ಕ್ರಿಯೆಗಳನ್ನು ರೂಢಿಸಿಕೊಂಡಂತಾಗಿದೆ ಎಂಬ ಆರೋಪವನ್ನು ಕೃತಿ ಮಾಡುತ್ತಿದೆ. ಇದು ಬರಿ ಆರೋಪವಷ್ಟೇ ಆಗಿರದೇ ಈ ಹೊತ್ತಿನ ಮನುಷ್ಯನ ವಸ್ತುಸ್ಥಿತಿಯೂ ಆಗಿದೆ.ಇದಕ್ಕೆ ಪೂರಕವಾಗಿರುವಂತೆ 'ಕೈಗೆ ಬಾಯಿಯ ಚಾಳಿ/ ಬಾಯಿಗೆ ಕೈ ಚಾಳಿ/ ರೂಢಿಸಿದವರಲ್ಲ..' ಎನ್ನುವ ಲಕ್ಷ್ಮಣ ಬದಾಮಿಯವರ ಕವಿತೆಯ ಸಾಲುಗಳು ಇದೆ ರೀತಿ ಧ್ವನಿಸುತ್ತದೆ. ಜೊತೆಗೆ ನಮ್ಮದಲ್ಲದ ಕ್ರಿಯೆಗಳಲ್ಲಿ ಮೂಗು ತೂರಿಸುವುದನ್ನು, ಲಘುವಾದ ವಿಚಾರಗಳಿಗೆ ತುಂಬಾ ಮಹತ್ವದ್ದೆಂದು ಕಿವಿಗೊಡುವುದನ್ನು, ಗಂಭೀರವಾಗಿ (ಕಣ್ಣಿಂದ)ಕಾಣಬೇಕಿರುವುದನ್ನು ಉಡಾಫೆಯಿಂದ ಮಾತನಾಡುವುದು. ಹೀಗೆಯೇ ಕಲಾಕೃತಿ ಮನುಷ್ಯನು ತನ್ನ ಅಂಗಾಗಳನ್ನು ನಿರ್ದಿಷ್ಟ ಚಟುವಟಿಕೆಗಳಲ್ಲಿ ತೊಡಗಿಸದೇ ವೈಲಕ್ಷಣವಾದ ಚಟುವಟಿಕೆಗಳಲ್ಲಿ ತೊಡಗಿಸಿದ್ದಾನೆನ್ನುವ ಗಂಭೀರ 'ರೂಪಾಂತರ'ವನ್ನು ತೋರುತ್ತದೆ.

**ಚಿತ್ರ–೧**

ಈ ಚಿತ್ರದಲ್ಲಿ ಮುಖ್ಯವಾಗಿ ಮೆರವಣಿಗೆಯನ್ನು ಕಾಣಬಹುದು ಅದು ಕಲ್ಪನಾ ಲೋಕದ ಒಂದು ಅಶ್ಚರ್ಯದ ಸಂಕೇತದ ರೂಪದಲ್ಲಿ ಅದು ನವ್ಯಶೈಲಿಯ ಚಿತ್ರಗಳೆನಿಸಿಕೊಂಡರೂ ಅದಕ್ಕಿಂತ ಒಂದೆಜ್ಜೆ ಮುಂದೆನೇ ಅನ್ನಬೇಕು. ಗ್ರಾಫಿಕ್ ಮಾಧ್ಯಮದಲ್ಲಿ ರಚಿತವಾಗಿರುವ ಚಿತ್ರದಲ್ಲಿ ಬೆತ್ತಲೆಯ ಇಬ್ಬರು ವ್ಯಕ್ತಿಗಳು ಹುಚ್ಚರಂತಿದ್ದು, ಒಂದುಚೂರು ಮೈಮೇಲೆ ಬಟ್ಟೆಗಳಿಲ್ಲದೇ ಬೆತ್ತಲೆಯ ಪ್ರಪಂಚದಲ್ಲಿ

ಆಡುವವನೇ ನಾಟಕಕಾರ ಎಂಬಂತೆ ಅಧಿಕಾರ ದುರಾಸೆಯ ನೋಟವನ್ನು ಈ ರೀತಿ ಕಲಾವಿದ ಚಿ.ಸು.ಕೃಷ್ಣಸೆಟ್ಟಿ ಬಿಂಬಿಸಿದ್ದಾರೆ ಎಂಬುದು ಮೇಲ್ನೋಟಕ್ಕೆ ಗೊತ್ತಾಗುತ್ತದೆ. ಇಬ್ಬರ ಹಿಂದೆ ಹಳೆ ಮನೆ ಬಾಗಿಲಿಲ್ಲದ ಮನೆಯ ಮುಂದೆ ರಸ್ತೆ, ಆ ರಸ್ತೆಯ ಮೇಲೆ ಇಬ್ಬರೂ ನಿಂತಿದ್ದು, ಎಡಭಾಗದಲ್ಲಿರುವವನು ಎಡ ಕೈಯಿಂದ ಚಟ್ಟವನ್ನು ಹಿಡಿದಿಕೊಂಡಿರುವಂತೆ ತೋರಿಸಲಾಗಿದೆಯೇ ವಿನಃ, ಆ ಚಟ್ಟವನ್ನು ಹಿಡಿಕೊಂಡಿರುವುದು ತಮಾಷೆಯಾಗಿಕಾಣುವಂತಿದೆ. ಇಲ್ಲಿ ಕಲಾವಿದ ತನ್ನದೇ ಕಲ್ಪನಾ ಲೋಕವನ್ನು ಕಲಾಕೃತಿಯ ಮೂಲಕ ತೋರ್ಪಡಿಸಿದ್ದಾರೆ.ಮತ್ತೊಬ್ಬ ಚಟ್ಟವನ್ನುಡಿದು ಕೊಂಡಿರುವ ವ್ಯಕ್ತಿಯ ಆಕಾರ ವಿಕಾರದಲ್ಲಿ ಮಾನಸಿಕ ವ್ಯಕ್ತಿ ಇದ್ದಂಗೆ ಕಾಣಲ್ಪಡುತ್ತದೆ. ಈ ಇಬ್ಬರ ಮುಂದೆ ವಿಕೃತ ಮನಸ್ಸಿನ ವ್ಯಕ್ತಿಯ ಅರ್ಧ ದೇಹವನ್ನು ತೋರಿಸಲಾಗಿದ್ದು, ಒಟ್ಟು ರಾಜಕೀಯ ಮತ್ತು ಅದರ ಕುರ್ಚಿಗೆ ಅಂಟಿಕೊಳ್ಳುವವರು ಅಧಿಕಾರಕ್ಕಾಗಿಯೇ ಕುರ್ಚಿಯಲ್ಲಿ ಅಂಟಿಕೊಂಡಿರುವ ಪಕ್ಷಗಳಿವೆ ಎಂಬುದನ್ನು ಈ ಕಲಾಕೃತಿಯಲ್ಲಿ ತೋರಿಸಿರುವುದನ್ನು ಕಾಣಬಹುದು.

**ಚಿತ್ರ–೨**

ಈ ಕಲಾಕೃತಿಯಲ್ಲಿ ನೆರಳು ಬೆಳಕಿನಾಟ ಹೆಚ್ಚಿದೆ. ಕಪ್ಪು, ನೆರಳಿನಲ್ಲಿರುವ ಪ್ರಕೃತಿ ದೃಶ್ಯವಾಗಿರುತ್ತದೆ. ಜನದಟ್ಟನೆಯಲ್ಲಿರುವ ಈ ಚಿತ್ರದಲ್ಲಿ ಎಲ್ಲಾರೂ ಹಿಂಬದಿಯಿಂದ ಸಾಗುತ್ತಿದ್ದಾರೆ, ಮುಂದೆ ದೊಡ್ಡ ಕಟ್ಟಡ ಕಾಣುತ್ತಿದ್ದು, ಅದು ದೇವಾಲಯದಂತೆ ಭಾಸವಾಗುತ್ತಿದೆ. ರಸ್ತೆಯ ಬದಿಯಲ್ಲಿ ಕೂತಿರುವ ಭಿಕ್ಷುಕರ ಬೆನ್ನಿನ ಮೇಲೆ ಅಲ್ಪ ಬೆಳಕನ್ನು ಕಾಣಿಸಲಾಗಿದ್ದು, ಗ್ರಾಫಿಕ್ ಮಾಧ್ಯಮದ ಚಿತ್ರ ಎನ್ನುವುದನ್ನು ಮರೆಸಿ ಛಾಯಾಚಿತ್ರದಂತೆ ಕಂಡುಬರುತ್ತಿದೆ.

**ಚಿತ್ರ–೩**

ಎಲ್ಲಿ ನೋಡಿದರೂ ಭೂಮಿಯಿಂದ ಎದ್ದಿರುವ ಕೈಗಳದ್ದೇ ಸದ್ದು, ಈ ದೃಶ್ಯವನ್ನು ನೋಡಿದಾಕ್ಷಣ ಯೇಸು ಸಿಲುಬೆಗೇರಿರುವ ನೆನಪು ತಟ್ಟನೆ ಬರುತ್ತದೆ. ಗ್ರಾಫಿಕ್‌ನಿಂದ ರಚಿತವಾದ ಕೃತಿಯಲ್ಲಿ ಚಿತ್ರದ ತುಂಬಾ ನೋವಿನ ಆರ್ಭಟಗಳೇ ಹೆಚ್ಚು. ನೋವು ಎಂದಾಕ್ಷಣ ನಾನಾ ರೀತಿಯ ನೋವು ಕಾಣುತ್ತೇವೆ. ಈ ನೋವು ಪ್ರತಿಯೊಬ್ಬ ಮನುಷ್ಯನಿಗೂ ಬರುತ್ತದೆ. ಆದರೇ ಇಲ್ಲಿನ ನೋವಿಗಿಂತ ಯಾತನೆಯೇ ಹೆಚ್ಚು. ಅಂತಹ ಮಹಾ ಅನ್ಯಾಯ ಇಲ್ಲಾಗಿರುತ್ತದೆ. ಪಾಶ್ಚಾತ್ಯ ಕಲಾವಿದರಲ್ಲಿ ಇಂತಹ ನೂತನ ವಿಭಿನ್ನ ಕಲಾಕೃತಿಗಳ ರಚನೆಯನ್ನು ಕಂಡಿರುತ್ತೇವೆ. ಅಂತಹ ಸನ್ನಿವೇಶಕ್ಕೆ ಪೂರಕವಾಗಿ ಕೃಷ್ಣಸೆಟ್ಟಿಯವರು ಇಲ್ಲಿ ವಾಸ್ತವ ದೃಶ್ಯಗಳ ಸಂಗತಿಯನ್ನೇ ಮುಖ್ಯವಾಗಿಟ್ಟುಕೊಂಡು ರೇಖೆಗಳಲ್ಲಿ ಅಸಂಬದ್ಧತೆ ಇರುತ್ತಾದರೂ ನೋಡುವವರಿಗೆ ಅದರ ಅರಿವಾಗದೆಯಿರದು ಅಷ್ಟರಮಟ್ಟಿಗೆ ತಮ್ಮ ಕಲ್ಪನಾಲೋಕಕ್ಕೆ ಹೋಗಿ ಈ ಚಿತ್ರವನ್ನು ಸೃಷ್ಟಿ ಮಾಡಿದಂತಿದೆ.

**ಚಿತ್ರ–೪**

ಶೀರ್ಷಿಕೆರಹಿತ ಈ ಚಿತ್ರದಲ್ಲೂ ಕೂಡ ಹಿಂಸೆಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ ಎನಿಸುತ್ತಿದೆ, ಹಿಂದಿನ ಚಿತ್ರಕೃತಿಯಂತೆ ಇಲ್ಲಿಯೂ ಕೂಡ ನಿರ್ಜನ ಪರಿಸರದಲ್ಲಿ ಒಂದು ಗಂಡು, ಮತ್ತು ಹೆಣ್ಣು ತುಂಬಾ ಯಾತನೆ ಪಡುತ್ತಿರುವ ಸನ್ನಿವೇಶ ಎಂತಹವರಿಗೂ ಅರಿವಾಗುತ್ತದೆ. ಆ ರೀತಿಯಲ್ಲಿ ಕೃಷ್ಣಸೆಟ್ಟಿ ಚಿತ್ರಿಸಿ ಮುದ್ರಿಸಿರುತ್ತಾರೆ. ಕಲ್ಲು ಮಂಟಪಗಳ ಮೇಲೆ ಅದೇ ಕುರ್ಚಿ ಮತ್ತು ಕೈ ಸಿಂಬಲ್, ಈ ಕೈ ಸಿಂಬಲ್ ಹೆಚ್ಚು ತಮ್ಮ ಚಿತ್ರಗಳಲ್ಲಿ ಬಳಸಿರುವ ಕಾರಣ ಎಂದರೆ ಕಾಂಗ್ರೆಸ್ ಸರ್ಕಾರ ಆಗಿನ ದುರಾಡಳಿತದ ಕಾರಣವೇ ನನಗೀನೆನಪು ಬರುತ್ತದೆ. ಇಲ್ಲೊಬ್ಬ ವ್ಯಕ್ತಿಯನ್ನು ಬಂಡೆಗೆ ಕಟ್ಟಿ ನಿಲ್ಲಿಸಿದ್ದು, ಬಟ್ಟೆಯಿಲ್ಲದ ದೇಹಕ್ಕೆ ಮೊಳೆಗಳ ಸುರಿಮಳೆ, ಅದು ಚಿಕ್ಕಮಟ್ಟ ಮೊಳೆಗಳಲ್ಲ, ದಪ್ಪದಪ್ಪ ಮೊಳೆಗಳು. ದೇಹಕ್ಕೆ ಚುಚ್ಚಿರುವಂತೆ ಬಾಸವಾಗುತ್ತಿರುವ ದೃಶ್ಯದಲ್ಲಿ ಅವನೊಬ್ಬ ಪಾಶ್ಚಾತ್ಯ ವ್ಯಕ್ತಿಯೆಂಬುದನ್ನು ಗುರುತಿಸಬಹುದು. ಮತ್ತೊಬ್ಬ ಹೆಣ್ಣು ಅವನ ಬಲಭಾಗದಲ್ಲಿ ಕುಂತಿರುವುದು ಕೂಡ ನಗ್ನವಾಗಿಯೇ, ಕೈ ಕಾಲಾಗಿದ್ದು, ಕಾಲು ಕೈಗಳನ್ನ ತೋರಿಸಿರುವುದನ್ನು ನೋಡಿದರೇ ಹೀಗೆ ಆ ವ್ಯಕ್ತಿಗಳನ್ನು ನೋಡಬಹುದೇನೋ ಎಂಬಂತೆ ಕಾಣುತ್ತದೆ. ಈ ನೋವುಗಳ ಮಧ್ಯೆಯು ನಗುತ್ತಿರುವ ಸುಂದರ ಹೂಗಳ ರಾಶಿ. ಗರಿಕೆಯ ಚೆಲುವು ತುಂಬಾ ಆನಂದವನ್ನು ತರುವಂತಿದೆ.

**ಚಿತ್ರ–೫**

ಈ ಹಿಂದೆ ಹೇಳಿರುವ ವಿಷಯವೇ ಇಲ್ಲಿ ಮತ್ತೊಮ್ಮೆ ಪ್ರಸ್ತಾಪವಾಗಿರುತ್ತದೆ. ನಿಸರ್ಗದ ಮಡಿಲಲ್ಲಿ ಟೇಬಲ್‌ನ ಮೇಲೆ ಅದೇ ಕುರ್ಚಿ ಮತ್ತು ಕೈಗಳನ್ನು ತೋರಿಸಿ ಎದುರಿಗಿರುವ ವ್ಯಕ್ತಿಯ ಕೈ ಕಾಲು ಮಾಡಿ ಅದರ ಕಡೆ ತೋರಿಸುತ್ತಿರುವ ದೃಶ್ಯವಾಗಿರುತ್ತದೆ. ಆ ವ್ಯಕ್ತಿಯ ಬುರುಡೆ ಮುಂದೆ ಎದ್ದಿರುವಂತಿದ್ದು, ಕುಬ್ಜವಾಗಿರುತ್ತದೆ.ಕಪ್ಪು ಹಲಗೆಯ ಹಿಂದೆ ಬಿಳಿಬಣ್ಣದ ಕಪ್ಪು ಚುಕ್ಕಿಗಳಿಂದ ರಚಿಸಲಾದ ಈ ಗ್ರಾಫಿಕ್ ಚಿತ್ರ ತುಂಬಾ ಅರ್ಥವಂತಿಕೆಯಿಂದ ಕೂಡಿರುತ್ತದೆ.

**ಚಿತ್ರ–೬**

ಕೈಗಳ ಸಮೂಹವು ಒಂದು ಒಗ್ಗಟ್ಟಿನ ಸೂಚಕವಾಗಿ ಕಂಡುಬರುತ್ತದೆ. ಈ ಪ್ರಜಾ ಪ್ರಭುತ್ವ ಸಮಾಜದಲ್ಲಿ ಸಮಾನತೆಯ ಪ್ರತಿಬಿಂಬವಾಗಿ ಈ ಚಿತ್ರವನ್ನು ಕಾಣಬಹುದು. ಕೈಗಳು ಮನುಷ್ಯನ ಅಂಗಾಂಗಗಳಲ್ಲಿ ಬಹುಪ್ರಮುಖವಾದ ಅಂಗವಾಗಿ ಕಂಡುಬರುತ್ತದೆ. ಕೈ ಸಂಕೇತವಾಗಿ ರಾಷ್ಟ್ರಮಟ್ಟದ ಕಾಂಗ್ರೆಸ್ ಪಕ್ಷದ ಸಂಕೇತವಾಗಿ ಕೈಯನ್ನು ಬಳಸಿಕೊಳ್ಳಲಾಗಿದೆ. ಕೈಗಳು ದಿನನಿತ್ಯದ ಮಾನವನ ಕಾರ್ಯಗಳಿಗೆ ಪ್ರಮುಖವಾದದ್ದು ಮತ್ತು ನಾಟಕ ಕ್ಷೇತ್ರದಲ್ಲಿ ತೊಗಲುಗೊಂಬೆ ಆಟದಲ್ಲಿ ಕೈಗಳ ಮೂಲಕ ಪಾತ್ರಗಳ ವಿವರಣೆಯನ್ನು ಮಾಡಲಾಗುವುದು ಮತ್ತು ಮರಳು ಕಲಾಕ್ಷೇತ್ರದಲ್ಲಿ

ಕೈ ಬೆರಳಿನಿಂದ ವಿಸ್ಮಯವಾದ, ಸುಂದರವಾದ ಚಿತ್ರಕಲೆಯನ್ನು ಮರಳನ್ನು ಬಳಸಿಕೊಂಡು ಬರೀ ಕೈ ಬೆರಳಿನಿಂದ ಅಂದವಾದ ಚಿತ್ರವನ್ನು ಚಿತ್ರಿಸಲಾಗುವುದು. ಕೈಗಳು ಸಂಕೇತವಾಗಿ ಬರುವುದನ್ನು ಹೋಗುವುದನ್ನು ಸೂಚಿಸಬಹುದು. ಕೈಗಳು ಮಾನವನ ಭವಿಷ್ಯವನ್ನು ತನ್ನ ಕರಗಳಲ್ಲಿ ಅಡಗಿಸಿ ಕೊಂಡಿರುವುದು. ಶಾಸ್ತ್ರ ನೋಡುವುದರಿಂದ ಕೈಗಳ ಮೇಲಿನಗೆರೆಗಳು ವಿದ್ಯಾರೇಖೆ, ಆಯುಷ್ಯರೇಖೆ, ಸಂತಾನರೇಖೆ, ಧನರೇಖೆ, ಈ ರೀತಿಯ ವಿಶೇಷತೆಯನ್ನು ಹೊಂದಿರುವುದು. ಇನ್ನೂ ಅನೇಕ ವಿಷಯ ಸಂಪತ್ತಿನಿಂದ ಕರಗಳ ಅಥವಾ ಕೈಗಳ ವಿಚಾರವನ್ನು ವಿಶ್ಲೇಷಣೆಗೆ ಒಳಪಡಿಸ ಬಹುದು.

**ಚಿತ್ರ–೭**

೨೧/೨x೩ ಆಳತೆಯುಳ್ಳ ಈ ಚಿತ್ರಕೃತಿಯಲ್ಲಿ ಕವಡೆಗಳನ್ನು ಮುಖ್ಯ ವಸ್ತುಗಳಾಗಿ ಕಾಣಬಹುದು. ಕಲಾವಿದ ಚಿ.ಸು.ಕೃ ರವರು ಈ ಕವಡೆಗಳನ್ನು ಹೆಣ್ಣಿನ ಯೋನಿಗೆ ಹೋಲಿಸಿರುವುದುಂಟು. ಅದು ಅವರದೇ ಆದ ಕಲ್ಪನೆ ಮತ್ತು ಕಲಾವಿದನಾಗಿ ನೋಡುವ ನೋಟವೂ ಕೂಡ. ಅವರೇ ಹೇಳಿರುವುದನ್ನು ಇಲ್ಲಿ ಸ್ಪಷ್ಟಪಡಿಸುತ್ತಾ ಕ್ಯಾನ್ವಸ್ ಮಧ್ಯ ಭಾಗದಲ್ಲಿ ಹದಿನೇಳು ಕವಡೆಕಾಯಿಗಳನ್ನು ಕಪ್ಪು, ಬಿಳುಪಿನಿಂದ ರಚಿಸಲಾಗಿದ್ದು, ಚಿಕ್ಕದರಿಂದ ದೊಡ್ಡವುಗಳವರೆಗೂ ತೋರಿಸಲಾಗಿರುತ್ತದೆ. ಅವುಗಳ ಕೆಳಗೆ ಒಂದು ಸಣ್ಣದೊಂದು ಕೈಚಾಚಲಾಗಿದೆ. ಅವರ ಕಲ್ಪನೆ ಏನೇಯಿದ್ದರೂ ಇಲ್ಲಿ ಅವುಗಳೆಡೆಗೆ ಕೈನೆಟ್ಟಿರುವುದನ್ನು ಗಮನಿಸಿದರೆ ಎಲ್ಲರಿಗೂ ಅವುಗಳ ಅವಶ್ಯಕತೆ ಇದ್ದೇ ಇದೆ ಎಂಬುದು ವಾಸ್ತವವಾದರೂ ಅವುಗಳಲ್ಲಿ ಚಿಕ್ಕ, ಪುಟ್ಟ ಕವಡೆಗಳು ಇಲ್ಲಿ ಬಂದಿರುವುದೇಕೆ ಎಂಬುದು ಯಕ್ಷ ಪ್ರಶ್ನೆಯಾಗಿದೆ. ಇದಕ್ಕೆ ಅವರನ್ನು ಕೇಳಿದರೆ ಅದು ನನ್ನ ಕಲ್ಪನೆ ಅದಕ್ಕೆ ಅರ್ಥಕೊಡುವ ಪ್ರಮೇಯವೇ ಇಲ್ಲ ಎನ್ನುತ್ತಾರೆ. ಇಲ್ಲಿ ಈ ವಸ್ತುವಿಷಯಕ್ಕೆ ಒತ್ತಾಯವೂ ಕೂಡ ಇರುವುದಿಲ್ಲ. ಅವರ ಕಲ್ಪನೆಗೆ ಮಿತಿಯಿರುವುದಿಲ್ಲ. ಆದರೂ ಕವಡೆಗಳನ್ನು ನೋಡುವ ದೃಷ್ಟಿ ಒಂದಿಷ್ಟು ಆಲೋಚಿಸುವ ಮಟ್ಟಕ್ಕೆ ಕರೆದೊಯ್ಯುವುದಂತೂ ಸತ್ಯ. ಬಿಳಿ ಬಟ್ಟೆಯ ಮೇಲೆ ಕಪ್ಪು, ಬಿಳುಪಿನಿಂದ ಚಿತ್ರಿಸಿರುವುದು ವಿಶೇಷಗಳಲ್ಲೊಂದು.

**ಚಿತ್ರ–೮**

ಈ ಚಿತ್ರಕೃತಿಯೂ ಎರಡೂವರೆ ಮತ್ತು ಮೂರು ಆಳತೆಯಲ್ಲಿದ್ದು, ಒಂದು ಪರಿಪೂರ್ಣ ಸಂಯೋಜನಾ ಶೈಲಿಯನ್ನು ಹೊಂದಿರುತ್ತದೆ. ಪ್ರಾಣಿಯ ಮುಖವಾಡವಿರುವ ಮಾನವ ಮುಖವಿಲ್ಲದ ಪ್ರಾಣಿಯನ್ನು ಹಗ್ಗಕಟ್ಟಿ ಹಿಡಿದುಕೊಂಡಿದ್ದು, ಇದು ಹೆಣ್ಣು ಎನ್ನುವ ಕಾರಣಕ್ಕೆ ಎದೆಯಲ್ಲಿ ಉಬ್ಬವಾಗಿ ತೋರಿಸಲಾಗಿದೆ. ವಿಚಿತ್ರ ಕಾಲು ಕೈಗಳನ್ನು ತೋರಿಸಿರುವ ಕಲಾವಿದರು ಗ್ರಾಫಿಕ್ ಕೃತಿ ಎಂಬುದನ್ನು ಸ್ವಾಭಾವಿಕವಾಗಿ ಕಂಡು ಹಿಡಿಯಲಾಗುತ್ತದೆ. ಅಷ್ಟರ ಮಟ್ಟಿಗೆ ಚಿತ್ರವನ್ನು ರಚಿಸಿರುತ್ತಾರೆ. ಇದು ಕೂಡ ಕಲ್ಪನೆಯ ಚಿತ್ರವಾಗಿದ್ದು, ಇದರ ಹಿಂಭಾಗದಲ್ಲಿ ಸ್ಪಷ್ಟತೆಯಿಲ್ಲದ ಗೊಂಬೆಗಳನ್ನು ಕಾಣಬಹುದು. ಬಿರುಕು ಬಿಟ್ಟಿರುವ ಗೋಡೆಯಲ್ಲಿ ಕಿಟಕಿಯಿದ್ದು, ಒಳಾಂಗಣದ ದೃಶ್ಯವೆಂಬುದು ಕಂಡುಬರುತ್ತಿದೆ.

ಮನುಷ್ಯನನ್ನು ಪ್ರಾಣಿಗೆ ಹೋಲಿಕೆ ಮಾಡಿದ್ದಾರೆ ಅದು ಯಾವ ಪ್ರಾಣಿಯಿರಬಹುದು ಎಂಬುದು ಊಹಿಸಿ ನೋಡಬಹುದಷ್ಟೇ ಯಾವುದೇ ಸ್ಪಷ್ಟತೆಯಿರುವುದಿಲ್ಲ. ಇಲ್ಲಿ ಹಳದಿ, ಕಪ್ಪು ಮತ್ತು ಬಿಳಿ ವರ್ಣಗಳನ್ನು ಹೆಚ್ಚು ಬಳಸಲಾಗಿರುತ್ತದೆ.

**ಚಿತ್ರ–೯**

ಶೀರ್ಷಿಕೆ ರಹಿತ ಚಿತ್ರಕೃತಿಯಾಗಿರುವ ಈ ಕೃತಿಯಲ್ಲಿ ಭಾರತದ ರಾಜಕೀಯ ವ್ಯವಸ್ಥೆಯಲ್ಲಿನ ದೋಷಗಳನ್ನು ಪ್ರತಿಬಿಂಬಿಸುವ ಆಶಯವಿದ್ದಂತಿದ್ದು,[೨೮] ಮುಖ್ಯ ವಸ್ತುವಾಗಿ ನಿಷ್ಕ್ರಿಯವಾಗಿರುವ ಒಬ್ಬ ವ್ಯಕ್ತಿಯನ್ನು ತೋರಿಸಲಾಗಿದೆ. ಅದು ಒಂದು ಕುರ್ಚಿ ಮೇಲೆ ಎಡಗೈಯಲ್ಲೊಂದು ಕೋಲನ್ನು ಹಿಡಿದು ತನ್ನ ಅಂಗೈಯನ್ನು ಪ್ರದರ್ಶಿಸುತ್ತಾ ತನ್ನ ಭಾವನೆಯನ್ನು ಭಾವನಾತ್ಮಕವಾಗಿ ಹೊರಹಾಕಿದ್ದು, ಇವನ ಸುತ್ತಲೂ ಭೂಮಿಯಿಂದ ಸಿಡಿದೆದ್ದಂತೆ ಪ್ರಜ್ವಲಿಸಿರುವ ಕೈಗಳು, ಇದರ ಮೇಲೆ ಎರಡು ಕುರ್ಚಿಗಳು ನಟ್ಟನಡುವೆ ಎದ್ದು ನಿಂತತಿವೆ. ಆ ಕುರ್ಚಿಯ ನಡುವಿನ ತಿಕ್ಕಾಟ ಮನುಷ್ಯನ ಅಂತರಂಗವನ್ನು ಬಹಿರಂಗಗೊಳಿಸುವ ರೀತಿ ನಿಜಕ್ಕೂ ಮೌನವಾಗಿಸುತ್ತದೆ. ಅಂತಹ ಅಧಿಕಾರದ ದುರಾಸೆಯ ತೊಳಲಾಟದ ಪರಿಸರವನ್ನು ತಮ್ಮದೇ ಶೈಲಿಯಲ್ಲಿ ಕಲಾವಿದ ಚಿ.ಸು.ಕೃಷ್ಣಸೆಟ್ಟಿ ವಿವರಿಸಿದ್ದಾರೆ.

**ಚಿತ್ರ–೧೦**

ಭಾರತದಲ್ಲಿನ ರಾಜಕೀಯ ಸ್ಥಿತಿಯಿಂದಾಗುತ್ತಿದ್ದ ಎಡವಟ್ಟುಗಳಿಗೆ ಸಾಮಾನ್ಯವರ್ಗಕ್ಕೆ ತೀರ ತೊಂದರೆಯಾಗುತ್ತಿತ್ತು. ೧೯೭೫ರ ಎಮರ್ಜೆನ್ಸಿ ಸಮಯದಲ್ಲಾದ ಹಿಂಸೆಗೆ ಸ್ವತಃ ಕಲಾವಿದ ಚಿ.ಸು.ಕೃಷ್ಣಸೆಟ್ಟಿಯವರೆ ಬೀದಿಗಿಳಿದು ಹೋರಾಟ ಮಾಡಿ ಜೈಲಿಗೆ ಹೋಗಿ ೧೮ ತಿಂಗಳ ಕಾಲ ಸೆರೆವಾಸವನ್ನನುಭವಿಸಿ ಬಂದವರು. ಅಲ್ಲಿ ಕೈದಿಯಂತೆ ಕಾಣದಿದ್ದರೂ ಒಬ್ಬ ಸಾಮಾನ್ಯರಂತೆ ಕಂಡರೂ ಜೈಲನ್ನು ಜೈಲೆಂದೇ ಸಂಬೋಧಿಸುತ್ತಾರೆ. ಅದೇರೀತಿ ಜೈಲಲ್ಲಿದ್ದಷ್ಟು ದಿನ ಅನುಭವ ಹೆಚ್ಚಾಯ್ತು, ರಾಜಕೀಯ ಮುಖಂಡರ ಮುಖಗಳ ಪರಿಚಯವಾದವು. ಆ ನಿಟ್ಟಿನಲ್ಲಿ ಸರ್ಕಾರ ನಡೆಸುವ ಪಕ್ಷಗಳ ನಡೆಯನ್ನು ತಿಳಿಸುವುದಾದರೂ ಹೇಗೆ ಎಂಬ ಆತಂಕದಲ್ಲಿ ತಮ್ಮ ಭಾವನೆಗಳನ್ನು ಹೊರಹಾಕುವಂತಹ ಮಾಧ್ಯಮ ಸಿಕ್ಕಾಗ ಇಂತಹ ಕಲಾಕೃತಿಗಳನ್ನು ರಚಿಸುವ ಮೂಲಕ ಸಾರ್ಥಕ ಗೊಳಿಸಿದ್ದಾರೆ ಎನಿಸುತ್ತಿದೆ. ಶೀರ್ಷಿಕೆ ರಹಿತ ಗ್ರಾಫಿಕ್ ಕೃತಿಯಾಗಿರುವುದರಿಂದ ಭಿನ್ನ ಆಯಾಮದಲ್ಲಿ ವಿಷಯವನ್ನು ಪ್ರಸ್ತುತಪಡಿಸಿದ್ದಾರೆ. ಹೆಬ್ಬಾಗಿಲು ಅದರ ಪ್ರವೇಶಕ್ಕೆ ದೊಡ್ಡದಾದ ಕುರ್ಚಿ(ಅಧಿಕಾರ), ಇದರ ಜೊತೆ ಇನ್ನೂ ಮೂರು ಕುರ್ಚಿಗಳಿದ್ದು, ಅವುಗಳ ಬಾಗಿಲಲ್ಲಿ ಗರ್ಭಿಣಿ ಹೆಂಗಸರನ್ನು ತೋರಿಸಿ, ಹೊಟ್ಟೆಯ ಮೇಲೆ ಹಸ್ತವನ್ನು ಚಾಚಿರುವ ಕೈಯೊಂದನ್ನು ತೋರಿಸಲಾಗಿದೆ. ಕಟ್ಟೆಗೆಯಿಂದ

೨೮. ಡಾ.ಸಿದ್ದಲಿಂಗಸ್ವಾಮಿ ಹಿರೇಮಠ: ಕಲಾವಿದ ಆರ್.ಎಂ.ಹಡಪದ. ಒಂದು ಅಧ್ಯಯನ ಪಿಎಚ್.ಡಿ.ಮಪ್ರಬಂಧ, ಕ.ವಿ.ವಿ. ಹಂಪಿ., ೨೦೦೩, ಪು.೧೩೧

ಮಾಡಿರುವ ಗಟ್ಟಿಮುಟ್ಟಿನ ಕುರ್ಚಿಯಲ್ಲಿ ಇವರಲ್ಲಿನ ಸಾಧಾರಣ ಯಾವುದೇ ಮಗುವಾದರೂ ಮುಂದೆ ರಾಜಕಾರಣಿಯಾಗಿ ಬರಬಹುದು ಎಂಬುದನ್ನು ಸೂಚಿಸುವಂತಿದೆ ಈ ಚಿತ್ರಕೃತಿ.

**ಚಿತ್ರ-೧೧**

ಈ ಕಲಾಕೃತಿಯನ್ನು ಗಮನಿಸಿದಾಗ ಎಂತಹವರಿಗೂ ಅರಿವಿಗೆ ಭಾರದೇಯಿರದು. ಯಾಕೆಂದರೆ ಇದು ಆಧುನಿಕ ಜಗತ್ತು, ಆದರೂ ಇವತ್ತಿನ ದಿನಗಳಲ್ಲಿ ಸಿನಿಮಾ ರೀಲ್ ಇರುವುದಿಲ್ಲ. ಎಲ್ಲಾ ಡಿಜಿಟಲ್ ಮಾರ್ಗಬಂದು. ರೀಲ್‌ನ ಕಾಲ ಹೊರಟುಬಿಟ್ಟಿದೆ. ಸಿನಿಮಾ ಕ್ಷೇತ್ರ ತುಂಬಾ ದೊಡ್ಡದಾಗಿ ಬೆಳೆಯುವತ್ತಾ ದಾಪುಗಾಲಿಟ್ಟಿರುವಾಗ ಅದು ಎಂಬತ್ತರ ದಶಕದಲ್ಲಿ ಕೃಷ್ಣಸೆಟ್ಟಿಯವರು ಈ ಕೃತಿಯನ್ನು ರಚಿಸಿದ್ದಾರೆ. ಅದು ದೆಹಲಿಯಂತ ದೇಶದ ರಾಜಧಾನಿಯಲ್ಲಿ. ಆಗಿನ ಸಿನಿಮಾ ಜಗತ್ತು ಹೇಗೆಲ್ಲಾ ಇದೆ ಎಂಬುದನ್ನು ಸಮಾಜಕ್ಕೆ ತೋರಿಸುತ್ತಿರುವಾಗ ಒಬ್ಬ ಕಲಾವಿದನಾಗಿ ಅದೇ ರೀಲ್‌ಗಳಲ್ಲಿರುವ ದೃಶ್ಯವನ್ನು ಚಿತ್ರಗಳ ಮೂಲಕ ಬಿತ್ತರಿಸಬಾರದೇಕೆಂಬ ಆಶಯದೊಂದಿಗೆ ಕಲಾವಿದರೂ ಒಂದು ಕಲ್ಪನಾ ಜಗತ್ತನ್ನು ನೈಜವಾಗಿ ತೋರಿಸಿ ಯಶಸ್ವಿಯಾಗಿದ್ದಾರೆ.

**ಚಿತ್ರ-೧೨**

ಈ ಕಲಾಕೃತಿಯಲ್ಲಿ ಬೆತ್ತಲೆಯ ಒಬ್ಬ ವ್ಯಕ್ತಿ ಕುರ್ಚಿಯ ಮೇಲೆ ಕುಳಿತಿದ್ದು, ಕೈಕಾಲುಗಳಿಗೆ ಮೊಳೆ ಹೊಡೆದು ಕುಳ್ಳಿಸಿರಲಾಗಿದೆ. ತಲೆಗೆ ಮಾತ್ರ ಟೊಪ್ಪಿಗೆಯನ್ನು ಹಾಕಲಾಗಿದ್ದು, ಮುಖ ಮಾತ್ರ ಅಸ್ಥಿಪಂಜರದಂತೆ ಗೋಚರಿತವಾಗಿದೆ. ದೇಹದ ಅಲ್ಲಲ್ಲಿ ರೋಮಗಳನ್ನು ತೋರಿಸಿರುವ ಕಲಾವಿದ ತನ್ನ ಭಾವನೆಯನ್ನು ಚಿತ್ರದ ಮೂಲಕ ಹೊರಹಾಕಿದ್ದಾರೆ ಎಂಬುದು ಸ್ಪಷ್ಟವಾಗಿ ಚಿತ್ರದ ಮುಖಾಂತರ ಗೋಚರಿತವಾಗಿದೆ. ಇಲ್ಲಿ ರಾಜಕೀಯ ವ್ಯಕ್ತಿ ಅನ್ನಬೇಕೋ ಅಥವಾ ಸ್ವಾತಂತ್ರ್ಯ ಹೋರಾಟಗಾರರೆನ್ನಬೇಕೋ ತಿಳಿಯದಾಗಿದೆ. ನೋಡುಗನ ಗೊಂದಲ ತಾನಾಗಿಯೇ ಒದಗಿಬರುವಂತೆ ಕಂಡುಬುತ್ತಿದೆ. ಕತ್ತಲಕೋಣೆಯಲ್ಲಿ ಒಬ್ಬ ಮನುಷ್ಯ ಮತ್ತು ಅವನ ಮುಂದೆ ತಲೆ ಎತ್ತಿರುವ ಏಳು ಕೈಗಳು ಬಿಟ್ಟರೇ ಮತ್ತೇನೂ ಕಾಣಿಸದು. ಅಷ್ಟರ ಮಟ್ಟಿಗೆ ನೆರಳು ಬೆಳಕಿನಾಟದಲ್ಲಿ ತೋರಿಸಿದ್ದಾರೆ. ಒಟ್ಟಾರೇ ಈ ಕೃತಿಯೂ ಒಂದು ರೀತಿಯಲ್ಲಿ ಗೊಂದಲ ಸೃಷ್ಟಿಸಿರುತ್ತದೆ. ಇಲ್ಲಿ ಕಪ್ಪು ಮತ್ತು ಬಿಳಿ ಬಣ್ಣಗಳನ್ನು ಬಳಸಿರುವುದು ವಿಶೇಷವಾಗಿರುತ್ತದೆ.

**ಚಿತ್ರ-೧೩**

ಈ ಕಲಾಕೃತಿ ನೋಡಿದರೆ ಒಂದು ಟಿ.ವಿಯಂತೆ ಭಾಸವಾಗುತ್ತಿದೆ. ಏಕೆಂದರೆ ಟಿ.ವಿಯ ಪೆಟ್ಟಿಗೆಯಂತೆ ಮೊದಲು ತಯಾರಿಸಿಕೊಂಡು ಅದರ ಒಳಭಾಗದಲ್ಲಿ ಮನುಷ್ಯನು ನೀರಿನಲ್ಲಿ ದೋಣಿಯನ್ನು ಬಿಡುತ್ತಿರುವಂತೆ ಚಿತ್ರಿಸಲಾಗಿದ್ದು, ಅವನ ಬಲಭಾಗದಲ್ಲಿ ಮತ್ತು ಎಡಭಾಗದಲ್ಲಿ

ಕಲಾಕೃತಿಯನ್ನು ಗೋಡೆಗೆ ಹಾಕಲಾಗಿದ್ದು, ಆ ಗೋಡೆಯ ಮೇಲೆ ಪ್ರಾಗೈತಿಹಾಸ ಚಿತ್ರಗಳು ಹಾಗೂ ಪ್ರಕೃತಿಯನ್ನು ಕಾಣಬಹುದು. ಇನ್ನೊಂದು ಕಡೆ ಇದನ್ನು ಅಕ್ವೇರಿಯಂ ರೀತಿಯಲ್ಲಿ ತೋರಿಸಿರುವುದುಂಟು. ಅಲ್ಲಿರುವ ನೀರಿನಲ್ಲಿ ಸತ್ತ ಮೀನುಗಳು ತೇಲುತ್ತಿರುವಂತೆ ಆ ನೀರಿನಲ್ಲಿ ಪ್ಲಾಸ್ಟಿಕ್‌ನಿಂದ ತಯಾರಾದ ದೋಣಿಯನ್ನು ಬಿಡಲು ಸಿದ್ದತೆಯನ್ನು ನಡೆಸಿರುವಂತೆ ಕಂಡುಬರುತ್ತಿದೆ. ಇಲ್ಲಿ ಕಲಾವಿದರು ತಮ್ಮದೇ ಶೈಲಿಯಲ್ಲಿ ಚಿತ್ರಕೃತಿಯನ್ನು ರಚಿಸಿದ್ದು, ಅದು ಕಾಲ್ಪನಿಕ ಅನ್ನುವುದಕ್ಕಿಂತ ಅವರ ಆಲೋಚನಾ ಕ್ರಮ ಎನ್ನುವುದು ಸೂಕ್ತವೆನಿಸುತ್ತಿದೆ. ಇಲ್ಲಿ ಹೆಚ್ಚು ಸಮೃದ್ದಿಯಾಗಿರುವುದಕ್ಕೆ ಹಸಿರು ಮುಖ್ಯ ಕಾರಣವಾಗಿರುತ್ತದೆ. ತುಂಬಾ ಆಳವಾಗಿ ಗಮನಿಸುತ್ತಾ ಹೋದಾಗ ಕಲ್ಲು, ಬಂಡೆಗಳ ಮಧ್ಯೆ ಮರ, ಗಿಡಗಳು ತಲೆಯೆತ್ತಿ ನಿಂತಿವೆ ಎಂಬುದನ್ನು ಕಾಣಬಹುದು. ಇದು ಹೀಗೆ ಇತ್ತು ಅನ್ನುವುದಕ್ಕಿಂತ ಹೀಗೆ ಇದ್ದಿರಬಹುದು ಎಂಬುದನ್ನು ಒತ್ತಿ ತೋರಿಸಿದಂತೆ ಭಾಸವಾಗಿರುತ್ತದೆ.

## ತೈಲವರ್ಣ ಚಿತ್ರಕೃತಿಗಳು

### ಚಿತ್ರ–೧

ಈ ಕಲಾಕೃತಿಯನ್ನು ನೋಡಿದ ತಕ್ಷಣ ರಾಜಕೀಯಕ್ಕೆ ಸಂಬಂಧಿಸಿದ ಚಿತ್ರವಾಗಿದ್ದು ಸಿಂಬಾಲಿಕ್ ಹಾಗೆ ಕುರ್ಚಿಯನ್ನು ಅದರ ಮೇಲೆ ಮನುಷ್ಯನ ಮುಖವಾಡವನ್ನು ಬಳಸಿಕೊಂಡು, ಮೇಲೆ ೬ ಮುಖಗಳು. ಊಸರವಳ್ಳಿಯ ಹಾಗೆ ರಾಜಕೀಯದವರು ಮಾತನ್ನು ಬದಲಾಯಿಸುವ ಹಾಗೆ ಆ ಪ್ರಾಣಿಯನ್ನು ಮತ್ತು ಮರ, ಹಾವು, ಮೀನು, ಕ್ಯಾನ್ವಸ್ ಇತ್ಯಾದಿಗಳು ಕಾಣಬಹುದು. ಇದನ್ನೆಲ್ಲ ನೋಡಿದರೆ ಇಂದಿನ ರಾಜಕೀಯ, ರಾಜಕಾರಣಿಯ ಪರಿಸ್ಥಿತಿ ಮಾತಿಗೆ ತಪ್ಪುವ, ಮನುಷ್ಯತ್ವವೆ ಇಲ್ಲದ ಹಾಗೆ ನಡೆದುಕೊಳ್ಳುವ ಪಕ್ಷಗಳು ಹಣದ ಆಸೆಗೆ ಯಾವ ಪರಿಸ್ಥಿತಿಯಲ್ಲೂ ಏನು ಬೇಕಾದರೂ ಮಾಡುವಂತಹ ರಾಜಕೀಯ ವ್ಯವಸ್ಥೆಯ ಬಗ್ಗೆ ಈ ಕಲಾಕೃತಿಯಲ್ಲಿ ಮುಡಿಸಿದ್ದಾರೆ. ಮುಖ್ಯವಾಗಿ ಕ್ಯಾನ್ವಸ್ ಮೇಲ್ಭಾಗದಲ್ಲಿ ೬ ಮುಖವಾಡಗಳಿದ್ದು ಅದರಲ್ಲಿ ಒಂದು ಮುಖವಾಡಕ್ಕೆ ಕಣ್ಣನ್ನು ಚಿತ್ರಿಸಲಾಗಿದೆ. ಇತರೆ ಮುಖವಾಡಗಳಿಗೆ ಕಣ್ಣು ಇಲ್ಲ. ಇದರ ಅರ್ಥ ಕುರುಡಿ ರಾಜಕೀಯ ಪದ್ದತಿ ಇರಬಹುದು. ಹಣದ ಆಸೆಗೆ ತಮ್ಮ ಕಣ್ಣುಗಳನ್ನು ಕುರುಡು ಮಾಡಿಕೊಳ್ಳುತ್ತಾರೆ. ಕುರ್ಚಿಯ ಮೇಲೆ ಊಸರವಳ್ಳಿಯ ಪ್ರತಿಬಿಂಬವನ್ನು ಚಿತ್ರಿಸಲಾಗಿದೆ. ತನ್ನ ಮುಖವನ್ನು ತಾನೆ ನೋಡಿಕೊಂಡಂತೆ ರಾಜಕಾರಣದಲ್ಲಿ ತಾನು ಮಾಡಿದ ಭ್ರಷ್ಟಾಚಾರ, ಯಾರಿಗೂ ಗೊತ್ತಿಲ್ಲವೆಂದು ತನ್ನನ್ನು ತಾನೇ ಹೆಮ್ಮೆ ಪಡುವಂತೆ ನೋಡುತ್ತಿದೆ. ತಾನು ಹಾಕಿದ ಮರವನ್ನು ಬೆಳಸಿ ದೊಡ್ಡದು ಆಗುತ್ತಿದೆ ಎಂಬ ಅರ್ಥದಲ್ಲಿ ಬಾಳೆಯ ಮರವನ್ನು ಚಿತ್ರಿಸಲಾಗಿದೆ ಹಾಗೂ ಮೀನು ಸಹ ಚಂಚಲತೆಯ ಸಂಕೇತವಾಗಿ ಕಾಣಬಹುದು

ರಾಜಕಾರಣದ ಹೆಜ್ಜೆಂಯು ಗುರುತು ಸಹ ಕಾಣದ ಭ್ರಷ್ಟಾಚಾರ ನಡೆಯುತ್ತಿರುವ ಸಂದರ್ಭವನ್ನು ಬಹಳ ಗಂಭೀರವಾಗಿ ಚಿತ್ರಿಸಲಾಗಿದೆ. ರಾಜಕೀಯದ ವ್ಯವಸ್ಥೆಯನ್ನು ತಮ್ಮ ಮನಸ್ಸಿನ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಅವರ ಎಲ್ಲಾ ಕಲಾಕೃತಿಗಳಲ್ಲಿ ಹಾವು ಬಳಸಲಾಗಿದೆ ಇದೇ ರೀತಿ ಈ ಕಲಾಕೃತಿಯಲ್ಲಿ ಹಾವನ್ನು ಕಾಣಬಹುದು. ಈ ಕಲಾಕೃತಿಯಲ್ಲಿ ಹಿಂಬದಿಯಲ್ಲಿ ಹಸಿರು ಮತ್ತು ಕಪ್ಪು ಮಿಶ್ರಣವನ್ನು ಕಾಣಬಹುದು ಹಾಗೂ ಹಳದಿ ಬಣ್ಣವನ್ನು ಕುರ್ಚಿ ಮತ್ತು ಕ್ಯಾನ್ವಾಸನಲ್ಲಿ ಬಳಸಲಾಗಿದೆ. ಕೆಂಪು ಮತ್ತು ಕೆಲವೇ ಬಣ್ಣಗಳನ್ನು ಬಳಸಿ ಚಿತ್ರಿಸಲಾಗಿದೆ.

**ಚಿತ್ರ–೨**

ಶೀರ್ಷಿಕೆರಹಿತ ಕಲಾಕೃತಿಯಾಗಿದ್ದು, ಕಲಾವಿದ ಒಂದು ವಸ್ತುವಿಷಯವನ್ನು ಆಲಿಸಿ ಕಾರ್ಟೂನ್ ಶೈಲಿಯಲ್ಲಿ ಚಿತ್ರಿಸಿದಂತಿದೆ. ಮುಖ್ಯವಾಗಿ ನಾಲ್ಕು ಬೊಂಬೆಯಾಕಾರದ ಆಕೃತಿಗಳನ್ನು ಚಿತ್ರಿಸಿದ್ದು, ಇಲ್ಲಿ ನಿಂತಿರುವ ಒಂದು ಬೊಂಬೆ, ದೊಡ್ಡದಾದ ಬಾಟಲಿಯನ್ನು ಹಿಡಿದುಕೊಂಡಂತೆ ಕಂಡುಬರುತ್ತಿದೆ. ಕತ್ತಲಕೂಪದಲ್ಲಿ ನಡೆಯುವ ಆಟೋಪಾಯಗಳನ್ನು ಬಿಂಬಿಸಿರುವಂತೆ ಬಾಸವಾಗುವ ಈ ಚಿತ್ರಗಳು. ಕೆಂಪು ಮರ, ಗಿಡವನ್ನು ತೋರಿಸಿರುವುದು ರಾತ್ರಿಯ ಸೌಂದರ್ಯವನ್ನು ಈ ರೀತಿಯಲ್ಲೂ ತೋರಿಸಬಹುದು ಎಂಬುದನ್ನು ಸವಿದು ಬಣ್ಣಗಳ ಮೂಲಕ ವರ್ಣಿಸಿದ್ದಿರಬಹುದು! ಕೆಲವರಿಗೆ ಜಗತ್ತು ಸೌಂದರ್ಯದಿಂದ ಕಾಣೋದೇ ಕತ್ತಲಾದಾಗವೆಂಬಂತೆ ಕಲಾವಿದರಿಗೆ ಆದ ಅನುಭವವನ್ನು ತೋರಿಸಿರಬಹುದು. ಇಂತಹದ್ದೇ ವಿಷಯ ಅಂದಾಗ ತುಂಬಾ ಮಾತನಾಡಬಹುದು ಆದರೆ ಶೀರ್ಷಿಕೆರಹಿತ ಕೃತಿಯ ಬಗ್ಗೆ ಏನೊಂದು ಮಾತನಾಡಿದರೂ ಅದರಿಂದ ದುರ್ಲಾಭವೇ ಹೆಚ್ಚು ಅನಿಸುತ್ತಿದೆ. ಅದೇ ಮಾರ್ಗದಲ್ಲಿ ಸಾಗಿರುವಂತಹ ಕೃತಿಯಲ್ಲಿ ಇದು ಒಂದು. ಕಪ್ಪು, ಬಿಳಿ, ಕೆಂಪು, ವರ್ಣಗಳನ್ನು ಹೆಚ್ಚಾಗಿ ಬಳಸಲಾಗಿರುತ್ತದೆ.

**ಚಿತ್ರ–೩**

ಕ್ಯಾನ್ವಸ್‌ನ ಮೇಲೆ ರಚಿತವಾಗಿರುವ ಕಲಾಕೃತಿಯಲ್ಲಿ ಈಗ ತಾನೆ ಉದ್ಭವವಾಗಿರುವಂತೆ ಪ್ರಜ್ವಲಿಸುರುತ್ತಿರುವ ಲಿಂಗ, ಲಿಂಗಕ್ಕೆ ಬಿಳಿ ನಾಮವಿಟ್ಟಿದ್ದು, ನಾಮದ ಮಧ್ಯಕ್ಕೆ ಕುಂಕುಮವನ್ನಿಡಲಾಗಿದೆ. ಜೊತೆಗೆ ಹೂವಿನ ಹಾರವನ್ನು ಹಾಕಲಾಗಿದೆ. ಲಿಂಗದ ಮುಂದೆ ಹರಿದು ಹೋಗುತ್ತಿರುವ ಹಾವು, ನೀರಿನ ದಡದಲ್ಲಿ ನಿಂತಿರುವ ಲಿಂಗದ ಬುಡದಲ್ಲಿ ಗರಿಕೆಯು ಎದ್ದು ನಿಂತಿರುವಂತೆ ಗೋಚರಿಸುತ್ತದೆ. ಈ ಕಲಾಕೃತಿಯು ನವ್ಯಶೈಲಿಯಲ್ಲಿ ರಚನೆಯಾಗಿದೆ. ಈ ಕೃತಿಯಲ್ಲಿ ಮುಖ್ಯವಾಗಿ ಎರಡು ವಸ್ತುಗಳನ್ನು ತೋರಿಸಲಾಗಿದ್ದು, ಅವುಗಳೇ ಪ್ರಮುಖದ್ದಾಗಿವೆ. ಹರಿದು ಹೋಗುತ್ತಿರುವ ಹಾವು ಮತ್ತು ಲಿಂಗಕ್ಕೆ ಕಪ್ಪು, ಹಿಂಬದಿಗೆ ಹಳದಿ, ಹಸಿರು ಮತ್ತು ಕಪ್ಪು ವರ್ಣಗಳನ್ನು ಬಳಸಲಾಗಿದೆ. ಈ ದೃಶ್ಯ ರಾತ್ರಿ

ಸಮಯದಲ್ಲಿ ಕಾಣುವ ಹಾಗಿದೆ. ಒಟ್ಟಾರೆ ಈ ಕಲಾವಿದ ತನ್ನಲ್ಲಿರುವ ಸೃಜನಶೀಲತೆಯನ್ನು ಈ ರೀತಿಯಲ್ಲಿ ಬಿಂಬಿಸಿರುವುದು ಒಂದು ಕಡೆಯಾದರೆ ಮತ್ತೊಂದು ಸಮಾಜದಲ್ಲಿನ ಸಂಸ್ಕೃತಿಯನ್ನು ಈ ರೀತಿ ತೋರಿಸಲೆತ್ನಿಸಿದ್ದಾರೆನ್ನಬಹುದು.

ಒಂದು ಲಿಂಗದಂತೆ ಇರುವ ವಿನ್ಯಾಸಕ್ಕೆ ಮಧ್ಯಭಾಗದಿಂದ ಬಲಕ್ಕೆ ಹೆಚ್ಚು ಸ್ಥಳಾವಕಾಶ ಹೊಂದಿರುವುದು ಕಲಾಕೃತಿಯಲ್ಲಿ ಮುಕ್ಕಾಲು ಭಾಗ ಎತ್ತರವಿದೆ. ಮೇಲೆ ಗೋಲಾಕಾರವಾಗಿದೆ. ಹೂವಿನ ಹಾರ ಹಾಕಲಾಗಿದೆ. ವಿಭೂತಿ, ಕುಂಕುಮ ಹಚ್ಚಿದಂತೆ ಪೂಜೆ ಮಾಡಲಾಗಿದೆ. ಕೆಳಗೆ ಹಾವು ನೆಲಕ್ಕಿಂತ ಎತ್ತರದಲ್ಲಿದ್ದು, ಗಾಳಿಯಲ್ಲಿ ಹರಿದಾಡಿ ಹೋಗುತ್ತಿದೆ. ಎಡಭಾಗಕ್ಕೆ ಹಾವಿನ ಮುಖವಿರುವುದು ಬಲಕ್ಕೆ ಬಾಲವಿರುವುದೇ ನೆಲದಲ್ಲಿ ನೀರಿನ ಅಲೆಗಳಂತೆ ಕಾಣುವುದು. ಲಿಂಗದಂತೆ ಇರುವ ಗೋಪುರಕ್ಕೆ ಯುದ್ಧದಲ್ಲಿ ಟೋಪಿ ಹಾಕಿರುವ ಹಾಗೇ ಕಾಣುವುದು. ಗೋಪುರದ ಮೇಲೆ ಹಳದಿ ಬಣ್ಣ ಲೇಪನವಾಗಿದೆ. ಆಕಾಶ ಕತ್ತಲದಂತಿರುವುದು. ಹಾವಿನ ಕೆಳಭಾಗದಲ್ಲಿ ಹಳದಿ ಬಣ್ಣದ ತುಂಡು ಸೋರಿಬಂದಂತೆ ಕಾಣುತ್ತದೆ. ಹಾವಿಗೆ ಕೆಂಪು ಬಣ್ಣದ ಕಣ್ಣು ಇರುವುದು. ಬಾವಿ ಬಿಳಿ ಬಣ್ಣದಲ್ಲಿ ಲೇಪನವಾಗಿದೆ. ಒಂದು ಕಲಾಕೃತಿ ಸಾಂಕೇತಿಕವಾಗಿ ವರ್ಣಲೇಪನದಿಂದ ರಚನೆಯಾಗಿರುವುದು ಕಂಡುಬರುವುದು.

**ಚಿತ್ರ-೪**

ಕಲ್ಪನಾಲೋಕಕ್ಕೆ ಜಾರಿರುವ ಕಲಾವಿದರಿಗೆ ಪಾಸಿಟೀವ್‌ಗಿಂತ ನೆಗೆಟಿವ್ ಜಾಸ್ತಿ ಎನಿಸುತ್ತಿದೆ. ಇನ್ನೂ ಅವರ ಕಲಾಕೃತಿಗಳು ಒಂದೊಂದು ರೂಪತೆಯಲ್ಲಿ ಜಾರಿಹೋಗುತ್ತವೆ. ಈ ಕೃತಿಯಲ್ಲಿ ಕ್ರೀಯೆ ಟಿವಿಟಿ ಎನ್ನುವುದು ಬಲತಂದಿದೆ ಅಂತಲೇ ಹೇಳಬಹುದು. ಕಾರಣ ಮನುಷ್ಯನ ಮುಖವಾಡಗಳಲ್ಲಿ ಆಗುವ ಬದಲಾವಣೆಗಳನ್ನು ನೇರವಾಗಿ ಬಣ್ಣದ ಮೂಲಕ ತೋರಿಸಿದಂತಿದೆ. ಊಸರವಳ್ಳಿಗೆ ಹೋಲಿಸಿರುವ ಈ ಮುಖಗಳು ಯಾರದ್ದಿರಬಹುದು? ಎಂಬುದನ್ನು ಹುಡಕಲು ನಾವುಗಳು ಯತ್ನಿಸಿದರೆ ಬಹುಶಃ ಅದಕ್ಕೆ ಉತ್ತರ ಶೂನ್ಯ ಅನಿಸುತ್ತಿದೆ. ಉತ್ತರವೇ ಇಲ್ಲದ ಅನೇಕ ಪ್ರಶ್ನೆಗಳನ್ನು ಹುಟ್ಟು ಹಾಕುವತ್ತ ಹೆಜ್ಜೆಯಿಟ್ಟು, ಅಲ್ಪ ಗೊಂದಲಗಳಿಗೆ ಪೂರಕವಾದಂತೆ ವರ್ತಿಸುತ್ತಿದೆ ಈ ಕಲಾಕೃತಿ.

ಮೇಲ್ಭಾಗದಲ್ಲಿ ಐದು ಮುಖಗಳನ್ನು ಜೋಡಿಸಿರುವ ದೃಶ್ಯ ಅದರ ಕೆಳಭಾಗದಲ್ಲಿ ಪ್ರೈಂನಂತಿರುವ ಭಾವಚಿತ್ರದಲ್ಲಿ ನೊಂದಿರುವ ವೃದ್ದ. ಗೋಡೆಯಿಂದ ಜಿಗಿದಿರುವಂತೆ ಭಾಸವಾಗುತ್ತಿರುವ ಊಸರವಳ್ಳಿ ಪ್ರಾಣಿ. ಈ ಎಲ್ಲಾ ಮುಖಗಳಲ್ಲಿ ಈ ಥರದ ಒಂದು ಪ್ರಾಣಿ ಇದ್ದೆ ಇರುತ್ತದೆ. ಅದು ಸಮಯ ಬಂದಾಗ ಮಾತ್ರ ತೋರ್ಪಡಿಸುತ್ತದೆ. ಅವುಗಳಿಗೆ ಕಾರಣ ಅನೇಕವಿರಬಹುದು ಆದರೆ ನಂಬಿಕೆಗೂ ಇದು ಅನರ್ಹವಾಗುತ್ತದೆ ಎಂಬುದು ಅನುಭವದ ಮಾತು. ಅದರಂತೆ ಕಲಾವಿದರಾದ

ಚಿ.ಸು.ಕೃಷ್ಣಸೆಟ್ಟಿಯವರು ತಮ್ಮದೇ ಶೈಲಿಯಲ್ಲಿ ಈ ಚಿತ್ರವನ್ನು ರಚಿಸಿರುತ್ತಾರೆ. ನೀಲಿ, ಕೆಂಪು, ಹಳದಿ, ಬಿಳಿ, ಕಪ್ಪು ವರ್ಣಗಳನ್ನು ಇಲ್ಲಿ ಹೆಚ್ಚಾಗಿ ಬಳಸಲಾಗಿರುತ್ತದೆ.

**ಚಿತ್ರ–೫**

ಎರಡೂವರೆ ಎರಡು ಅಡಿಯಿರುವ ಈ ಚಿತ್ರಕೃತಿಯಲ್ಲಿ ಒಬ್ಬ ಮನುಷ್ಯನ ಭಾವಚಿತ್ರವನ್ನು ಬಿಂಬಿಸಲಾಗಿದ್ದು, ತಲೆಗೆ ಕಿರೀಟ, ದಪ್ಪನೆಯ ಮೂಗು, ಕಣ್ಣು, ಚಿಕ್ಕದಾದ ತುಟಿ ಮತ್ತು ಕತ್ತು, ಆ ಕತ್ತಿಗೆ ಕಪ್ಪು ಹಾವನ್ನು ಸುತ್ತುವರಿದು ಬಲಭಾಗಕ್ಕೆ ಹೆಡೆ ಎತ್ತಿ ನಿಂತಿರುವಂತೆ ಚಿತ್ರಿಸಲಾಗಿದೆ. ತಲೆಯ ನೆತ್ತರಕ್ಕೆ ಹಾರುತ್ತಿರುವ ಗಾಳಿಪಟದ ಬಾಲ ಹಾವಿನದ್ದಾಗಿದೆ. ಹಾಗೆಯೇ ಕೆಳಭಾಗದ ಎಡಭಾಗದಲ್ಲಿ ನಾಗರ ಕಲ್ಲನ್ನು ಸೃಷ್ಟಿಸಿದ್ದಾರೆ. ಒಟ್ಟು ಈ ಕೃತಿಯಲ್ಲಿ ಮೂರು ಹಾವುಗಳಿರುವುದು ವಿಶೇಷ. ಯಾವ ದೃಷ್ಟಿಕೋನವನ್ನಿಟ್ಟುಕೊಂಡು ಚಿತ್ರವನ್ನು ರಚಿಸಿದ್ದಾರೆ ಎಂಬುದು ಕಲಾವಿದರಿಗೆ ಬಿಟ್ಟ ವಿಚಾರವಾದರೂ ನೋಡುಗನ ದೃಷ್ಟಿ ಕಲಾಕೃತಿಯ ವಸ್ತುಸ್ಥಿತಿಯ ಕಡೆ ವಾಲುವುದಂತೂ ದಿಟ. ಕಾರ್ಟೂನ್‌ನಂತೆ ಬಿಂಬಿತವಾಗಿರುವ ಭಾವಚಿತ್ರಕ್ಕೆ ಕಿರೀಟ ಯಾವ ಸಂದೇಶವನ್ನು ನೀಡಬಹುದು. ಜಯದ ಸಂಕೇತವಾ! ನಾನೇ ಎಲ್ಲಾ ಎಂಬ ಹುಂಬತನದ ಸಂಕೇತವಾ! ತಿಳಿಯದಾಗಿದೆ. ಕಲಾವಿದರನ್ನು ಕೇಳಿದರೆ ಸನ್ನಿವೇಶವನ್ನು ನನ್ನದೇ ಕಲ್ಪನೆಯಲ್ಲಿ ಸೆರೆಹಿಡಿದ್ದೇನೆ ಎನ್ನುತ್ತಾರೆ. ಈ ಮಾತಿನಂತೆ ಅವರ ಕಲ್ಪನೆಗೆ ರೇಖೆ ಮತ್ತು ಬಣ್ಣಗಳು ಮಾತನಾಡಿದ್ದಾವೆ. ಕೆಂಪು, ನೀಲಿ, ಕಪ್ಪು, ಬಿಳಿ ಬಣ್ಣಗಳಿಂದ ಕೃತಿಯನ್ನು ಪೂರ್ಣಗೊಳಿಸಲಾಗಿದೆ.

**ಚಿತ್ರ–೬**

ಈ ಕಲಾಕೃತಿಯಲ್ಲಿ ಒಟ್ಟು ಮೂರು ವಸ್ತುಗಳನ್ನು ಪ್ರಮುಖವಾಗಿ ತೋರಿಸಲಾಗಿದ್ದು, ನವ್ಯಕಲೆಯಲ್ಲಿ ರಚನೆಯಾಗಿರುವ ಕೃತಿಯಲ್ಲಿ ನಗ್ನ ಮಹಿಳೆ ನಿಂತಿದ್ದು, ತಲೆಗೆ ಒಂದು ಕಿರೀಟವನ್ನು ತೊಡಿಸಿದ್ದಾರೆ. ದು:ಖದಂಚಿನಲ್ಲಿರುವಂತಿರುವ ಮಹಿಳೆ ಗೋಡೆಗಂಟಿಕೊಂಡಿರುವಂತೆ ಕಂಡುಬರುತ್ತಿದೆ. ಪಕ್ಕದಲ್ಲಿ ಗಾಳಿಪಟವಿದ್ದು ಅದರ ದಾರ ಹಾವಿನಂತಿದೆ. ಮೇಲಿಂದ ಹರಿದು ಬರುತ್ತಿರುವ ಕೆಂಪು ವರ್ಣದ ಹಾವು ಏನೋ ಹುಡುಕಾಟದಲ್ಲಿದೆ, ಮೇಲಿಂದ ಹಳದಿ ವರ್ಣದ ಮತ್ತೊಂದು ಗಾಳಿಪಟ ಗೋಡೆಗಂಟಿಕೊಂಡಿದೆ. ಈ ಕಲಾಕೃತಿಯನ್ನು ರಚಿಸಿರುವ ಕಲಾವಿದರು ತನ್ನಲ್ಲಿರುವ ಕ್ರಿಯಾತ್ಮಕ ಅಂಶವನ್ನು ನವ್ಯಶೈಲಿಗೆ ತಂದುಕೊಂಡು ಸಮಾಜದಲ್ಲಾಗುವ ಒಂದು ಘಟನೆಯನ್ನು ತನ್ನದೇ ಶೈಲಿಯಲ್ಲಿ ಬಿಂಬಿಸಿರುವುದನ್ನು ಸ್ಪಷ್ಟವಾಗಿ ತಿಳಿಯಬಹುದು. ಅದು ಈ ಕಲಾಕೃತಿಯನ್ನು ಗಮನಿಸಿದಾಗ ಮಾತ್ರ! ಒಂದು ಹೆಣ್ಣಿನ್ನ ಅತಿವೇಗಕ್ಕೆ ಹೋಲಿಸಿರುವ ಕಲಾವಿದರ ಕಲ್ಪನೆ ಅದ್ಭುತ. ಕಲಾವಿದರ ಈ ಕಲ್ಪನೆಗೆ ಖಾಲಿ ಕ್ಯಾನ್ವಸ್‌ನ್ನು ತುಂಬಾ ಅಚ್ಚುಕಟ್ಟಾಗಿ ಬಳಸಿಕೊಂಡಿದ್ದಾರೆ. ಕಂದು, ಕೆಂಪು, ಕಪ್ಪು, ಹಸಿರು, ಬಿಳಿ ವರ್ಣಗಳನ್ನು ಈ ಕಲಾಕೃತಿಗಳಿಗೆ ಬಳಸಲಾಗಿದೆ.

**ಚಿತ್ರ-೭**

ಕಲಾವಿದ ತಾನು ಯೋಚಿಸುತ್ತಿರುವಾಗಲೇ ಆತನ ಮನಸ್ಸಿನಲ್ಲಿ ಮೂಡುವ ಭಾವನೆಗಳನ್ನೇ ಕಲಾಕೃತಿಯ ಮೂಲಕ ರಚಿಸಿ ಅಭಿವ್ಯಕ್ತಪಡಿಸುತ್ತಾನೆ. ಎಂಬುದಕ್ಕೊಂದು ಉದಾಹರಣೆ ಈ ಕಲಾಕೃತಿ. ಮರಳಿನಿಂದ ಹಾಸಿದ ನೆಲದಲ್ಲಿ ದುಂಡನೆಯ ಗುಡ್ಡೆಯನ್ನು ಕಟ್ಟಲಾಗಿದ್ದು, ಅದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಹೆಣ್ಣಿನ ಸ್ತನವೆಂಬುದು ತಿಳಿಯುತ್ತದೆ. ಆ ಸ್ತನಗಳ ಮೇಲೆ ಚಿಟ್ಟೆಯು ಕುಂತಿರುವುದು ಮತ್ತೊಂದು ಕಡೆ ಏಣಿಯಿಂದ ಮನುಷ್ಯ ಅದರತ್ತ ಏರುತ್ತಿದ್ದಾನೆ. ಇಲ್ಲಿ ಸಂಯೋಜನೆ ಚಿತ್ರವೆನಿಸಿದರೂ ಒಂದಕ್ಕೊಂದು ವಸ್ತುವನ್ನು ಜೋಡಿಸುವಲ್ಲಿ ಕಲಾವಿದರು ವೈಫಲ್ಯವನ್ನು ಹೊಂದಿದ್ದಾರೆ. ತುಂಬ ದೊಡ್ಡ ಸ್ತನಗಳು ಎಂಬುದನ್ನು ಸೂಚಿಸುತ್ತಿರುವ ಮನುಷ್ಯನ ಚಿತ್ರಗಳು ಅತಿಚಿಕ್ಕವಾಗಿವೆ. ಆದರೆ ಇದು ಒಂದು ಮನೆಯಂತೆ ಹಿಂಬದಿಯಲ್ಲಿ ಕಿಟಕಿ ಮತ್ತು ಗೋಡೆಯನ್ನು ಕಾಣಬಹುದು. ಜಿರಲೆಯು ಇನ್ನೊಂದು ಸ್ತನದ ಮೇಲೆ ಏರುತ್ತಿದ್ದು, ಹಾಗೇ ಮುಂದುವರಿದು ಸಾಗಿದರೆ ಒಂದು ಕೈ ಭೂಮಿಯಿಂದ ಎದ್ದಿರುತ್ತದೆ. ಅಲ್ಲಲ್ಲಿ ಹುಳುಗಳು ಹರಿದಾಡುತ್ತಿವೆ. ಸ್ತನದ ಕೆಳಭಾಗದಲ್ಲಿ ಬಿರುಕು ಬಿಟ್ಟಿರುವಂತಹ ನೋಟ. ಇದನ್ನೆಲ್ಲಾ ಗಮನಿಸಿದರೆ ಕೃಷ್ಣಸೆಟ್ಟಿಯವರ ಕಲ್ಪನೆ ನಿಜಕ್ಕೂ ಹೀಗಿರುತ್ತಾ ಎಂಬ ಆಲೋಚನೆ ಬರದೇಯಿರದು. ಯಾಕೆಂದ್ರೆ ಅಂತರಾಷ್ಟ್ರೀಯ ಕಲಾವಿದರಾದ ಹೆನ್ರೀ ಮಾಥಿಸ್ಸೆ, ವ್ಯಾನ್‌ಗಾಗ್ ಪಿಕಾಸೋ ಮುಂತಾದವರು ತಮ್ಮ ಕಲ್ಪನೆಯ ಮೂಲಕವೇ ಹೆಸರಾದವರು. ಅವರ ಹಾದಿಯಲ್ಲಿ ಸಾಗಬೇಕೆಂದಿದ್ದರೆ ಈ ರೀತಿಯ ಆಲೋಚನೆ ಕೃಷ್ಣಸೆಟ್ಟರಿಗೆ ಬರುತ್ತಿರಲಿಲ್ಲವೇನೋ ಅನಿಸುತ್ತಿದೆ. ತಮ್ಮ ಭಾವನೆಗಳಿಗೆ ಕಲಾಕೃತಿಯ ಮೂಲಕ ಜೀವ ತುಂಬಲು ಪ್ರಯತ್ನಿಸಿದ್ದಾರೆ. ಕಂದುಗೆಂಪು ಹಾಗೂ ನೀಲಿ ಸ್ವಲ್ಪ ಹಳದಿ ಅದರ ಮಧ್ಯದಲ್ಲಿ ಕಪ್ಪು ರೇಖೆ ವರ್ಣವನ್ನು ಬಳಸಿದ್ದಾರೆ. ಈ ಕಲಾಕೃತಿಯನ್ನು ನೋಡಿದವನ ಮನಸ್ಸಿನ ಮೇಲೆ ಕೇಂದ್ರೀಕೃತವಾಗುವ ಹಾಗೆ ಕಲಾಕೃತಿ ರಚಿಸಿದ್ದಾರೆ.

**ಚಿತ್ರ-೮**

ಈ ಚಿತ್ರಕೃತಿಯಲ್ಲಿ ಮುಖ್ಯವಾಗಿ ಡಿಜಿಟಲ್ ಮಾದರಿಯನ್ನು ಕಾಣಬಹುದು. ತ್ರಿಡಿ ಎಪೆಕ್ಟ್‌ನಲ್ಲಿ ಚಿತ್ರಿಸಿರುವ ಕಲಾವಿದರು ಕಮಲದಾಕಾರವನ್ನು ಅದರ ಸೌಂದರ್ಯವನ್ನು ಸೂಸುವಂತೆ ಪ್ರೇರೇಪಿಸಿರುತ್ತಾರೆ. ಅವರೇ ಹೇಳುವ ಹಾಗೆ ಸಮಯ ವ್ಯರ್ಥ ಮಾಡುವುದಿಲ್ಲ ಎಂಬುದಕ್ಕೆ ಇಂತಹ ಅನೇಕ ಕಲಾಕೃತಿಗಳು ಸಾಕ್ಷಿಯಿರಬಹುದು. ಫ್ರೆಂಚ್ ಕಲಾವಿದ ಮತಿಸ್ ರಚಿಸಿದ ಹಳದಿ ಮತ್ತು ನೀಲಿ ಬಣ್ಣಗಳ ಒಳಾಂಗಣ ಚಿತ್ರದಲ್ಲಿ ಮೊದಲ ನೋಟಕ್ಕೆ ಇಡೀ ಚಿತ್ರ ರೇಖೆಗಳಿಂದಲೇ ರೂಪುಗೊಂಡಂತೆ ತೋರುತ್ತದೆ. ಹಿನ್ನೆಲೆಯಲ್ಲಿರುವ ಕೆಲವು ಗೆರೆಗಳೂ, ಮುನ್ನೆಲೆಯಲ್ಲಿ ಎಡಕ್ಕೆ ಇರುವ ವರ್ಣಚಿತ್ರದ ಅಂಚಿನ ಗೆರೆಗಳೂ ನೇರವಾಗಿವೆ. ಉಳಿದವು ಕಮಾನಾಗಿ ಬಾಗಿರುವ

ಗೆರೆಗಳು; ಚಿತ್ರದ ಮಧ್ಯಭಾಗದಲ್ಲಿ ದುಂಡು ಮೇಜಿನ ಹೂದಾನಿಯ ಗೆರೆಗಳು, ಕಮಾನಿನಂತಹ ಗೆರೆಗಳನ್ನು[೨೬] ರೂಪಿಸಲಾಗಿತ್ತು. ಅದರಂತೆ ಇಲ್ಲಿಯೂ ನೇರವಾಗಿ ಬಣ್ಣಗಳ ಮೂಲಕ ಚಿತ್ರವನ್ನು ಸೃಷ್ಟಿಸಿದ್ದಾರೆ.

ಕಲಾವಿದ ಚಿ.ಸು.ಕೃಷ್ಣಸೆಟ್ಟಿಯವರದು, ಮೂರ್‍ನಾಲ್ಕು ದಶಕಗಳಿಂದ ದೃಶ್ಯಕಲೆಯ ಕುರಿತು ಚಿಂತನೆ ನಡೆಯುತ್ತಲೇ ಇದೆ. ಆಯಾ ಕಾಲಘಟ್ಟದ ಆಶಯ, ಧೋರಣೆಗಳಿಗೆ ತಕ್ಕಂತೆ ಪರಿಭಾಷೆಯ ಆಶಯಗಳೂ ಕೂಡ ಬದಲಾಗುತ್ತಾ ಸಾಗಿದೆ. ಹಾಗಾಗಿ ಕಲೆಯ ಮಾನದಂಡಗಳನ್ನು ನಿರ್ಮಿಸುವಲ್ಲಿ ಕಾಲ ತುಂಬ ಮುಖ್ಯ ಪಾತ್ರವಹಿಸುತ್ತದೆ. ಅದನ್ನು ನಮ್ಮ ಮನಸ್ಸಿನಲ್ಲಿಟ್ಟುಕೊಂಡೇ ಕಲಾಕೃತಿಗಳೊಂದಿಗೆ ಮುಖಾಮುಖಿಯಾಗಬೇಕಾಗುತ್ತದೆ.

ಕಲಾವಿದರಲ್ಲಿ ಎರಡು ರೀತಿಯಲ್ಲಿ ಕೆಲಸ ಮಾಡುವವರನ್ನು ಕಾಣಬಹುದು. ಒಂದು ಟ್ರ್ಯಾನ್ಸಿಟಿವಿ ಅಥವಾ ಇನ್ಟ್ರ್ಯಾಕ್ಟೀವ್(ಸಮರ್ಪಕ & ಅಸಮರ್ಪಕ)ಅಂದ್ರೆ ಚಿತ್ರ ರಚಿಸುವ ಮುನ್ನ ಪ್ಲಾನ್ ಮಾಡಿಕೊಂಡು, ರಫ್ ಸ್ಕೆಚ್ ತಯಾರು ಮಾಡಿ ನಂತರ ಅದಕ್ಕೆ ಪೂರಕವಾಗಿ ಚಿತ್ರ ರಚನೆಮಾಡುತ್ತಾ ಹೋಗುವವರದ್ದು ಒಂದಾದರೆ, ಎರಡನೆಯದು ದೊಡ್ಡ ದೊಡ್ಡ ಕಲಾವಿದರೆಲ್ಲಾ ಇನ್ಟ್ರ್ಯಾಕ್ಟೀವ್ ಗ್ರೂಪ್ಗೆ ಸೇರುತ್ತಾರೆ. ಇಲ್ಲಿ ಅವುಗಳನ್ನು ಪ್ರಜ್ಞಾಪ್ರವಾಹ ತಂತ್ರ ಅಂತಾ ಕರಿಯಬಹುದು. ಈ ಕಲಾವಿದರಿಗೆ ಹೇಗೆ..? ಏಕೆ..? ಸಂದೇಶಗಳು ಬರುತ್ತವೆ ಎಂಬ ಅರಿವಿರುವುದಿಲ್ಲ. ಕೃಷ್ಣಸೆಟ್ಟಿಯವರ ಇಡೀ ಕಲಾಕೃತಿಗಳನ್ನು ಗಮನಿಸಿದರೆ 'ಕುರ್ಚಿ' ಕಂಡುಬರುತ್ತದೆ. ಅಧಿಕಾರದ ಸಂಕೇತವಾಗಿ ಈ ಕುರ್ಚಿಯನ್ನು ಬಳಸಬಹುದು. ಎರಡನೆಯದು ಹಾವು ತುಂಬಾ ಬರ್ತಾಯಿದೆ. ಹಾವು ಬಂದಿದ್ದು ಸೆಕ್ಸ್(sex object)ನ ವಿಷಯವಾಗಿ ಶುರುಮಾಡಿಕೊಂಡಿರುತ್ತಾರೆ. ಅದು ಅದಾಗಿಯೇ ಉಳಿಯಲಿಲ್ಲ ಅಲ್ಲಿ ಹಾವು ಮುಖ್ಯವಾಗಿತ್ತೇ ವಿನ:, ಅದು ಸಿಂಬಲೀಸಂ ಆಗಿ ಉಳಿಯಲಿಲ್ಲ ಅಲ್ಲಿ ಕೈಗಳು ಬಂದವು, ಸಾಮಾನ್ಯವಾಗಿ ಕೈಗಳು ಕಲಾಕೃತಿಯಲ್ಲಿ ಬಂದದ್ದು ಜೈಲಲ್ಲಿದ್ದ ಸಂದರ್ಭವು ಸೇರಿದಂತೆ ಮೊದಲಿನಿಂದಲೂ ಕಾಂಗ್ರೆಸ್ ವಿರೋಧಿ, ಕಾರಣ ಪ್ರತಿಭಟನೆಯ ಸಂದರ್ಭದಲ್ಲಿ ಕೃಷ್ಣಸೆಟ್ಟಿಯವರನ್ನು ಜೈಲಿಗೆ ಕಳುಹಿಸಿದ ಸಂದರ್ಭ ಇತ್ಯಾದಿ ವಿಷಯಗಳನ್ನು ಪ್ರಮುಖವಾಗಿಟ್ಟುಕೊಂಡು ಕೈ ಸಿಂಬಲನ್ನು ತಮ್ಮ ಕಲಾಕೃತಿಗಳಲ್ಲಿ ಯಥೇಚ್ಚವಾಗಿ ತೋರಿಸಿರುತ್ತಾರೆ ಎಂಬುದು ಸ್ವತ: ಕಲಾವಿದರ ಅಭಿಪ್ರಾಯವಾಗಿರುತ್ತದೆ.

ಇಲ್ಲಿ ಹೆಚ್ಚಾಗಿ ರಾಜಕೀಯ ಸನ್ನಿವೇಶಗಳಲ್ಲಿ ಬರುವ ಮುಖ್ಯ ಅಂಶಗಳನ್ನೇ ಪರಿಗಣಿಸಿ ಹೇಳಿಕೊಳ್ಳಲಾರದೆ ಚಿತ್ರಗಳ ಮೂಲಕ ತಮ್ಮ ಅಭಿಪ್ರಾಯವನ್ನು ಹೊರಹಾಕಿರುವುದು ಮತ್ತು

---

೨೬. ಪಿ.ಆರ್.ತಿಪ್ಪೇಸ್ವಾಮಿ(ಪ್ರ.ಸಂ.) ಚಿತ್ರಕಲಾ ಪ್ರಪಂಚ, (ಲೇ.ಜಿ.ಎಂ.ಪರಮಶಿವಯ್ಯ) ಪು.ಸಂ.೫೭೭

ಅದೇ ಕೈ ಮುಂದುವರಿದು ಅಸಹಾಯಕತೆಗೆ ಸಿಂಬಲ್ ಆಯಿತು. ಉದಾ: ನೀರಲ್ಲಿ ಮುಳುಗಿದ ಸಂದರ್ಭಕ್ಕೆ ಎರಡು ಕೈಗಳನ್ನು ಮೇಲಕ್ಕೆತ್ತಿ ತನ್ನ ಅಸಹಾಯಕತೆಯನ್ನು ತೋರಿಸಿರುತ್ತೇನೆಂದು ಅವರೆ ಒಪ್ಪಿಕೊಂಡಿರುತ್ತಾರೆ. ಚಿತ್ರ ವಿನ್ಯಾಸದ ಮೂಲಕವೂ ಅನೇಕ ಕಡೆ ಹೆಚ್ಚು ಕೈಗಳನ್ನು ತೋರಿಸಲಾಗಿದೆಯಾದರೂ ಅದು ಡೆಲಿಬೆರಿಕ್ ಆಗಿರುತ್ತದೆ ಹೊರತು ಇದೇ ಅರ್ಥಕ್ಕೆ ಅಲ್ಲ ಎಂಬುದನ್ನು ಕೂಡ ಒಪ್ಪಿಕೊಂಡಿರುತ್ತಾರೆ.

ದೃಶ್ಯಕಲೆ ಮತ್ತು ಸಾಹಿತ್ಯದ ಎಲ್ಲಾ ಕ್ಷೇತ್ರಗಳಲ್ಲೂ ಯಶಸ್ವಿಯಾಗಿ ಪ್ರಯೋಗಗಳನ್ನು ಮಾಡುತ್ತಾ ಹಲವಾರು ಸಂಗತಿಗಳನ್ನು ಕಂಡುಕೊಂಡು ತನ್ನದೇ ಶೈಲಿಯಲ್ಲಿ ಬದುಕನ್ನು ಕಟ್ಟಿಕೊಂಡ ಚಿ.ಸು.ಕೃಷ್ಣಸೆಟ್ಟಿ ನೂರಾರು ಕಲಾಕೃತಿಗಳನ್ನು ರಚಿಸಿದ್ದುಂಟು, ಅವುಗಳಲ್ಲಿ ರೇಖಾಚಿತ್ರ, ಭಾವಚಿತ್ರ, ಸೃಜನಶೀಲಚಿತ್ರ, ಮಾರ್ಡನ್, ಕ್ರಿಯೇಟಿವಿಟಿ, ಗ್ರಾಫಿಕ್, ಆಬ್ಸ್ಟ್ರಾಕ್ ಎಂಬುದಷ್ಟೇ ಅಲ್ಲ. ಅವರ ನೆಚ್ಚಿನ ಡಿಸೈನರ್‌ನಲ್ಲಿಯೂ ಕೂಡ ಬಣ್ಣಗಳ ಜೊತೆ ಆಟವನ್ನಾಡುತ್ತಾ ಪರದೆಯ ಹಿಂದೆಯೇ ಸಾಕಷ್ಟು ದುಡಿದಿದ್ದಾರೆ. ಅದು ನಿಂತ ನೀರಾಗದೆ ಹರಿಯುವ ನೀರಿನಂತೆ ಸಾಗಲಿ.

## ಚಿ.ಸು ಕೃಷ್ಣಸೆಟ್ಟಿಯವರು ರಚಿತ ರೇಖಾ ಚಿತ್ರಕೃತಿಗಳು



ಚಿತ್ರ-೧



ಚಿತ್ರ-೨

ಚಿತ್ರ-೩



ಚಿತ್ರ-೪



## ಚಿ.ಸು ಕೃಷ್ಣಸೆಟ್ಟಿಯವರು ರಚಿತ ಭಾವಚಿತ್ರಗಳು



ಚಿತ್ರ-೧



ಚಿತ್ರ-೨

ಚಿತ್ರ-೩



ಚಿತ್ರ-೪



## ಚಿ.ಸು ಕೃಷ್ಣಸೆಟ್ಟಿಯವರು ರಚಿತ ವ್ಯಕ್ತಿ ಚಿತ್ರಕೃತಿಗಳು



ಚಿತ್ರ–೧



ಚಿತ್ರ–೨

## ಚಿ.ಸು ಕೃಷ್ಣಸೆಟ್ಟಿಯವರು ರಚಿತ ವ್ಯಕ್ತಿ ಚಿತ್ರಕೃತಿಗಳು



ಚಿತ್ರ–೩

ಚಿತ್ರ–೪






ಚಿತ್ರ–೧

ಚಿತ್ರ–೨




ಶಿರ್ಷಿಕೆರಹಿತ ಚಿತ್ರಕೃತಿಗಳು




ಚಿತ್ರ-೩

ಚಿತ್ರ-೪



ಶೀರ್ಷಿಕೆರಹಿತ ಚಿತ್ರಕೃತಿಗಳು



ಚಿತ್ರ-೫



ಚಿತ್ರ-೬



ಶೀರ್ಷಿಕೆರಹಿತ ಚಿತ್ರಕೃತಿಗಳು




ಚಿತ್ರ–೭




ಚಿತ್ರ–೮




ಚಿತ್ರ–೯

ಶೀರ್ಷಿಕೆರಹಿತ ಚಿತ್ರಕೃತಿಗಳು




ಚಿತ್ರ-೧೨



ಚಿತ್ರ-೧೩

ಶೀರ್ಷಿಕೆರಹಿತ ಚಿತ್ರಕೃತಿಗಳು



ಚಿತ್ರ-೧೪



ಚಿತ್ರ-೧೫

ಶೀರ್ಷಿಕೆರಹಿತ ಚಿತ್ರಕೃತಿಗಳು



ಚಿತ್ರ–೧೬



ಚಿತ್ರ–೧೭

ಶಿರ್ಷಿಕೆರಹಿತ ಚಿತ್ರಕೃತಿಗಳು



ಚಿತ್ರ–೨೦

ಚಿತ್ರ–೨೧



ಶೀರ್ಷಿಕೆರಹಿತ ಚಿತ್ರಕೃತಿಗಳು



ಚಿತ್ರ-೨೪

ಚಿತ್ರ-೨೫




ಶೀರ್ಷಿಕೆರಹಿತ ಚಿತ್ರಕೃತಿಗಳು



ಚಿತ್ರ-೧೬

ಚಿತ್ರ-೧೭



ಶೀರ್ಷಿಕೆರಹಿತ ಚಿತ್ರಕೃತಿಗಳು



ಚಿತ್ರ–೨೮

ಚಿತ್ರ–೨೯



ಶಿರ್ಷಿಕೆರಹಿತ ಚಿತ್ರಕೃತಿಗಳು

ಚಿತ್ರ-೩೦

ಚಿತ್ರ-೩೧



ಶೀರ್ಷಿಕೆರಹಿತ ಚಿತ್ರಕೃತಿಗಳು



ಚಿತ್ರ-೨೧

ಚಿತ್ರ-೨೨



ಶೀರ್ಷಿಕೆರಹಿತ ಚಿತ್ರಕೃತಿಗಳು



ಚಿತ್ರ-೩೬

ಚಿತ್ರ-೩೭



ಶೀರ್ಷಿಕೆರಹಿತ ಚಿತ್ರಕೃತಿಗಳು





ಚಿತ್ರ-೦೧, ೦೨

ಚಿತ್ರ-೦೩




ಅಮೂರ್ತ ಚಿತ್ರಕೃತಿಗಳು



ಚಿತ್ರ-೦೪, ೦೫

ಚಿತ್ರ-೦೬, ೦೭





ಅಮೂರ್ತ ಚಿತ್ರಕೃತಿಗಳು





ಚಿತ್ರ–೦೮, ೦೯



ಚಿತ್ರ–೧೦, ೧೧



ಅಮೂರ್ತ ಚಿತ್ರಕೃತಿಗಳು



ಚಿತ್ರ-೧೨

ಚಿತ್ರ-೧೩



ಅಮೂರ್ತ ಚಿತ್ರಕೃತಿಗಳು





ಚಿತ್ರ-೧೪,೧೫

ಚಿತ್ರ-೧೬, ೧೭






ಅಮೂರ್ತ ಚಿತ್ರಕೃತಿಗಳು







ಚಿತ್ರ-೧೮, ೧೯

ಚಿತ್ರ-೨೦, ೨೧






ಅಮೂರ್ತ ಚಿತ್ರಕೃತಿಗಳು



ಚಿತ್ರ-೧

ಚಿತ್ರ-೨



ಮಿಶ್ರಮಾಧ್ಯಮ ಚಿತ್ರಕೃತಿಗಳು



ಚಿತ್ರ–೩

ಚಿತ್ರ–೪



ಮಿಶ್ರಮಾಧ್ಯಮ ಚಿತ್ರಕೃತಿಗಳು



ಚಿತ್ರ-೫

ಚಿತ್ರ-೬



ಮಿಶ್ರಮಾಧ್ಯಮ ಚಿತ್ರಕೃತಿಗಳು



ಚಿತ್ರ-೧೧



ಚಿತ್ರ-೧೨

ಮಿಶ್ರಮಾಧ್ಯಮ ಚಿತ್ರಕೃತಿಗಳು



ಚಿತ್ರ-೧೬



ಚಿತ್ರ-೧೭

ಮಿಶ್ರಮಾಧ್ಯಮ ಚಿತ್ರಕೃತಿಗಳು



ಚಿತ್ರ-೦೮



ಚಿತ್ರ-೦೯

ಗ್ರಾಫಿಕ್ ಚಿತ್ರಕೃತಿಗಳು



ಚಿತ್ರ-೦೩

ಚಿತ್ರ-೦೪



ಗ್ರಾಫಿಕ್ ಚಿತ್ರಕೃತಿಗಳು



ಚಿತ್ರ-೦೫

ಚಿತ್ರ-೦೬



ಗ್ರಾಫಿಕ್ ಚಿತ್ರಕೃತಿಗಳು



ಚಿತ್ರ-೦೭

ಚಿತ್ರ-೦೮



ಗ್ರಾಫಿಕ್ ಚಿತ್ರಕೃತಿಗಳು



ಚಿತ್ರ-೦೧



ಚಿತ್ರ-೦೨

ತೈಲವರ್ಣದ ಚಿತ್ರಕೃತಿಗಳು



ಚಿತ್ರ-೦೭

ಚಿತ್ರ-೦೮



ತೈಲವರ್ಣದ ಚಿತ್ರಕೃತಿಗಳು

## ಅಧ್ಯಾಯ: ಐದು

# ಚಿ.ಸು.ಕೃಷ್ಣಸೆಟ್ಟಿಯವರ ಕಲಾ ಚಟುವಟಿಕೆಗಳು

ದೃಶ್ಯಕಲೆ ಮತ್ತು ಸಾಹಿತ್ಯದ ಎಲ್ಲಾ ಕ್ಷೇತ್ರಗಳಲ್ಲೂ ಯಶಸ್ವಿಯಾಗಿ ಪ್ರಯೋಗಗಳನ್ನು ಮಾಡುತ್ತಾ ಹಲವಾರು ಸಂಗತಿಗಳನ್ನು ಕಂಡುಕೊಂಡು ತನ್ನದೇ ಶೈಲಿಯಲ್ಲಿ ಬದುಕನ್ನು ಕಟ್ಟಿಕೊಂಡ ಚಿ.ಸು.ಕೃಷ್ಣಸೆಟ್ಟಿ ನೂರಾರು ಕಲಾಕೃತಿಗಳನ್ನು ರಚಿಸಿದ್ದುಂಟು. ಅವುಗಳಲ್ಲಿ ರೇಖಾಚಿತ್ರ, ಭಾವಚಿತ್ರ, ಸೃಜನಶೀಲಚಿತ್ರ, ಕ್ರಿಯೇಟಿವಿಟಿ, ಅಬ್‌ಸ್ಟ್ರಾಕ್, ಗ್ರಾಫಿಕ್ ಎಂಬುದಷ್ಟೆ ಅಲ್ಲ ನೆಚ್ಚಿನ ಡಿಸೈನರ್‌ನಲ್ಲಿಯೂ ಕೂಡ ಹೆಚ್ಚು ಕೆಲಸವನ್ನು ಮಾಡಿರುತ್ತಾರೆ. ನಿರಂತರವಾಗಿ ಇವರು ಈ ಕ್ಷೇತ್ರದಲ್ಲಿ ಸಾಗಿದ ದಾರಿಯಲ್ಲಿ ಕಲ್ಲು ಮುಳ್ಳುಗಳು ಸಹಜವಾದರೂ ಅದರಲ್ಲಿಯೇ ಸಾಕಷ್ಟು ದಾರಿಯನ್ನು ಸವೆಸಿ ಬಹುದೂರ ನಡೆದುಬಂದು ದಡಮುಟ್ಟಿ ಬದುಕಲ್ಲಿ ಸಾಧಿಸಿದ ಸಾಧಕರಾಗಿ ಈ ಸಮಾಜದಲ್ಲಿ ಗುರುತಿಸಿಕೊಂಡಿದ್ದಾರೆ. ಹೀಗೆ ಚಿತ್ರಕಲೆ ಮತ್ತು ಕಲಾಸಾಹಿತ್ಯದಲ್ಲಿ ರಾಷ್ಟ್ರ ಮಟ್ಟದಲ್ಲಿ ಗುರುತಿಸಿಕೊಂಡಿರುವ ೬೩ ವರ್ಷದ ಚಿ.ಸು.ಕೃಷ್ಣಸೆಟ್ಟಿಯವರು ಯುವ ಪೀಳಿಗೆಗೆ, ಉತ್ಸಾಹಿ ಮನಸ್ಸುಗಳಿಗೆ ಪ್ರೇರಕರಾಗಿದ್ದಾರೆ. ಅದಾಗಲು ಕಾರಣ ನಿರಂತರವಾದ ಹೋರಾಟ, ಶ್ರದ್ಧೆ, ಕಾಪಾಡಿಕೊಂಡ ಶಿಸ್ತು ಮತ್ತು ಸಂಯಮ. ಇವರ ಹೋರಾಟದ ಹಾದಿಯಲ್ಲಿ ಸಾಗುವಾಗ ಹಿರಿಯರ ಮಾರ್ಗದರ್ಶನ, ಹಾರೈಕೆಯ ಆಣತಿಯಂತೆ ಕಮ್ಯುನಿಷ್ಟ್ ಪಕ್ಷದ ಚಿಹ್ನೆ ಹಾಗೂ ಅಕ್ಷರಗಳನ್ನು ದಪ್ಪ ದಪ್ಪವಾಗಿ ಗಲ್ಲಿಗಲ್ಲಿಗಳಲ್ಲಿ ಗೋಡೆ, ಕಾಂಪೌಂಡ್‌ಗಳ ಮೇಲೆ ಬರೆದರು. ಹೀಗೆ ಬರೆದ ಅಕ್ಷರಗಳು ಬಹುಮುಖ್ಯವಾಗಿ ಕಲೆ ಇದೇನಾ ಎಂದಷ್ಟು ಅನುಮಾನ ಅವರಿಗಾದಂತಿಲ್ಲ. ಅಂತಹ ಪರಿಸ್ಥಿತಿ ಆ ಹೊತ್ತಿನದ್ದು, ಆದರೂ ಆ ಜಾಹಿರಾತನ್ನು ನೋಡಿದ ಪಕ್ಷದ ಮುಖಂಡರ ಮನಸ್ಸನ್ನು ಸೆಳೆಯುವುದರ ಜೊತೆ ಜನರ ಮನಸ್ಸನ್ನು ಕೂಡ ಸೆಳೆಯಿತು. ಇದನ್ನು ಕೃಷ್ಣಸೆಟ್ಟಿ ಬರೆದದ್ದು ಎಂದು ಆ ಪಕ್ಷದ ಮುಖಂಡರಿಗೆ ತಿಳಿದಾಗ ಅಂಗೈಯಲ್ಲಿಯೇ ಬೆಣ್ಣೆ ಇಟ್ಕೊಂಡು ತುಪ್ಪಕ್ಕೆ ಅಲೆದಾಡಿದರಂತೆ ಎಂಬ ಗಾದೆ ನೆನಪಾಯಿತು ಎಂದುಕೊಂಡ ರಾಜಕೀಯ ಮುಖಂಡರು ಇನ್ಮುಂದೆ ನಮ್ಮ ಪಕ್ಷದ ಪ್ರಚಾರವನ್ನು ಕೃಷ್ಣಸೆಟ್ಟಿಯವರೆ ನಿರ್ವಹಿಸಬೇಕೆಂದು ಹೇಳಿದಾಗ ಒಂದು

ಕ್ಷಣ ಮೌನವಾದರು. ಇದೇ ಗುಂಗಿನಲ್ಲಿದ್ದವನಿಗೆ ತಂದೆಯಿಂದಲೂ ಅನುಮತಿ ಸಿಕ್ಕಿತು. ಕೃಷ್ಣಸೆಟ್ಟಿರವರಿಗೆ ಓದಿನಲ್ಲಿ ನಿರಾಸಕ್ತಿಯಿದ್ದು ಎಸ್.ಎಸ್.ಎಲ್.ಸಿಯಲ್ಲಿ ನಪಾಸಾಗಿದ್ದರು ಅದೂ ಒಂದು ಕಾರಣವಿರಬಹುದು.

ಈ ಸಂದರ್ಭದಲ್ಲಿಯೇ ಕೃಷ್ಣಸೆಟ್ಟಿಯವರು ಲೆಫ್ಟಿಸ್ಟ್‌ರ ಹೋರಾಟಕ್ಕೆ ತನ್ನದೊಂದು ಕೈ ಎಂಬಂತೆ ಜಿಲ್ಲೆಯ ಹೊರತಾಗಿಯೂ ಕೆಲಸ ಮಾಡಿ ಗುರುತಿಸಿಕೊಂಡಿದ್ದರು. ಅವರ ಏರುಧ್ವನಿ, ಅಷ್ಟೆ ಏರುನೋಟ ಮತ್ತು ಎತ್ತರ ನಿಲುವು ಎಲ್ಲರಿಗೂ ಆಕರ್ಷಣೀಯವಾಗಿತ್ತು. ಇದನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸಿದ ತಂದೆ ಸುಬ್ಬಯ್ಯ ಅವರಿಗೆ ಗೆಳೆಯರೊಬ್ಬರು ಕೃಷ್ಣಸೆಟ್ಟಿಯವರನ್ನು ಚಿತ್ರಕಲಾ ತರಬೇತಿಗಾಗಿ ದಾವಣಗೆರೆಯ ಲಲಿತಕಲಾ ಮಹಾವಿದ್ಯಾಲಯಕ್ಕೆ ಕಳುಹಿಸುವಂತೆ ಸೂಚಿಸಿದರು. ಆಗ ಕೃಷ್ಣಸೆಟ್ಟಿಗೆ ಎಲ್ಲಿಲ್ಲದ ಸಂತಸ ಮತ್ತು ಆಶ್ಚರ್ಯ. ಏಕೆಂದರೆ ಈಗ ತಾನೇ ಕಲೆ ನನ್ನ ಮನಸ್ಸಲ್ಲಿ ಚಿಗುರಿರುವಾಗ ಅದನ್ನು ಪೋಷಿಸುವ ಜವಾಬ್ದಾರಿ ಸಿಕ್ಕಿದ್ದು ಒಂದು ಕಡೆಯಾದರೆ, ಅದೇ "ಸಂತಸಕ್ಕೆ" ಕಾರಣ ಚಿತ್ರ ಬಿಡಿಸುವುದನ್ನು ಕಲಿಯುವುದಕ್ಕೂ ಒಂದು ಶಾಲೆ ಇದೆ ಎಂಬ ಸಂಗತಿ ಪರಮಾಶ್ಚರ್ಯ ಆಗಿದ್ದುಂಟು. ಈ ಕಾರಣದಿಂದ ವಿಚಲಿತರಾದರಂತೆ ಕಂಡರೂ, ಆಸಕ್ತಿ ಅಭಿರುಚಿಯನ್ನು ತುಸು ಹೆಚ್ಚು ಮಾಡಿಕೊಂಡ ಚಿ.ಸು.ಕೃ. ದಾವಣಗೆರೆಗೆ ಹೋಗಲು ಸಿದ್ಧನಾದನು. ಇದರಿಂದ ತಂದೆಗೂ ಖುಷಿಯಾಯ್ತು. ಮುಂದೆ ಸುಬ್ಬಯ್ಯನವರ ಗೆಳೆಯರೇ ಚಿ.ಸು.ಕೃ.ಅವರನ್ನು ದಾವಣಗೆರೆಗೆ ಕರೆದುಕೊಂಡು ಹೋಗಿ ಕಲಾಕಾಲೇಜಿಗೆ ಪ್ರವೇಶಾತಿ ಮಾಡಿಸಿದರು. ಜೀವನದ ಈ ದಿನ ಅತ್ಯುತ್ತಮವಾಗಿದ್ದು, ತಾವು ಇಷ್ಟು ದಿನ ಮಾಡಿದ ಆಟಿಕೆಗಳು, ತುಂಟಾಟ, ಹೋರಾಟಗಳು ಮುಂದೆ ಒಂದೊಳ್ಳೆ ಉದ್ದೇಶಕ್ಕೆ ಉಪಯೋಗಕ್ಕೆ ಬರಬಹುದು. ಇದರಿಂದ ಉತ್ತಮ ಜೀವನ ಕಂಡುಕೊಂಡು ಮುಂದೆ ರಾಜ್ಯದ ಒಳ್ಳೆಯ ಕಲಾವಿದನಾಗಿ ಸಮಾಜಕ್ಕೆ ನಾಡಿಗೆ ಹೆಸರು ತನ್ನಿ ಎಂದು ಕಲಾಶಿಕ್ಷಕ ಹಾರೈಸಿದರು. ೧೯೭೦ರಿಂದ ದಾವಣಗೆರೆಯಲ್ಲಿ ಕೃಷ್ಣಸೆಟ್ಟಿಯವರ ಕಲಾ ಬದುಕು ಪ್ರಾರಂಭವಾಯಿತು.

ದಾವಣಗೆರೆಯ ಲಲಿತಕಲಾ ಮಹಾವಿದ್ಯಾಲಯದಲ್ಲಿ ಕಲಾಭ್ಯಾಸ ಮಾಡಲು ಶುರುವಾದ ಸಂದರ್ಭದಲ್ಲಿ ಕೃಷ್ಣಸೆಟ್ಟಿಗೆ ಸಾಕಷ್ಟು ಗೊಂದಲಗಳು ಪ್ರಾರಂಭವಾದವು. ಅವರ ಆರ್ಥಿಕ ಪರಿಸ್ಥಿತಿ ಹೇಳಿಕೊಳ್ಳುವಂತಿರಲಿಲ್ಲ ಆದರೂ ಸಂಘಟನೆ, ಶಿಕ್ಷಣ, ಹೋರಾಟ ಎಂಬ ಧ್ಯೇಯದ ಮುಂದೆ ನಿಂತು ಗುರುತರವಾದ ಆಶಯವಿದ್ದುದರಿಂದಲೇ ವೈಶ್ಯ ಹಾಸ್ಟೆಲ್‌ನಲ್ಲಿ ವಸತಿಗೆ ವ್ಯವಸ್ಥೆಯಾಗುತ್ತದೆ. ತನ್ನ ಒಡನಾಡಿಗಳ ಕೊರತೆ ಯಾವತ್ತೂ ಕೂಡ ಕಾಡಲಿಲ್ಲ. ಅಷ್ಟರ ಮಟ್ಟಿಗೆ ವೇಗವಾಗಿ ಗೆಳೆಯರನ್ನು ಪರಿಚಯ ಮಾಡಿಕೊಂಡು ಮುಂದಿನ ಹೆಜ್ಜೆಯಿಡುವ ಮನೋಸ್ಥೈರ್ಯವನ್ನು ಹೊಂದಿದ್ದ ಚಿ.ಸು.ಕೃಷ್ಣಸೆಟ್ಟಿ ಈ ವಾತಾವರಣದಿಂದ ಕಲಿತದ್ದು ಹೆಚ್ಚು. ಪ್ರಮುಖವಾಗಿ ಈ ಹಾಸ್ಟೆಲ್‌ನ ವಾತಾವರಣದಲ್ಲಿ ಪ್ರೀತಿಸುವ, ಹಾರೈಸಿ ಹರಸುವ ಬದುಕನ್ನು ಕಲಿಯುತ್ತಾಹೋದರು.

೧೯೭೨ ರಿಂದ ೧೯೭೪ರ ಅವಧಿಯಲ್ಲಿ ಒಬ್ಬ ಕಲಾವಿದ್ಯಾರ್ಥಿಯಾಗಿ ಅನೇಕ ಕಲಾಚಟುವಟಿಕೆಗಳಲ್ಲಿ ಭಾಗಿಯಾಗುವುದಲ್ಲದೇ, ನಾನಾ ಸಂಘಟನೆಗಳ ಸಲಹೆಗಾರರಾಗಿ ಕೆಲಸ ಮಾಡಲು ಶುರು ಮಾಡಿದವರು ಚಿ.ಸು.ಕೃಷ್ಣಸೆಟ್ಟಿಯವರು. ಇದರ ಮಧ್ಯೆ ಕಲೆಯನ್ನು ಆಸ್ವಾದಿಸಿದ್ದು ಅಲ್ಪ ಕಡಿಮೆಯೇ. ಆದರೂ ದಾವಣಗೆರೆಯ ಎಲ್ಲಾ ಕಾಲೇಜಿನ ವಿದ್ಯಾರ್ಥಿಗಳ ಒಮ್ಮತದ ಒಪ್ಪಿಗೆ ಮೇರೆಗೆ ವಿದ್ಯಾರ್ಥಿ ಕ್ರಿಯಾ ಸಮಿತಿಯನ್ನು ರಚಿಸಲಾಯಿತು. ಅದರಲ್ಲಿ ಪ್ರಮುಖರಾಗಿ ಗುರುತಿಸಿಕೊಂಡವರು ಇದೇ  ಚಿ.ಸು.ಕೃಷ್ಣಸೆಟ್ಟಿ. ನಂತರ ವಿದ್ಯಾರ್ಥಿ ಮಿತ್ರರ ಹಾಗೂ ಸಾರ್ವಜನಿಕರ ಬೇಡಿಕೆಗಳಿಗೆ ಹೋರಾಟದ ನೇತೃತ್ವ ವಹಿಸಿಕೊಳ್ಳುವುದರ ಮೂಲಕ ನ್ಯಾಯ ಒದಗಿಸಿದ ಸಂದರ್ಭಗಳು ಅನೇಕ.

ಎ.ಬಿ.ವಿ.ಪಿ.ಯಲ್ಲೂ ಶಿಕ್ಷಣಾರ್ಥಿಗಳಿಗೆ ಜಿಲ್ಲಾ ನಿರ್ದೇಶಕರಾಗಿಯೂ ಕೆಲಸ ಮಾಡಿರುತ್ತಾರೆ. ಚಿತ್ರಗಳನ್ನು ಬಿಡಿಸುವ ಹಂತದಲ್ಲಿರುವ ಅವರಿಗೆ ಮಾತಿನ ಬಾಣಗಳ ಮೂಲಕ ಎಚ್ಚರಿಸುತ್ತಿದ್ದರು. ಕೃಷ್ಣಸೆಟ್ಟಿಯವರಿಗೆ ಸ್ಪಂದಿಸಬೇಕಾಗಿರುವುದು ಪ್ರತಿಯೊಬ್ಬರ ಕರ್ತವ್ಯ ಎಂದುಕೊಂಡರು. ಅವರಲ್ಲಿ ಒಳ್ಳೆಯ ಭಾವನೆಯನ್ನು ಬೆಳಸಬೇಕೆಂಬುದನ್ನು ಅರಿತಿದ್ದ ಕೃಷ್ಣಸೆಟ್ಟಿ ನೂರಾರು ವಿದ್ಯಾರ್ಥಿಗಳ ಧ್ವನಿಯಾಗಿದ್ದರು. ಈ ಸಮಾಜಸೇವೆಯೇ ಮುಂದೆ ಜೈಲಿಗೆ ಹೋಗುವ ಪರಿಸ್ಥಿತಿಯೂ ಒದಗಿಬಂತು. ಈ ಸಂದರ್ಭದಲ್ಲಿ ಕಲಾಶಿಕ್ಷಣ ಪಡೆಯುವುದು ಅನಿವಾರ್ಯವೂ ಆಗಿದ್ದ ಸಂದರ್ಭದಲ್ಲಿ ಪರೀಕ್ಷೆಗಳು ಬಂದಿದ್ದರಿಂದ ಮೇಲಧಿಕಾರಿಗಳ ಒಪ್ಪಿಗೆ ಪಡೆದು ಭದ್ರತೆಯ ಬೆಂಗಾವಲಿನಲ್ಲಿ ಮೂರನೇ ವರ್ಷದ ಡಿಪ್ಲೊಮ ಪರೀಕ್ಷೆಯನ್ನು ಬರೆದ ಕೃಷ್ಣಸೆಟ್ಟಿಯವರು ಮುಂದೆ ಚಿತ್ರಕಲೆ ಮತ್ತು ವಿದ್ಯಾರ್ಥಿಗಳ ಹೋರಾಟದ ಚಳುವಳಿಗಳಲ್ಲಿ ತಮ್ಮನ್ನ ತಾವು ತೊಡಗಿಸಿಕೊಂಡರು. ಕಲೆಯನ್ನು ಆಸ್ವಾದಿಸಿದರೆ ಸಾಕು, ಕಲಾ ಶಿಕ್ಷಣ ಪಡೆದು ಅದರಿಂದ ಸರ್ಕಾರಿ ನೌಕರಿ ಪಡೆದು ಜೀವನ ಸಾಗಿಸಬೇಕೆಂಬ ಆಲೋಚನೆಯನ್ನು ಬದಿಗೊತ್ತಿದ ಕೃಷ್ಣಸೆಟ್ಟಿಯವರು, ಚಿತ್ರಕಲಾ ಕ್ಷೇತ್ರದಲ್ಲಿಯೇ ಮುಂದುವರಿಯಬೇಕೆಂಬ ಹಂಬಲದಿಂದ ೧೯೭೮ರಲ್ಲಿ ಚಿತ್ರಕಲಾ ಶಿಕ್ಷಣವನ್ನು ಪೂರ್ಣಗೊಳಿಸುವುದರ ಮೂಲಕ ಒಬ್ಬ ಪರಿಪೂರ್ಣ ಕಲಾವಿದನಾಗಬಯಸಿ ಬೆಂಗಳೂರಿನ ಕಡೆ ಪ್ರಯಾಣಬೆಳೆಸಿದರು.

ಬೆಂಗಳೂರಿನಲ್ಲಿ ಕಲಾ ಚಟುವಟಿಕೆಗಳ ಗರಿಬಿಚ್ಚಿತೆಂದರೆ ಬಹುಶಃ ತಪ್ಪಾಗಲಿಕ್ಕಿಲ್ಲ. ೧೯೮೦ರಲ್ಲಿ ಬೆಂಗಳೂರಿನ ಪ್ರತಿಷ್ಠಿತ ಕ್ಲಾರಿಯನ್ ಜಾಹಿರಾತು ಸಂಸ್ಥೆಯಲ್ಲಿ ಕೆಲಸಕ್ಕೆ ಸೇರಿಕೊಳ್ಳುವುದರ ಮೂಲಕ ಕಲಾ ಚಟುವಟಿಕೆಯಲ್ಲಿ ಸಕ್ರಿಯವಾಗಿ ತಮ್ಮನ್ನ ತಾವು ತೊಡಗಿಸಿಕೊಂಡರು. ಹಿಂದಿನ ಹಾದಿಯ ಒಮ್ಮೆ ಇಣುಕಿ ನೊಡಿದಾಗ ಕಲೆ ಮತ್ತು ಹೋರಾಟದಲ್ಲಿ ಸಾಕಷ್ಟು ನೋವುಗಳು ಉಂಟಾದರೂ ಎದೆಗುಂದದೇ ತನ್ನ ಸಾಧನೆಯ ಮೆಟ್ಟಿಲುಗಳನ್ನು ವಿಸ್ತರಿಸಿಕೊಂಡು ಅವುಗಳ ಮೇಲಿಂದ ಮೇಲೆ ಹೆಜ್ಜೆಯನ್ನಿಟ್ಟು ಸಮಾಜದಲ್ಲಿ ಗುರುತಿಸಿಕೊಳ್ಳುವ ಪ್ರಯತ್ನ ಶುರುಮಾಡಿದವರು ಇದೇ ಕಲಾವಿದ ಚಿ.ಸು.ಕೃಷ್ಣಸೆಟ್ಟಿ.

ಈ ಮೇಲಿನದನ್ನು ಗಮನಿಸಿದರೆ ಚಿ.ಸು.ಕೃಷ್ಣಸೆಟ್ಟಿಯವರು ಕಲೆಯನ್ನು ಕಡೆಗಣಿಸದೇ ಹೋರಾಟಗಾರರಾಗಿಯೂ ಮತ್ತು ಸಾಮಾಜಿಕ ಕಳಕಳಿ ಅದಕ್ಕೆ ಬದ್ದತೆಯಲ್ಲಿ ನಿಷ್ಠಾವಂತರಾಗಿ ಕೆಲಸ ಮಾಡುವವರಾಗಿದ್ದರು. ವಿಶೇಷವಾಗಿ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ (ಎ.ಬಿ.ವಿ.ಪಿ.) ಜೊತೆ ಸೇರಿ ವಿದ್ಯಾರ್ಥಿಗಳ ಪರ ನಿಲುವನ್ನು ಪ್ರದರ್ಶಿಸುತ್ತಿದ್ದಿದ್ದು ಸಾಮಾನ್ಯ ಸಂಗತಿಯಾದರೂ ಇವುಗಳ ಮಧ್ಯೆ ಜೀವನ ಸಾಧನೆಯ ಚಿತ್ರಕಲೆ ಮತ್ತು ಸಾಹಿತ್ಯವನ್ನು ಅಪ್ಪಿಕೊಳ್ಳುತ್ತಲೇ ಮುಂದೆ ಸಾಗಿದರೆನ್ನಬಹುದು. ಕಲೆಯನ್ನು ಕಲಿಯುವ ಪ್ರಾರಂಭದಲ್ಲಿ ಭಾವಚಿತ್ರ, ವ್ಯಕ್ತಿಚಿತ್ರ, ಹೊರಾಂಗಣ ರೇಖಾಚಿತ್ರ, ಪ್ರಕೃತಿ ಚಿತ್ರಗಳನ್ನು ರಚಿಸಿರುತ್ತಾರೆ. ಅಷ್ಟೇ ಅಲ್ಲದೇ ಜಲವರ್ಣ, ಕಲರ್‌ಪೆನ್ಸಿಲ್, ತೈಲ ವರ್ಣಗಳಿಂದ ಸಾಕಷ್ಟು ಚಿತ್ರಗಳನ್ನು ರಚನೆ ಮಾಡಿ ಒಬ್ಬ ಪರಿಪೂರ್ಣ ಕಲಾವಿದನಾಗಿ ಗುರುತಿಸಿಕೊಂಡರು. ಇವರಿಗೆ ತುಂಬಾ ಪ್ರಭಾವ ಬೀರಿದ ಚಿತ್ರಕಲಾವಿದರೆಂದರೆ ಎಂ.ಟಿ.ವಿ. ಆಚಾರ್ಯರು. ಆದರೂ ಸ್ವಂತಿಕೆಯಿಂದಲೇ ಹೆಚ್ಚು ಕಲಿತದ್ದು, ಇದರ ಪರಿಣಾಮ ಈವರೆಗೂ ತಮ್ಮದೇ ಶೈಲಿಯಲ್ಲಿ ಚಿತ್ರಕೃತಿಗಳನ್ನು ರಚನೆ ಮಾಡಿರುವವರು.

ಚಿ.ಸು.ಕೃಷ್ಣಸೆಟ್ಟಿಯವರ ಮತ್ತೊಂದು ಹವ್ಯಾಸ ಮತ್ತೊಬ್ಬರ ಕಲಾಕೃತಿಗಳನ್ನು ಗಮನಿಸುವುದು ಮತ್ತು ಆ ಕೃತಿಗಳ ಕುರಿತು ವಿಮರ್ಶಿಸುವುದು. ಈ ಹಿನ್ನೆಲೆಯಲ್ಲಿ ಪಾಶ್ಚಾತ್ಯ ಕಲಾವಿದರ ಕಲಾಕೃತಿಗಳನ್ನು ಕೂಡ ಹೆಚ್ಚು ಗಮನಿಸಿದ್ದಾರೆ ಎನ್ನುವುದಕ್ಕೆ ಪ್ರಸ್ತುತ ಅವರ ಕಲಾಕೃತಿಗಳಲ್ಲಿ ಕಂಡುಬರುವ ಕೆಲವು ವಿಶೇಷತೆಗಳನ್ನು ಗುರುತಿಸಬಹುದು. ಆದರೂ ಕೃಷ್ಣಸೆಟ್ಟಿಯವರು ನಾನು ಯಾರನ್ನೂ ಹಿಂಬಾಲಿಸಿಲ್ಲ ನನ್ನ ಕೃತಿಗಳು ನನ್ನ ಶೈಲಿಯಲ್ಲಿಯೇ ಇವೆ ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ವಿವರಗಳನ್ನು ಪಡೆಯುತ್ತಿದ್ದ ಚಿ.ಸು.ಕೃ.ಯವರು ಒಂದು ಕಲಾಕೃತಿಯ ಕುರಿತು ತಿಳಿದುಕೊಳ್ಳುವ, ಆಸ್ವಾದಿಸುವ ಗುಣ ಸ್ವಭಾವ ತುಸು ಹೆಚ್ಚು. ಅದೇರೀತಿಯಲ್ಲಿ ಹೊಸ ಹೊಸ ಮಾರ್ಗಗಳನ್ನು ಕಂಡು ಹಿಡಿದು ನಡೆದಾಗ ಬದುಕುವ ಮಾರ್ಗ ಸುಗಮವಾಗುತ್ತದೆ. ಎನ್ನುವ ಕಲಾವಿದರು ಕಲಿಯುವ ಹಂತದಲ್ಲಿಯೇ ಎಲ್ಲವನ್ನು ಕಲಿಯಲು, ಆಸ್ವಾದಿಸಲು, ಆಗಲಿಲ್ಲ ಎಂದರೂ, ಬದುಕಲು ಬೇಕಾಗುವ ಕಲೆ ನನ್ನಲ್ಲಿ ಜೀವಂತವಾಗಿ ಉಳಿದಿರುತ್ತದೆ ಎಂದಿರುವ ಚಿ.ಸು.ಕೃಷ್ಣಸೆಟ್ಟಿ ದಾವಣಗೆರೆಯಿಂದ ಬೆಂಗಳೂರಿಗೆ ಸೇರಿದ ನಂತರ ತುಂಬಾ ಗಟ್ಟಿಯಾಗಿ ಕಲಾವಲಯದಲ್ಲಿ ನೆಲೆಕಂಡುಕೊಳ್ಳಬೇಕೆಂದು ಶ್ರಮಿಸಿದವರು. ಬರವಣಿಗೆಯಲ್ಲಿ ಆಸಕ್ತಿಯಿದ್ದ ಕಾರಣ ಪತ್ರಿಕೆಯಿಂದ ವಿಮರ್ಶಿಸಲು ಬಂದ ಆಹ್ವಾನವನ್ನು ಪ್ರೀತಿಯಿಂದಲೇ ಸ್ವೀಕರಿಸಿ ಅದರಿಂದ ಜಯಕಂಡುಕೊಂಡವರೆಂದರೇ ಇದೇ ವಿಮರ್ಶಕರು ಮತ್ತು ಕಲಾವಿದರು.

ಕೃಷ್ಣಸೆಟ್ಟಿಯವರ ಪತ್ನಿ ಶ್ರೀಮತಿ ಅಂಜಲಿಸೆಟ್ಟಿಯವರು ಕೂಡ ಭರತನಾಟ್ಯ ಪ್ರವೀಣೆ, ನಾಟಕಕಾರರೂ ಕೂಡ. ಬೆಂಗಳೂರು ಸೇರಿದ ಮೇಲೆ ಈ ದಂಪತಿಗೆ ಒಂದು ಗಂಡು ಮಗುವಾಗುತ್ತದೆ. ಆ ಮಗುವಿಗೆ ವಿನ್ಯಾಸ್ ಎಂದು ನಾಮಕರಣ ಮಾಡುತ್ತಾರೆ. 'ವಿನ್ಯಾಸ್' ಹೆಸರಿನಲ್ಲಿಯೇ

ಕೃಷ್ಣಸೆಟ್ಟಿಯವರು ಒಂದು ಜಾಹಿರಾತು ಸಂಸ್ಥೆಯನ್ನು ಸ್ಥಾಪಿಸಿ, ಸಂಸ್ಥೆಯ ನಿರ್ದೇಶಕರಾಗಿ ಕೆಲಸ ನಿರ್ವಹಿಸುತ್ತಾರಾದರೂ ಅದು ಅಲ್ಪ ದಿನಗಳಲ್ಲಿಯೇ ನಿಂತುಹೋಗುತ್ತದೆ. ಅದರೂ ಇದರಿಂದ ಧೃತಿಗೆಡದೇ ಹೊರರಾಜ್ಯದ ಹೆಸರಾಂತ ಕ್ಲಾರಿಯನ್ ಸಂಸ್ಥೆಯಲ್ಲಿ ೧೯೮೦ ರಿಂದ ೧೯೮೫ರವರಗೆ ಕಲಾ ನಿರ್ದೇಶಕರಾಗಿ ಕೆಲಸ ಮಾಡಿ ಸಾಕಷ್ಟು ಅನುಭವ ಪಡೆದುಕೊಳ್ಳುತ್ತಾರಾದರೂ ಕಲಾಚಟುವಟಿಕೆಯಲ್ಲಿ ಸಕ್ರೀಯವಾಗಿ ಭಾಗವಹಿಸುವ ಹಿನ್ನಲೆಯಲ್ಲಿ ಅಲ್ಲಿಯೂ ಕೆಲಸ ಬಿಡಬೇಕಾಗಿ ಬರುತ್ತದೆ. ಇದರ ನಡುವೆ ಕರ್ನಾಟಕ ಲಲಿತಕಲಾ ಅಕಾಡೆಮಿ ಸಂಪರ್ಕದಿಂದ ಇನ್ನೂ ಹೆಚ್ಚಿನ ಕಲಾಚಟುವಟಿಕೆಯಲ್ಲಿ ಭಾಗಿಯಾಗಿ ಕೆಲಸಕಾರ್ಯ ನಿರ್ವಹಿಸಿರುತ್ತಾರೆ. ಒಟ್ಟು ನಾಲ್ಕು ಭಾರಿ ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಸದಸ್ಯರಾಗಿದ್ದು, ಈ ಹಿನ್ನೆಲೆಯಲ್ಲೂ ರಾಜ್ಯಾದ್ಯಂತ ಸಂಚರಿಸಿ ಕಲಾವಿದರಿಗೆ ಉಪಯುಕ್ತವಾಗುವ ಯೋಜನೆಗಳನ್ನು ಜಾರಿಗೊಳಿಸಿ ಯಶಸ್ವಿ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿರುತ್ತಾರೆ. ಇದರಲ್ಲಿ ಮುಖ್ಯವಾಗಿ ಪ್ರಕಟಣೆ, ಅಕಾಡೆಮಿಯಿಂದ ಬಂದಂತಹ ಪುಸ್ತಕಗಳಿಗೆ ಬೆನ್ನುಡಿ, ಮುನ್ನುಡಿ, ಸಂಕಲನದ ಜೊತೆ ಪ್ರಕಟಣಾ ಸಮಿತಿಯ ಸದಸ್ಯರಾಗಿ ಕೆಲಸ ನಿರ್ವಹಿಸಿರುವುದು ಉತ್ತಮ ಕಾರ್ಯಗಳಲ್ಲೊಂದು. ನಿರಂತರ ಇಪ್ಪತ್ತು ವರ್ಷಗಳ ಕರ್ನಾಟಕ ಲಲಿತಕಲಾ ಅಕಾಡೆಮಿಗಳ ಕೆಲಸ ಕಾರ್ಯಗಳ ನಡುವೆ ಶಾಲಾ, ಕಾಲೇಜುಗಳಲ್ಲಿ ಆಯೋಜಿಸುತ್ತಿದ್ದ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ, ದೃಶ್ಯಕಲೆಯ ಕುರಿತು ಮಾತನಾಡಿದ್ದಾರೆ. ಅಷ್ಟೇ ಅಲ್ಲದೇ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಚಿತ್ರಕಲಾ ಶಿಬಿರ ಮತ್ತು ಪ್ರದರ್ಶನದಲ್ಲಿ ಭಾಗವಹಿಸಿ ಗುರುತರವಾಗಿದ್ದಾರೆ ಚಿ.ಸು.ಕೃಷ್ಣಸೆಟ್ಟಿ.

ದೃಶ್ಯಕಲೆಯಲ್ಲಿ ಉತ್ತಮ ಅಧ್ಯಯನ ಕೈಗೊಂಡಿರುವ ಕೃಷ್ಣಸೆಟ್ಟಿಯವರು ೧೯೭೪–೭೫ರ ಸಾಲಿನಲ್ಲಿ ಚಿತ್ರಕಲೆಯಲ್ಲಿ ಡಿಪ್ಲೊಮವನ್ನು ಪಡೆಯುತ್ತಾರೆ. ಓದಿದ ದಾವಣಗೆರೆಯ ಲಲಿತಕಲಾ ಮಹಾವಿದ್ಯಾಲಯದಲ್ಲಿ ೧೯೭೮–೭೯ರ ಅವಧಿಯಲ್ಲಿ ಒಂದು ವರ್ಷದ ಮಟ್ಟಿಗೆ ಉಪನ್ಯಾಸಕರಾಗಿ ಕಾರ್ಯನಿರ್ವಹಿಸಿರುತ್ತಾರೆ. ನಂತರ ೧೯೮೦ರಲ್ಲಿ ಬೆಂಗಳೂರಿಗೆ ಕೆಲಸದ ನಿಮಿತ್ತ ವಲಸೆ ಬಂದ ಕೃಷ್ಣಸೆಟ್ಟಿಗೆ ಕೇಂದ್ರ ಲಲಿತಕಲಾ ಅಕಾಡೆಮಿ ಗ್ರಾಫಿಕ್ ಕಲೆ ಕಲಿಯಲು ಫೆಲೋಶಿಪ್‌ಗೆ ಆಯ್ಕೆ ಮಾಡಲಾಗುತ್ತದೆ. ೧೯೮೧ರಲ್ಲಿ ಗಡಿಸ್ಪುಡಿಯೋ ದೆಹಲಿಗೆ ಹೋಗಿ ಒಂದು ವರ್ಷಗಳ ಕಾಲ ಅಭ್ಯಾಸವನ್ನು ಮಾಡಿ ಬೆಂಗಳೂರಿಗೆ ವಾಪಾಸಾಗಿ ಕ್ಲಾರಿಯನ್ ಜಾಹಿರಾತು ಸಂಸ್ಥೆಯಲ್ಲಿ ನಿರ್ದೇಶಕರಾಗಿ ಐದು ವರ್ಷಗಳ ಕಾಲ ಸೇವೆ ಸಲ್ಲಿಸುತ್ತಾರೆ.

**ಪ್ರಶಸ್ತಿಗಳು, ಕಲಾ ಪ್ರದರ್ಶನ ಮತ್ತು ಕಲಾಶಿಬಿರಗಳು**

**ಪ್ರಮುಖ ಪ್ರಶಸ್ತಿಗಳು**

೧೯೭೫ರಲ್ಲಿ ಮೈಸೂರು ದಸರಾ ಪ್ರಶಸ್ತಿ ಬಂದಿರುತ್ತದೆ.

೧೯೮೭ರ ಕೊಲ್ಕತ್ತದಲ್ಲಿ ಆಲ್ ಇಂಡಿಯಾ ಜಾಮಿನಿರಾಯ್ ಶತಮಾನೋತ್ಸವ ಪ್ರಯುಕ್ತ

ನಡೆದ ಚಿತ್ರಕಲಾ ಪ್ರದರ್ಶನದಲ್ಲಿ ಪ್ರಶಸ್ತಿಗೆ ಅರ್ಹವಾದ ಕೃತಿ(ಇದರ ತಿರ್ಪುಗಾರರಾಗಿ ಖ್ಯಾತ ಚಿತ್ರಕಲಾವಿದ ಎಂ.ಎಫ್.ಹುಸೇನ್ ಎಂಬುದು ವಿಶೇಷ).

೨೦೦೧ರಲ್ಲಿ ಗೊರೂರು ಪ್ರತಿಷ್ಠಾನ ವತಿಯಿಂದ 'ಗೊರೂರು' ಪ್ರಶಸ್ತಿ ನೀಡಲಾಗಿದೆ.

೨೦೦೨ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ

೨೦೦೨ರಲ್ಲಿ ಸಹ್ಯಾದ್ರಿ ಸಂಘ, ಬೆಂಗಳೂರು ಅವರ ವತಿಯಿಂದ ಸಹ್ಯಾದ್ರಿ ಪ್ರಶಸ್ತಿ

೨೦೦೩ರಲ್ಲಿ ಕರ್ನಾಟಕ ಸರ್ಕಾರವು 'ಕರ್ನಾಟಕ ರಾಜ್ಯೋತ್ಸವ' ಪ್ರಶಸ್ತಿಯನ್ನು ನೀಡಿ ಗೌರವಿಸಿರುತ್ತದೆ.

೨೦೦೪ರಲ್ಲಿ ಅಮೆರಿಕನ್ ಬಯೋಗ್ರಾಫಿಕಲ್ ಸಂಸ್ಥೆ, ಯು.ಎಸ್.ಎ ವತಿಯಿಂದ 'ವರ್ಷದ ಅಂತರಾಷ್ಟ್ರೀಯ ಮನುಷ್ಯ' ಪ್ರಶಸ್ತಿಯನ್ನು ನೀಡಿರುತ್ತದೆ.

೨೦೦೫ರಲ್ಲಿ ರಾಜೀವ್ ಗಾಂಧಿ ಸಮನ್ವಯ ಸಮಿತಿ ಹೊಸದೆಹಲಿ ವತಿಯಿಂದ 'ರಾಷ್ಟ್ರೀಯ ರತ್ನ' ರಾಷ್ಟ್ರೀಯ ಪ್ರಶಸ್ತಿಯನ್ನು ನೀಡಿ ಗೌರವಿಸಲಾಗಿದೆ.

೨೦೦೫ರಲ್ಲಿ ಸರ್ವೆ ಸಾಂಸ್ಕೃತಿಕ ಅಕಾಡೆಮಿಯಿಂದ ಮಯೂರ ಪ್ರಶಸ್ತಿ.

೨೦೦೬ರಲ್ಲಿ ಕಲಾ ಚೇತನ ಪ್ರಶಸ್ತಿ.ಗದಗ

೨೦೦೭ರಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ನೀಡುವ ಪ್ರತಿಷ್ಠಿತ ಸುವರ್ಣ ಕರ್ನಾಟಕ ಗೌರವ ಪ್ರಶಸ್ತಿ ನೀಡಿ ಸನ್ಮಾನಿಸಲಾಗಿದೆ.

೨೦೦೮ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ವತಿಯಿಂದ ನೀಡುವ ಪ್ರತಿಷ್ಠಿತ ಸುವರ್ಣ ಕರ್ನಾಟಕ ಗೌರವ ಪ್ರಶಸ್ತಿ ನೀಡಿ ಸನ್ಮಾನಿಸಲಾಗಿದೆ.

೨೦೧೧ರಲ್ಲಿ 'ಭಾರತ್ ವಿಕಾಸ ರತ್ನಾ' ರಾಷ್ಟ್ರೀಯ ಪ್ರಶಸ್ತಿ ಸಂದಿದೆ.

ದಶಕದ ಅತ್ಯುತ್ತಮ ಕಲಾ ಪುಸ್ತಕಕ್ಕಾಗಿ ವಿಶ್ವೇಶ್ವರಯ್ಯ ಸಾಹಿತ್ಯ ಪ್ರಶಸ್ತಿಯನ್ನು ನೀಡಲಾಗಿದೆ.

ಸಂಚಾರ ಪೋಲಿಸ್ ಆಯೋಜಿಸಿದ್ದ ಚಿತ್ರಕಲಾ ಪ್ರದರ್ಶನದಲ್ಲಿ ಪ್ರಶಸ್ತಿ ನೀಡಿ ಸನ್ಮಾನಿಸಲಾಗಿದೆ.

**ಪ್ರಮುಖ ಚಿತ್ರ ಪ್ರದರ್ಶನಗಳು**

೧೯೮೦ರಿಂದ ಇಲ್ಲಿಯವರೆಗೆ ಒಟ್ಟು ಏಳು ಬಾರಿ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನವನ್ನು ಕೈಗೊಂಡಿರುತ್ತಾರೆ.

೧೯೮೪-೮೫ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಜಾರಿಗೊಳಿಸಿದ 'ಕರ್ನಾಟಕ ಕಲಾಯಾತ್ರ ಪ್ರಯಾಣ' ಪ್ರದರ್ಶನದಲ್ಲಿ ಕೃಷ್ಣಸೆಟ್ಟಿಯವರ ಕಲಾಕೃತಿ ಪ್ರದರ್ಶನಗೊಂಡಿರುತ್ತದೆ.

೧೯೮೫-೮೬ರ ಅವಧಿಯಲ್ಲಿ ಭಾರತ ಕಲಾ ಉತ್ಸವವನ್ನು ಆಯೋಜಿಸಲಾಗಿತ್ತು. ಈ ಸಂದರ್ಭದಲ್ಲಿ ಚಿ.ಸು.ಕೃಷ್ಣಸೆಟ್ಟಿಯವರ ಕಲಾಕೃತಿಯು ದೇಶದ ಪ್ರಮುಖ ಚಿತ್ರಕಲಾವಿದರ ಕೃತಿಗಳಲ್ಲಿ ಆಯ್ಕೆಯಾಗಿ ದೇಶದಲ್ಲಿ ಪ್ರದರ್ಶನಗೊಂಡಿದ್ದಲ್ಲದೇ ಕ್ಯಾಲಿಫೋರ್ನಿಯಾ, ನ್ಯೂಯಾರ್ಕ್, ಲಾಸ್‌ಏಂಜಲಿಸ್, ಟೆಕ್ಸಾಸ್ ಮತ್ತು ಫೆನ್ಸೈಲ್ವೆನಿಯಾ ಸೇರಿದಂತೆ ಹದಿನೇಳು ಪ್ರಮುಖ ಗ್ಯಾಲರಿಗಳಲ್ಲಿ ಆಯ್ಕೆಯಾದ ಕೃತಿಗಳನ್ನು ಪ್ರದರ್ಶಿಸಲಾಯಿತು.

೧೯೮೮ರಲ್ಲಿ ಮ್ಯಾಂಚೆಸ್ಟರ್, ಯು.ಕೆನಲ್ಲಿ ಆಯೋಜಿಸಿದ್ದ ಗುಂಪು ಪ್ರದರ್ಶನದಲ್ಲಿ ಕೃಷ್ಣಸೆಟ್ಟಿಯವರ ಕಲಾಕೃತಿಯೂ ಪ್ರದರ್ಶಿತಗೊಂಡಿರುತ್ತದೆ.

೨೦೦೧ರಲ್ಲಿ ಪೋಲ್ಯಾಂಡ್‌ನ ಪುರಸಭಾ ಗ್ಯಾಲರಿಯಲ್ಲಿ ಆಯೋಜಿಸಲಾಗಿದ್ದ ಅಂತರಾಷ್ಟ್ರೀಯ ಗ್ರಾಫಿಕ್ಸ್ ಕಲಾಕೃತಿಗಳ ಪ್ರದರ್ಶನದಲ್ಲಿ ಭಾಗವಹಿಸಿರುತ್ತಾರೆ.

೨೦೦೨ರಲ್ಲಿ ಫಿಲಿಪೈನ್ಸ್‌ನಲ್ಲಿ ಜರುಗಿದ ಅಂತಾರಾಷ್ಟ್ರೀಯ ಚಿತ್ರಪ್ರದರ್ಶನದಲ್ಲಿ ಚಿ.ಸು. ಕೃಷ್ಣಸೆಟ್ಟಿಯವರು ಭಾಗವಹಿಸಿರುತ್ತಾರೆ.

ಭಾರತ್ ಭವನ್ ಭೂಪಾಲ್‌ನಲ್ಲಿ ನಡೆದ ಅಂತರಾಷ್ಟ್ರೀಯ ಬಿನಾಲ್ಲೆ ಚಿತ್ರ ಪ್ರದರ್ಶನದಲ್ಲಿ ಭಾಗವಹಿಸಿದ್ದಾರೆ.

ಕೇಂದ್ರ ಲಲಿತಕಲಾ ಅಕಾಡೆಮಿ ಆಯೋಜಿಸಿದ್ದ ರಾಷ್ಟ್ರೀಯ ಕಲಾ ಪ್ರದರ್ಶನದಲ್ಲಿ ಭಾಗವಹಿಸಿರುತ್ತಾರೆ.

ನವದೆಹಲಿ, ಲಕ್ನೋ, ಚೆನ್ನೈ, ಭುವನೇಶ್ವರ, ಮುಂಬೈ, ಗೋವಾ, ಹೈದರಾಬಾದ್, ಬೆಂಗಳೂರು ಸೇರಿದಂತೆ ವಿವಿಧ ಕಡೆ ನಡೆದ ಗುಂಪು ಪ್ರದರ್ಶನಗಳಲ್ಲಿ ಭಾಗವಹಿಸಿರುತ್ತಾರೆ.

**ಪ್ರಮುಖ ಕಲಾ ಶಿಬಿರಗಳು**

೧೯೮೫ರಲ್ಲಿ ಶ್ರೀ ಕೃಷ್ಣರೆಡ್ಡಿ ನ್ಯೂಯಾರ್ಕ್ ವಿಶ್ವವಿದ್ಯಾಲಯದಲ್ಲಿ ಆಯೋಜಿಸಿದ್ದ ಗ್ರಾಫಿಕ್ ಕಾರ್ಯಗಾರದಲ್ಲಿ ಭಾಗವಹಿಸಿದ್ದಾರೆ.

೧೯೮೯ರಲ್ಲಿ ಉತ್ತರ ಪ್ರದೇಶ ಸರ್ಕಾರ ಹರಿದ್ವಾರದಲ್ಲಿ ಆಯೋಜಿಸಿದ್ದ ದಕ್ಷಿಣ ಭಾರತದ ಚಿತ್ರಕಲಾವಿದರ ಕ್ಯಾಂಪ್‌ನಲ್ಲಿ ಕೃಷ್ಣಸೆಟಿ ಭಾಗವಹಿಸಿದ್ದಾರೆ.

೨೦೦೯ರಲ್ಲಿ ಕರ್ನಾಟಕ ಸಾರಿಗೆ ಇಲಾಖೆಯು ನಡೆಸಿದ ಚಿತ್ರಕಲಾ ಕಾರ್ಯಗಾರದಲ್ಲಿ ಭಾಗವಹಿಸಿದ್ದಾರೆ.

೨೦೧೧ರಲ್ಲಿ ಗೋವಾದಲ್ಲಿ ನಡೆದ ಅಂತರಾಷ್ಟ್ರೀಯ ಕಲಾ ಶಿಬಿರದಲ್ಲಿ ಭಾಗವಹಿಸಿದ್ದಾರೆ.

೨೦೧೪ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಆಯೋಜಿಸಿದ್ದ ರಾಷ್ಟ್ರೀಯ ಚಿತ್ರಕಲಾ ಶಿಬಿರದಲ್ಲಿ ಭಾಗವಹಿಸಿ ಚಿತ್ರಕೃತಿಯನ್ನು ರಚಿಸಿದ್ದಾರೆ.

**ಇಲ್ಲಿಯವರೆಗೂ ಕೃಷ್ಣಸೆಟ್ಟಿಯವರಿಗೆ ಸಿಕ್ಕ ಸ್ಥಾನಮಾನಗಳು**

೧೯೯೧-೯೨ರಲ್ಲಿ ಭಾರತ ಸರ್ಕಾರವು ಕೃಷ್ಣಸೆಟ್ಟಿಯವರನ್ನು ರಾಷ್ಟ್ರೀಯ ಚಲನಚಿತ್ರದ ಸೆನ್ಸಾರ್ ಮಡಳಿಯ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿರುತ್ತದೆ.

೧೯೯೯ ರಿಂದ ೨೦೦೧ರವರೆಗೆ ಕರ್ನಾಟಕ ದೃಶ್ಯಕಲಾ ಸಾಹಿತ್ಯ ಪರಿಷತ್‌ಗೆ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿರುತ್ತಾರೆ.

ಕರ್ನಾಟಕ ಸರ್ಕಾರವು ನಾಲ್ಕು ಬಾರಿ ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಸದಸ್ಯರನ್ನಾಗಿ ನಾಮನಿರ್ದೇಶನಗೊಳಿಸಿರುತ್ತದೆ.

೨೦೦೨ರ ಕರ್ನಾಟಕ ಕಲಾಮೇಳಕ್ಕೆ ಅಧ್ಯಕ್ಷರಾಗಿ ನೇಮಕಗೊಂಡಿರುತ್ತಾರೆ.

ಕನ್ನಡ ವಿಶ್ವವಿದ್ಯಾಲಯ.ಹಂಪಿಗೆ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಸಂದರ್ಶಕ ಪ್ರಾದ್ಯಾಪಕರಾಗಿ ಕೆಲಸ ನಿರ್ವಹಿಸಿರುತ್ತಾರೆ.

ಸಾಲಾ, ಮೈಸೂರು, ಮುಕ್ತ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಸಂದರ್ಶಕ ಪ್ರಾಧ್ಯಾಪಕರಾಗಿ ಆಯ್ಕೆಗೊಂಡಿರುತ್ತಾರೆ.

ಕರ್ನಾಟಕ ಚಿತ್ರಕಲಾ ಪರಿಷತ್‌ಗೆ ಆಡಳಿತ ಮಂಡಳಿಯ ಸದಸ್ಯರಾಗಿ ಆಯ್ಕೆಯಾಗಿರುತ್ತಾರೆ.

ದಾವಣಗೆರೆ ಯುನಿವರ್ಸಿಟಿ ಕಾಲೇಜ್ ಆಫ್ ಫೈನ್‌ಆರ್ಟ್ ಆಡಳಿತ ಮಂಡಳಿಯ ಸದಸ್ಯರಾಗಿ ನೇಮಕಗೊಂಡಿರುತ್ತಾರೆ.

೨೦೧೧-೧೨ರಲ್ಲಿ ಕರ್ನಾಟಕ ಜನಪದ ವಿಶ್ವವಿದ್ಯಾಲಯಕ್ಕೆ ಅಕಾಡೆಮಿ ಕೌನ್ಸಿಲ್ ಆಗಿ ಆಯ್ಕೆಯಾಗಿರುತ್ತಾರೆ.

೨೦೧೨ ರಿಂದ ೨೦೧೩ರವರೆಗೆ ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿರುತ್ತಾರೆ.

ಪ್ರಸ್ತುತ ಕೇಂದ್ರ ಲಲಿತಕಲಾ ಅಕಾಡೆಮಿಯ ಆಡಳಿತಾಧಿಕಾರಿಯಾಗಿ ಕಾರ್ಯ ನಿರ್ವಹಿಸು ತ್ತಿದ್ದಾರೆ.

**ಕೃಷ್ಣಸೆಟ್ಟಿಯವರು ಬರೆದ ಪುಸ್ತಕಗಳು**

೧. ಚಿತ್ರಾ-ಚಿತ್ತ

೨. ವರ್ಣಾವರಣ

೩. ದೃಶ್ಯಕಲೆ ಎಂದರೇನು?

೪. ಎಕ್ಸ್‌ಪ್ರೆಸ್‌ನಿಸಂ

೫. ಲೊಹಫಾಲಕ ಮಾಂತ್ರಿಕ ಎಲ್.ಪಿ.ಅಂಚನ್

೬. ಎಂ.ಟಿ.ವಿ.ಆಚಾರ್ಯ

೭. ಯೂಸಫ್ ಅರಕ್ಕಲ್

**ಚಿ.ಸು.ಕೃಷ್ಣಸೆಟಿಯವರ ಕೊಡುಗೆಗಳು**

೧. ೧೯೮೮ ರಿಂದ ೧೯೯೬ರವರೆಗೆ ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ಕಲಾವಿಮರ್ಶಕ, ಅಂಕಣಕಾರರಾಗಿ ಕಾರ್ಯನಿರ್ವಹಿಸಿರುತ್ತಾರೆ.

೨. ೧೯೯೬ ರಿಂದ ೨೦೦೨ರವರೆಗೆ ಪ್ರಜಾವಾಣಿ ಪತ್ರಿಕೆಯಲ್ಲಿ ಕಲಾವಿಮರ್ಶಕ, ಅಂಕಣಕಾರರಾಗಿ ಕಾರ್ಯನಿರ್ವಹಿಸಿರುತ್ತಾರೆ.

೩. ಡೆಕ್ಕನ್ ಹೆರಾಲ್ಡ್ ಇಂಗ್ಲಿಷ್ ದಿನಪತ್ರಿಕೆಗೆ ಹಲವು ಕಲಾವಿಮರ್ಶಾತ್ಮಕ ಅಂಕಣವನ್ನು ರಚಿಸಿಕೊಟ್ಟಿದ್ದಾರೆ.

೪. 'ಸಂಕುಲಾ' ಕಲಾ ನಿಯತಕಾಲಿಕದ ಸಂಪಾದಕ ಸಮಿತಿಯ ಸದಸ್ಯರಾಗಿದ್ದರು.

೫. ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಸ್ತುತ ಪಡಿಸಿದ 'ಜನಪ್ರಿಯ ಮಾಲೆ' ಸರಣಿ ಪುಸ್ತಕಗಳಿಗೆ ಸಂಪಾದಕರಾಗಿದ್ದಾರೆ.

೬. ಕಲಾ ಬರಹಗಾರರಿಗಾಗಿ ಕರ್ನಾಟಕ ಲಲಿತಕಲಾ ಅಕಾಡೆಮಿ ಆಯೋಜಿಸಿದ್ದ ಎರಡು ದಿನದ ಕಾರ್ಯಗಾರದಲ್ಲಿ ನಿರ್ದೇಶಕರಾಗಿ ಕಾರ್ಯನಿರ್ವಹಿಸಿರುತ್ತಾರೆ.

೭. ಏಳು ಬಾರಿ ನಡೆದ ಸಂಘಟಿತ ಕಲಾಮೇಳದಲ್ಲಿ ಉನ್ನತ ಸ್ಥಾನಗಳು ದೊರಕಿರುತ್ತವೆ.

೮. ಕಲೆಯ ಕುರಿತಾದ ಅನೇಕ ವಿಚಾರಗೋಷ್ಠಿಗಳಲ್ಲಿ ಸಂಶೋಧನಾ ಪತ್ರಿಕೆಗಳನ್ನು ಪ್ರಸ್ತುತ ಪಡಿಸಿರುತ್ತಾರೆ.

೯. ಅನೇಕ ಆಮದು ನಿಯತಕಾಲಿಕಗಳು ಮತ್ತು ಪುಸ್ತಕಗಳಿಗೆ ಲೇಖನಗಳನ್ನು ಬರೆದಿರುತ್ತಾರೆ.

**ಟಿ.ವಿ.ಪ್ರೊಡಕ್ಷನ್ಸ್**

೧. ಬೆಂಗಳೂರು ದೂರದರ್ಶನಕ್ಕಾಗಿ ಹದಿನಾರು ಎಪಿಸೋಡುಗಳಿರುವ ಚಿತ್ರಾಂತರಂಗ ಧಾರವಾಹಿಯನ್ನು ನಿರ್ಮಿಸಿ, ನಿರ್ದೇಶಿಸಿರುತ್ತಾರೆ.

೨. ಸುಪ್ರಭಾತ್ ಕನ್ನಡ ಚಾನಲ್‌ಗಾಗಿ 'ಜೀವನ ಚಕ್ರ' ಟಿವಿ ಧಾರವಾಹಿಯನ್ನು ರಚಿಸಿ ನಿರ್ದೇಶಿಸಿರುತ್ತಾರೆ.

೩. ಬೆಂಗಳೂರು ದೂರದರ್ಶನಕ್ಕಾಗಿ 'ಮರೀಚಿಕೆ' ಎಂಬ ಶೀರ್ಷಿಕೆಯುಳ್ಳ ಟಿ.ವಿ ಧಾರವಾಹಿಯನ್ನು ನಿರ್ಮಾಣದ ಜೊತೆ ನಿರ್ದೇಶನ ಮಾಡಿರುತ್ತಾರೆ.

೪. 'ನವಿಲುಗರಿ' ಧಾರವಾಹಿ ನಿರ್ಮಾಣ ಮತ್ತು ನಿರ್ದೇಶನ.

೫. ಕರ್ನಾಟಕ ಸರ್ಕಾರದ ವತಿಯಿಂದ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಲವು ಕಿರು ಧಾರವಾಹಿಗಳನ್ನು ನಿರ್ದೇಶಿಸಿರುತ್ತಾರೆ.

೬. ಬೆಂಗಳೂರು ದೂರದರ್ಶನದಲ್ಲಿ ಮಕ್ಕಳಿಗಾಗಿ ಹಲವು ರಸಪ್ರಶ್ನೆ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿರುತ್ತಾರೆ.

೭. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರಕ್ಕೆ ಒಟ್ಟು ನಾಲ್ಕು ಕಿರುಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿ ಇಲಾಖೆಗೆ ಒಪ್ಪಿಸಿರುತ್ತಾರೆ.

**ಕಲಾಕೃತಿಗಳ ಸಂಗ್ರಹಣೆಗಳು**

ಚಿ.ಸು.ಕೃಷ್ಣಸೆಟ್ಟಿಯವರ ವರ್ಣಚಿತ್ರಗಳು ಅನೇಕ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಸಂಗ್ರಹಗೊಂಡಿರುತ್ತವೆ. ಅವುಗಳಲ್ಲಿ ಪ್ರಮುಖವಾಗಿ ಮ್ಯಾಂಚೆಸ್ರ್, ಯುಕೆ, ಡೆನ್ಮಾರ್ಕ್, ಯು.ಎಸ್.ಎ, ಸ್ವಿಟ್ಜರ್ಲ್ಯಾಂಡ್, ಪೋಲ್ಯಾಂಡ್, ಫಿಲಿಫೈನ್ಸ್, ಲಲಿತಕಲಾ ಅಕಾಡೆಮಿ, ಬೆಂಗಳೂರು. ನವದೆಹಲಿ, ಭಾರತ್ ಭವನ್. ಭೋಪಲ್, ಕೇಂದ್ರ ಲಲಿತಕಲಾ ಅಕಾಡೆಮಿ ಮತ್ತು ಜವಹರಲಾಲ್ ನೆಹರು ಸೆಂಟರ್ ಸೇರಿದಂತೆ ಹಲವು ಸರ್ಕಾರಿ ಮತ್ತು ಖಾಸಗಿವಲಯದಲ್ಲಿ ಸಂಗ್ರಹಗೊಂಡಿರುತ್ತವೆ.

ಈ ಕಲಾ ಕ್ಷೇತ್ರದಲ್ಲಿ ಹೆಚ್ಚಾಗಿ ಬರವಣಿಗೆ ದೃಷ್ಟಿಯಿಂದ ದಿಢೀರನೆ ಬ್ರಶ್ ಹೋಗಿ ಪೆನ್ನು ಬಂದರೆ ಬದಲಾವಣೆ ತತ್ಕ್ಷಣಕ್ಕೆ ಫಲಿತಾಂಶ ಅಸಾಧ್ಯವಾದುದ್ದಾದರೂ ನಮ್ಮಂತವರು ಆ ದೃಷ್ಟಿಯಿಂದಲೇ ಬರವಣಿಗೆಯ ಕಡೆ ವಾಲಿದರೆನ್ನುತ್ತಾ, ತೀರಾ ಇತ್ತೀಚೆಗೆ ಸಂಶೋಧಕರು ತಮ್ಮ ಬದುಕಿನ ರೂಪತೆಗೆ ಅವಶ್ಯಕತೆಯಿರುವಷ್ಟು ಕೆಲಸವನ್ನು ತುಂಬಾ ನಿಷ್ಠಾವಂತರಾಗಿ ಮಾಡಿಕೊಳ್ಳು ತ್ತಿದ್ದಾರೇನೋ ಎಂಬ ಅನುಮಾನ ಕಾಡುತ್ತಿದೆ ಎನ್ನುವ ಚಿ.ಸು.ಕೃಷ್ಣಸೆಟ್ಟಿಯವರು ನನ್ನ ಪ್ರಶ್ನೆಗಳಿಗೆ ನೇರವಾಗಿ ಉತ್ತರಿಸಿರುವ ಮಾತುಗಳು ಈ ಕೆಳಗೆ ಕಾಣಬಹುದು.

ಪ್ರಶ್ನೆ: ಕಲಾಕೃತಿಗಿಂತ ಮಾತುಗಾರಿಕೆಯಿಂದಲೇ ಗುರುತಿಸಿಕೊಳ್ಳುವ ಪ್ರಯತ್ನ ಕಲಾವಿದರಲ್ಲಿ ನಡೆಯುತ್ತಿದೆ ಅನ್ನುವ ಮಾತಿದೆ ಅದಕ್ಕೆ ತಮ್ಮ ಅಭಿಪ್ರಾಯ.

ಕೃ: ಮಾತುಗಾರಿಕೆಯವರೂ ಇದ್ದಾರೆ, ಸ್ಕಿಲ್ ಇರೋರು ಇದ್ದಾರೆ. ಕೆಲವು ಕಡೆ ಮಾತ್ರ ಅಂದ್ರೇ ಚಿತ್ರಕಲಾ ಪರಿಷತ್‌ನಂತಹವರಲ್ಲಿ ಮಾತುಗಾರಿಕೆಯಂತ ಮಂತ್ರಗಳಿಂದ ಕಲಾಕೃತಿಗಳನ್ನು ಮಾರಾಟ ಮಾಡುವಂತಹ, ಗ್ರಾಹಕರನ್ನು ಸೆಳೆಯುವಂತಹ ಸಂದರ್ಭಗಳನ್ನು ನೋಡಬಹುದೇ ವಿನ: ಹಳ್ಳಿಗಾಡುಗಳಲ್ಲಿ ಇವತ್ತಿಗೂ ಆ ಸಂದರ್ಭಗಳೂ ಉದ್ಭವವಾಗಿಲ್ಲ. ಯಾಕಂದ್ರೆ ಮಾತಿಲ್ಲ ಹಾಗಾಗಿ ಅಷ್ಟೇ. ಸಾಕಷ್ಟು ಕಲಾವಿದರಿಗೆ ನನ್ನ ಮನವಿ ಏನಂದ್ರೇ ಮೊದಲು ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳನ್ನು ದುಡ್ಡು ಕೊಟ್ಟಾದರೂ ಕಲಿಯಿರಿ ಅಂತಾ. ಅದರಿಂದ ತಮ್ಮಗಳ ಬಾಯಿಬರುವುದು. ಅದರಿಂದ ತಮ್ಮಗಳ ಕಲಾಕೃತಿಯೂ ಮಾತಾಡುತ್ತೇ, ಮಾತನಾಡಿಸಿ ದೇಶ ವಿದೇಶಗಳಲ್ಲಿ ತಮ್ಮನ್ನು ಮಾತನಾಡಿಸುತ್ತದೆ ಎಂಬುದನ್ನು ಅನೇಕರಿಗೆ ಅನೇಕಾನೇಕ ಸಲ ಹೇಳಿರುತ್ತೇನೆ.

ನಾನು ಕೂಡ ಇಂಗ್ಲಿಷ್‌ನ್ನು ತಿರಸ್ಕರಿಸಿದವನು, ಒಂದು ಕಾಲದಲ್ಲಿ ಕನ್ನಡ ಚಳುವಳಿಯಲ್ಲಿ ತುಂಬಾ ಉತ್ಸಾಹದಿಂದ ಭಾಗಿಯಾಗಿದ್ದುಂಟು ಅದಕ್ಕೆಂಬಂತೆ ಗೋಕಾಕ್ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದೀನಿ ಎನ್ನುವ ಚಿ.ಸು.ಕೃಷ್ಣಸೆಟ್ಟಿಯವರು ಈಗಿನ ಪರಿಸ್ಥಿತಿಯೇನಾದರೂ ನನ್ನ ಜೀವನದಲ್ಲಿ ಮೂವತ್ತು ವರ್ಷಗಳ ಹಿಂದೆ ಸಿಕ್ಕಿದ್ದರೆ ಅಂತರಾಷ್ಟ್ರೀಯ ಮಟ್ಟದಲ್ಲಿ ಉಪನ್ಯಾಸವನ್ನು ನೀಡುತ್ತಿದ್ದೆ ಎಂದು ಎದೆಯುಬ್ಬಿಸಿ ಹೇಳುತ್ತಾರೆ. ಅದಾಗಿಲ್ಲದಕ್ಕೆ ಕಾರಣ ನಮ್ಮ ಕನ್ನಡದ ಮೇಲಿನ ಅಭಿಮಾನ ಮತ್ತು ಸಾಹಿತ್ಯದಲ್ಲಿ ತೋರಿದ ಆಸಕ್ತಿಯು ಒಂದು ಕಡೆ ಇಲ್ಲಿಯೇ ನೆಲೆಕಾಣಲೂ ಕಾರಣವಾಯ್ತು ಎನ್ನುತ್ತಾರೆ.

ಪ್ರಶ್ನೆ: ತಾವು ಇಷ್ಟೆಲ್ಲಾ ಹೆಳ್ತೀರಲ್ವ..! ತಾವೇ ಏಕೆ ಒಂದು ಸಂಸ್ಥೆಯನ್ನು ತೆಗೆಯುವುದರ ಮೂಲಕ ಒಂದಿಷ್ಟು ಕಣ್ಣಂಚಿನಲ್ಲಿ ಕರಗಿಹೋಗುವ ಆಸಕ್ತ ಕಲಾವಿದರನ್ನು ಪ್ರಪಂಚಕ್ಕೆ ಪರಿಚಯಿಸಬಹುದಿತ್ತಲ್ವ..?

ಕೃ: ಇವಾಗ್ಲೂ ತುಂಬಾ ಕಲಾವಿದರೂ ಹೇಳ್ತಾಯಿರ್ತಾರೆ ಒಂದು ಸಂಸ್ಥೆಯನ್ನು ಪ್ರಾರಂಭಿಸಿ ಅಂತಾ, ಆದರೆ ನನಗೆ ಆಸಕ್ತಿಯಿಲ್ಲ, ಬಿ.ಇ.ಎಂ.ಎಲ್ ಸಂಸ್ಥೆಯಲ್ಲಿ ಕೆಲಸ ಮಾಡುವಾಗಲೂ ಅನೇಕ ಕಡೆಯಿಂದ ಉಪನ್ಯಾಸಕನಾಗಲೂ ಅವಕಾಶಗಳು ಬಂದವು ಉದಾ: ಕಲಾಮಂದಿರ, ಕನ್ನಡ ವಿಶ್ವವಿದ್ಯಾಲಯದಿಂದ ಆಫರ್ ಬಂದಿತ್ತಾದರೂ ಅವುಗಳನ್ನು ಸ್ವತ: ನಾನೇ ತಿರಸ್ಕರಿಸಿಬಿಟ್ಟೆ. ಆ ಕಡೆ ಮುಖಮಾಡಲು ನನಗೆ ಇಷ್ಟವಾಗಲಿಲ್ಲ.

ಪ್ರಶ್ನೆ: ಕೃಷ್ಣಸೆಟ್ಟಿಯವರ ಮನಸ್ಥಿತಿವುಳ್ಳವರ ಗುಂಪೊಂದು ಕರ್ನಾಟಕದಲ್ಲಿ ಹುಟ್ಟಿ ಹಾಕಿದ್ದರೆ, ಈ ಕಲಾಕ್ಷೇತ್ರದಲ್ಲಿ ಒಂದು ರೀತಿಯಲ್ಲಿ ಬದಲಾವಣೆ ಆಗಬಹುದೇನೋ ಎಂಬ ಆಲೋಚನೆ ಬಂದಿದ್ದರೆ ಪ್ರಸ್ತುತ ವಾತಾವರಣದಲ್ಲಿ ಹೇಗಿರುತ್ತಿತ್ತು..?

**ಕೃ:** ನಾವೆಲ್ಲಾ ಮಾಡಿರುವ ತಪ್ಪುಗಳೆಂದರೆ ಅವುಗಳೆ, ನೋಡಿ ಕೃಷ್ಣಸೆಟ್ಟಿಯಾದವನೂ ನಂತರ ಹತ್ತಾರೂ ಕೃಷ್ಣಸೆಟ್ಟಿಗಳನ್ನು ಹುಟ್ಟಿಹಾಕಿಸಬೇಕು, ಅದೇರೀತಿ ಹಡಪದ್ ಹತ್ತಾರು ಹಡಪದ್ ಅವರಂತವರನ್ನು ಹುಟ್ಟಿಹಾಕಬೇಕಿತ್ತು ಅದು ಸಾಧ್ಯವಾಗಿಲ್ಲ, ಬಹುತೇಕ ಎಲ್ಲರಲ್ಲೂ ನಾನಾ ರೀತಿಯ ಸಮಸ್ಯೆಗಳು ಮತ್ತು ಪರಿಸ್ಥಿತಿ ಆ ರೀತಿಯಲ್ಲಿ ಮಾಡಿರಲೂಬಹುದು. ಇವತ್ತಿಗೂ ನಾನು ಕಲಾಕೃತಿ ರಚಿಸಬೇಕಾದರೆ ಎಲ್ಲರ ಸಮ್ಮುಖದಲ್ಲೆ ಮಾಡಲು ಇಚ್ಚಿಸುತ್ತಿದ್ದೇನೆ ಕಾರಣ ಯುವಕರಿಗೆ ಮಾರ್ಗದರ್ಶನ ಸಿಗಬೇಕು ಎಂಬ ಒಂದೇ ಒಂದು ಆಶಯವಷ್ಟೇ. ನಮ್ಮಿಂದ ಕಲಾವಿದರಿಗೆ ಏನಾದರೂ ಕೊಡುಗೆ ನೀಡಬೇಕು ಎಂಬ ಮಹದಾಸೆಯನ್ನು ಹೊತ್ತವನು. ಆದರೆ ಇನ್ನೂ ಕೆಲವರೂ ಎಲ್ಲಿ ನನ್ನ ತಂತ್ರ ಮತ್ತು ಕಲಾಕೃತಿ ರಚಿಸುವುದನ್ನು ನೋಡಿ ಬಿಟ್ಟರೆ ಹಾಗೇ ಕಲಿತು ನನ್ನನ್ನು ಹಿಂದಿಟ್ಟು ಬಿಡುತ್ತಾರೋ ಎಂಬ ಆತಂಕ ಮನೆಮಾಡಿಕೊಂಡಿರುವುದರಿಂದ ಅಂತಹವರು ತಮ್ಮ ಬದುಕಿನ ಆಯಾಮದ ಚೌಕಟ್ಟಿಗೆ ಸಿಲುಕಿ ಒದ್ದಾಡುತ್ತಿರುವುದರಿಂದ ಅದರಿಂದಾಚೆ ಬರಲು ಹೆಣಗಾಡುತ್ತಿದ್ದಾರೆ ಅನಿಸುತ್ತಿದೆ. ಆದರೆ ಹಡಪದ್ ಅಂತಾ ವ್ಯಕ್ತಿಗಳು ಸಮಾಜಕ್ಕಾಗಿ ಸಾಕಷ್ಟು ಕೆಲಸವನ್ನು ಮಾಡಿದ್ದಾರೆ. ಅದರಲ್ಲಿ ಎರಡು ಮಾತಿಲ್ಲ ಅವರ ನಿಷ್ಠೆ. ಪ್ರಾಮಾಣಿಕತೆ ಕಲೆಯಲ್ಲಿ ಇದ್ದುದ್ದರಿಂದಲೇ ಇವತ್ತು ಈ ರೀತಿಯ ಯಶಸ್ಸು ಕಾಣಲು ಸಾಧ್ಯವಾಗಿದೆ ಎನ್ನುತ್ತಾರೆ.

ಇಡೀ ಕ್ಷೇತ್ರ ಕೃಷ್ಣಸೆಟ್ಟಿಯವರನ್ನ ಮಾತುಗಾರನ್ನಾಗಿ ನೋಡಿದೆ, ವಿಮರ್ಶಕನನ್ನಾಗಿ ನೋಡಿದೆ, ಒಬ್ಬ ಲೇಖಕನನ್ನಾಗಿ ನೋಡಿದೆ ವಿನ: ಕಲಾವಿದನನ್ನಾಗಿ ನೋಡಿರೋದು ತುಂಬಾ ಕಡಿಮೆ. ಬಹಳ ಕಡೆ ಕೃಷ್ಣಸೆಟ್ಟಿ ಒಬ್ಬ ಚಿತ್ರಕಲಾವಿದ ಎಂಬುದು ಗೊತ್ತೆಯಿಲ್ಲ..! ಕಾರಣ ರಾಜ್ಯದ ಮೂಲೆ ಮೂಲೆಯಲ್ಲಿರುವ ಕಲಾಶಾಲೆಗಳಿಗೆ ಭೇಟಿ ನೀಡಿ ಉಪನ್ಯಾಸ ನೀಡಿದವನಾಗಿದ್ದರೂ ಎಲ್ಲಿಯೂ ಕೂಡ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿರುವುದಿಲ್ಲ. ಹಾಗಾಗಿ ಕೃಷ್ಣಸೆಟ್ಟಿ ಒಬ್ಬ ವಿಮರ್ಶಕ, ಮಾತುಗಾರ, ಲೇಖಕ ಎಂದು ಕರೆದಿರುತ್ತಾರೆ. ಆ ಇಮೇಜ್ ಹೋಗುವ ದೃಷ್ಟಿಯಿಂದಲೇ ಪ್ರಸ್ತುತ ನಿವೃತ್ತಿಯ ಸಮಯವನ್ನು ಕಲಾಕೃತಿ ರಚಿಸಿ ಪ್ರದರ್ಶಿಸಲು ಸಿದ್ದನಾಗುತ್ತಿದ್ದೇನೆ. ಇವಾಗ ಎಲ್ಲಿಯೇ ಹೋದ್ರೂ ಮೊದಲು ನನ್ನ ಕಲಾಕೃತಿಗಳನ್ನು ಎಕ್ಸ್‌ಫೋಸ್ ಮಾಡುತ್ತೇನೆ. ಅವುಗಳ ಪರಿಚಯ ಮಾಡಿಸಿ ನಂತರ ಉಳಿದ ಕಾರ್ಯಕ್ರಮ ಎಂಬಂತೆ ನನ್ನ ಕಲಾಬದುಕು ಮುಂದುವರಿದಿರುತ್ತದೆ.

ಪಿಕಾಸೋ, ವ್ಯಾನ್‌ಗಾಗ್, ವಾಸುದೇವನ್, ಎಂ.ಎಫ್.ಹುಸೇನ್, ಮುಂತಾದವರ ಬಗ್ಗೆ ಹೇಳಿದ್ದೇನೆ, ವಿನ: ಎಲ್ಲಿಯೂ ಕೂಡ ನನ್ನ ಬಗ್ಗೆ, ನನ್ನ ಕೃತಿಗಳ ಬಗ್ಗೆ ಹೇಳಿರುವುದಿಲ್ಲ. ಅದು ಪ್ರಸ್ತುತ ಸಾಕಾರಗೊಳ್ಳುತ್ತಿದೆ. ನಾನು ಒಬ್ಬ ಚಿತ್ರಕಲಾವಿದ ಎಂದು ಗುರುತಿಸಿಕೊಳ್ಳಬೇಕೆಂಬ ಹಂಬಲವನ್ನು ಹೊತ್ತವನು ಎನ್ನುತ್ತಾರೆ ಚಿ.ಸು.ಕೃಷ್ಣಸೆಟ್ಟಿ.

ನನ್ನ ಬಳಿ ಈ ಕಲೆಯ ಸ್ಕಿಲ್ ಇರಲಿಲ್ಲವೆಂದಾದರೇ ಜಾಹಿರಾತು ಸಂಸ್ಥೆಯಲ್ಲಿ ಕೆಲಸಕ್ಕೆ ಸೇರಿಕೊಳ್ಳುವ ಅಗತ್ಯತೆ ಇರಲಿಲ್ಲವಲ್ಲ..! ಪ್ರಸ್ತುತ ಪರಿಸ್ಥಿತಿಯಲ್ಲಿ ಕಂಪ್ಯೂಟರ್ ಇದೆ ಆದರೆ ಎಂಬತ್ತು, ತೊಂಬತ್ತರ ದಶಕದಲ್ಲಿ ಕೈನೇ ಕಂಪ್ಯೂಟರ್ ಅಲ್ವೆ, ಜಾಹೀರಾತು ಸಂಸ್ಥೆಯಲ್ಲಿ ಕೆಲಸ ಮಾಡಬೇಕೆಂದರೆ ಇಲ್ಲ್ಯೂಸ್ಲೇಟರ್, ಡ್ರಾಯಿಂಗ್ ಮತ್ತು ರೇಖಾಚಿತ್ರಗಳನ್ನು ಸರಾಗವಾಗಿ ರಚಿಸಲು ಬರಬೇಕು ಆ ಪರಿಸ್ಥಿತಿಯಿದ್ದ ಸಂದರ್ಭದಲ್ಲಿದ್ದ ಸ್ಕಿಲ್ ಈ ಮಟ್ಟಕ್ಕೆ ನನ್ನನ್ನು ಕೊಂಡ್ಯೊಯ್ದಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ತುಂಬಾ ಕಲಾವಿದರ ಮನಸ್ಸಿನಲ್ಲಿರುವುದು ಕೃಷ್ಣಸೆಟ್ಟಿಯೆಂದರೆ ಮಾರ್ಡನ್, ಅಬ್ಸ್ಟ್ರಾಕ್ಟ್ ಚಿತ್ರಗಳನ್ನಷ್ಟೇ ಮಾಡಬಲ್ಲರು ಅದನ್ನು ಹೊರತಾಗಿಯೂ ಕಲಾಕೃತಿ ರಚಿಸಬಲ್ಲರು ಎಂಬುದು ಅನುಮಾನವಾಗಿದೆ ಅದನ್ನು ತಿರಸ್ಕರಿಸಿ ನಾನು ಕೂಡ ಉತ್ತಮ ಎಲ್ಲಾ ರೀತಿಯ ಕೃತಿಗಳನ್ನು ರಚಿಸಬಲ್ಲೆ ಎಂಬುದನ್ನು ತೋರಿಸುವ ಎಲ್ಲಾ ಪ್ರಯತ್ನವನ್ನು ಮಾಡುತ್ತಿದ್ದೇನೆ. ಅದಕ್ಕೆ ಪೂರ್ವಕವಾಗಿ ನೂರಾರು ಹೊಸ ಕಲಾಕೃತಿಗಳನ್ನು ರಚಿಸಿದ್ದೇನೆ.

ಒಂದು ಮಾತಿದೆ ಅದೇನೆಂದರೆ ಕೃಷ್ಣಸೆಟ್ಟಿಯವರಿಗೆ ರಿಯಾಲಿಸ್ಟಿಕ್ ಚಿತ್ರಗಳನ್ನು ರಚಿಸುವುದಕ್ಕೆ ಬರುವುದಿಲ್ಲ ಎಂಬುದು, ಇದು ಒಪ್ಪುವ ಮಾತಲ್ಲ. ಯಾಕೆಂದರೆ ದಾವಣಗೆರೆಯಲ್ಲಿ ಓದುತ್ತಿರುವ ಸಂದರ್ಭದಲ್ಲಿ ಪ್ರತಿದಿನ ಮೂವತ್ತು ಕೀ ಸ್ಕೇಚ್‌ಗಳನ್ನು ಮಾಡಿಕೊಂಡು ಹೋದರೆ ಮಾತ್ರ ಒಳಗಡೆ ಪ್ರವೇಶವಿರುತ್ತಿತ್ತು, ಆ ಕಾರಣದಿಂದಲಾದ್ರೂ ಔಟ್‌ಡೋರ್ ಸ್ಕೇಚ್‌ಗಳನ್ನು ಕಂಪಲ್ಸರಿ ರಚಿಸಿಕೊಂಡು ಹೋಗುತ್ತಿದ್ದೆವು, ನನ್ನ ಜೊತೆ ಗೆಳೆಯರು ರೈಲ್ವೆ ಸ್ಟೇಷನ್‌ನಲ್ಲಿ ರಾತ್ರಿ ಹನ್ನೊಂದರವರೆಗೆ ಸಮಯವನ್ನು ಮೀಸಲಿಟ್ಟು ಮಾಡಿದ ಕೆಲಸಕ್ಕೆ ಕಲೆಯಲ್ಲಿನ ಅನುಭವ ಹೆಚ್ಚಾಯ್ತು ಎನ್ನುವ ಚಿ.ಸು.ಕೃಷ್ಣಸೆಟ್ಟಿ, ಕಾಲೇಜಿನಲ್ಲಿ ಕಲಿಯುವಾಗ ಭಾವಚಿತ್ರ, ವ್ಯಕ್ತಿಚಿತ್ರ ಮತ್ತು ಪ್ರಕೃತಿ ಚಿತ್ರಗಳು ಕಡ್ಡಾಯವಾಗಿದ್ದವು. ಆ ಸಂದರ್ಭದಲ್ಲಿ ಕಲಿತ ಕಲೆ ಇಂದು ಬಿ.ಇ.ಎಂ.ಎಲ್ ಅಂತಹ ಪ್ರತಿಷ್ಠಿತ ಸಂಸ್ಥೆಯಲ್ಲಿ ಕೆಲಸ ಮಾಡಲು ಸಾಧ್ಯವಾಗಿದೆ.

**ಪ್ರಶ್ನೆ:** ಇಂತಹದ್ದೆ ಶಿಕ್ಷಣ ಸಂಸ್ಥೆಯಲ್ಲಿ ಕೆಲಸ ಮಾಡಬೇಕು ಎಂಬ ಆಶಯವಿದ್ದಿತ್ತೇ..?

**ಕೃ:** ಹಾಗೆ ನೋಡಿದ್ರೆ ಇವತ್ತಿಗೂ ಒಬ್ಬ ಉತ್ತಮ ಕಲಾಶಿಕ್ಷಕನಾಗಬೇಕೆಂಬ ಆಸೆ ಇದ್ದಿದ್ದು ಸತ್ಯ. ಎಲ್ಲೋ ಬೆಮೆಲ್‌ನಲ್ಲೋ, ಜಾಹೀರಾತು ಸಂಸ್ಥೆಯಲ್ಲೋ ಕೆಲಸ ಮಾಡ್ತೀನಿ ಅಂದ್ಕೊಂಡಿರ್ಲಿಲ್ಲ. ನನ್ನ ಆಸಕ್ತಿ ಇದ್ದುದ್ದೆ ಶಿಕ್ಷಕನಾಗಬೇಕೆಂದು. ಆದರೆ ಅದು ಈಡೇರಲಿಲ್ಲ ಆದರೂ ನೂರಾರು ಉಪನ್ಯಾಸಗಳನ್ನು ನೀಡುವುದರ ಮೂಲಕ ಅದರ ಅನುಭವವನ್ನು ಪಡೆದುಕೊಂಡ ಸಂತೃಪ್ತಿ ಹೊಂದಿರುತ್ತೇನೆ. ಕಲಾವೃತ್ತಿಯಲ್ಲಿ ಒಂದು ಭಾರಿ ಲಲಿತಕಲಾ ಮಹಾವಿದ್ಯಾಲಯ, ದಾವಣಗೆಯಲ್ಲಿ ತಾತ್ಕಾಲಿಕ ಉಪನ್ಯಾಸಕನಾಗಿ ಕೆಲಸ ಮಾಡಿದ್ದುಂಟು. ಕೆಲ ಕಾರಣದ ನಿಮಿತ್ತ ಅಲ್ಲಿ ಕೆಲಸ ಬಿಡುವ ಪರಿಸ್ಥಿತಿ ಬಂದಿದ್ದು ಎಲ್ಲೋ ಒಂದುಕಡೆ ಒಳ್ಳೆಯದೇ ಆಗಿದೆ ಅನಿಸುತ್ತಿದೆ. ಕಾರಣ

ಇವತ್ತಿನವರೆಗೂ ಆ ಶಾಲೆಯಲ್ಲಿ ನಿರಂತರವಾಗಿ ೨೭ ವರ್ಷಗಳಿಂದ ಶಿಕ್ಷಕರಾಗಿ ದುಡಿಯುತ್ತಿರುವವರಿಗೆ ಖಾಯಂ ಪದವಿ ಸಿಕ್ಕಿಲ್ಲ. ಅಂತವರ ಬದುಕನ್ನು ಕಣ್ಣಾಯಿಸಿದರೆ ಕಲಾಶಿಕ್ಷಕನಾಗಿ ಅಲ್ಲೆ ಇದ್ದಿದ್ದರೆ ಇವಾಗ ಸಿಕ್ಕಿರುವ ಯಶಸ್ಸು ಖಂಡಿತಾ ಸಿಗುತ್ತಿರಲಿಲ್ಲ ಮತ್ತು ಯಶಸ್ವಿಯಾಗುತ್ತಿರಲಿಲ್ಲ ಎಂಬುದಂತೂ ಸತ್ಯ. ಆ ಕಾರಣದಿಂದ ಶಿಕ್ಷಣ ವೃತ್ತಿಯಲ್ಲಿ ಎಲ್ಲಾವೂ ನಾವಂದುಕೊಂಡಂತೆ ಆಗುತ್ತೆ ಅನ್ನೊದು ಕೂಡ ಸುಳ್ಳು.

೧೯೮೭ರಲ್ಲಿ ಬೆಂಗಳೂರಿಗೆ ಕೆಲಸ ಹುಡುಕಿಕೊಂಡು ಬಂದ ಸಂದರ್ಭದಲ್ಲಿ ಸಹಕಾರ ಅಷ್ಟಕ್ಕಷ್ಟೆಯಾದ್ರೂ ನಮ್ಮ ಪರಿಶ್ರಮಕ್ಕೆ ತಕ್ಕ ಫಲವಂತೂ ಗ್ಯಾರಂಟಿ ಎಂಬಂತೆ ಪ್ರತಿಷ್ಠಿತ ಕ್ಲಾರಿಯನ್ ಜಾಹೀರಾತು ಸಂಸ್ಥೆಯಲ್ಲಿ ಕೆಲಸಕ್ಕೆ ಸೇರಿಕೊಂಡ ಚಿ.ಸು.ಕೃಷ್ಣಸೆಟ್ಟಿ ತಮ್ಮ ಕಲಾ ಚಾಣಾಕ್ಷತನದಿಂದ ಮಾತ್ರ ಸಾಧ್ಯವಾಯಿತು. ತುಂಬಾ ಹೆಸರುವಾಸಿಯಾಗಿದ್ದ ಶೇಷಾದ್ರಿ ಎಂಬುವವರು ಕಲಾವಿದರ ವರ್ಕ್‌ಗಳನ್ನು ನೋಡಿ ಕೆಲಸಕ್ಕೆ ಆಯ್ಕೆ ಮಾಡಿಕೊಳ್ಳುತ್ತಾರೆ.

**ಪ್ರಶ್ನೆ:** ನಿಮ್ಮ ಮಗ ತಮ್ಮ ಕಲಾಕೃತಿಗಳನ್ನು ಇಷ್ಟಪಟ್ಟಿದ್ದುಂಟಾ..!

**ಕೃ:** ಮಗ ವಿನ್ಯಾಸ್ ನನ್ನ ಕಲಾಕೃತಿಗಳನ್ನು ಇಷ್ಟಪಡುವುದಿಲ್ಲ, ಏನಿದು ಹೀಗೆ ಚಿತ್ರರಚನೆ ಮಾಡ್ತೀರಾ ಎಂದು ಕೇಳಿದ್ದುಂಟು, ಯಾಕೆಂದ್ರೇ ಅವನಿಗೆ ರಿಯಾಲಿಸ್ಟಿಕ್ ಎಂದ್ರೇ ಇಷ್ಟ. ಅವನ ಅಭ್ಯಾಸ ಕರ್ನಾಟಕ ಚಿತ್ರಕಲಾ ಪರಿಷತ್ ಮತ್ತು ಕಲಾಮಂದಿರದಲ್ಲಿ ಆಗಿರುವುದರಿಂದ ಅಲ್ಲಿನ ಪರಿಸ್ಥಿತಿಗನುಗುಣವಾಗಿ ಹೊಂದಿಕೊಂಡಿರುವ ಆವನು ಹೆಚ್ಚು ಸುಂದರವಾದ ಕಲ್ಪನೆಯಲ್ಲಿ ಯೋಚಿಸಿದ್ದುಂಟು, ಅದೇ ಮಾರ್ಗದಲ್ಲಿ ಸಾಗಿರುವಾಗ ಸಿನಿಮಾಟೋಗ್ರಫಿಯನ್ನು ಆಯ್ಕೆ ಮಾಡಿಕೊಂಡಿರುತ್ತಾನೆ. ಯಾವುದೇ ಕಲಾಕೃತಿ ಅಷ್ಟೊಂದು ಪ್ರಭಾವ ನನಗೆ ಬೀರಿರುವುದಿಲ್ಲ,

೧೯೬೭ರಲ್ಲಿ ತೀರ್ಥಹಳ್ಳಿ ರಾಜಕೀಯ ದೃಷ್ಟಿಯಿಂದ ತುಂಬಾ ಗಟ್ಟಿ, ಶಾಂತವೇರಿ ಗೋಪಾಲಗೌಡರ ಕ್ಷೇತ್ರವಾಗಿದ್ದ ಸಮಯವದು, ತುಂಬಾ ಚಲನಶೀಲ ಎಡಪಂಥೀಯ ವಾದದ ವ್ಯಕ್ತಿಯೂ ಹೌದು, ಕಮ್ಯೂನಿಷ್ಟ್ ಪಾರ್ಟಿಯ ತುಂಬಾ ಗಟ್ಟಿ ನೆಲ ಎಂದರೆ ಅದು ತಿರ್ಥಹಳ್ಳಿ ಒಂದು ಕಾಲದಲ್ಲಿ..! ಇಡೀ ನ್ಯಾಷನಲ್ ಎ.ಕೆ ಗೋಪಾಲನ್ ಅಂತವರು ಬಂದುಹೋಗುತ್ತಿದ್ದರು. ಇವಾಗ ಹೇಗೆ ಆರ್.ಎಸ್.ಎಸ್‌ನವರು ಡ್ರೆಸ್ ಹಾಕ್ಕೊಂಡು ಮಾರ್ಚ್ ಮಾಡ್ತಾರೋ ಹಾಗೆ ಕಮ್ಯೂನಿಷ್ಟರು ಕೂಡ ರೆಡ್ ಡ್ರೆಸ್ ಹಾಕ್ಕೊಂಡ್ ಮಾರ್ಚ್ ಮಾಡ್ತಾ ಇದ್ದರು. ಈ ಸಂದರ್ಭದಲ್ಲಿ ಕೃಷ್ಣಸೆಟ್ಟಿ ಚಿಕ್ಕವನಾಗಿರುವಾಗ ಹೈಸ್ಕೂಲ್ ಸೆಕೆಂಡಿಯರ್ ಓದುವಾಗ ಗೋಪಾಲಗೌಡರು ಸೋಷಿಯಲ್ ಪಾರ್ಟಿಯಿಂದ ಚುನಾವಣೆಗೆ ನಿಂತಿದ್ದರು. ಇವರಿಗೆ ಚುನಾವಣೆಯ ಗಂಧ ಗಾಳಿಯೂ ಗೊತ್ತಿರದ ಸಂದರ್ಭವದು. ಆ ಸಂದರ್ಭದಲ್ಲಿ ರಾಜಕೀಯದಲ್ಲಿ ಕೆಲಸ ಮಾಡಬೇಕಲ್ಲ ಅಂದ್ಕೊಂಡು ಗೆಳೆಯ ವಿಶ್ವನಾಥಶೆಟ್ಟಿ ಎಲ್ಲಿಗೆ ಹೋದ್ರೂ ಒಟ್ಟಿಗೆ ಹೋಗಿಬರೋದು ಮಾಡ್ತಾಯಿದ್ರೂ ಇವರಿಬ್ಬರ ಗೆಳೆತನದಲ್ಲಿ

ಒಳ್ಳೆಯ ಅನ್ಯೋನ್ಯತೆಯಿತ್ತು. ಆ ಸಂದರ್ಭದಲ್ಲಿ ಯಾರೂ ಇವರಿಗೆ ಹೇಳಲಿಲ್ಲ ಸ್ವತ: ಇವರಿಬ್ಬರೇ ಒಂದು ಬಕೇಟ್, ಅದಕ್ಕೆ ಬೇಕಾದ ಸುಣ್ಣ, ಬಣ್ಣಗಳನ್ನು ತೆಗೆದುಕೊಂಡು ರಾತ್ರಿ ಇಡೀ ಕಾಂಪೌಂಡ್ ಮೇಲೆ ಬರೆಯಲು ಶುರುಮಾಡಿದರು. ಹೀಗೆ ಗೋಡೆ ಮೇಲೆ ಬರೆದು ಪ್ರಚಾರ ಮಾಡಿ ಎಂದು ಯಾರೂ ಗೈಡ್ ಮಾಡಿರುವುದಿಲ್ಲ ಆ ಸಮಯದಲ್ಲಿ ತೀರ್ಥಹಳ್ಳಿಯ ಕೊಪ್ಪ ಸರ್ಕಲ್‌ನಲ್ಲಿ ತಮ್ಮ ಕಾಯಕಯೆಂಬಂತೆ ಖುಷಿಯಿಂದ ಬರೆಯುತ್ತಿದ್ದಾಗ ದಿಢೀರನೆ ಪೋಲಿಸ್ ಬಂದ್ರು, ಏ ಯಾರದೂ ಅಂತೇಳಿ ಹತ್ತಿರ ಬಂದು ಏನ್ರೀ ಸ್ವಾಮಿ ಬರೆಯುವುದಕ್ಕೆ ಪರ್ಮಿಶನ್ ಪಡೆದಿದ್ದೀರಾ ಎಂದಾಗ ಒಂದು ಕ್ಷಣ ಇಬ್ಬರೂ ಕುಸಿದುಬಿದ್ದಂತಾಗಿ ಏನ್ಮಾಡಬೇಕೆಂಬುದೇ ಅರ್ಥವಾಗದಂತಾಗಿ ಮಾತುಬಾರದಂತಾಗಿ ಹೋಯ್ತು, ಒಬ್ಬರಿಗೊಬ್ಬರೂ ಮುಖಮುಖ ನೋಡಿಕೊಂಡರಾದ್ರೂ ಕೈಯಲ್ಲಿರುವ ಬ್ರೇಷ್(ಪೊರಕೆ) ಕೈಜಾರಿಬಿತ್ತು. ಪೋಲಿಸರು ನಿಮ್ಮ ಹೆಸರೇನು ಎಂದಾಗ ಎಲ್ಲಿ ನೈಜ ಹೆಸರೇಳಿದರೆ ಮನೆ ಮರ್ಯಾದೆ ಹಾಳಾಗಿಬಿಡುತ್ತೋ ಎಂಬ ಭಯದಲ್ಲಿ ಇಬ್ಬರೂ ಬೇರೆ ಬೇರೆ ಹೆಸರೇಳಿದರು. ಮತ್ತೆ ಗದರಿಸಲು ಪ್ರಾರಂಭಿಸಿದಾಗ ಗಾಭರಿಗೊಂಡು ಬಕೇಟ್ ಸಮೇತಾ ಓಡಿಹೋದರು.

ಅಷ್ಟೆ ಆ ಮೇಲೆ ಬರೆಯುವುದನ್ನು ನಿಲ್ಲಿಸಿದರು. ಮತ್ತೆ ಚುನಾವಣೆಯ ಬಿಸಿ ರಂಗೇರಿತ್ತು, ಲಾರಿಗಳಲ್ಲಿ ಪ್ರಚಾರ ಮಾಡಲಾಗಿತ್ತು. ಅದರಲ್ಲಿಯೂ ಹೋಗಿ ಪ್ರಚಾರ ಮಾಡೋಣ ಎಂದು ನಿರ್ಧರಿಸಿ ಲಾರಿ ಹತ್ತುತ್ತಾರೆ. ಬರೀ ಮುದುಕರೇ ತುಂಬಿತುಳುಕುತ್ತಿರುವ ಲಾರಿಯಲ್ಲಿ ಸೇಂಧಿಯ ವಾಸನೆ ಜೊತೆ ಶಿಳ್ಳೆ, ಕೇಕೆ ಜೋರಾಗಿತ್ತು, ಒಂದು ಕಡೆ ಮುಜುಗರವಾದ್ರೂ ಇನ್ನೊಂದು ಕಡೆ ಕುತೂಹಲ, ಹುಮ್ಮಸ್ಸು ಅದೇನೋ ತಮಗೆ ಗೊತ್ತಿಲ್ಲದೆ ಕಮ್ಯೂನಿಷ್ಟ್ ಪಾರ್ಟಿಗೆ ಬೆಂಬಲ ನೀಡಬೇಕೆಂಬಷ್ಟು ಹತ್ತಿರವಾಗಿಬಿಟ್ಟಿದ್ದರು ಈ ಹುಡುಗರು. ತಿಳಿವಳಿಕೆಯಿಲ್ಲದ ಸಂದರ್ಭದಲ್ಲಿ ರಾಜಕೀಯ ಪ್ರವೇಶಪಡೆದವರು. ಇದಾದ ನಂತರ ಜನಸಂಘದಲ್ಲಿ ಗುರುತಿಸಿಕೊಂಡರು. ಆ ಸಂದರ್ಭದಲ್ಲಿಯೂ ಮತ್ತೆ ಗೋಡೆ ಮೇಲೆ ಅಕ್ಷರಗಳನ್ನು ಬರೆಯುವುದರ ಮೂಲಕ ಜಾಹೀರಾತನ್ನು ಪ್ರಾರಂಭಿಸಿದರು.

೧೯೭೦ರ ಸಂದರ್ಭದಲ್ಲಿ ಸ್ವಲ್ಪ ದುಂಡಾಗಿನ ಅಕ್ಷರಗಳೊಂದಿಗೆ ಜನಸಂಘದ ಪ್ರಚಾರಕ್ಕೆ ತೊಡಗಿದ ಕೃಷ್ಣಸೆಟ್ಟಿಯವರನ್ನು ರಾಜಕೀಯ ಮುಖಂಡರು ಗುರುತಿಸಲು ಪ್ರಾರಂಭಿಸಿದರು. ಗೋಡೆ ಮೇಲಿನ ಅಕ್ಷರಗಳಿಂದ ಪ್ರಭಾವಿತರಾಗದೇ ಗೋಡೆ ಮೇಲೆ ಅಕ್ಷರಗಳನ್ನು ಬರೆದು ಅದನ್ನು ನೋಡಿದ ಸಾಮಾನ್ಯರು ಮತ್ತು ಜನಪ್ರತಿನಿಧಿಗಳ ಪ್ರೋತ್ಸಾಹಕ್ಕೆ ಉತ್ಸುಕನಾಗಿ ಚಿತ್ರಕಲೆಯ ವಾಸನೆ ಮೈಸೇರಿದ ಕ್ಷಣಕ್ಕೆ ಬಣ್ಣದ ಲೊಕಕ್ಕಿರುವ ಮಹತ್ವದ ನುಡಿಯನ್ನು ಸಾರಲು ಬೇಕಿರುವ ವಸ್ತುಗಳನ್ನು ಪಡೆಯಬೇಕೆಂಬ ಹಂಬಲದಿಂದ ಮುಂದೆ ಸಾಗಿದರು.

೧೯೭೭ರ ಸಂದರ್ಭದಲ್ಲಿ ಚಿತ್ರಕಲೆಯಲ್ಲಿ ಪದವಿ ಪಡೆದು ಅದೇ ಕಾಲೇಜಿನಲ್ಲಿ ತಾತ್ಕಾಲಿಕ ಉಪನ್ಯಾಸನಾಗಲು ಅರ್ಜಿಯನ್ನು ಹಾಕಲಾಯಿತು. ಆಗ ಸಂಬಳ ರೂ ೪೦೦ ಇತ್ತು. ಈ

ಸಂದರ್ಭದಲ್ಲಿ ಜನತಾ ಪಾರ್ಟಿಯ ಅಧ್ಯಕ್ಷರಾಗಿದ್ದವರು ಪಿ.ಜಿ.ಆರ್.ಸಿಂಧ್ಯ. ಖುದ್ದಾಗಿ ಇವರೇ ಚಿ.ಸು ಅವರನ್ನು ಕರೆದು ಯುವ ಜನತಾ ಪಾರ್ಟಿಯ ರಾಜ್ಯಾಧ್ಯಕ್ಷರಾಗಿ ಕೆಲಸ ಮಾಡಿ ಎಂದೂ ಕೇಳಿಕೊಂಡರೂ ಅವರ ಮನಸ್ಸು ಒಪ್ಪಲಿಲ್ಲ, ನನಗೆ ರಾಜಕೀಯಕ್ಕಿಂತ ಕಲಾ ಶಾಲೆಯಲ್ಲಿ ಒಬ್ಬ ಉಪನ್ಯಾಸಕನಾಗಿರಲು ಪ್ರೋತ್ಸಾಯಿಸಿ ಎಂದು ವಿನಮ್ರ ಮನವಿಗೆ ಸೋತು ಅಪ್ಪಿಕೊಂಡರು.

ರಾಮಕೃಷ್ಣ ಹೆಗಡೆಯವರು ರಾಜಕೀಯ ಮುಖಂಡರು, ರಾಜ್ಯದ ಪ್ರಭಾವಿಗಳಲ್ಲಿ ಒಬ್ಬರು, ಇವರನ್ನು ಜೈಲಲ್ಲಿ ಪರಿಚಯ ಮಾಡಿಕೊಂಡ ಚಿ.ಸು.ಕೃಷ್ಣಸೆಟ್ಟಿ ತನ್ನಲ್ಲಿರುವ ಹೋರಾಟದ ಕಿಚ್ಚನ್ನು ತೋರಿಸಿದವರಾಗಿದ್ದರು. ಮುಖ್ಯಮಂತ್ರಿಯಾಗಿದ್ದಾಗ ಅನೇಕ ಸಾರಿ ಹಲವು ಸಂದರ್ಭಗಳಲ್ಲಿ ಮುಖ್ಯ ಸಭೆಗಳಿಗೆ ಆಹ್ವಾನವಿತ್ತರು. ಅದಕ್ಕೆ ಕಾರಣವೂ ಇತ್ತು, ಅದು ತೀರ ಕಳೆದ ಕೆಲವು ದಿನಗಳಲ್ಲಿ ಗೋತ್ತಾಯಿತು. ಚಿ.ಸು.ಕೃಷ್ಣಸೆಟ್ಟಿಯವರನ್ನು ಎಂ.ಎಲ್.ಸಿ ಮಾಡಬೇಕೆಂಬುದು ಬಹುದಿನದ ಆಸೆಯಾಗಿತ್ತು ಎಂಬುದು. ಅವರ ಕೃಷ್ಣಸೆಟ್ಟಿಯವರ ಆತ್ಮೀಯತೆ ಎಷ್ಟಿತ್ತೆಂದರೆ ಮುಖ್ಯಮಂತ್ರಿಯಾಗಿದ್ದ ರಾಮಕೃಷ್ಣ ಹೆಗಡೆಯವರು ಕೃಷ್ಣಸೆಟ್ಟಿಯವರ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನವನ್ನು(ಚಿತ್ರಕಲಾ ಪರಿಷತ್)ಉದ್ಘಾಟನೆ ಮಾಡುತ್ತಾರೆ. ಆ ಸಂದರ್ಭದಲ್ಲಿ ಗಣೇಶ್ ಚಿತ್ರವನ್ನು(ಕೋಲೈಜ್) ಕೊಡುಗೆಯಾಗಿ ನೀಡಲಾಯಿತು. ಅದನ್ನು ಇಂದಿಗೂ ಅವರ ಮನೆಯಲ್ಲಿ ಇಡಲಾಗಿದೆ. ಮತ್ತೊಂದು ಚಿತ್ರಕಲಾ ಪ್ರದರ್ಶನವನ್ನು ಅದೇ ಚಿತ್ರಕಲಾ ಪರಿಷತ್‌ನಲ್ಲಿ ಆಯೋಜಿಸಿದ ಸಂದರ್ಭದಲ್ಲಿ ಒಂದು ಆಹ್ವಾನ ಪತ್ರವನ್ನು ಗೌರವ ಪೂರ್ವಕವಾಗಿ ಅಂಚೆ ಮೂಲಕ ಕಳುಹಿಸಿಕೊಡಲಾಗಿತ್ತು. ಅದಾಗಿ ನಾಳೆ ಚಿತ್ರಪ್ರದರ್ಶನ ಎನ್ನುವ ತಯಾರಿಯಲ್ಲಿರುವಾಗ ಚಿತ್ರಕಲಾ ಪರಿಷತ್‌ನ ನಂಜುಂಡರಾವ್ ಅವರು ಬಂದು ಕೃಷ್ಣಸೆಟ್ಟಿಯವರೇ ನಾಳಿನ ತಮ್ಮ ಚಿತ್ರಪ್ರದರ್ಶನಕ್ಕೆ ಮುಖ್ಯಮಂತ್ರಿ ಸನ್ಮಾನ್ಯ ರಾಮಕೃಷ್ಣ ಹೆಗಡೆಯವರು ಬರಬಹುದು, ಯಾಕೆಂದ್ರೇ ನಾಳೆ ಇಲ್ಲಿಗೆ ಬರುವ ಮುನ್ಸೂಚನೆ ಇದೆ. ಅದ್ದರಿಂದ ತಯಾರಿ ಮಾಡ್ಕೊಳ್ಳಿ ಎಂದಾಗ ಒಂದುಕ್ಷಣ ಯೋಚಿಸಿ, ಬೇರೆ ಯಾವುದೋ ಕಾರ್ಯಕ್ರಮ ಇರಬಹುದು ಆ ಕಾರಣ ಬರ್ತಾಯಿರಬಹುದು ಅಂದ್ಕೊಂಡು ಸುಮ್ಮನಾದೆ ಎನ್ನುವ ಕೃಷ್ಣಸೆಟ್ಟಿಯವರಿಗೆ ಉದ್ಘಾಟನೆಯಾದ ಕಾರ್ಯಕ್ರಮಕ್ಕೆ ದಿಢೀರ್ ಭೇಟಿ ನೀಡಿದ ಮುಖ್ಯಮಂತ್ರಿಗಳು ಜೊತೆಗೆ ಕ್ಯಾಬಿನೇಟ್ ಮಂತ್ರಿ ಎಸ್.ಆರ್.ಬೊಮ್ಮಯಿಯವರನ್ನು ಕರೆದುಕೊಂಡು ಬಂದ್ಬಿಟ್ಟರು, ಅಲ್ಲಿದ್ದವರಿಗೆ ಶಾಕ್ ಯಾಕಂದ್ರೇ ಆ ದಿನ ಅಲ್ಲಿ ಬೇರೆ ಯಾವುದೇ ಕಾರ್ಯಕ್ರಮವಿರಲಿಲ್ಲ. ಇದ್ದಿದ್ದು ಇದೊಂದೆ. ಅದಕ್ಕಾಗಿ ಆಶ್ಚರ್ಯ ಚಕಿತರಾದ ಚಿ.ಸು.ಕೃಷ್ಣಸೆಟ್ಟಿ ಬಂದವರಿಗೆ ಕಲಾಕೃತಿಗಳನ್ನು ತೋರಿಸುವಷ್ಟರಲ್ಲಿ ಬೊಮ್ಮಾಯಿಯವರಿಗೆ ಸ್ವತ: ಮುಖ್ಯಮಂತ್ರಿಗಳೇ ಪರಿಚಯಮಾಡಿಕೊಟ್ಟಿದ್ದು ತುಂಬಾ ಖುಷಿಯ ವಿಚಾರವೂ ಕೂಡ ಹೀಗೆ ರಾಮಕೃಷ್ಣ ಹೆಗಡೆಯವರು ಚಿ.ಸು.ಕೃಷ್ಣಸೆಟ್ಟಿಯವರ ಮೇಲೆ ಅಭಿಮಾನವಿದ್ದ ಕಾರಣಕ್ಕೆ ಅವರನ್ನು ರಾಜಕೀಯಕ್ಕೆ ಕರೆತಂದು ಜವಾಬ್ದಾರಿ ನೀಡಬೇಕೆಂಬುದು ಆಶಯವಾಗಿತ್ತು

ಎಂಬುದನ್ನು ಡೈರಿಯಲ್ಲಿ ಬರೆದಿದ್ದನ್ನು ಅವರ ಆಪ್ತವಲಯದಿಂದ ಕೃಷ್ಣಸೆಟ್ಟಿಯವರಿಗೆ ತಿಳಿದಿರುತ್ತದೆ.ಇದೇ ಪಿ.ಜಿ.ಆರ್.ಸಿಂಧ್ಯಾ ಅವರು ರಾಜಕೀಯಕ್ಕೆ ಬರುವಂತೆ ತುಂಬಾ ಒತ್ತಾಯ ಮಾಡಿದರು. ಅದು ಉಪನ್ಯಾಸಕನಾಗಿದ್ದ ಸಮಯದಲ್ಲಿ. ರೂ ೪೦೦ರ ಸಂಬಳ ಅದಕ್ಕಿಂತ ನಾಲ್ಕು ಪಟ್ಟು ಹೆಚ್ಚು ಹಣ ಸಿಗುವಷ್ಟು ಮಟ್ಟಿಗೆ ಸಹಾಯ ಮಾಡುತ್ತೇನೆ ಎಂದರೂ ಆ ಕಡೆ ಮನಸ್ಸು ಮಾಡದ ಚಿ.ಸು ಕೃಷ್ಣಸೆಟ್ಟಿ ಕಷ್ಟಪಟ್ಟು, ಪ್ರಾಮಾಣಿಕತೆಯಿಂದ ದುಡಿದು ಜೀವನ ಮಾಡುವುದಕ್ಕೆ ಯಾವ ಕೆಲಸವಾದರೇನು ಮುಖ್ಯವಾಗಿ ಅದರ ಮೇಲೆ ಆಸ್ಥೆಯಿರಬೇಕಷ್ಟೆ ಎನ್ನುವ ಅವರು ಮನೆ, ಮನೆಯಲ್ಲಿರುವ ಪ್ರತಿಯೊಂದು ವಸ್ತುವೂ ಕೂಡ ನನ್ನ ಬೆವರಹನಿಯು ಸೋಕಿ ಬಂದಿರುಂತಹದ್ದಾಗಿದೆ ಆದರಿಂದ ನನಗೆ ಹೆಮ್ಮೆಯೂ ಕೂಡ. ಅಷ್ಟರ ಮಟ್ಟಿನ ಜೀವನ ಸಾಗಿಸುತ್ತಾ ಬಂದವರಾಗಿರುತ್ತಾರೆ. ಜೈಲಲ್ಲಿದ್ದ ಸಂದರ್ಭದಲ್ಲಿ ಸಿ.ಎಂ ಇಬ್ರಾಹಿಂರವರು ಕೃಷ್ಣಸೆಟ್ಟಿಯವರೊಟ್ಟಿಗೆ ಬಂದು ಸೆಟ್ಟರೆ ನನ್ನ ಒಂದು ಚಿತ್ರ ತೆಗಿರಿ ಅಂದಾಗ ತಕ್ಷಣಕ್ಕೆ ಖಾಲಿ ಪೇಪರ್ ಮತ್ತು ಪೆನ್ಸಿಲ್ ತೆಗೆದುಕೊಂಡು ಭಾವಚಿತ್ರವನ್ನು ಬಿಡಿಸಿಕೊಡ್ತಾರೆ ಇವರೆಲ್ಲಾ ನನ್ನ ಆತ್ಮೀಯ ಸ್ನೇಹಿತರು.ಇವರೊಟ್ಟಿಗೆ ಮತ್ತೊಬ್ಬ ಕರ್ನಾಟಕ ರಾಜಕೀಯ ಮುಖಂಡರಾದ ಮಾಜಿ ಪ್ರಧಾನಿಯವರಾದ ಎಚ್.ಡಿ.ದೇವೆಗೌಡ ಸ್ವಕುಟುಂಬ ಸಮೇತ ನಮ್ಮ ಮನೆಯ ಗೃಹಪ್ರವೇಶಕ್ಕೆ ಆಗಮಿಸಿದ್ದುಂಟು. ಅದರ ಸಂಬಂಧ ಹೇಗೆಂದರೆ ಜನತಾ ಪಾರ್ಟಿಯ ಜಾಹೀರಾತುಗಳನ್ನೆಲ್ಲಾ ಖುದ್ದು ನಾನೇ ಮಾಡಿಕೊಡುತ್ತಿದ್ದೆ. ಆ ಕಾರಣ..! ಇನ್ನೂ ವೈ.ಎಸ್.ವಿ.ದತ್ತ ಅವರ ಜೊತೆಯೂ ನನ್ನ ಒಳ್ಳೆಯ ಒಡನಾಟವಿತ್ತು. ಜಾಹೀರಾತು ಮಾಡುವುದಿತ್ತೆಂದರೆ ಯಾವುದಾರೂ ಹೋಟೆಲ್‌ನಲ್ಲಿ ಕೂತು ರೆಡಿಮಾಡಿಕೊಳ್ಳುತ್ತಿದ್ದೆವು ಅದಕ್ಕೆ ಎಚ್.ಡಿ.ದೇವೆಗೌಡರು ಒಪ್ಪಿಕೊಳ್ಳುತ್ತಿದ್ದರು. ಅಷ್ಟರ ಮಟ್ಟಿಗೆ ನಮ್ಮ ಕೆಲಸಗಳು ಗುರುತರವಾಗಿದ್ದವು ಆ ಕಾರಣದಿಂದಲೇ ಅಂತವರಿಗೆ ಚಿ.ಸು.ಕೃಷ್ಣಸೆಟ್ಟಿಯವರು ಆಪ್ತರಾಗಿದ್ದು.

ಈ ಒಂದು ನಂಬಿಕೆಗೆ ಆರ್ಹರದ ವ್ಯಕ್ತಿಯನ್ನು ಮಾನ್ಯ ದೇವೆಗೌಡರು ಯಾವ ಮೌಲ್ಯ ಕೊಟ್ಟು ಇಟ್ಟಿದ್ದರೂ ಎಂಬುದಕ್ಕೆ ಒಂದು ಸಾಕ್ಷಿಯಿದೆ. ಅದುವೇ ೧೯೮೦ರಲ್ಲಿ ಜನತಾ ಪಾರ್ಟಿಯಿಂದ ಒಂದು ಎಂ.ಎಲ್.ಸಿ ಸೀಟ್‌ಗೆ ಇಬ್ಬರ ಹೆಸರನ್ನು ಶಿಫಾರಸ್ಸು ಮಾಡಬೇಕಾದ ಸಂದರ್ಭದಲ್ಲಿ ಒಂದು ವೈ.ಎಸ್.ವಿ.ದತ್ತ ಎರಡು ಚಿ.ಸು.ಕೃಷ್ಣಸೆಟ್ಟಿಯವರ ಹೆಸರನ್ನು ಕಳುಹಿಸಿಕೊಟ್ಟಿದ್ದನ್ನು ತಿಳಿದಮೇಲೆ ತುಂಬಾ ಆಶ್ಚರ್ಯಚಕಿತರಾಗಿದ್ದುಂಟು ಕೃಷ್ಣಸೆಟ್ಟಿಯವರು. ಅಷ್ಟರ ಮಟ್ಟಿಗೆ ದೇವಗೌಡರಿಗೆ ಕೃಷ್ಣಸೆಟ್ಟಿ ಮೇಲೆ ಅಭಿಮಾನವಿತ್ತು. ಅಲ್ಲಿಯೂ ಕೂಡ ಪ್ರಯತ್ನ ಪಟ್ಟಿದ್ದರೆ ಖಂಡಿತಾ ಒಬ್ಬ ಪೊಲಿಟಿಷಿಯನ್ ಆಗಬಹುದಿತ್ತು. ಯಾವುದೇ ಆಸೆ ಅಕಾಂಕ್ಷೆಯಿರಲಿಲ್ಲವಾದ್ದರಿಂದ ಪ್ರಯತ್ನಕ್ಕೆ ಕೈಹಾಕಲಿಲ್ಲ. ಇಂತಹ ಸಾಕಷ್ಟು ಘಟನೆಗಳು ಕಣ್ಮುಂದೆ ಹಾದು ಹೋಗಿದ್ದರೂ ಎಂದೂ ಕೂಡ ಅಲ್ಲಿ ಸೇರಿದ್ದರೆ ಬಹುಶ: ಅಧಿಕಾರವನ್ನು ಅನುಭವಿಸಬಹುತ್ತೇನೂ ಎಂಬ ಅಂಶ ಇವತ್ತಿಗೂ ನನ್ನತ್ತಿರ ಸುಳಿದಿಲ್ಲ, ಒಂದಂತೂ

ಸತ್ಯ ನಾನೇನು ಅಂದ್ಕೊಳ್ತೇನೋ ಅದು ಮಾಡೇ ತೀರ್ತಿನಿ ಎನ್ನುವ ಹುಂಬತನದವನು ಅದು ಆ ಕ್ಷಣಕ್ಕಾಗಲಿಲ್ಲವೆನಿಸಿದರೂ ಮುಂದೊಂದು ದಿನ ಹಾಗೇ ಆಗುತ್ತೆ. ಅಷ್ಟರ ಮಟ್ಟಿಗೆ ನಂಬಿಕೆ ವಿಶ್ವಾಸ ನನ್ನ ಮೇಲೆ ನನಗಿದೆ ಎಂಬುದು ಹೆಮ್ಮೆಯ ವಿಷಯ ಎನ್ನುತ್ತಾರೆ ಚಿ.ಸು.ಕೃಷ್ಣಸೆಟ್ಟಿ.

**ಪ್ರಶ್ನೆ:** ಪ್ರತಿಭಟನೆ, ಹೋರಾಟ ಅಂತೆಲ್ಲಾ ಹಾರಾಡಿದ ತಾವು ರಾಜಕೀಯ ಮುತ್ಸದ್ದಿಗಳ ಒಡನಾಟವಿದ್ದ ಸಂದರ್ಭಗಳಲ್ಲಿ ರಾಜಕೀಯ ಪ್ರವೇಶ ಮಾಡಬೇಕು ಎಂದೆನಿಸಲಿಲ್ಲವೇ..?

**ಕೃ:** ರಾಜಕೀಯ ಪಕ್ಷಗಳಲ್ಲಿರುವ ಪ್ರಮುಖರು ನನ್ನ ಕೆಳಗಡೆ ಇದ್ದವರು, ಮುಖ್ಯವಾಗಿ ಅಖಿಲ ಭಾರತ ವಿಧ್ಯಾರ್ಥಿ ಪರಿಷತ್‌ನ ರಾಜ್ಯ ಕಾರ್ಯದರ್ಶಿಯಾಗಿದ್ದವನು. ಉದಾ: ಪಿ.ಜಿ.ಆರ್.ಸಿಂಧ್ಯಾ, ಬಿ.ಎಲ್.ಶಂಕರ್, ಅನಂತಕುಮಾರ್, ಸುರೇಶ್‌ಕುಮಾರ್, ಎಚ್.ಆಂಜನೇಯ ಮುಂತಾದವರು ಇಂದು ರಾಜಕೀಯದಲ್ಲಿದ್ದು ಕೊಂಡು ನಾನಾ ಹುದ್ದೆಗಳನ್ನ ಅನುಭವಿಸಿದ್ದಾರೆ. ಇವರೆಲ್ಲಾರಂತೆ ನಾನೂ ಕೂಡ ರಾಜಕೀಯ ಲಾಭ ಪಡೆಯಬೇಕೆಂದಿದ್ದರೆ ಅದು ಎಂದೊ ಆಗಿರುತ್ತಿತ್ತು. ಅದರೆ ಅದರ ಕಡೆ ಆಸೆ ಹುಟ್ಟಲಿಲ್ಲ, **'ಹಾಸಿಗೆ ಇದ್ದಷ್ಟು ಕಾಲು ಚಾಚು'** ಎಂಬಂತೆ ಕಾಲವನ್ನು ಕಳೆಯಲು ಪ್ರಾರಂಭಿಸಿದೆ.

೧೯೭೭ರಲ್ಲಿ ಎಮರ್ಜೆನ್ಸಿ ಸಮಯದಲ್ಲಿ ಜೈಲಿಗೆ ಹೋಗಿ ಬಂದ ಸಂದರ್ಭದಲ್ಲಿ ಭಾರತೀಯ ಜನತಾ ಪಾರ್ಟಿ ಪ್ರಾರಂಭವಾಯಿತು. ಇದೇ ಸಂದರ್ಭದಲ್ಲಿ ಎಂ.ಎಲ್.ಎ ಎಲೆಕ್ಷನ್ ಕೂಡ. ಕೆ.ಮಲ್ಲಪ್ಪರವರನ್ನು ಪಕ್ಷದಿಂದ ನಿಲ್ಲಿಸಲಾಗಿತ್ತು. ಇದಕ್ಕೂ ಮುಂಚೆ ಪಕ್ಷದಿಂದ ಅಭ್ಯರ್ಥಿಗಳ ಆಯ್ಕೆ ಸಂದರ್ಭದಲ್ಲಿ ಮೂವರ ಪಟ್ಟಿಯಲ್ಲಿ ಚಿ.ಸು.ಕೃಷ್ಣಸೆಟ್ಟಿಯವರೂ ಒಬ್ಬರು. ಕೊನೆಯಲ್ಲಿ ಸ್ವಪ್ರೇರಿತವಾಗಿ ಒಲ್ಲೆ ಎಂದ ಕಾರಣಕ್ಕೆ ಮತ್ತೊಬ್ಬರಿಗೆ ಟಿಕೇಟ್ ನೀಡಿದ್ದುಂಟು.(ಆ ಸಂದರ್ಭದಲ್ಲಿ ಯಾರು ಯಾರನ್ನು ಕೇಳದೆ ತುಂಬಾ ನಿಷ್ಠಾವಂತ ಕಾರ್ಯಕರ್ತನನ್ನು ಹುಡುಕಿ ಲಿಸ್ಟ್ ಮಾಡಲಾಗುತ್ತಿತ್ತು, ಅಷ್ಟರ ಮಟ್ಟಿಗೆ ಕೆಲಸದಲ್ಲಿ ತೋರಿಸಿದ ನಿಷ್ಠೆಯನ್ನು ಪರಿಗಣಿಸಲಾಗುತ್ತಿತ್ತು.

ಇದಾದ ನಂತರ ಜಯಪ್ರಕಾಶ್ ನಾರಾಯಣ್ ಅವರು ವಿಧ್ಯಾರ್ಥಿ ಯೋಜನಾ ಸಂಘರ್ಷ ಸಮಿತಿಯನ್ನು ರಚಿಸಿದ್ದರು. ಅದು ಎಮೆರ್ಜೆನ್ಸಿ ಮುಗಿದ ಸಮಯದಲ್ಲಿ, ಅದರ ರಾಜ್ಯಮಟ್ಟದ ಕಮಿಟಿಯಲ್ಲಿ ಚಿ.ಸು.ಕೃಷ್ಣಸೆಟ್ಟಿಯವರ ಹೆಸರಿತ್ತು, ಇವರ ಹೆಸರಿನ ಜೊತೆ ಜೀವರಾಜ ಆಳ್ವ, ಪಿ.ಜಿ.ಆರ್.ಸಿಂಧ್ಯ, ಪ್ರಭಾಕರ್ ಮುಂತಾದವರು. ಹೀಗೆ ಇವರನ್ನು ರಾಜಕೀಯಕ್ಕೆ ಎಳೆದುತರಬೇಕೆಂದ ಮನಸ್ಸುಗಳ ಸಾಕಷ್ಟಿದ್ದವಾದರು, ಅದು ಸಾಧ್ಯವಾಗಲಿಲ್ಲ. ಹೀಗೆ ಮುಂದುವರಿದೂ ಬೆಮೆಲ್‌ನಲ್ಲಿ ಕೆಲಸಕ್ಕೆ ಸೇರಿಕೊಂಡು ಜಾಹೀರಾತಿಗೆ ಅವಶ್ಯಕವಾಗಿರುವ ಚಿತ್ರ ಮತ್ತು ವಿನ್ಯಾಸಗಳನ್ನು ರಚನೆಮಾಡುತ್ತಿದ್ದರೂ ಜೊತೆ ಜೊತೆಗೆ ಟ್ರಾನ್ಸಲೇಶನ್ ಮಾಡಿಕೊಡುತ್ತಿದ್ದರು(ವಿಸಿಟಿಂಗ್ ಕಾರ್ಡ್, ಅಡ್ವಾನ್ಟೇಜ್ ಡಿಸೈನ್, ಪೇಂಟಿಂಗ್, ಲೋಗೋ ಡಿಸೈನ್,ಮುಂತಾದವುಗಳು).

ಚಿ.ಸು.ಕೃಷ್ಣಸೆಟ್ಟಿಯವರು ಸುಖಾಸುಮ್ಮನೆ ಕಾಲಹರಣ ಮಾಡುವುದನ್ನು ವಿರೋಧಿಸಿದವರು. ಸಮಯಪ್ರಜ್ಞೆವುಳ್ಳವರು ಎಂದರೆ ತಪ್ಪಾಗಲಿಕ್ಕಿಲ್ಲ, ಒಂದಲ್ಲ ಒಂದು ಕೆಲಸದಲ್ಲಿ ನಿರಂತರವಾಗಿ ತಮ್ಮನ್ನ ತಾವು ತೊಡಗಿಸಿಕೊಂಡಿರುತ್ತಿದ್ದರು. ಅಷ್ಟರ ಮಟ್ಟಿಗೆ ಮಾಡುವ ಕೆಲಸದಲ್ಲಿ ಆಸಕ್ತಿಯಿತ್ತು. ಹಾಗಾಗಿಯೇ ಅವರೊಂದು ಮಾತೇಳ್ತಾರೆ ನನ್ನ ಮನೆಯಲ್ಲಿನ ವಸ್ತುಗಳೆಲ್ಲಾವೂ 'ಹಾರ್ಡ್ ಹಾರ್ಡಿನರ್ ಮನಿ' ಎಂದು ವಿಶೇಷವಾಗಿ ಮಾಡಿರುವ ಕೆಲಸದಲ್ಲಿ ತೃಪ್ತಿಯಿದೆ, ಇನ್ನೂ ಮಾಡುವುದು ಸಾಕಷ್ಟಿದೆ. ಅದು ಮುಂದಿನ ದಿನಗಳಲ್ಲಿ ಸಾಕಾರಗೊಳ್ಳಬಹುದು. ಕಾದುನೋಡುವ ಎನ್ನುವ ಅವರ ಕಂಗಳಲ್ಲಿ ಆತ್ಮಸ್ಥೈರ್ಯದ ಭಾವನೆಗಳ ಅಲೆಗಳು ಅಪ್ಪಳಿಸುವಂತಿದ್ದವು.

ಪ್ರಶ್ನೆ: ಸಾಹಿತ್ಯ ಮತ್ತು ವಿಮರ್ಶಕರಾಗಿರುವ ತಾವು, ತಮ್ಮ ಬಗ್ಗೆ ಆಪ್ತ ಸಾಹಿತಿಗಳ ಕುರಿತು ತಮ್ಮ ಅಭಿಪ್ರಾಯವೇನು?

ಕೃ: ಚಿತ್ರ.ಚಿತ್ತ ನನ್ನ ಆಯ್ದ ಲೇಖನಗಳ ಪುಸ್ತಕಕ್ಕೆ ಬೆನ್ನುಡಿ ಬರೆದವರು ಖ್ಯಾತ ಸಾಹಿತಿ ಕಿ.ರಂ. ನಾಗರಾಜ. ಈ ಕಿ.ರಂ ಅವರ ಹತ್ತಿರ ಕರೆದುಕೊಂಡು ಹೋದವರು ಸ್ನೇಹಿತ ಎಂ.ಎಸ್.ಮೂರ್ತಿ, ಮುನ್ನುಡಿ ಬಿ.ವಿ.ಕೆ.ಶಾಸ್ತ್ರಿ ಅವರ ಹತ್ತಿರ ಬರೆಸಿದ್ದಾಯ್ತು, 'ಬೆನ್ನುಡಿ'ಗೆ ಕಿ.ರಂ ಅವರ ಹತ್ತಿರ ಹೋದೆವು, ಅಲ್ಲಿಗೆ ಹೋಗುವುದಕ್ಕಿಂತಲೂ ಮುಂಚೇನೆ ಹತ್ತಾರೂ ವರ್ಷಗಳಿಂದಾಚೆ ಕಿ.ರಂ.ನಾಗರಾಜ್ ಅವರು ನನ್ನ ಕವಡೆ ಚಿತ್ರಗಳ ಕುರಿತು ಉತ್ತಮ ಪ್ರತಿಕ್ರಿಯೆಯನ್ನು ಕೊಟ್ಟಿದ್ದರು. ಆ ಕಾರಣದಿಂದ ಪರಿಚಯವಿತ್ತಾದರೂ ಅಷ್ಟಾಗಿ ಹತ್ತಿರವಿರಲಿಲ್ಲ. ಎಂ.ಎಸ್.ಮೂರ್ತಿಗೆ ಆಪ್ತರಂತಿದ್ದವರಾಗಿದ್ದರಿಂದ ಅವರೊಟ್ಟಿಗೆ ಮಾತುಕತೆಗೆ ಹೋಗಿ ಒಪ್ಪಿಸಿ ಬಂದಿದ್ದು, ತುಂಬಾ ಮೇದಾವಿಯಾಗಿದ್ದ ಕಿ.ರಂ ಅವರು ಮುನ್ನುಡಿ ಮತ್ತು ಬೆನ್ನುಡಿ ಬರೆಸಬೇಕೆಂದರೆ ದೊಡ್ಡ ಸಾಹಸ ಪಡಬೇಕಿತ್ತು. ಅಷ್ಟರ ಮಟ್ಟಿನ ಯಶಸ್ವಿ ಸಾಹಿತಿಗಳಲ್ಲಿ ಒಬ್ಬರಾಗಿದ್ದರು. ಒಂದು ದಿನ ಅವರ ಹೆಂಡ್ತಿ ಶ್ರೀಮತಿ ಜಯಲಕ್ಷ್ಮೀ ಸಿಕ್ಕಾಗ ತಕ್ಷಣಕ್ಕೆ ನನ್ನನ್ನು ನೋಡಿ ಏನ್ರೀ ನಮ್ಮ ಯಾಜಮಾನರಿಗೆ ಏನ್ ಮೋಡಿ ಮಾಡಿದ್ದಿರೀ, ಎಷ್ಟೋ ಸಾಹಿತಿಗಳು ಬರೆಯಲು ಕೊಟ್ಟು ತಿಂಗಳು ಗಟ್ಟಲೆ ಕಾದುಕುಳಿತ ಪ್ರಸಂಗಗಳನ್ನು ಖುದ್ದು ನೋಡಿದ್ದೇನೆ. ಆದರೆ ತಾವು ಕ್ಷಣಮಾತ್ರದಲ್ಲೆ ಬರೆಸಿಕೊಂಡಿರುತ್ತೀರಿ ಎಂದಾಗ ಒಂದು ಕ್ಷಣ ಗಾಭರಿಯಾಗಿದ್ದುಂಟು, ಅದಕ್ಕೂ ಕಾರಣವಿತ್ತು. ಅದೇನೆಂದರೆ ಚಿ.ಸು.ಕೃಷ್ಣಸೆಟ್ಟಿಯವರ ಬರವಣಿಗೆ ಚೆನ್ನಾಗಿದೆ ಎಂದು ಹೇಳಿಕೊಂಡಿದ್ದನ್ನು ಸ್ಮರಿಸಿಕೊಂಡರು. ಕಲಾ ವಿಮರ್ಶೆಯಲ್ಲಿ ಭರವಸೆಯಿರುವ ವ್ಯಕ್ತಿಯೆಂದರೆ ಅವರೇ ಚಿ.ಸು.ಕೃಷ್ಣಸೆಟ್ಟಿ ಎಂದು ೨೦೦೦ರಲ್ಲಿ ನಯನ ಸಭಾಂಗಣದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸಾಹಿತಿ ಹಾ.ಮಾ.ನಾಯಕ್ ಅವರು ಹೇಳ್ತಾರೆ ಅಂದ್ರೆ ಕಲಾಸಾಹಿತ್ಯ ಮತ್ತು ವಿಮರ್ಶೆಯಲ್ಲಿ ಎಷ್ಟು ಪ್ರಾವೀಣ್ಯತೆ ಹೊಂದಿದ್ದರು ಎಂಬುದನ್ನು ತಿಳಿಯಬಹುದು.

ನನಗೂ ಕೂಡ ಸಂಶೋಧನೆ(ಪಿಎಚ್.ಡಿ) ಮಾಡಬೇಕೆಂಬ ತುಡಿತ, ಮಿಡಿತ ಇದ್ದಿತು. ಆ ಸಂದರ್ಭದಲ್ಲಿ ಗೆಳೆಯರಾದ ಚಿತ್ರಕಲಾವಿದ ಸಿ.ಚಂದ್ರಶೇಖರ್ ಡಾ.ಡಿ.ಆರ್.ನಾಗರಾಜ್ ಅವರ ಮಾರ್ಗದರ್ಶನದಲ್ಲಿ ಮಾಡಿ ಎಂದು ಸಲಹೆ ನೀಡಿದರು. ಅವರಲ್ಲಿ ಚರ್ಚೆ ಮಾಡಿ 'ಭಾರತೀಯ ಮಹಿಳೆಯರಲ್ಲಿ ಚಿತ್ರಕಲೆ' ಎಂಬ ವಿಷಯವನ್ನು ಆಯ್ಕೆ ಮಾಡಲಾಗಿತ್ತು. ಅದಕ್ಕೆ ನಾಗರಾಜ್ ಅವರಿಂದಲೂ ಸಮ್ಮತಿ ಸಿಕ್ಕಿತ್ತು. ಸ್ವಲ್ಪ ದಿನಗಳ ನಂತರ ಇದೇ ಸಿ.ಚಂದ್ರಶೇಖರ್, ನಾಗರಾಜ್ ಹತ್ತಿರ ಸಂಶೋಧನೆ ಬೇಡ ಬದಲಾಗಿ ಎಂ.ಎಚ್.ಕೃಷ್ಣಯ್ಯನವರ ಹತ್ತಿರ ಮಾಡು ಎಂದಾಗ ತಕ್ಷಣಕ್ಕೆ ಡಿ.ಆರ್.ನಾಗರಾಜರ ಕೈಬಿಟ್ಟು ಕೃಷ್ಣಯ್ಯರವರನ್ನು ಕೇಳಿಕೊಂಡಾಗ ಅವರು ಕೂಡ ಒಪ್ಪಿಕೊಂಡರು. ಒಪ್ಪಿಗೆ ಪತ್ರನೂ ಕೊಟ್ಟು, ಕೊನೆಗೆ ಇವರಿಬ್ಬರೂ ಒಂದೇ ವಿಭಾಗದಲ್ಲಿದ್ದಾರೆ ಎಂಬುದನ್ನರಿಯದ ನಾವು ಅವರ ನಡುವೆ ಸಿಕ್ಕು ಪಿಎಚ್.ಡಿ ಬೇಡ ಈ ಪೋಲಿಟಿಕ್ಸ್ ಬೇಡ ಅಂದು ಕೊಂಡು ಅವತ್ತಿಗೆ ನನ್ನ ಸಂಶೋಧನಾಧ್ಯಯನ ಕೊನೆಗೊಂಡಿತು. ಆ ದಿನಗಳಲ್ಲೆ ಪಿಎಚ್.ಡಿ ಗೈಡ್‌ಗಳಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳು ತಲೆಯೆತ್ತಿದ್ದವು ಎನ್ನುವುದಕ್ಕೆ ನನ್ನದೇ ಉದಾಹರಣೆ ಸಾಕು ಎನಿಸುತ್ತದೆ.

ಸಾಹಿತಿಗಳ ಸಾಲಲ್ಲಿ ಗುರುತಿಸಿಕೊಂಡಿರುವ ಚಿ.ಸು.ಕೃಷ್ಣಸೆಟ್ಟಿ ೮೦ ದಶಕದಿಂದಲೇ ಕಲಾ ವಿಮರ್ಶಕನಾಗಿ ಸರಿ ಸುಮಾರು ಇಪ್ಪತ್ತು ವರ್ಷಗಳಿಗೂ ಹೆಚ್ಚು ಕಾಲ ಕೆಲಸ ಮಾಡಿರುತ್ತಾರೆ. ಆ ಕಾರಣದಿಂದಲೇ ಅನೇಕ ಸಾಹಿತಿಗಳು ಸಹ ಸ್ನೇಹಿತರಾಗಿದ್ದಾರೆ.

**ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾದ ಸಂದರ್ಭದಲ್ಲಿ ಆಯೋಜಿಸಿದ್ದ ಕಾರ್ಯಕ್ರಮಗಳು**

ಇತ್ತೀಚಿನ ದಿನಗಳಲ್ಲಿ ಕಲಾ ಸಂಘಟನೆಯಲ್ಲಿ ಕಲಾವಿದನ ಪಾತ್ರದ ಕುರಿತು ಚರ್ಚಿಸಿದಾಗ ಮುಖ್ಯವಾಗಿ ಕರ್ನಾಟಕದ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಕೈಗೊಂಡ ಕೆಲವು ಉತ್ತಮ ಕಾರ್ಯಗಳು ಈ ಕೆಳಗಿನಂತಿವೆ(೨೦೧೨ರಿಂದ ೨೦೧೩ ಏಪ್ರಿಲ್ ವರೆಗೆ ಅಧ್ಯಕ್ಷರಾಗಿ ಕೈಗೊಂಡ ಕಾರ್ಯಕ್ರಮಗಳ ವಿವರಗಳು).

- ಕಲಾ ರಸಗ್ರಹಣ ಕಮ್ಮಟ (ಮಂಗಳೂರು ೨೦೧೨)
- ವಿಶೇಷ ಘಟಕ ಶಿಬಿರ (ಚಾಮರಾಜ ನಗರ ೨೦೧೨)
- ವಿಶೇಷ ಘಟಕ ಶಿಬಿರ (ಧಾರವಾಡ ೨೦೧೨)
- ಚಿತ್ರಕಲಾ ಶಿಬಿರ(ಶಿವಮೊಗ್ಗ)
- ೪೧ನೇ ವಾರ್ಷಿಕ ಚಿತ್ರಕಲಾ ಪ್ರದರ್ಶನ (ಮುದ್ದೋಳ)

- ಕಲಾ ರಸಗ್ರಹಣ ಕಮ್ಮಟ (ಬೆಳಗಾವಿ)
- ಚಿತ್ರಪರೀಷೆ "ಆರ್ಟ್ ಫೇರ್" (ರವೀಂದ್ರ ಕಲಾಕ್ಷೇತ್ರದ ಆವರಣ,ಬೆಂಗಳೂರು)
- ಪ್ರಕಟಣೆಗಳು
- ಏಕವ್ಯಕ್ತಿ ಮತ್ತು ಸಮೂಹ ಕಲಾ ಪ್ರದರ್ಶನ
- ಬಡ ಮಕ್ಕಳಿಗೆ ವಿದ್ಯಾರ್ಥಿ ವೇತನ

ರಾಜ್ಯ ಹಾಗೂ ಹೊರ ರಾಜ್ಯದ ಚಿತ್ರಕಲಾ ಮಹಾವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ಕಲಾ ವಿದ್ಯಾರ್ಥಿಗಳಿಗೆ, ವಿದ್ಯಾರ್ಥಿವೇತನ ನೀಡುವ ಸಂಪ್ರದಾಯ ಈ ಹಿಂದೆ ಇದ್ದರೂ, ಕಳೆದ ಸುಮಾರು ೮–೧೦ ವರ್ಷಗಳಿಂದ ಈ ಬಗೆಯ ವಿದ್ಯಾರ್ಥಿ ವೇತನವನ್ನು ಕೊಟ್ಟಿರಲಿಲ್ಲ. ಅದನ್ನು ಈ ವರ್ಷ ನಮ್ಮ ನೇತೃತ್ವದಲ್ಲಿ ಒಟ್ಟು ೧೫೧ ಕಲಾ ವಿದ್ಯಾರ್ಥಿಗಳಿಗೆ ಈ ವೇತನವನ್ನು ನೀಡಲಾಗಿದ್ದು, ಇದರಲ್ಲಿ ಪ.ಜಾ/ಪ.ಪಂಕ್ಕೆ ೬೨, ಹಿಂದುಳಿದ ಮತ್ತು ಸಾಮಾನ್ಯಕ್ಕೆ ೮೯ ವಿದ್ಯಾರ್ಥಿಗಳು ಇದರ ಉಪಯೋಗ ಪಡೆದಿರುತ್ತಾರೆ. ಲಲಿತಕಲಾ ಅಕಾಡೆಮಿ ಸದಸ್ಯರಾದ ಶ್ರೀ ಎಂ ಆರ್. ಬಾಳಿಕಾಯಿ ಮತ್ತು ಯಶವಂತ್ ಹಿಬಾರೆಯವರ ಜೊತೆ ಚರ್ಚಿಸಿ ಈ ವೇತನವನ್ನು ಮಂಜೂರು ಮಾಡಲಾಗಿದೆ ಎಂದು ಸ್ಪಷ್ಟ ಪಡಿಸಿದರು.

೨೦೧೧–೧೨ನೇ ಸಾಲಿನ ಕರ್ನಾಟಕ ಲಲಿತಕಲಾ ಅಕಾಡೆಮಿಯು ಕಲಾವಿದರಿಗೆ ನೀಡುವ ಗೌರವ ಪ್ರಶಸ್ತಿಯನ್ನು ನೀಡುವ ಕಾರ್ಯಕ್ರಮ ಗದಗದ ಶ್ರೀ ತೋಂಟದಾರ್ಯ ಕಲ್ಯಾಣ ಕೇಂದ್ರದಲ್ಲಿ ಜರುಗಿತು. ಈ ಸಂದರ್ಭದಲ್ಲಿ ಶ್ರೀ ಎಸ್. ಕೃಷ್ಣಪ್ಪ, ಶ್ರೀ. ರಮೇಶ್ ರಾವ್, ಶ್ರೀ ಅಶೋಕ ಅಕ್ಕಿ, ಶ್ರೀ ಡಿ.ಎಂ. ಬಡಿಗೇರ ಶ್ರೀ ಪಿ.ಬಿ. ಹರಸೂರ್ ಶ್ರೀ ಎಂ.ಐ. ಡ್ಯಾಂಗೆ ಗೌರವ ಪ್ರಶಸ್ತಿಯನ್ನು ಪ್ರಧಾನ ಮಾಡಲಾಯಿತು. ಈ ಸಂದರ್ಭದಲ್ಲಿ ಇಲ್ಲಿಯವರೆಗೆ ನಡೆದ ಕಾರ್ಯಕ್ರಮಗಳನ್ನು ವಿವರಿಸಿದರು, ಅವು ಈ ಕೆಳಗಿನಂತಿವೆ.

**ಕಲಾ ರಸಗ್ರಹಣ ಕಮ್ಮಟ:** ಮಂಗಳೂರಿನ ಸಹೋದಯ ಹಾಲ್‌ನಲ್ಲಿ ಸೆಪ್ಟೆಂಬರ್ ೮ ಮತ್ತು ೯ನೇ ೨೦೧೨ರಲ್ಲಿ ಸದಸ್ಯರಾದ ಶ್ರೀ ಪುರುಷೋತ್ತಮ ಆಡ್ವೆಯವರು ಮಂಗಳೂರು ಹಾಗೂ ಉಡುಪಿ ಕಾಸರಗೋಡು ಹಾಗೂ ಸುತ್ತ ಮುತ್ತಲಿನ ಕಲಾವಿದರನ್ನು ಸೇರಿಸಿ, ಕಲಾ ರಸಗ್ರಹಣ ಕಮ್ಮಟವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು.

**ವಿಶೇಷ ಘಟಕ ಶಿಬಿರ:** ಕರ್ನಾಟಕ ಲಲಿತಕಲಾ ಅಕಾಡೆಮಿಯ ವತಿಯಿಂದ ವಿಶೇಷ ಘಟಕ ಯೋಜನೆಯಡಿ ಧಾರವಾಡದಲ್ಲಿ ಜರುಗಿಸಲಾದ ಚಿತ್ರಕಲಾ ಕಾರ್ಯಾಗಾರವನ್ನು ೫೦ ಕಲಾ ವಿದ್ಯಾರ್ಥಿಗಳ ಸಮ್ಮುಖದಲ್ಲಿ ನಡೆಸಲಾಯಿತು. ಈ ಕಾರ್ಯಾಗಾರದ ಕೊನೆಯಲ್ಲಿ ಕಲಾ

ವಿದ್ಯಾರ್ಥಿಗಳಿಗೆ ಮನರಂಜನೆಗಾಗಿ ಉತ್ತರ ಕರ್ನಾಟಕ ಶ್ರೇಷ್ಠ ಕಲೆಯಾದ ಶ್ರೀ ಕೃಷ್ಣ ಪಾರಿಜಾತ ನಾಟಕ ಪ್ರದರ್ಶನವನ್ನು ಯಶಸ್ವಿಯಾಗಿ ನಡೆಸಿಕೊಟ್ಟು ಈ ಕಾರ್ಯಕ್ರಮವು ಯಶಸ್ವಿಯಾಯಿತು.

**ವಿಶೇಷ ಘಟಕ ಶಿಬಿರ:** ಚಾಮರಾಜ ನಗರದಲ್ಲಿ ಇಲ್ಲಿಯವರೆಗೆ ಅಕಾಡೆಮಿಯಿಂದ ಯಾವುದೇ ಕಾರ್ಯಕ್ರಮಗಳು ನಡೆದಿರಲಿಲ್ಲ, ಚಿ.ಸು ಕೃಷ್ಣಸೆಟ್ಟಿ ಅಧ್ಯಕ್ಷರಾದ ಸಂದರ್ಭದಲ್ಲಿಯೇ ಈ ಜಿಲ್ಲೆಗೆ ಉಸ್ತುವಾರಿ ಸದಸ್ಯರನ್ನು ನೇಮಿಸಿ, ಇಲ್ಲಿರುವ ಕಲಾ ವಿದ್ಯಾರ್ಥಿಗಳಿಗಾಗಿ ಚಿತ್ರಕಲಾ ಕಾರ್ಯಾಗಾರವನ್ನು ನಡೆಸಲಾಗಿದ್ದು, ಇದರಲ್ಲಿ ಒಟ್ಟು ೫೦ ವಿದ್ಯಾರ್ಥಿಗಳು ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.

**ಚಿತ್ರಕಲಾ ಶಿಬಿರ:** ರಾಜ್ಯ ಮಟ್ಟದ ಚಿತ್ರಕಲಾ ಶಿಬಿರವನ್ನು ೨೩ ರಿಂದ ೨೫ನೇ ಡಿಸೆಂಬರ್ ೨೦೧೨ರ ವರೆಗೆ ಶಿವಪ್ಪ ನಾಯಕನ ಅರಮನೆಯಲ್ಲಿ ಆಯೋಜಿಸಲಾಗಿದ್ದು, ರಾಜ್ಯದ ನುರಿತ ಪ್ರಮುಖ ೧೬ ಕಲಾವಿದರು ಈ ಕಲಾಶಿಬಿರದಲ್ಲಿ ಭಾಗವಹಿಸಿದ್ದರು. ರಾಜ್ಯದ ಉಪ ಮುಖ್ಯಮಂತ್ರಿಯಾದ ಸನ್ಮಾನ್ಯ ಶ್ರೀ ಕೆ.ಎಸ್.ಈಶ್ವರಪ್ಪ ಉದ್ಘಾಟಿಸಿದರು. ಕರ್ನಾಟಕ ಲಲಿತಕಲಾ ಅಕಾಡೆಮಿಯ ಸಂಚಾರಿ ವಾಹನವು ಸುಮಾರು ೧೦ ರಿಂದ ೧೫ ವರ್ಷಗಳಿಂದ ದುರಸ್ತಿಯಲ್ಲಿದ್ದು, ಆ ವಾಹನವನ್ನು ಸರಿಪಡಿಸಿ ಉತ್ತಮ ಕಲಾಕೃತಿಗಳನ್ನು ಅದರಲ್ಲಿಟ್ಟು ರಾಜ್ಯದಾದ್ಯಂತ ಪ್ರದರ್ಶನವನ್ನು ಮಾಡಲಾಯಿತು.

ಹೀಗೆ ಇನ್ನೂ ಅನೇಕ ಕೆಲಸಗಳು ನಡೆದಿರುವುದು ಎಲ್ಲರಿಗೂ ಗೊತ್ತಿರುವ ವಿಚಾರವಾಗಿದ್ದು, ಚಿತ್ರಕಲೆ ಹಾಗು ಚಿತ್ರಕಲಾ ಸಾಹಿತ್ಯ ರಾಜ್ಯ, ರಾಷ್ಟ್ರ, ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಳ್ಳುವ ಮಟ್ಟಕ್ಕೆ ಚಿತ್ರಕಲಾ ಶಿಬಿರ, ಪ್ರದರ್ಶನ ಮತ್ತು ವಿಚಾರ ಸಂಕಿರಣಗಳ ಅವಶ್ಯಕತೆ ತುಂಬಾ ಇದ್ದು, ರಾಜ್ಯದ ಎಲ್ಲಾ ಕಲಾವಿದರು ಒಟ್ಟಾಗಿ ಕೆಲಸ ಮಾಡುವುದರಿಂದ ಈ ಎಲ್ಲಾ ಕಾರ್ಯಕ್ರಮಗಳು ನಡೆಯಲಿವೆ. ಅದು ಮುಂದಿನ ದಿನಗಳಲ್ಲಿ ಯುವ ಕಲಾವಿದರು, ಸಾಹಿತಿಗಳು ಉತ್ತಮ ರೀತಿಯಲ್ಲಿ ಕೆಲಸಗಳನ್ನು ಮಾಡುತ್ತಾರೆ ಎಂಬ ಆಶಾಭಾವನೆಯನ್ನು ಹೊಂದಿರುವವನು ನಾನು. ಇತ್ತೀಚಿನ ದಿನಗಳಲ್ಲಿ ಚಿತ್ರಕಲಾ ಸಂಶೋಧನೆಗಳು ನಡೆಯುತ್ತಿರುವುದು ಒಳ್ಳೆಯ ಬೆಳವಣಿಗೆಯಾಗುತ್ತಿದೆ ಎಂಬ ಅವರ ಮಾತಿನಲ್ಲಿ ನಮ್ಮ ಸ್ವಕ್ಷೇತ್ರವೂ ಕೂಡ ಮುಂದೊಂದು ದಿನ ಮುಂಚೂಣಿ ಸ್ಥಾನ ಪಡೆಯುತ್ತದೆ ಎಂಬುದು ಕೃಷ್ಣಸೆಟ್ಟಿಯವರ ಅಭಿಮತವಾಗಿದೆ.

**ಕೇಂದ್ರ ಲಲಿತಕಲಾ ಅಕಾಡೆಮಿ(ದೆಹಲಿ)ಆಡಳಿತಾಧಿಕಾರಿ**

ಕೇಂದ್ರ ಲಲಿತಕಲಾ ಅಕಾಡೆಮಿಗೆ ೨೦೧೬ರಲ್ಲಿ ಆಡಳಿತಾಧಿಕಾರಿಯಾಗಿ ಆಯ್ಕೆಗೊಂಡ ನಂತರ ದೇಶಾದ್ಯಾಂತ ಇರುವ ಪ್ರಾದೇಶಿಕ ಕಚೇರಿಗೆ ಭೇಟಿ ನೀಡಿ ಕಲೆಗೆ ಸಂಬಂಧಿಸಿದ ಕಾರ್ಯ ಚಟುವಟಿಕೆಗಳನ್ನು ವಿಸ್ತರಿಸುತ್ತ ಭಿನ್ನವಾದ ಆಯಾಮ ಇರಬೇಕು ಎಂಬುದರ ಕಡೆ ಗಮನಹರಿಸಿ

ರಾಜ್ಯ, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಕಲಾವಿದರಿಗೆ ಚಿಕ್ಕ ಶಿಬಿರ ಗ್ರಾಫಿಕ್ ಶಿಬಿರ ಮತ್ತು ಕಲಾಸಾಹಿತ್ಯಗಳನ್ನು ಒಳಗೊಂಡ ವಿಚಾರ ಸಂಕಿರಣಗಳನ್ನು ಆಯೋಜಿಸಿ ಯಶಸ್ವಿಯಾಗಿರುತ್ತಾರೆ. ಅಷ್ಟೇ ಅಲ್ಲದೆ ಹೊಸ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೊಳಿಸುತ್ತಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ಬೆಂಗಳೂರಿನ ಕಲಾಗ್ರಾಮದಲ್ಲಿ ಎರಡು ಎಕರೆ ಜಾಗ ಪಡೆದು ಕೇಂದ್ರ ಲಲಿತಕಲಾ ಅಕಾಡೆಮಿಯ ಪ್ರಾದೇಶಿಕ ಕಚೇರಿ ಪ್ರಾರಂಭಿಸುವ ಉದ್ದೇಶವಿಟ್ಟುಕೊಂಡು ರೂಪುರೇಶೆಯನ್ನು ಸಿದ್ಧಪಡಿಸಲಾಗಿದೆ. ಕಲಾವಿದ್ಯಾರ್ಥಿಗಳಿಗೆ ಸಹಾಯಧನ, ಕಲಾಶಿಬಿರಕ್ಕೆ ಪ್ರೋತ್ಸಾಹಧನ, ಕಲಾಪ್ರದರ್ಶನಕ್ಕೆ ಸಹಾಯ ಧನ ನೀಡುತ್ತಾ ಕಲಾ ಬೆಳವಣಿಗೆಗೆ ಸಹಕರಿಸುತ್ತಾ ತಮ್ಮ ಕೆಲಸ ಕಾರ್ಯಗಳಲ್ಲಿ ಮುಂದುವರಿದಿದ್ದಾರೆ.

ಗಣ್ಯರೊಂದಿಗೆ ಕೃಷ್ಣಸೆಟ್ಟರು.



ರಾಷ್ಟ್ರಕವಿ ಶ್ರೀ ಕುವೆಂಪು ಅವರೊಂದಿಗೆ,



ಮಾಜಿ ಮುಖ್ಯಮಂತ್ರಿ ಶ್ರೀ ಎಸ್.ಎಂ.ಕೃಷ್ಣ ಅವರಿಂದ ಸನ್ಮಾನ



ಮಾಜಿ ಪ್ರದಾನಿ ಶ್ರೀ ಚಂದ್ರಶೇಖರ್ ಮತ್ತು ಕೃಷ್ಣಸೆಟ್ಟಿ



ನಾಡಕವಿ ಶ್ರೀ ವಿ.ಕೃ.ಗೋಕಾಕ್ ಅವರೊಂದಿಗೆ ಕೃಷ್ಣಸೆಟ್ಟಿ

ಗಣ್ಯರೊಂದಿಗೆ ಕೃಷ್ಣಸೆಟ್ಟರು.

ಕೃಷ್ಣಸೆಟ್ಟಿಯವರ ಚಿತ್ರ ಪ್ರದರ್ಶನದ ಉದ್ಘಾಟನೆ ಮಾಡುತ್ತಿರುವ ಶ್ರೀ ರಾಮಕೃಷ್ಣ ಹೆಗಡೆ ಮತ್ತು ಕಲಾವಿದ ಎಂ.ಎಫ್.ಹುಸೇನ್

ಶ್ರೀಮುದ್ದುಕೃಷ್ಣ, ಶ್ರೀಅಶ್ವಥ್, ಶ್ರೀಎಂ.ಎಸ್.ಸತ್ಯ, ಶ್ರೀಜಿ.ಎಸ್.ಶಿವರುದ್ರಪ್ಪ ಮತ್ತು ಶ್ರೀಎಸ್.ಜಿ.ವಾಸುದೇವನ್ ಜೊತೆ ಕೃಷ್ಣಸೆಟ್ಟರು

ಕಲಾವಿದರು ಮತ್ತು ಗಣ್ಯರೊಂದಿಗೆ ಕೃಷ್ಣಸೆಟ್ಟರು.




ನಾಡಿನ ಖ್ಯಾತ ಕಲಾವಿದರಾದ ಶ್ರೀ ಯುಸಫ್ ಅರಕ್ಕಲ್ ಮತ್ತು ಶ್ರೀ ಎಂ.ಬಿ.ಪಾಟೀಲ್ ಅವರೊಂದಿಗೆ ಚಿ.ಸು.ಕೃ



ಸಾಹಿತಿ ಶ್ರೀ ಗಿರೀಶ್ ಕಾರ್ನಾಡ್ ಅವರೊಂದಿಗೆ ಚಿ.ಸು.ಕೃ



ಸಾಹಿತಿ ಡಾ.ಚಂದ್ರಶೇಖರ ಕಂಬಾರ ಅವರೊಂದಿಗೆ ಚಿ.ಸು.ಕೃ

ಕಲಾವಿದರು ಮತ್ತು ಗಣ್ಯರೊಂದಿಗೆ ಕೃಷ್ಣಸೆಟ್ಟರು.





ಮಾಜಿ ಸಚಿವರಾದ ಶ್ರೀಗೋವಿಂದ ಕಾರಜೋಳ ಮತ್ತು ಖ್ಯಾತ ಕಲಾವಿದ ಶ್ರೀ ರಾಮಚಂದ್ರನ್ ಅವರೊಂದಿಗೆ ಚಿ.ಸುಕೃ




ಚಲನಚಿತ್ರ ನಿರ್ದೇಶಕ ಶ್ರೀನಾಗಭರಣ ಅವರೊಂದಿಗೆ,



ಅಂತರಾಷ್ಟ್ರೀಯ ಕಲಾವಿದರೊಂದಿಗೆ ಚಿ.ಸು.ಕೃ

ಕಲಾವಿದರು ಮತ್ತು ಗಣ್ಯರೊಂದಿಗೆ ಕೃಷ್ಣಸೆಟ್ಟರು.



ಗೋವಾ ರಾಜ್ಯಪಾಲರೊಂದಿಗೆ,




ಪ್ರೊ.ಎಸ್.ಸಿ.ಪಾಟೀಲ ಅವರೊಂದಿಗೆ,



ಸಮಕಾಲೀನ ಕಲಾವಿದರು ಮತ್ತು ರಾಜ್ಯದ ಸ್ನೇಹಿತರೊಂದಿಗೆ ಚಿ.ಸು.ಕೃ.

ಕಲಾವಿದರು ಮತ್ತು ಗಣ್ಯರೊಂದಿಗೆ ಕೃಷ್ಣಸೆಟ್ಟರು.




ಸಾಣೆಹಳ್ಳಿಯಲ್ಲಿ ದಂಪತಿಗಳಿಗೆ ಅಭಿನಂದನೆ ಸಲ್ಲಿಸುವ ಸಂದರ್ಭಕ್ಕೆ ಶ್ರೀಮಠದ ಶ್ರೀಗಳು ಸಾಕ್ಷಿಯಾಗಿರುವುದು.



ನಾಡಿನ ಚಿತ್ರಕಲಾವಿದ ಶ್ರೀ ಎಂ.ಬಿ.ಪಾಟೀಲ್ ಮತ್ತು ಕೃಷ್ಣಸೆಟ್ಟಿಯವರು ನಟನೆಯ ಸಂದರ್ಭದ ಚಿತ್ರ




ಶ್ರೀ.ಚಿ.ಸು.ಕೃಷ್ಣಸೆಟ್ಟಿ ಮತ್ತು ಶ್ರೀಮತಿ ಅಂಜಲಿಸೆಟ್ಟಿ ದಂಪತಿಗಳು



ಕಿರುಚಿತ ನಿರ್ದೇಶನದ ಸಂದರ್ಭದಲ್ಲಿ ಚಿ.ಸು.ಕೃಷ್ಣಸೆಟ್ಟಿ ದಂಪತ್ರಿ

- **ಪ್ರಶಸ್ತಿ ಪತ್ರಗಳು**


Shri C S Krishnashetty


VASAVI
academy
ವಾಸವಿ ಅಕಾಡಮಿ
ಬೆಂಗಳೂರು
ಡಾ॥ ಪಾಲಭಾವಿ ರಾಷ್ಟ್ರೀಯ ಪ್ರಶಸ್ತಿ ಪುರಸ್ಕೃತರಾದ
ತಮಗೆ ದಿನಾಂಕ 31-05-2015 ರಂದು
ಏರ್ಪಡಿಸಿದ ಸಮಾರಂಭದಲ್ಲಿ ಅಭಿನಂದನ
ಪೂರ್ವಕ ಗೌರವ ಸಮರ್ಪಣೆ


Vincent Van Gogh
Award-2016
C.S.Krishna Setty
A well-Known Artist, Art Critic, Art Activist and organizer, for his Yeoman service rendered to visual art field of India and Karnataka in particular, for more than 40 years. As Chairman Karnataka Lalithakala Academy and other Organization he has instilled new vigour and enthusiasm in the art fraternity, through his visions and action, We are very proud to confer this prestigious award to this noble person for the first time.
21st Jan,2016
'Vin'Scent Art Gallery



ಮಾಧ್ಯಮ ಶಿಕ್ಷಣ ಪಡೆದ ಸಾಣೆಹಳ್ಳಿಯ ಮಠದ ಆವರಣದಲ್ಲಿ ಚಿ.ಸು. ಕೃಷ್ಣಸೆಟ್ಟಿ



ಶ್ರೀ ಚಿ.ಸು.ಕೃಷ್ಣಸೆಟ್ಟಿಯವರ ಕುಟುಂಬದೊಂದಿಗೆ ಸಂಶೋಧಕಿ

ಅಧ್ಯಾಯ: ಆರು

# ಕಲಾಕೃತಿ ಮತ್ತು ಕಲಾ ಸಾಹಿತ್ಯದ ಮೇಲಾದ ಪ್ರಭಾವ, ಪ್ರೇರಣೆ, ಶೈಲಿ ಮತ್ತು ವೈಲಕ್ಷಣಗಳು

ದೃಶ್ಯಕಲಾ ಕ್ಷೇತ್ರದಲ್ಲಿ ಕಲಾಶೈಲಿಗೆ ಪ್ರಾಮುಖ್ಯತೆ ಇರುವಂತೆ ಆಯಾ ಕಲೆಯ ಕಲಾವಿದರ ಮೇಲೆ ಬೀರಿದ ಪ್ರಭಾವ, ಕಲಾರಚನೆಗೆ ಉಂಟಾದ ಪ್ರೇರಣೆ ಹಾಗೂ ಕೃತಿ ರಚನೆಯಲ್ಲಿ ಅನುಸರಿಸಿದ ತಾಂತ್ರಿಕತೆಗಳು ಸಹಿತ ಅಷ್ಟೇ ಮೌಲಿಕ ಪಾತ್ರವಹಿಸುತ್ತವೆ.[೧] ಪ್ರಮುಖವಾಗಿ ದೃಶ್ಯಕಲಾವಿದರ ಕುರಿತಾಗಿರುವ ಸಂಶೋಧನ ಅಧ್ಯಯನಗಳಲ್ಲಿ ಇಂತಹ ಅನೇಕ ವಿಷಯ ಸಂಗತಿಗಳ ಬಗ್ಗೆ ತಿಳಿದುಕೊಳ್ಳುವುದು ಮತ್ತು ಅದನ್ನು ಸಮಾಜಕ್ಕೆ ತಿಳಿಸುವುದು ಮಹತ್ವದ್ದಾಗಿರುತ್ತದೆ.

ಯಾವುದೇ ಕಲೆ ಮತ್ತು ಕಲಾಪ್ರಕಾರವನ್ನು ಗುರುತಿಸುವಲ್ಲಿ 'ಶೈಲಿ' ಪ್ರಮುಖವಾಗಿರುತ್ತದೆ. ಯಾವುದೇ ಒಂದು ಕಲಾಕೃತಿಗಿಂತ ಮತ್ತೊಂದು ಕಲಾಕೃತಿ ಯಾವ ರೀತಿಯಲ್ಲಿ ಭಿನ್ನವಾಗಿದೆ ಎಂಬುದನ್ನು ಗುರುತಿಸುವಾಗ ಅದರ ರಚನಾ ಶೈಲಿ ಮಹತ್ವದ ಪಾತ್ರವಹಿಸುತ್ತದೆ. ಆ ಕಲಾಕೃತಿಯ ಒಟ್ಟು ಸ್ವರೂಪ, ಅದರಲ್ಲಿನ ಆಕಾರಗಳು, ರೇಖೆಗಳು, ವರ್ಣಲೇಪನ, ರಚನಾ ವಿಧಾನ, ಚಿತ್ರ ಸಂಯೋಜನೆ ಹೀಗೆ ಹತ್ತು ಹಲವು ಸಂಗತಿಗಳನ್ನು ಈ ಶೈಲಿ ಒಳಗೊಂಡಿರುತ್ತದೆ. ಮತ್ತು ಒಂದೊಂದು ಬಗೆಯ ಭಿನ್ನ ಶೈಲಿಯಲ್ಲಿ ಸಾಕಷ್ಟು ಅಂಶಗಳು ಬಿಂಬಿತವಾಗಿರುವುದನ್ನು[೨] ಕಾಣಬಹುದು.

ಕಲಾಕ್ಷೇತ್ರದಲ್ಲಿ ಕಾಲಕಾಲಕ್ಕೆ ಬೇರೆ ಬೇರೆ ಶೈಲಿಗಳು ಹುಟ್ಟಿಕೊಂಡಿದ್ದು, ಅವುಗಳನ್ನು ಆಧರಿಸಿ ಕಲಾವಿದರು ಕೃತಿಗಳನ್ನು ರಚಿಸುತ್ತಾ ಬಂದಿರುವುದು ಕಂಡು ಬರುತ್ತದೆ. ಕಲಾಕೃತಿ ಮತ್ತು ಕಲಾವಿದರ ಶೈಲಿಯು ರೂಪುಗೊಳ್ಳಲು ಆತನ ಕಾಲದಲ್ಲಿ ಪ್ರಚಲಿತದಲ್ಲಿರುವ ಕಲಾಶೈಲಿಯ ಜೊತೆಗೆ ಆಯಾ ಕಲಾವಿದನ ಅನುಭವಗಳು, ಸಾಧನೆ, ಪ್ರಭಾವ, ಪ್ರೇರಣೆ, ಪ್ರಾದೇಶಿಕ ಅಂಶಗಳು,

---

೧. ಡಾ. ಯಾದಪ್ಪ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಪು.೫೪

೨. ಡಾ. ಎಸ್. ಸಿ. ಪಾಟೀಲ : (ಸ) ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು : ಪು.೨೮–೧೯

ಸಂಸ್ಕೃತಿ ಮತ್ತು ಸಾಮಾಜಿಕ ಆಗುಹೋಗುಗಳು ಕಾರಣವಾಗುತ್ತವೆ ಎನ್ನಬಹುದು. ಕಲಾವಿದನೊಬ್ಬ ತನ್ನನ್ನು ತಾನು ಗುರುತಿಸಿಕೊಳ್ಳುವುದು ತನ್ನದೇ ಆದ ಪ್ರತ್ಯೇಕ ಶೈಲಿಯಿಂದಾಗಿ, ಇತರೆಲ್ಲಾ ಕಲಾವಿದರಿಗಿಂತ ಭಿನ್ನವಾಗಿ, ವಿಶಿಷ್ಟವಾಗಿ ಹಾಗೂ ಪರಿಣಾಮಕಾರಿಯಾಗಿ ಯಾವ ರೀತಿಯಲ್ಲಿ ಕಲಾಕೃತಿಯನ್ನು ಅಭಿವ್ಯಕ್ತಿಸಬೇಕು ಎಂಬ ಆದಮ್ಯ ತುಡಿತ ಮಿಡಿತಗಳು ಹಾಗೂ ಕಲಾವಿದನ ನಿರಂತರ ಹುಡುಕಾಟದ ಫಲಸ್ವರೂಪವೇ ಪ್ರತ್ಯೇಕ ಕಲಾಶೈಲಿ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೩]

ಯಾವುದೇ ಕಲಾಕೃತಿ ಅಥವಾ ಕಲಾಶೈಲಿಯ ಮೇಲೆ ಬೀರಿದ ಪ್ರಭಾವವೂ ಅದರ ಬದಲಾವಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಯಾವುದೇ ಒಂದು ಕಲಾ ಶೈಲಿಯಲ್ಲಿ ಚಿತ್ರ ರಚಿಸುವ ಕಲಾವಿದ ಇನ್ನೊಂದು ಕಲಾಶೈಲಿಯ ವೀಕ್ಷಣೆಯಿಂದ ಅಥವಾ ಇನ್ನೊಬ್ಬ ಕಲಾವಿದನ ಕೃತಿಗಳಿಂದ ಪ್ರಭಾವಿತನಾಗಬಹುದು. ಇದರಿಂದ ಕೃತಿ ಹಾಗೂ ಶೈಲಿಗಳು ಬದಲಾಗುತ್ತಾ ಹೋಗುವುದು ಸರ್ವೆ ಸಾಮಾನ್ಯವಾಗಿದ್ದು, ಚಿತ್ರಕಲಾವಿದ, ಕಲಾವಿಮರ್ಶಕ ಚಿ.ಸು.ಕೃಷ್ಣಸೆಟ್ಟಿಯವರು ಸಹ ಆರಂಭದಲ್ಲಿ ಅಕಾಡೆಮಿಕ್ ಶೈಲಿಯನ್ನು ಕಲಿತು, ಕೆಲವು ಕಲಾಕೃತಿಗಳನ್ನು ನೋಡಿ ಪ್ರಭಾವಿತಗೊಂಡು ಸಾಕಷ್ಟು ಕಲಾಕೃತಿಗಳನ್ನು ರಚನೆ ಮಾಡಿದವರು. ದಿನಗಳುರುಳುತ್ತಾ ಮಾಡುವ ಕೆಲಸದಲ್ಲಿ ಅನುಭವ ಹೆಚ್ಚಾದಂತೆಲ್ಲಾ ಭಾವನೆಗಳು ಭಿನ್ನವಾಗಲು ಮುಂದಾಗಿ ಬದಲಾವಣೆಗಳು ಅನಿವಾರ್ಯವೆನಿಸಿದ್ದುಂಟು, ಆಗ ಹೊಸತನವನ್ನು ಹುಡುಕುತ್ತಾ ಕಲಾಕೃತಿಗಳನ್ನು ಗಮನಿಸಿ ವಿಮರ್ಶೆ ಮಾಡುವಾಗ ಸಿಕ್ಕಿದ್ದು ಹಲವು ಸಂಗತಿಗಳಾದರೂ ಪಾಶ್ಚಾತ್ಯ ಕಲಾವಿದರ ಕಲಾಕೃತಿಗಳು ಅಲ್ಪ ಭಿನ್ನವೆಂದರೆ ತಪ್ಪಿಲ್ಲ. ಅಲ್ಲಿ ನವ್ಯಕಲಾಶೈಲಿಗಳ ಪ್ರಭಾವಕ್ಕೊಳಗಾಗಿ ಆಧುನಿಕ ಶೈಲಿಯ ನೂರಾರು ಚಿತ್ರಗಳನ್ನು ರಚಿಸಿದ್ದಾರೆ.

ಮುಖ್ಯವಾಗಿ ಕಲೆಯಲ್ಲಿ ಶೈಲಿ, ಪ್ರಭಾವಗಳಂತೆ ಕಲಾಕೃತಿಯನ್ನು ರಚಿಸಲು ಕಲಾವಿದನಿಗೆ ಉಂಟಾದ ಸ್ಪೂರ್ತಿ ಅಥವಾ ಪ್ರೇರಣೆಗಳು ಕೂಡ ಅಷ್ಟೇ ಮಹತ್ವದ್ದಾಗಿವೆ. ಕಾರಣ ಸ್ಪೂರ್ತಿ ಅಥವಾ ಪ್ರೇರಣೆಗಳಿಲ್ಲದೆ ಕಲಾವಿದ ಯಾವುದೇ ಕೃತಿ ರಚಿಸಲಾರ. ಕಲಾವಿದರು ತಮ್ಮ ಕಲಾಕೃತಿಗಳ ರಚನೆಗೆ ಹೇಗೆ ಮತ್ತು ಎಲ್ಲಿ ಸ್ಪೂರ್ತಿ ಅಥವಾ ಪ್ರೇರಣೆವುಂಟಾಯಿತೆಂದು ಹೇಳುತ್ತಲೆ[೪] ಬಂದಿದ್ದಾರೆ ಅದೇರೀತಿಯಲ್ಲಿ ಕಲಾವಿದ ಚಿ.ಸು.ಕೃಷ್ಣಸೆಟ್ಟಿಯೂ ಕೂಡ ಅದರ ಹೊರತಾಗಿಲ್ಲ. ಅವರ ಕಲಾಕೃತಿ ರಚನೆಗೆ ಪ್ರೇರಣೆಗಳೇನು ಎಂಬುದನ್ನು ಇಲ್ಲಿ ಮುಖ್ಯವಾಗಿ ಚರ್ಚಿಸಲಾಗಿದೆ.

---

೩. ಡಾ. ಎಸ್.ಎಸ್.ಗಡ್ಡಿ : ಚಿತ್ರಕಲಾವಿದ ಎಂ.ಬಿ.ಪಾಟೀಲ ಅವರ ಬದುಕು ಮತ್ತು ಕಲಾಕೃತಿಗಳು, ಅಪ್ರಕಟಿತ ಸಂಶೋಧನ ಗ್ರಂಥ. ಕ.ವಿ.ವಿ : ಪು.೧೯೦

೪. ಡಾ. ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ. ಎ. ಚೆಟ್ಟಿ ಕಲೆ ಮತ್ತು ಬದುಕು : ಪು.೧೧೦

ಕಲೆ ಮತ್ತು ಕಲಾಕೃತಿ ರಚನೆಯಲ್ಲಿ ಅನುಸರಿಸಿರುವ 'ತಾಂತ್ರಿಕತೆ' ಬಹುಮುಖ್ಯಪಾತ್ರವಹಿಸುತ್ತದೆ. ಚಿತ್ರಕಲೆಯಲ್ಲಿ ಇತರೆಲ್ಲಾ ಕಲಾಪ್ರಕಾರಗಳಿಗಿಂತ ಹೆಚ್ಚಿನ ಪ್ರಮಾಣದ ತಾಂತ್ರಿಕತೆಯ ಪರಿಜ್ಞಾನ, ಕಲಾವಿದನಿಗೆ ಇರಬೇಕಾಗುತ್ತದೆ. ಒಂದು ಚಿತ್ರಕೃತಿಯು ಯಾವುದೇ ಶೈಲಿಯಲ್ಲಿರಬಹುದು ಅಥವಾ ಇನ್ನಾವುದೇ ವಸ್ತುವಿಷಯಕ್ಕೆ ಸಂಬಂಧಿಸಿರಬಹುದು. ಆದರೆ ಅದರಲ್ಲಿನ ತಾಂತ್ರಿಕ ಅಂಶಗಳು ಪ್ರಮುಖ ಪಾತ್ರವಹಿಸುತ್ತವೆ. ಅಂದರೆ ಕಲಾಕೃತಿಯಲ್ಲಿನ ಆಕಾರಗಳು, ಪ್ರಸ್ತುತ ಪಡಿಸುವ ರೀತಿ, ರೇಖಾ ವಿನ್ಯಾಸ, ಸ್ಥಳಾವಕಾಶ, ನೆರಳು-ಬೆಳಕಿನ ಪರಿಣಾಮ, ವರ್ಣಲೇಪನ, ಸಂಯೋಜನೆ, ರಚನಾಶೈಲಿ, ಕೃತಿಯ ಒಟ್ಟು ರೂಪ ಇಂತಹ ಎಲ್ಲಾ ತಾಂತ್ರಿಕ ಅಂಶಗಳನ್ನು ಕಲಾವಿದ ತನ್ನ ಕೃತಿಯಲ್ಲಿ ಯಾವ ರೀತಿಯಲ್ಲಿ ಪರಿಣಾಮಕಾರಿಯಾಗಿ ಬಳಸಿಕೊಳ್ಳುತ್ತಾನೆ, ಯಾವ ಶ್ರೇಷ್ಠ ಮಟ್ಟದಲ್ಲಿ ಆ ಕೃತಿ ಮೂಡಿಬರುತ್ತದೆ[೫] ಎಂಬಂತೆ ಚಿ.ಸು.ಕೃಷ್ಣಸೆಟ್ಟಿಯವರ ಕಲಾಕೃತಿಯಲ್ಲಿಯೂ ಒಂದಿಷ್ಟು ಬದಲವಣೆಗಳಾಗಿರುವುದನ್ನು ಗಮನಿಸಬಹುದು.

ಅದೇರೀತಿಯಾಗಿ ಭಾರತದಲ್ಲಿರುವ ಸಂಸ್ಕೃತಿಯ ಕಲೆಯನ್ನು ತುಂಬು ಜೀವನವನ್ನಾಗಿ ವ್ಯಾಪಿಸಿಕೊಂಡಿದ್ದು, ಕಲಾಭಿರುಚಿಯುಳ್ಳ ಪ್ರತಿಯೊಬ್ಬ ಯುವಕ-ಯುವತಿಯರು ಲಲಿತಕಲಾ ಶಿಕ್ಷಣದ ಅಂಶಗಳಾದ ಚಿತ್ರಕಲೆ, ಶಿಲ್ಪಕಲೆ, ಸಂಗೀತ, ನೃತ್ಯ ನಾಟಕ, ಇತ್ಯಾದಿ ಕಲೆಗಳ ಜ್ಞಾನವನ್ನು ಹೊಂದಿದ್ದಾರೆ. ದೇಶದಲ್ಲಿ ಚಿತ್ರಕಲೆಯ ಒಲವುಗಳನ್ನು ಯಥಾಚಿತ್ತವಾಗಿ ಬೆಲೆಕಟ್ಟಲು ಜ್ಞಾನವನ್ನು ಹೊಂದಿರುವ ಕಲಾವಿದರಲ್ಲದವರು ಇಲ್ಲಿ ಹೇರಳವಾಗಿದ್ದರೂ ಮುಖ್ಯವಾಗಿ ವೃತ್ತಿಕಲಾವಿದರ ಕಲೆಯನ್ನು ಹೆಚ್ಚು ವಿಮರ್ಶಿಸಿಲ್ಪಟ್ಟಿದೆ. ಭಾರತದಲ್ಲಿ ಚಿತ್ರಕಲಾಕಾರರು ಸಾಮಾನ್ಯವಾಗಿ ತಮ್ಮ ಕಲೆಗೆ ತಮ್ಮನ್ನು ಅರ್ಪಿಸಿಕೊಂಡಿದ್ದರು, ಅರ್ಪಿಸಿಕೊಳ್ಳುತ್ತಾ ಬಂದಿರುತ್ತಾರೆ. ಅದಕ್ಕೆ ಸಾಕಷ್ಟು ಉದಾಹರಣೆಗಳನ್ನು ಕಾಣಬಹುದು. ರಾಜರವಿವರ್ಮನಿಂದ ಪ್ರಸ್ತುತ ಇದೇ ಕೃಷ್ಣಸೆಟ್ಟಿಯವರೆಗೂ ನುರಿತ ಕಲಾವಿದರ ಹಾದಿಯನ್ನು ಯುವಕಲಾವಿದರು ಹಿಂಬಾಲಿಸಬಹುದು ಅಷ್ಟರ ಮಟ್ಟಿಗೆ ಬದುಕನ್ನು ರೂಪಿಸಿಕೊಳ್ಳಲು ಸಹಕಾರಿಯಾಗಬಲ್ಲದು.

ಚಿತ್ರಕಲಾವಿದ ತನ್ನ ಸೃಜನಶೀಲತೆಯ ಪ್ರದರ್ಶನದ ನಿಮಿತ್ತ ತನ್ನದೇ ಆಲೋಚನೆಯಲ್ಲಿ ಕಲಾಕೃತಿಗಳನ್ನು ರೂಪಿಸುವಲ್ಲಿ ಯಶಸ್ಸನ್ನು ಕಂಡು ಸಂತೋಷಿಸುತ್ತಾನೆ. ಆ ಕಲಾಕೃತಿಯು ಸಾಮಾನ್ಯವಾಗಿ ಚಿತ್ರಕಾರನ ಮಾನಸಿಕ ಮತ್ತು ದೈಹಿಕ ಸ್ಥಿತಿಯನ್ನು ಪ್ರತಿಬಿಂಬಿಸುತ್ತದೆಂದು ಹೇಳಲಾಗಿದೆಯಾದರೂ ಒಂದು ಸಾಹಿತ್ಯಕೃತಿಯು ಕವಿಯ ಗುಣಗಳನ್ನು ಉತ್ಕೃಷ್ಟವಾಗಿ ಪ್ರತಿ ಬಿಂಬಿಸುವಂತೆಯೇ ಚಿತ್ರವು ಕೂಡ ಸಾಮಾನ್ಯವಾಗಿ ಕಲಾವಿದನ ಯೋಗ್ಯತೆಯನ್ನು ಪ್ರತಿಬಿಂಬಿಸು ತ್ತದೆಂಬ ನಂಬಿಕೆಯನ್ನು ತಿಳಿಸುತ್ತದೆ. ಕಲೆ ಎನ್ನುವುದು ಮಾನವನ ವೈಶಿಷ್ಟ್ಯ. ಅಂತೆಯೇ ನಮ್ಮ

೫. ಡಾ. ಶಶಿಕಲಾ ಹೂಗಾರ : ಕರ್ನಾಟಕದ ತೊಗಲುಗೊಂಬೆ ಚಿತ್ರಕಲೆ : ಪು.೩೮

ಸುತ್ತಲಿನ ನಿಸರ್ಗ ಹಾಗೂ ದೈನಂದಿನ ಜನ ಜೀವನಗಳು, ಜನಸಾಮಾನ್ಯರಲ್ಲಿ ಪ್ರಭಾವ ಬೀರುವಂತೆ ಕಲಾವಿದನ ಮನಸ್ಸಿನ ಮೇಲೂ ಪ್ರಭಾವ ಬೀರುತ್ತದೆ. ಆದರೆ ಕಲಾವಿದನಲ್ಲಿರುವ ಆತನ ಸಂವೇದನೆಯು ಹೊರಗಿನ ಈ ಘಟನೆಗಳಿಗೆ ಹಾಗೂ ದೃಶ್ಯಗಳಿಗೆ ಉಳಿದವರಿಗಿಂತ ಭಿನ್ನವಾಗಿ, ಹೆಚ್ಚು ತೀವ್ರವಾಗಿ ಸ್ಪಂದಿಸುತ್ತದೆ.

ಈ ಸ್ಪಂದನ ಹಾಗೂ ದೃಶ್ಯಗಳಿಗೆ ಉಳಿದವರಿಗಿಂತ ಭಿನ್ನವಾಗಿ ಹೆಚ್ಚು ತೀವ್ರವಾಗಿ ಸ್ಪಂದಿಸುತ್ತದೆ. ಈ ಸ್ಪಂದನ ಹಾಗೂ ತುಡಿತಗಳು ಅವನ ಮಾಧ್ಯಮದ ಮೂಲಕ ಪ್ರಕಟವಾಗಿ ಕಲಾಕೃತಿಯೆನಿಸುತ್ತದೆ. ವಿವಿಧ ಕಲೆಗಳು ಮನುಷ್ಯನ ವಿವಿಧ ಇಂದ್ರಿಯಗಳಿಗೆ ಸಂಬಂಧಿಸಿದ ಕಲೆಗಳಾಗಿವೆ. ಸಾಹಿತ್ಯವನ್ನು ಕಿವಿಯಿಂದ ಕೇಳುವಂತೆ ಕಣ್ಣಿನಿಂದ ಓದಿಯೂ ಸಂತಸ ಪಡಬಹುದು. ಆದರೆ ಸಂಗೀತಕ್ಕೆ ಕಿವಿಯೇ ಪ್ರಧಾನ ಇಂದ್ರಿಯವಾಗಿದೆ. ಇದರ ಹಾಗೆಯೇ ಚಿತ್ರಕಲೆ, ಶಿಲ್ಪಕಲೆ ಮತ್ತು ವಾಸ್ತುಶಿಲ್ಪಗಳಂತಹ ಕಲೆಗಳು ಕಣ್ಣಿಗೆ ಸಂಬಂಧಿಸಿದವು. ಎಲ್ಲಾ ನಿಜವಾದ ಕಲೆಗಳೂ ಮೂಲತಃ ಸೌಂದರ್ಯಾನುಭೂತಿಗೆ ಕಾರಣವಾಗುತ್ತವೆ. ಈ ಆಧುನಿಕ ಕಾಲದಲ್ಲಿ ಕಲೆಗಳನ್ನು ಲಲಿತ ಹಾಗೂ ಲಲಿತೇತರ ಎಂದು ಎರಡು ಮುಖ್ಯ ವಿಭಾಗಗಳನ್ನು ಮಾಡಿ ಗುರುತಿಸಲಾಗುತ್ತದೆ. ಆಭರಣಕಲೆ, ಜಾಹೀರಾತುಗಳು, ಕುಂಬಾರಿಕೆ, ಭಿತ್ತಿ ಪತ್ರಗಳು ಮುಂತಾದವುಗಳನ್ನು ಲಲಿತೇತರಕಲೆಗಳೆನ್ನುತ್ತೇವೆ.ಲಲಿತಕಲೆಗಳಲ್ಲಿ ಸೌಂದರ್ಯನಿರ್ಮಾಣವು ಉಪಯೋಗ ದೃಷ್ಟಿಯಿಲ್ಲದ ಆನಂದ ಪಡೆಯುವುದಕ್ಕೆ ಇರುತ್ತವೆ. ಇದೇ ರೀತಿ ಲಲಿತೇತರ ಕಲೆಗಳಲ್ಲಿ ಸೌಂದರ್ಯವಿದ್ದರೂ ಅವು ಒಂದು ನಿಶ್ಚಿತ ಕಾರಣದಿಂದ ಹಾಗೂ ಉಪಯೋಗದ ದೃಷ್ಟಿಯಿಂದಲೇ ನಿರ್ಮಾಣವಾಗುತ್ತವೆ ಎಂಬುದು ಬಹುಮುಖ್ಯ ಅಂಶವಾಗಿರುವಂತೆ[೬] ಭಿನ್ನತೆಯ ಸ್ವರೂಪ ಯಾವ ಮಟ್ಟದಲ್ಲಿದೆ ಎಂಬುದನ್ನು ಇಲ್ಲಿ ಗುರುತಿಸಬಹುದು.

ಲಲಿತಕಲೆಗಳಲ್ಲಿ ಪ್ರಮುಖ ಪ್ರಕಾರವಾದ ಚಿತ್ರಕಲೆ ಎಂದರೇನು? ಎನ್ನುವ ಬಗ್ಗೆ ಹಲವರಲ್ಲಿ ಗೊಂದಲವಿದೆ. ಏಕೆಂದರೆ ನಮ್ಮ ಪ್ರಾಚೀನರು ಸಾಮಾನ್ಯವಾಗಿ ಮಾಡಿದ ಕೆಲಸಗಳೆಲ್ಲವೂ ಉದ್ದೇಶವನ್ನಾಗಿ ಇಟ್ಟುಕೊಂಡಿದ್ದರು. ಅಂತೆಯೇ ಚಿತ್ರಕಲೆಯೂ ಸೇರಿದಂತೆ ಇತರ ಕಲೆಗಳನ್ನು ಉಪಯೋಗದ ದೃಷ್ಟಿಯಿಂದಲೇ ಅವರು ಗಮನಿಸಿದರು. ಅವರ ದೃಷ್ಟಿಯಲ್ಲಿ ಚೆನ್ನಾಗಿ ಅಚ್ಚುಕಟ್ಟಾಗಿ ಮಾಡುವ ಕೆಲಸಗಳೆಲ್ಲವೂ ಕಲೆ ಎಂದು ಕರೆಸಿಕೊಳ್ಳಲ್ಪಡುತ್ತಿತ್ತು. ಅಂತೆಯೇ ಲಲಿತೇತರ ಹಾಗೂ ಉಪಯೋಗಿ ಕಲೆಗಳಾದ ಮರಗೆಲಸ, ಕುಂಬಾರಿಕೆ, ನೇಯ್ಗೆ, ಕಮ್ಮಾರನ ಕೆಲಸ, ಅಕ್ಕಸಾಲಿಗತನ, ಇತ್ಯಾದಿಗಳೆಲ್ಲವೂ ಅವರವರ ದೃಷ್ಟಿಯಲ್ಲಿ ಕಲೆಯೇ ಆಗಿತ್ತು. ಕಲೆಯ ವ್ಯಾಖ್ಯೆ ಹಾಗೂ ಅದರ

---

೬. ಮಲ್ಲಿಕಾರ್ಜುನ ಸಿ. ಬಾಗೋಡಿ : ಚಿತ್ರ ಕಲಾವಿದ ಜೆ.ಎಸ್.ಖಂಡೇರಾವ್ ಒಂದು ಅಧ್ಯಯನ ಪ್ರಕಟಿತ ಸಂಶೋಧನ ಗ್ರಂಥ. ಕ.ವಿ.ವಿ. ಹಂಪಿ. ೨೦೦೨ ಪು.೧೦೦

ಆಶಯಗಳ ಬಗ್ಗೆ ಈಗಿನಷ್ಟು ಚರ್ಚೆ ಆಗದಂತಹ ಆ ಸಂದರ್ಭದಲ್ಲಿ, ಅಂದರೆ ನಮ್ಮ ಪ್ರಾಚೀನರು ಆರವತ್ನಾಲ್ಕು ಕಲೆಗಳನ್ನು ಕಲಿಸಲಾಗುತ್ತಿತ್ತು ಎಂದು ಕಥೆಗಳಲ್ಲಿ ನಾವೆಲ್ಲಾ ಕೇಳಿದ್ದೇವೆ ಎನ್ನುವ ಚಿ.ಸು.ಕೃಷ್ಣಸೆಟ್ಟಿಯವರ ಮಾತುಗಳಲ್ಲಿ ಗಾಂಭೀರ್ಯತೆಯಿದ್ದು, ಲಲಿತಕಲೆಗಳಲ್ಲಿಯೇ ಚಿತ್ರಕಲೆಗೆ ತನ್ನದೇ ಗೌರವವನ್ನು ತಂದುಕೊಂಡಿರುವಂತೆ ಪ್ರಸ್ತುತ ಕಲಾವಿದರು ಮತ್ತು ಕಲಾಕೃತಿಗಳು ಸೌಂದರ್ಯಕ್ಕೆ ತನ್ನಿಂತಾನೆ ಮಾರು ಹೋಗಿರುತ್ತಾರೆ ಮತ್ತು ಹೋಗಿರುತ್ತವೆ. ಸೌಂದರ್ಯಕ್ಕೆ ಮತ್ತೊಂದು ಹೆಸರೇ ಕಲೆ ಎಂದರೆ ತಪ್ಪಾಗಲಿಕ್ಕಿಲ್ಲ.

ಕಲಾವಿದ, ಕಲಾಸಾಹಿತಿ, ವಿಮರ್ಶಕರಾಗಿ ಕರ್ನಾಟಕದಲ್ಲಿ ಗುರುತಿಸಿಕೊಂಡಿರುವ ಚಿ.ಸು. ಕೃಷ್ಣಸೆಟ್ಟಿಯವರು ಚಿತ್ರಕಲೆಯನ್ನು ಪ್ರೀತಿಸಿದವರು, ಗೋಡೆ ಮೇಲಿನ ಚಿತ್ರಗಳನ್ನು ಕಂಡು ಪುಳಕಿತಗೊಂಡು ಪ್ರೇರಣೆ ಪಡೆದವರು, ಜಾಹಿರಾತನ್ನೇ ಜೀವಾಳವಾಗಿಸಿಕೊಂಡು ನೋಡುಗರ ಕಲಾರಾಧಕರಿಂದ ಬೇಶ್ ಎಂದು ಬೆನ್ನು ತಟ್ಟಿಸಿಕೊಂಡು ಉತ್ತೇಕ್ಷೆಗೊಳಗಾಗಿ ಕಲೆಯನ್ನು ಒಳಗೊಳಗೆ ಆರಾಧಿಸುವುದರ ಮೂಲಕ ಕಲಾ ಪ್ರಪಂಚಕ್ಕೆ ಧುಮುಕಿದವರು. ಸಂಘಟನೆಯ ಜಾಹಿರಾತು ಜವಾಬ್ದಾರಿಯ ಹೊಣೆ ಹೊತ್ತು ಹಗಲು, ರಾತ್ರಿಯೆನ್ನದೆ ಮನೆಯ ಗೋಡೆ ಮೇಲೆ, ಕಾಂಪೌಂಡ್ ಮೇಲೆ, ಅಕ್ಷರ ಮತ್ತು ಚಿತ್ರಗಳನ್ನು ಬಿಡಿಸುತ್ತಾ, ಚಿತ್ರಕಲೆಯನ್ನು ಆಸ್ವಾದಿಸುತ್ತಾ ಕಲಿತವರು. ಇದರ ಬಹುಪ್ರಭಾವ ಗೊತ್ತಿಲ್ಲದೇ ಚಿತ್ರಕಲೆಯ ಪದವಿಯತ್ತ ಮುನ್ನಡೆಸಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಚಿ.ಸು.ಕೃಷ್ಣಸೆಟ್ಟಿ ಬಾಲ್ಯದಿಂದಲೇ ಚಿತ್ರಕಲೆಯೆಡೆಗೆ ಒಲವು ಬೆಳೆಸಿಕೊಂಡವರು. ಹಾಗೆಯೇ ಅದಕ್ಕೆ ಪೂರಕವಾಗಿ ತಾವು ವಾಸಿಸುವ ಗ್ರಾಮೀಣ ಸೊಬಗಿನ ಪರಿಸರವು ಕೂಡ ಸಹಾಯಕ ವಾಗಿವೆ. ಕಲಾವಿದನಿಗೆ ವಾತಾವರಣವು ಕೂಡ ಬಹುಮುಖ್ಯವಾದ ಭಾಗವಾಗಿದೆ ಎನ್ನಬಹುದು. ಆರಂಭದಲ್ಲಿ ಪ್ರಾಥಮಿಕ ಶಾಲಾ ಹಂತದಲ್ಲಿಯೇ ಚಿತ್ರಿಸಿದ ಚಿತ್ರಗಳು ದೊರಕದೇ ಇರಬಹುದು. ಆದರೆ ಅಲ್ಲಿಯೂ ಸ್ಥಳೀಯ ವೃತ್ತಿ ಕಲಾವಿದರ ಪ್ರಭಾವಕ್ಕೂ ಒಳಗಾಗಿರುವುದು ಕಂಡುಬರುತ್ತದೆ. ದಾವಣಗೆರೆಯ ಲಲಿತಕಲಾ ಮಹಾವಿದ್ಯಾಲಯದಲ್ಲಿ ವಿದ್ಯಾಭ್ಯಾಸಕ್ಕೆ ಪ್ರವೇಶ ಪಡೆದ ಮೊದಲೆರಡು ತರಗತಿಗಳಲ್ಲಿ ಪಠ್ಯಕ್ಕೆ ಅನುಗುಣವಾಗಿದ್ದ ಪಾಠಗಳಲ್ಲಿ ಕೀ, ಸ್ಕೆಚ್, ಭಾವಚಿತ್ರ, ವ್ಯಕ್ತಿಚಿತ್ರ ಮತ್ತು ಪ್ರಕೃತಿ ಚಿತ್ರಗಳು ತುಂಬಾ ಪ್ರಭಾವ ಬೀರಿರುತ್ತವೆ. ಆರಂಭದಲ್ಲಿ ಸ್ನೇಹಿತರಲ್ಲೆ ತೀವ್ರ ಪೈಪೋಟಿಯ ನಡುವೆ, ಪೆನ್ನು, ಪೆನ್ಸಿಲ್ ಮತ್ತು ಬಣ್ಣಗಳ ನಡುವೆ ಸ್ಪರ್ಧೆ ಏರ್ಪಟ್ಟು ಅದರಿಂದ ಆದ ಅನುಭವವೇ ಹೆಚ್ಚು ಎನ್ನುವ ಕಲಾವಿದ ಕೃಷ್ಣಸೆಟ್ಟಿ ಗಟ್ಟಿ ಮನಸ್ಸಿನಿಂದ, ಪ್ರೀತಿಯಿಂದ ಬಣ್ಣಗಳ ಆಯ್ಕೆ ಮತ್ತು ಅವುಗಳನ್ನು ಬಳಸುವ ವಿಧಾನವನ್ನು ಅರಿತೆ ಎನ್ನುತ್ತಾರೆ. ಕಲಾವಿದರನ್ನು ಆವರಿಸಿರುವ ಸಾಮಾಜಿಕ, ಸಾಂಸ್ಕೃತಿಕ ಪರಿಸರ, ಸೂಕ್ಷ್ಮಾತೀ ಸೂಕ್ಷ್ಮವಾಗಿ ಅವರ ಮೇಲೆ ದೀರ್ಘಕಾಲದ ಪ್ರಭಾವವನ್ನು ಬೀರುತ್ತದೆ. ಎಲ್ಲಾ ಕಲಾವಿದರು ತಮ್ಮ ಸಮಾಜ ಅಥವಾ ಸಮುದಾಯದಿಂದ ಪ್ರಭಾವಿತರಾಗುತ್ತಾರೆ. ವಿಶೇಷವಾಗಿ ಚಿತ್ರಕಾರರು ಇದಕ್ಕೆ ಹೊರತಾಗಿಲ್ಲ. ಒಂದು ಸಮುದಾಯದಲ್ಲಿ ಕಾಲಕ್ರಮೇಣ

ವಿಶಿಷ್ಟವಾದ ಕೆಲವು ಸಂಪ್ರದಾಯ ಅಥವಾ ಪರಂಪರೆಗಳು ಹಾಗೂ ಕಲಾ ಪಂಥಗಳು ಹುಟ್ಟಿಕೊಳ್ಳುವವು. ಬೆಳೆಯುತ್ತಿರುವ ಕಲಾವಿದರು ಅವುಗಳ ಪ್ರಭಾವಕ್ಕೆ ತನಗರಿವಿಲ್ಲದೇ ಸಿಲುಕಿಕೊಳ್ಳುತ್ತಾರೆ ಎಂಬುದು ಕೂಡ ಸತ್ಯ.

ಮಾನವನ ಜೀವನಕ್ಕೂ ಕಲೆಗೂ ನಿಕಟವಾದ ಸಂಬಂಧವಿದೆ. ವ್ಯಕ್ತಿ ತಾನು ಅನುಭವಿಸಿದ ಘಟನೆ, ಸ್ಥಳ, ಸ್ಥಿತಿಗತಿಗಳ ನೋವು ನಲಿವು ಮುಂತಾದವುಗಳ ಒತ್ತಡದಿಂದ ಒಂದೊಂದು ರೀತಿಯ ಸಂವೇದನೆಯನ್ನು ಪಡೆಯುತ್ತಾನೆ. ಅದಕ್ಕನುಗುಣವಾಗಿ ತನ್ನ ಅನಿಸಿಕೆಗಳನ್ನು ಹೇಳಬೇಕು ಎನ್ನುವ ಭಾವನೆ ಆಕಾಂಕ್ಷೆ ಪ್ರತಿಯೊಬ್ಬನಲ್ಲಿ ಸ್ವಭಾವ ಜನಕವಾಗಿರುತ್ತದೆ. ಭಾರತೀಯ ಚಿತ್ರಕಲೆಗೆ ಪ್ರಪಂಚದಲ್ಲಿಯೇ ವಿಶೇಷ ಸ್ಥಾನಮಾನವಿದೆ. ಸಾವಿರಾರು ವರ್ಷಗಳ ವೈವಿಧ್ಯಮಯ ಸಂಸ್ಕೃತಿ, ನಾಗರೀಕತೆ ಮತ್ತು ಪರಂಪರೆ ಹೊಂದಿದ ನೆಲೆವೀಡು ಈ ಭಾರತ. ಹೀಗಾಗಿ ಇಲ್ಲಿಯ ಕಲೆಗೆ ಹತ್ತು ಹಲವು ಮುಖಗಳು. ಈ ಪರಂಪರೆ ಆದಿಮಾನವನಿಂದ ಆರಂಭಗೊಂಡು ಇಂದಿನ ಆಧುನಿಕ ಮನುಷ್ಯನ ತನಕ ಹಾಸಿಕೊಂಡಿದೆ. ಉನ್ನತ ಕಲಾವಂತಿಕೆ ಭಾರತೀಯ ಕಲೆಯ ಮೂಲಗುಣ, ವಿಭಿನ್ನ ಧರ್ಮ, ನಡವಳಿಕೆ, ಆಚರಣೆ ನಮ್ಮ ಕಲೆಯನ್ನು ಶ್ರೀಮಂತಗೊಳಿಸಿವೆ. ಬಹುಶಃ ಇಲ್ಲಿರುವಷ್ಟು ಸಂಕೀರ್ಣವಾದ ವೈವಿಧ್ಯಮಯ ಬದುಕು, ರೂಢಿ ಜಗತ್ತಿನಲ್ಲಿ ಇನ್ನೆಲ್ಲಿಯೂ ಸಿಗದು. ಅದಕ್ಕೆ ಇಲ್ಲಿಯ ಪ್ರಾಚೀನ ಕಲೆಯಿಂದ ಇಂದಿನ ಆಧುನಿಕ ಕಲೆಯವರೆಗೆ ಹಲವು ಶೈಲಿ ತಂತ್ರ ಸಿದ್ಧಾಂತಗಳನ್ನು ಒಳಗೊಂಡು ಬೆಳೆಯುತ್ತಾ ಬಂದು ಸಮೃದ್ಧಿಗೊಂಡಿರುತ್ತದೆ.[೭] ಇಂತಹ ಸಮೃದ್ಧಿಯಾದ ಚಿತ್ರಕಲಾ ಕ್ಷೇತ್ರದಲ್ಲಿ ಚಿ.ಸು.ಕೃಷ್ಣಸೆಟ್ಟಿಯವರು ತಮ್ಮದೇ ತಂತ್ರ, ಶೈಲಿಯಲ್ಲಿ ರೇಖಾಚಿತ್ರ, ವರ್ಣಚಿತ್ರಗಳನ್ನು ರಚಿಸಿರುತ್ತಾರೆ. ಇಂತಹ ಒಬ್ಬ ಪ್ರಮುಖ ವ್ಯಕ್ತಿಯನ್ನು ಕಲಾವಿದನಾಗಿ ಅವರ ಕಲಾಕೃತಿಗಳ ಒಳನೋಟಗಳಿಗೆ ಜೀವತುಂಬುವ ಕೆಲಸ ಮಾಧ್ಯಮದ್ದಾಗಬೇಕಿದೆ. ವಿಶೇಷವಾಗಿ ಕಲಾ ಚಟುವಟಿಕೆಯಲ್ಲಿ ಕಲಾವಿದ ತೊಡಗುವಾಗ ಆತ್ಮಸ್ಥೈರ್ಯ ಹೆಚ್ಚಿರಬೇಕು. ಕಲೆಯನ್ನು ಯಾರು ಹಗುರವಾಗಿ ಸ್ವೀಕರಿಸುವರೋ ಅಂಥವರ ಕಲಾಕೃತಿ ಮೌಲ್ಯ ಕಳೆದುಕೊಳ್ಳುತ್ತದೆ. ಹೆಚ್ಚು ಮೌಲ್ಯ ಸಿಗಬೇಕಾದರೆ ರೇಖೆ, ಬಣ್ಣ ಮತ್ತು ಸಂಯೋಜನೆಯನ್ನೊಳಗೊಂಡಂತೆ ಆಕಾರಕ್ಕೆ ಜೀವ ತುಂಬುವುದು ಬಹುಮುಖ್ಯವಾದ ಅಂಶ. ಈ ನಿಟ್ಟಿನಲ್ಲಿ ಕಲಾವಿದನಾದವನು ತನ್ನ ಕಲಾಕೃತಿಗೆ ಜೀವ ತುಂಬಬೇಕು. ಆಗ ನೋಡುಗರ ದೃಷ್ಟಿಕೋನ ಕಲಾವಿದನಕಡೆ ವಾಲುತ್ತದೆ. ಕಲಾವಿದ ಸಮಾಜದಲ್ಲಿ ಗುರುತಿಸಿಕೊಂಡು ಪ್ರಬುದ್ಧನಾಗಲು ಪ್ರೇರಕ ಶಕ್ತಿಯಾಗುವುದು.

ಈ ನಿಟ್ಟಿನಲ್ಲಿ ಕಲೆ, ಕಲೆಯ ಮನಸ್ಸನ್ನು ಸುಂದರಗೊಳಿಸುವ ಪ್ರಯತ್ನ ಕ್ಷಣ ಕ್ಷಣಕ್ಕೂ ಮುಂದುವರಿಸಿರುವ ಕಲಾವಿದ, ಇತಿಹಾಸ ಪೂರ್ವ ಕಾಲದ ಚಿತ್ರಗಳ ಸೃಷ್ಟಿಯ ಹಿಂದಿನ ಹಾಗೂ

---

೭. ಶ್ರೀಮತಿ ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು ಒಂದು ಅಧ್ಯಯನ, ಕ.ವಿ.ವಿ.ಹಂಪಿ

ಅನಂತರದ ಹಾಗೂ ಪ್ರಸ್ತುತ ಸಮಕಾಲೀನ ಕಲಾ ಸೃಷ್ಟಿಯ ಆಶಯಗಳು ಒಂದೇ ಆಗಿರುವುದಿಲ್ಲ. ಹಾಗಾಗುವುದು ಸಾಧ್ಯವೇ ಇಲ್ಲ. ವಿವಿಧ ಸಂದರ್ಭಗಳು ವೈವಿದ್ಯಮಯವಾದ ಚಿತ್ರ, ಗ್ರಾಫಿಕ್ ಇತ್ಯಾದಿಗಳನ್ನು ನೋಡುವುದು ಅನುಭವಿಸುವುದು ಸಾಧ್ಯವಾಗಿದೆ[೮] ಎಂಬಂತೆಯೇ ಚಿ.ಸು.ಕೃಷ್ಣ ಸೆಟ್ಟಿಯವರ ಆಶಯಗಳು, ಸಂದರ್ಭಗಳು ಮತ್ತು ಉದ್ದೇಶಗಳು ಆ ಕಾಲದ ಮೌಲ್ಯವನ್ನು ಕಲಾಕೃತಿಗಳಲ್ಲಿ ಎತ್ತಿ ಹಿಡಿದಿರುವುದನ್ನು ಕಾಣಬಹುದು. ಕಲಾವಿದನ ಗುಣ, ಅನುಭವಗಳು ಪ್ರಜ್ಞೆಯ ವಸ್ತುಗಳಾದಾಗ ಅವು ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತವೆ. ಇವು ವಿವಿಧ ರೀತಿಯ ಸಂವಹನ ಮಾಧ್ಯಮಗಳ ಮೂಲಕ ಸೃಷ್ಟಿಸುವ ಪ್ರತಿ ಮಡಿಲಿನಲ್ಲಿರುವ ಗಿಡ-ಮರ, ಹೂಬಳ್ಳಿ ಹೀಗೆ ಅವನು ನೆಲೆಸಿರುವ ಈ ಒಂದು ವಾತಾವರಣವು ಅವನಲ್ಲಿ ಪ್ರೇರಣೆಯನ್ನು ತುಂಬುತ್ತವೆ ಎನ್ನಬಹುದು. ಈ ಪರಿಸರದ ವಾತಾವರಣವನ್ನು ತಾನು ಅನುಭವಿಸಿದಾಗ ಮಾತ್ರ ಅದು ಕಲಾತ್ಮಕವಾಗಿ ರೂಪಿತವಾಗುತ್ತದೆ. ಅದಕ್ಕಾಗಿ ಸಾಮಾನ್ಯ ಮನುಷ್ಯನಿಗೂ ಕಲಾವಿದನಿಗೂ ಸ್ವಲ್ಪ ವ್ಯತ್ಯಾಸವಿದೆ. ಸಾಮಾನ್ಯ ಮನುಷ್ಯನಾದವನು ತನ್ನ ಸುತ್ತಮುತ್ತಲಿನ ಪರಿಸರವನ್ನು ನೋಡುವ ರೀತಿ ಬೇರೆ, ಅದೇ ಪರಿಸರವನ್ನು ಒಬ್ಬ ಕಲಾವಿದನಾದವನು ನೋಡುವ ರೀತಿಗೆ ತುಂಬಾ ವ್ಯತ್ಯಾಸವಿರುವುದನ್ನು ಗಮನಿಸಬಹುದು. ಸಾಮಾನ್ಯ ವ್ಯಕ್ತಿಯಾದವನು ತನ್ನ ವಾತಾವರಣದಲ್ಲಿದ್ದು ಯಾವುದೇ ಪರಿಣಾಮ ಬೀರಬಲ್ಲದು, ಆದರೆ ಅದೇ ಪರಿಸರವನ್ನು(ಸುಂದರ) ಒಬ್ಬ ಕಲಾವಿದ ನಾದವನು ಕಲಾತ್ಮಕ ದೃಷ್ಟಿಯಿಂದ ನೋಡುತ್ತಾನೆ. ಉದಾಹರಣೆ ಒಂದು ಹಳ್ಳಿಯ ವಾತಾವರಣವನ್ನು ನಾವು ತೆಗೆದುಕೊಂಡಾಗ ಅದರ ಕಲ್ಪನೆ ಮೂಡುವುದು ಸಹಜ. ಅಲ್ಲಿಯ ಜನಜೀವನ ರಸ್ತೆಯ ಮಧ್ಯದಲ್ಲಿ ಕಸ ಕಡ್ಡಿಗಳು, ಹಳೆಯ ಮನೆಗಳು, ಪಾಳು ಬಿದ್ದಿರುವ ಮನೆಗಳು ವಿಶಾಲವಾದ ಮರಗಳು, ಹಳೆಯ ದೇಗುಲಗಳು, ಅಲ್ಲಲ್ಲಿ ಬಿದ್ದಿರುವ ಶಾಸನಗಳು, ಬಯಲು ಪ್ರದೇಶ ಈ ಎಲ್ಲಾ ಚಿತ್ರಗಳು ಆ ವಾತಾವರಣವನ್ನು ನೋಡಿದಾಗ ನೆನಪಿಗೆ ಬರುತ್ತದೆ. ಸಾಮಾನ್ಯ ಮನುಷ್ಯನಿಗೆ ಇವುಗಳನ್ನು ನೋಡಿದರೂ ಅವನಿಗೆ ಅವುಗಳಲ್ಲಿನ ಆಸಕ್ತಿಯು ಕಂಡುಕೊಳ್ಳಲಾರರು. ಮೇಲಾಗಿ ಕಲಾವಿದನಾದವನು ಇವುಗಳನ್ನು ಅರಿಯದೇ ಹೋಗುತ್ತಾನೆಯೇ ಒಂದು ಶಾಸನವನ್ನು ನೋಡಿದರೆ ಅದರಿಂದ ತಿಳಿದುಕೊಳ್ಳದೇ ಅದರ ಮೇಲೆ ಬೇರೇನೋ ಪ್ರಯೋಗಗಳನ್ನು ಮಾಡಿ ಅದನ್ನು ವಿರೂಪಗೊಳಿಸುತ್ತಾನೆಯೇ ಇಲ್ಲ ವಿರೂಪಗೊಂಡಿರುವ ಶಾಸನವನ್ನು ನೋಡಿದ ಕಲಾವಿದ ಅದರಲ್ಲಿ ಏನಿದೆ! ಎಂದು ತಿಳಿದುಕೊಳ್ಳಲು ಪ್ರಯತ್ನಿಸುತ್ತಾನೆ. ಇದು ಯಾವ ಕಾಲದ್ದು ಎಂಬ ಹತ್ತು ಹಲವು ಬಗೆಯ ಕಲಾತ್ಮಕ ಮತ್ತು ಸಂಶೋಧನಾತ್ಮಕ ದೃಷ್ಟಿಯಿಂದ ಅವಲೋಕಿಸುತ್ತಾನೆ. ಒಂದು ಹಳೆಯ ಮನೆ ಅಥವಾ ಪಾಳು ಬಿದ್ದ ಮನೆಯನ್ನು ನೋಡಿದ ಕೂಡಲೇ ಅದರ ಆಕಾರ,

೮. ಶ್ರೀಮತಿ ಲಕ್ಷ್ಮಿದೇವಿ ಗವಾಯಿ : ಕಲಾವಿದ ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು ಒಂದು ಅಧ್ಯಯನ, ಪಿ.ಎಚ್.ಡಿ. ಸಂಶೋಧನಾ ಗ್ರಂಥ., ಕ.ವಿ.ವಿ. ಹಂಪಿ. ೨೦೦೨ ಪು.೨೬೫

ಮೈವಳಕೆ ಮತ್ತು ಅದರಲ್ಲಿರುವ ಸುಂದರತೆಯನ್ನು ಕಲಾತ್ಮಕವಾಗಿ ಗಮನಿಸುತ್ತಾನೆ. ಈ ವಿಷಯಗಳನ್ನು ತನ್ನ ಪ್ರಾರಂಭದ ಕಲಾಕ್ರಿಯೆಗಳಲ್ಲಿ ಬಳಸಿಕೊಳ್ಳುತ್ತಾನೆ. ಇವುಗಳಲ್ಲದೇ ಆ ಹಳ್ಳಿಗಳಲ್ಲಿರುವ ಧನಕರುಗಳು, ಗುಡಿಸಲುಗಳು ಈ ವಿಷಯಗಳನ್ನು ಸಹಿತ ಅವನು ಚಿತ್ರಿಸಲು ವಸ್ತುಗಳನ್ನಾಗಿ ಬಳಸಿಕೊಳ್ಳುತ್ತಾನೆ. ಹೀಗೆ ಒಬ್ಬ ಕಲಾವಿದನಿಗೆ ಅವನು ನೆಲೆಸಿರುವ ಪರಿಸರದ ವಾತಾವರಣವೇ ಮೊದಲ ಪ್ರೇರಣೆಯಾಗುತ್ತದೆ. ಈ ವಾತಾವರಣದಲಿಯೇ ಅವನು ಕಲಾತ್ಮಕತೆಯನ್ನು ಕಂಡು ಕಲಾಸೃಷ್ಟಿಯಲ್ಲಿ ತೊಡಗುತ್ತಾನೆ.[೯] ಎಂಬಂತೆ ಕಲಾವಿದ, ಕಲಾವಿಮರ್ಶಕ ಕೃಷ್ಣಸೆಟ್ಟಿಗೆ ತಿರ್ಥಹಳ್ಳಿ ರಥಬೀದಿಯಲ್ಲಿನ ಪರಿಸರದಲ್ಲಿ ಕಂಡ ದೃಶ್ಯಗಳು ತಮಗರಿವಿಲ್ಲದೇ ಪ್ರಭಾವ ಬೀರಿರಬಹುದೆನ್ನುತ್ತಾರೆ.

ಬದುಕಿನಿಂದ ಸಂವೇದನೆಗೊಂಡು ಬದುಕಿಗೆ ಸ್ಫೂರ್ತಿಯನ್ನು ಕೊಡುವ ಚಿತ್ರಕಲೆ. ಬದುಕಿನ ನಿಯಮವನ್ನು ಒಂದು ರೀತಿ ಅನುಸರಿಸುತ್ತದೆ. ಅದರಲ್ಲಿಯೂ ಜೀವನದಲ್ಲಿರುವಂತೆಯೇ ಏಳು–ಬೀಳುಗಳ ಸಂಪ್ರದಾಯಗಳು, ಅವುಗಳ ವಿರುದ್ಧ ಕ್ರಾಂತಿ ಇತ್ಯಾದಿಗಳನ್ನು ಕಾಣುತ್ತೇವೆ. ಜೀವನ ಬದಲಾಯಿಸಿದಂತೆ ಜೀವನದ ಮೌಲ್ಯಗಳು ಬದಲಾದಂತೆ ಕಲೆಯು ಬದಲಾಗುತ್ತಾ ಹೋಗುತ್ತದೆ. ಹಳೆಯದರ ಸ್ಥಾನಕ್ಕೆ ಹೊಸದು ಬಂದು ನಿಲ್ಲುತ್ತದೆ. ಈ ಹೊಸದು ಕೂಡ ಮುಂದೆ ಮತ್ತೊಂದು ಹೊಸ ಸಂಪ್ರದಾಯಕ್ಕೆ ದಾರಿ ಮಾಡಿಕೊಡುತ್ತದೆ. ಈ ಕಾಲಾನುಗುಣ ಅಭಿವ್ಯಕ್ತಿಯೆಯಾಗಿ ಹೊರಬರುತ್ತವೆ. ಈ ಕ್ರಿಯೆಯನ್ನು ಸೃಷ್ಟಿ ಕ್ರಿಯೆಯೆಂದು ಹೇಳಬಹುದು.[೧೦] ಹೀಗಾಗಿ ಕಲಾವಿದನಿಗೆ ಸೃಷ್ಟಿಯೇ ಮೊದಲ ಪ್ರೇರಣಾ ಶಕ್ತಿಯಾಗಿ ಹೊರಹೊಮ್ಮುತ್ತದೆ. ಒಬ್ಬ ಕಲಾವಿದನ ಸುತ್ತಮುತ್ತಲಿನ ಪರಿಸರ ಅಲ್ಲಿಯ ವಾತಾವರಣವೇ ಅವನಿಗೆ ಪ್ರೇರಣೀಭೂತವಾಗುವುದರಲ್ಲಿ ಸಂದೇಹವೇ ಇಲ್ಲ. ನಿಸರ್ಗದಲ್ಲಿ ನಿರಂತರವಾಗಿ ನಡೆಯುವ ಕ್ರಿಯೆ ಅದೊಂದು ರಾಜಕೀಯ, ಧಾರ್ಮಿಕ, ಸಾಮಾಜಿಕ ಬದಲಾವಣೆಗಳಿಗೆ ಪ್ರತಿಕ್ರಿಯೆ ತೋರುವ ಕಾರಣ ಕಲೆಯ ವಿಕಾಸ ಮಾರ್ಗದಲ್ಲಿ ಹಲವೊಂದು ವಿಶಿಷ್ಟ ಲಕ್ಷಣ, ವೈಶಿಷ್ಟ್ಯ, ವೈಚಿತ್ರ್ಯಗಳನ್ನು ಇಂದಿನ ಸಮಕಾಲೀನ ಕಲೆಯಲ್ಲಿ ಗುರುತಿಸಬಹುದಾಗಿದೆ.[೧೧] ಇದಕ್ಕೆ ಪೂರಕವಾಗಿರುವಂತೆ ಮಾನವನ ಚಿತೇತಿಹಾಸದ ಹಿಂದೆ ಅಡಕವಾಗಿರುವ ನಿಯಮಗಳ ಅದರ ಜೊತೆಗೆ ಅವು ಹೇಗೆ ಆತನ ಕಾರ್ಯ ಚಟುವಟಿಕೆಗಳ ಮೇಲೆ ಪ್ರಭಾವವನ್ನು ಬೀರುತ್ತವೆಂಬುದು ಗೊತ್ತಾಗುತ್ತದೆ. ಒಬ್ಬ ಕಲಾವಿದನಾದವನು ಅನ್ಯಶಾಸ್ತ್ರವನ್ನು ತನ್ನ ಚಿಂತನಶೀಲ ಎಳೆಯಾಗಿ ಹೇಗೆ ಪರಿವರ್ತಿಸಿಕೊಳ್ಳುತ್ತಾನೆ. ಮತ್ತು ಈ ಬಗೆಯ ಎಳೆಯ ಸುಪ್ತಸ್ವರದಲ್ಲಿ ಸಂಚರಿಸುತ್ತಲೇ ಸಂವೇದನೆಗೆ ಶಕ್ತಿದಾಯಕವಾಗುತ್ತದೆ. ಮತ್ತು ಸೃಷ್ಟಿಕ್ರಿಯೆ ಎಷ್ಟರ ಮಟ್ಟಿಗೆ ಪುಷ್ಟಿದಾಯಕ

---

೯. ಮಲ್ಲಿಕಾರ್ಜುನ ಸಿ.ಬಾಗೋಡಿ : ಕಲಾವಿದ ಜೆ.ಎಸ್.ಖಂಡೇರಾವ್ ಎಂ.ಫಿಲ್. ಪ್ರಬಂಧ ಕ.ವಿ.ವಿ.ಹಂಪಿ. ಪು.೧೦

೧೦. ಡಾ.ಎಸ್.ಸಿ.ಪಾಟೀಲ (ಸಂ) : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು : ಪು.೪೦

೧೧. ಡಾ.ಎಸ್.ಸಿ.ಪಾಟೀಲ : ವರ್ಣ ಸಂಚಯ, ಪು.೪೭

ವಾದೀತು ಎಂಬುದು ಇಲ್ಲಿ ಮುಖ್ಯವಾಗುತ್ತದೆ. ಚಿತ್ರಕಲೆ, ರೇಖೆಗಳು ಆಕಾರಗಳ ಮೂಲಕ ವರ್ಣಮಯ ರೂಪವನ್ನು ತಾಳುತ್ತಾ ಬಂತು. ವರ್ಣ ಶೋಭೆ ಚಿತ್ರಕಲೆಗೆ ಹೆಚ್ಚಿನ ಆಯಾಮ ಪ್ರಭಾವವನ್ನು ನೀಡುತ್ತದೆ. ನಾವು ಬರೆಯುವ ಎಲ್ಲಾ ಭಾಷೆಗಳ ಅಕ್ಷರಗಳೂ ಸಹ ಚಿತ್ರಕಲೆಯ ಆಕಾರಗಳೇ. ಮುದ್ರಣಾಲಯಗಳಲ್ಲದೇ ಇತ್ತೀಚಿಗೆ ಕಂಪ್ಯೂಟರ್‌ಗಳಲ್ಲಿ ಮಾಡುತ್ತಿರುವ ಚಿತ್ರಗಳು ವಿವಿಧ ಮಾದರಿಯಲ್ಲಿನ ಅಕ್ಷರ ವಿನ್ಯಾಸಗಳು ಸಹ ಚಿತ್ರಕಲೆ, ಚಾಕ್ಷುಕ ಪ್ರಭಾವ ದೃಷ್ಟಿಯೇ ಕೆಲಸ ಮಾಡುತ್ತಿರುವುದನ್ನು ಗಮನಿಸಬಹುದು[೧೨] ಪ್ರತಿಯೊಬ್ಬ ಕಲಾವಿದನ ಪ್ರಭಾವ ಹುಟ್ಟುತ್ತಾ ಹೋಗುತ್ತದೆ ವಿನಃ ಸೃಷಿಯಾಗಲಾರದು.

ಕಲಾವಿದನಾಗಲಿ ಅಥವಾ ಸಾಮಾನ್ಯರಾಗಲಿ ಅವನು ಒಂದು ಸಮಾಜದಲ್ಲಿ ಬೆಳೆಯಬೇಕು. ಕಲಾವಿದನಾದವನು ಯಾವ ಸಮಾಜದಲ್ಲಿ ಬೆಳೆಯುತ್ತಾನೋ ಆ ಸಮಾಜದಿಂದ ಆತ ಸಾಕಷ್ಟು ಪ್ರಭಾವಿತನಾಗಿರುತ್ತಾನೆ. ಹಾಗೂ ತನ್ನ ಕೃತಿಯ ಮೂಲಕ ತನ್ನ ಭಾವನೆಯನ್ನು ವ್ಯಕ್ತಪಡಿಸುತ್ತಾನೆ. ಕಲಾವಿದನ ವಿಚಾರಾತ್ಮಕ ದೃಷ್ಟಿ ಎಷ್ಟು ಬೆಳೆಯುತ್ತೋ ಅಷ್ಟೇ ಗಾಢವಾದ ಚಿತ್ರ ರಚಿಸುತ್ತಾನೆ. ಲಲಿತಕಲೆಗಳಲ್ಲಿ ಒಂದಾದ ಚಿತ್ರಕಲೆ ತತ್‌ಕ್ಷಣಕ್ಕೆ ಕಣ್ಣಿಗೆ ಮುದವನ್ನು ನೀಡುತ್ತಾ ನಮ್ಮ ಭಾವ ಪ್ರಪಂಚವನ್ನು ಸೇರಿಕೊಳ್ಳುತ್ತದೆ. ಅಂತರಂಗದಲ್ಲಿ ಅದರ ಬಾಹ್ಯ ಸೌಂದರ್ಯ ಮತ್ತು ಆಂತರಿಕ ಅರ್ಥಗಳು ಬಹುಕಾಲದವರೆಗೆ ಉಳಿದು ಬಿಡುತ್ತವೆ. ಅಷ್ಟರ ಮಟ್ಟಿಗೆ ಪ್ರಭಾವವನ್ನು ಬೀರುವಂತಹ ಶಕ್ತಿವುಳ್ಳದ್ದಾಗಿದೆ. ಈ ದೃಶ್ಯ ಪ್ರಪಂಚವೆಲ್ಲಾ ಸೃಷ್ಟಿಕರ್ತನ ಒಂದು ಚಿತ್ರಶಾಲೆಯೇ ಆಗಿದ್ದು, ನಾವು ಕಣ್ಣು ತೆರೆದರೆ ಸಾಕು. ಚಿತ್ರವೊಂದು ನಮ್ಮ ಕಣ್ಣಮುಂದೆ ನಿಂತು ಬಿಡುತ್ತದೆ. ಚಿತ್ರಕಲಾವಿದನು ರೇಖೆ ಹಾಗೂ ಬಣ್ಣಗಳಿಂದ ಒಂದು ವಿಶಿಷ್ಟವಾದ ವಸ್ತುವನ್ನು ಅನುಭವವನ್ನು ಮುಂದಿಟ್ಟು ಅಚ್ಚರಿಗೊಳಿಸುವನು. ಹಾಗೆಯೇ ಆನಂದವನ್ನುಂಟುಮಾಡುವನು! ಕೆಲವು ಚಿತ್ರಗಳು ನಮ್ಮನ್ನು ತನ್ಮಯಗೊಳಿಸಿ, ಸಮಾಧಿಸಕ್ತರನ್ನಾಗಿ ಮಾಡುವ ಸಾಮರ್ಥ್ಯವನ್ನು ಹೊಂದಿರುತ್ತವೆ. ಆಗಿನ ಅನುಭವ ಅವರ್ಣನೀಯವೂ ಆಗುತ್ತದೆ. ಹೀಗಾಗಿ ಅವನು ಒಂದು ಸಮಾಜದ ಅಲ್ಲವೆ ಆ ವಾತಾವರಣದ ಮೂಲಕ ಪ್ರಭಾವಿತಗೊಂಡು ಕಲಾಕ್ರಿಯೆಯಲ್ಲಿ ತಲ್ಲೀನನಾಗಿರುತ್ತಾನೆ ಎಂಬುದಕ್ಕೆ ಅನೇಕ ಉದಾಹರಣೆಗಳು ನಮ್ಮ ಕಣ್ಮುಂದೆ ಹಾದು ಹೋಗುತ್ತವೆ. ಅದೇ ರೀತಿ ಚಿ.ಸು.ಕೃಷ್ಣಸೆಟ್ಟಿಯವರದ್ದು ಬಹುಮುಖ ವ್ಯಕ್ತಿತ್ವ, ಅವರ ಕಲಾಕೃತಿಗಳಲ್ಲಿ ವಿವಿಧ ಮಜಲುಗಳು ಮೈಚಾಚಿಕೊಂಡಿರುತ್ತವೆ. ಒಂದಕ್ಕೊಂದು ಸಂಬಂಧ ಎನ್ನುವಂತಹ ದೃಶ್ಯದಲ್ಲಿ ನೋಡುಗನು ತೋರುಬೆರಳನ್ನು ಕೆನ್ನೆಯ ಮೇಲಿಟ್ಟುಕೊಂಡು ಅದಿಮಿಟ್ಟು ನೋಡುವ ದೃಷ್ಟಿ ಆಶ್ಚರ್ಯಕರವೂ ಹೌದು, ಆನಂದವೂ ಹೌದು. ಇಂತಹ ಸಾಕಷ್ಟು ಅಂಶಗಳು ನಡೆಯುವ ದಾರಿಯಲ್ಲಿಯೇ ಲಭ್ಯವಿರುತ್ತವೆ. ಅಂತಹ ಅನುಭವದ,

---

೧೨. ಮಲ್ಲಿಕಾರ್ಜುನ ಸಿ.ಬಾಗೋಡಿ : ಕಲಾವಿದ ಜೆ.ಎಸ್.ಖಂಡೇರಾವ್ ಒಂದು ಅಧ್ಯಯನ ಎಂ.ಫಿಲ್. ಪ್ರಬಂಧ, ಕ.ವಿ.ವಿ.ಹಂಪಿ. ಪು.೧೧೧–೨೦೦೨

ನುರಿತ ದಾರಿಯಲ್ಲಿ ಸಾಗಿದ ಚಿ.ಸು.ಕೃಷ್ಣಸೆಟ್ಟಿಯವರದ್ದು, ಅಲ್ಪ ಭಿನ್ನವೆಂದೆ ಹೇಳಬಹುದು. ಬಣ್ಣ ಬಣ್ಣದ ದುಂಡಾದ ರೇಖೆಗಳ ಮೂಲಕ, ಅಕ್ಷರವನ್ನು ತಿದ್ದುವ, ಬಣ್ಣಗಳ ಪ್ರಪಂಚಕ್ಕೆ ಕಾಲಿಟ್ಟು ಇಂದು ದೇಶ, ವಿದೇಶದ ಪ್ರಸಿದ್ಧ ಕಲೆ, ಕಲಾವಿದರ ಕುರಿತು ತಿಳಿದುಕೊಂಡು ವಿಚಾರ ವಿನಿಮಯ ಮಾಡಿಕೊಳ್ಳುವ ಮಟ್ಟಕ್ಕೆ ಪ್ರಬುದ್ಧತೆಯನ್ನು ಪಡೆದಿರುತ್ತಾರೆ. ಇದು ಅವರಲ್ಲಿನ ಶ್ರದ್ಧೆ ಮತ್ತು ಶಿಸ್ತು ಎಂಬುದು ಮೇಲ್ನೋಟಕ್ಕೆ ಖಾತರಿಯಾಗಿರುವುದು ಅಕ್ಷರಶಃ ಸತ್ಯ. ತುಂಬಾ ಜಾಣ್ಮೆಯ, ನೈಜವಾದ ಕಲೆಯನ್ನು ಆಸ್ವಾದಿಸಿದ ಚಿ.ಸು.ಕೃಷ್ಣಸೆಟ್ಟಿಯವರು ಸಾಕಷ್ಟು ಯುವಕಲಾವಿದರಿಗೆ ಮಾರ್ಗದರ್ಶನ ಮಾಡಿರುತ್ತಾರೆ.

ಕಲಾವಿದ ಚಿ.ಸು.ಕೃಷ್ಣಸೆಟ್ಟಿಯವರು ವಿವಿಧ ಮಾಧ್ಯಮದಲ್ಲಿ ಸೃಜನಾತ್ಮಕ ಚಿತ್ರಗಳನ್ನು ಉತ್ತಮವಾಗಿ ರಚಿಸುತ್ತಾ ಬಂದಿರುತ್ತಾರೆ. ಪೆನ್ನು, ಪೆನ್ಸಿಲ್, ಚಾರ್ಕೊಲೊ, ಪೋಸ್ಟರ್, ಕಲರ್, ಅಕ್ರಾಲಿಕ್ ಮತ್ತು ತೈಲವರ್ಣ ಬಣ್ಣಗಳಿಂದ ಚಿತ್ರಗಳನ್ನು ರಚಿಸಿರುತ್ತಾರೆ. ಅಷ್ಟೇ ಅಲ್ಲದೇ ಟೆರಾಕೊಟ್ಟಾ, ಪೈಬರ್ ಸೆಲ್ಯೂಷನ್, ಪ್ಲಾಸ್ಟರ್ ಆಫ್ ಪ್ಯಾರಿಸ್, ರಬ್ಬರ್ ಮೊಲ್ಡ್, ಮರ, ಮಣ್ಣು ಹೀಗೆ ಅನೇಕ ಶಿಲ್ಪಗಳನ್ನು ರಚಿಸುವತ್ತ ಆಸಕ್ತಿ ತೋರಿ, ಅವುಗಳನ್ನು ರಚಿಸುವುದರ ಮೂಲಕ ಯಶಸ್ಸನ್ನು ಕಂಡಿರುತ್ತಾರೆ. ಇನ್ನು ದೆಹಲಿಯ ಗಡಿಭಾಗದಲ್ಲಿ ಗ್ರಾಫಿಕ್ ವರ್ಕ್‌ನ ತರಬೇತಿ ಪಡೆದು ಅನೇಕ ಗ್ರಾಫಿಕ್‌ಕೃತಿಗಳನ್ನು ರಚಿಸಿರುತ್ತಾರೆ. ಚಿಕ್ಕ ವಯಸ್ಸಿನಲ್ಲೇ ಕೇಂದ್ರ ಲಲಿತಕಲಾ ಅಕಾಡೆಮಿಯಿಂದ ಶಿಷ್ಯವೇತನವನ್ನು ಪಡೆದ ಏಕೈಕ ವ್ಯಕ್ತಿ ಎಂದರೆ ತಪ್ಪಾಗಲಿಕ್ಕಿಲ್ಲ. ಸುಂದರ ಕಲ್ಪನೆಗಳ ಅಂದಕ್ಕೆ ಸುವಾಸನೆಯ ಸುರಿಮಳೆಗೈದ ಸಂದರ್ಭಕ್ಕೆ ತನ್ನ ಬೆವರಹನಿಯೇ ಸಾಥ್ ಕೊಟ್ಟು ಕೈ ಹಿಡಿದಿದೆ ಎನ್ನುವ ಕಲಾವಿದರು ಮುಂದೆ ಕಲಾಕೃತಿಗಳನ್ನು ವಿಮರ್ಶೆ ಮಾಡುವ ಮಹತ್ತರ ಹೆಜ್ಜೆಯನ್ನಿಟ್ಟರು. ಕಲಾವಿದ ಕೃಷ್ಣಸೆಟ್ಟಿಯವರು ಚಿಕ್ಕವರಿದ್ದಾಗಲೇ ಮೂರ್‍ನಾಲ್ಕು ಬಾರಿ ಮನೆಬಿಟ್ಟು ಹೋಗಿರುವ ಸಂದರ್ಭಗಳಲ್ಲಿ ಕಾರಣ ಕೇಳಿದರೆ ದುಡಿಮೆಯೇ ಮುಖ್ಯವಂತೆ, ಶ್ರಮಜೀವಿ ತಂದೆಗೆ ಅಲ್ಪವಾದರೂ ಸಹಾಯ ಮಾಡಬೇಕು ಎಂಬ ಹಠದ ನಿರ್ಧಾರಕ್ಕೆ ಪಟ್ಟಶ್ರಮ ಅಷ್ಟಿಷ್ಟಲ್ಲ, ಒಂದು ಸಂದರ್ಭದಲ್ಲಿ ದಾವಣಗೆರೆಯ ಹದಡಿ ರಸ್ತೆಯಲ್ಲಿದ್ದ ವಿದ್ಯಾರ್ಥಿ ಭವನ ಹೋಟೆಲ್‌ನಲ್ಲಿ ಸರ್ವರ್ ಕೆಲಸಕ್ಕೆ ಸೇರಿಕೊಂಡಿದ್ದು, ಅಲ್ಪ ದಿನಗಳ ಕಾಲ ತೃಪ್ತಿಯಿಂದ ಕೆಲಸ ಮಾಡಿದ್ದೂ ಉಂಟು, ತದನಂತರ ಇವರಿಗೆ ಪರಿಚಯವಿದ್ದ ಸ್ನೇಹಿತರೊಬ್ಬರು ತಮ್ಮ ಕೆಲಸ ಇದಲ್ಲ. ನಿಮ್ಮ ತಂದೆ ತುಂಬಾ ಶ್ರಮಜೀವಿ ಈ ದೃಶ್ಯವನ್ನು ನೋಡಿದರೆ ಕಣ್ಣು ಒದ್ದೆ ಮಾಡಿಕೊಂಡಾರು ಎಂಬಂತಾ ಮಾತುಗಳನ್ನಾಡಿ ಹೋಟೆಲ್ ಬಿಡಿಸಿ ತೀರ್ಥಹಳ್ಳಿಗೆ ಕರೆದುಕೊಂಡು ಹೋಗಿರುತ್ತಾರೆ. ಇದೆಲ್ಲಾ ನಡೆದದ್ದು ಎಸ್.ಎಸ್.ಎಲ್.ಸಿ ನಪಾಸಾಗಿದ್ದ ಸಮಯದಲ್ಲಿ, ನಂತರ ನಿರುವಿಲ್ಲದೇ ತಂದೆ ಹಾಕಿಕೊಂಡಿದ್ದ ಪ್ರಾವಿಜನ್ ಸ್ಟೋರ್ ನಡೆಸಿಕೊಂಡೋಗಿದ್ದು, ಅದು ಚಿಲ್ಲರೆ ವ್ಯಾಪಾರವಾದ್ರೂ ಪಾಠ ಅನ್ನೋದು ಚೆನ್ನಾಗಿ ಕಲಿಸುವಂತಹ ಮಾದರಿ ಕೆಲಸ. ಅಲ್ಲಿ ಅನುಭವ ಹೆಚ್ಚಾಯ್ತು, ಮನೆಯಲ್ಲಿ ಎಸ್.ಎಸ್.ಎಲ್.ಸಿ.

ಪಾಸಾದ ನಂತರ ಪಿ.ಸಿ.ಎಂ.ಬಿ.ಗೆ ಸೇರಿಸಬೇಕೆಂಬ ಮಹಾದಾಸೆ ಇತ್ತಾದರೂ ಚಿ.ಸು.ಕೃಷ್ಣಸೆಟ್ಟಿಯವರಿಗೆ ಮಾತ್ರ ಅದರ ಕಡೆ ಒಲವಿರಲಿಲ್ಲ. ಅಲ್ಲಿಂದ ಬದುಕಿನಲ್ಲಿ ತಿರುವು ಪಡೆದ ಕ್ಷಣಕ್ಕೆ ಆ ದಿನಗಳು ಸಾಕ್ಷಿಯಾದವು.

ನಗರದಲ್ಲಿ ನಡೆಯುತ್ತಿದ್ದ ಹೋರಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ ಆ ಸಂದರ್ಭದಲ್ಲಿ ಅನೇಕ ರಾಜಕೀಯ ಮುಖಂಡರ ಪರಿಚಯವಾಯ್ತು, ನೇರ ನಡೆ, ನುಡಿಯಿಂದ ಗುರುತರನಾಗಿದ್ದ ಚಿ.ಸು.ಕೃಷ್ಣಸೆಟ್ಟಿಯವರು ಎಲ್ಲರ ಬಾಯಲ್ಲಿ ಸರಾಗವಾಗಿ ಹರಿದಾಡುವಂತಹ ಸುಸಂದರ್ಭದಲ್ಲಿ ಚುನಾವಣೆ ಬಂದು ಜಾಹಿರಾತು ಮಾಡುವ ಮೂಲಕ ರೇಖೆ ಮತ್ತು ಚಿತ್ರಗಳೆರಡನ್ನು ಅಪ್ಪಿಕೊಂಡರು. ಮುಂದೆ ಇದೇ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡುವ ಅವಕಾಶ ದೊರೆತು, ದಾವಣಗೆರೆಯ ಚಿತ್ರಕಲಾ ಮಹಾವಿದ್ಯಾಲಯಕ್ಕೆ ಸೇರ್ಪಡೆಗೊಂಡರು. ಅಲ್ಲಿಂದ ಚಿತ್ರಕಲಾಕ್ಷೇತ್ರವನ್ನು ಅಪ್ಪಿಕೊಂಡು ಯುವ ಕಲಾವಿದರಿಗೆ ಪ್ರೋತ್ಸಾಹವನ್ನು ನೀಡುತ್ತಾ ಜಿಲ್ಲಾ ಮಟ್ಟದ ಯುವ ನೇತಾರನಾಗಿ, ಹೋರಾಟ, ಪ್ರತಿಭಟನೆ, ಎಂಬಿತ್ಯಾದಿಗಳನ್ನು ವಿದ್ಯಾರ್ಥಿಗಳ ಸಂಘಟನೆಯ ಮೂಲಕ ಮಾಡಲು ಪ್ರಯತ್ನಿಸಿ ಮೆರೆದಾಡಿದವರು. ಇಲ್ಲಿ ಸಾಮಾಜಿಕ ಕಾಳಜಿಗೆ ತೀರಾ ಹತ್ತಿರವಾಗಿ ಹೋರಾಟ ಮಾಡಿದ ಚಿ.ಸು.ಕೃಷ್ಣಸೆಟ್ಟಿಯವರು ಜೈಲಿಗೂ ಹೋಗಿದ್ದುಂಟು. ನಂತರ ಅಲ್ಲಿ ರಾಷ್ಟ್ರೀಯ ನಾಯಕರನ್ನು ಭೇಟಿ ಮಾಡಿದ ಸುಸಂದರ್ಭಕ್ಕೆ ಎಲ್.ಕೆ.ಅಡ್ವಾನಿಯವರು ಸಾಕ್ಷಿಯಾಗಿದ್ದು, ಜೈಲಲ್ಲಿ ಪ್ರತಿದಿನ ಮುಂಜಾನೆ ಸುಭಾಷಿತ ಬರೆಯುವ ಹವ್ಯಾಸವಿದ್ದ ಕೃಷ್ಣಸೆಟ್ಟಿಯವರಿಗೆ ಅದಕ್ಕೆ ಪೂರಕವಾಗಿ ಚಿತ್ರವನ್ನು ಬರೆದು ನೋಟೀಸ್ ಬೋರ್ಡಿಗೆ ಹಾಕುತ್ತಿದ್ದ ಸಂದರ್ಭದಲ್ಲಿ ಅದನ್ನು ಎಲ್ಲರೂ ವೀಕ್ಷಿಸಿ, ಅವರ ಬೆನ್ನುತಟ್ಟಿ ಸಹಕರಿಸಿದ್ದು ಕೂಡ ಚಿತ್ರಕಲೆಯ ಮೇಲೆ ಪ್ರಭಾವ ಬಿತ್ತೆನ್ನುತ್ತಾರೆ. ವಿಶೇಷವಾಗಿ ಜೈಲಿನಲ್ಲಿ ಎಲ್.ಕೆ.ಅಡ್ವಾಣಿಯವರು ಕರೆದು ಇಲ್ಲಿರುವವರೆಗೂ ನನಗೆ ಚಿತ್ರಕಲಾ ಶಿಕ್ಷಣವನ್ನು ಕಲಿಸಬೇಕು ಎಂಬ ವಿನಮ್ರ ಮನವಿಗೆ ಸ್ಪಂದಿಸಿ ತಮ್ಮಂಥವರು ಕೇಳುವುದೇ ಕಡಿಮೆ ಅಂಥಹದ್ದರಲ್ಲಿ ಇಲ್ಲಾ ಎನ್ನುವುದುಂಟೆ ಎನ್ನುತ್ತಾರೆ ಚಿ.ಸು.ಕೃರವರು, ಪ್ರತಿದಿನ ಬೆಳಿಗ್ಗೆ ಒಂದು ಘಂಟೆಗಳ ಕಾಲ ಚಿತ್ರವನ್ನು ಹೇಗೆ ರಚನೆ ಮಾಡಬೇಕು ಎಂಬಿತ್ಯಾದಿ ವಿಷಯದ ಪೂರ್ಣಾಧ್ಯಯನದ ಪಾಠವನ್ನು ಎಲ್.ಕೆ.ಅಡ್ವಾಣಿಯವರಿಗೆ ಮಾಡಿರುತ್ತಾರೆ. ಅದರಿಂದ ಇನ್ನೂ ಹೆಚ್ಚಿನ ಆಸಕ್ತಿ ಬರುತ್ತದೆ. ಜನರು ಆಶಿಸುತ್ತಿದ್ದ ಆ ಸಮಯಕ್ಕೆ ಚಿ.ಸು.ಕೃಷ್ಣಸೆಟ್ಟಿಯವರು ಅವರ ತಾಳ್ಮೆ, ಆಸಕ್ತಿಯಿಟ್ಟ ನಂಬಿಕೆಯನ್ನು ಉಳಿಸಿ ಬೆಳೆಸಿದೆ ಎಂದರೆ ಪ್ರಾಯಶಃ ತಪ್ಪಾಗಲಿಕ್ಕಿಲ್ಲ.

ಚಿ.ಸು.ಕೃಷ್ಣಸೆಟ್ಟಿಯವರು ಕಲಾಕೃತಿಗಳ ರಚನೆ ಅಂತ ಬಂದಾಗ ಆಧುನಿಕ ನೆಲೆಯಲ್ಲಿ ತಮ್ಮನ್ನು ತಾವು ಹೆಚ್ಚು ಗುರುತಿಸಿಕೊಳ್ಳುತ್ತಿದ್ದಾರೆ. ಪ್ರಾರಂಭಿಕ ದಿನಗಳಲ್ಲಿ ಅಕಾಡೆಮಿಕ್ ಶೈಲಿಯಲ್ಲಿ ಚಿತ್ರಕೃತಿಗಳನ್ನು ರಚಿಸಿದ್ದು, ಬಹುಶಃ ಇವತ್ತಿನ ಆಂತರ್ಯದ ನೋಟಕ್ಕೆ ಕಲಾಕೃತಿಗಳು ಮತ್ತು

ಕಲೆ ಬಲಿಯಾಗದೇ ತನ್ನನ್ನ ತಾನು ಗುರುತಿಸುವ ಮಟ್ಟಕ್ಕಾದರೂ ಕಾಣುವಂತೆ ರಚಿಸುತ್ತಿರುವುದು. ಹಾಗಾಗಿ ಕಲಾವಿದರ ಕಲಾಕೃತಿ ರಚನೆಯ ತಾಂತ್ರಿಕತೆಯಲ್ಲಿ ಕಾಲಕಾಲಕ್ಕೆ ಹಂತಹಂತವಾಗಿ ಬದಲಾವಣೆ ಮತ್ತು ಅನ್ವೇಷಣೆಗಳು ಜೊತೆ ಜೊತೆಯಲ್ಲಿಯೇ ಕಂಡು ಬಂದಿರುತ್ತವೆ. ಅವರ ಕೃತಿಗಳಲ್ಲಿ ವಿಷಯಗಳು ಗೌಣವೆನಿಸಿದರೂ ರಚಿಸುವ ಮನಸ್ಸಿನಲ್ಲಿ ಭಾವನೆಗಳು ತುಂಬಿರುತ್ತವೆ[೧೩] ಎನ್ನುವುದನ್ನು ಸಮರ್ಥಿಸಿಕೊಳ್ಳುವ ಕೃಷ್ಣಸೆಟ್ಟಿ ಕಲಾಕೃತಿಗಳು ನೋಡುಗನ ಕಣ್ಣಿಗೆ ಸರಳವೆನಿಸಿದರೂ ಅನುಸರಿಸಿರುವ ರಚನಾ ಶೈಲಿ, ತಾಂತ್ರಿಕತೆಗಳಿಂದಾಗಿ ವಿಶಿಷ್ಟ ಅನುಭವ ಕೊಡುತ್ತವೆ ಎನ್ನುತ್ತಾರೆ. ಪ್ರಮುಖವಾಗಿ ಇವರ ಕೆಲವು ಕೃತಿಗಳಲ್ಲಿ ವೈವಿಧ್ಯತೆಯಿದ್ದು, ಸನ್ನಿವೇಶ ಹಾಗೂ ಮಾನವ ದೇಹದ ವೈಭವೀಕರಣಗಳನ್ನು ಗೌಣವಾಗಿಸಿರುವುದು ಪ್ರತಿಯೊಂದು ಚಿತ್ರದಲ್ಲಿ ಕಂಡುಬರುತ್ತದೆ. ಇವರ ಕೆಲವು ಕಲಾಕೃತಿಗಳು ಎಕ್ಸ್‌ಪ್ರೆಸ್‌ನಿಸಂ ಶೈಲಿಯಲ್ಲಿ ರಚನೆಯಾದಂತೆ ಕಾಣಬಹುದು.

ಕೃಷ್ಣಸೆಟ್ಟಿ ತಮ್ಮ ಕಲಾಶಿಕ್ಷಣವನ್ನು ದಾವಣಗೆರೆಯಲ್ಲಿ ಪಡೆದು, ಅಲ್ಲಿನ ಆಧುನಿಕ ಕಲಾ ಬದುಕಿನಲ್ಲಿ ದಿಕ್ಕುದೆಸೆಗಳನ್ನು ಕಂಡು ಪರಿತಪಸುತ್ತಿದ್ದ ಸಂದರ್ಭದಲ್ಲಿ ಕಲಾವಿದ, ಕಲಾಶಿಕ್ಷಕ ಎಂ.ಟಿ.ವಿ.ಆಚಾರ್ಯರವರ ಚಿತ್ರಕೃತಿಗಳು ಪ್ರಭಾವ ಭೀರಿದ ಪರಿಣಾಮ ತನ್ನ ಕಲಾಕೃತಿಗಳಲ್ಲಿ ಪರಿವರ್ತನೆಯನ್ನು ಕಂಡುಕೊಂಡರು. ಕೃಷ್ಣಸೆಟ್ಟಿಯವರ ಚಿತ್ರಶೈಲಿಯಲ್ಲಿ ಬೇರೆ ಬೇರೆ ಕಲಾವಿದರ ಮತ್ತು ಕಲಾಪಂಥಗಳ ಅನುಕರಣೆ ಕೆಲವೇ ಕೆಲವು ಸಂದರ್ಭಗಳಲ್ಲಿ ಮಾತ್ರ ಕಾಣಬಹುದಾದರೂ ಅಲ್ಲಿಯೂ ಅವರ ಸ್ವಂತಿಕೆಗೆ ಹೆಚ್ಚು ಮಹತ್ವವನ್ನಿಟ್ಟಿದ್ದಾರೆ. ಕಲಾವಿದರಲ್ಲಿರುವ ಪ್ರತಿಯೊಂದು ಕೃತಿ ರಚನೆಯ ಪ್ರಾರಂಭದಲ್ಲೇ ಅವರದೇ ಆದ ದಿಕ್ಕಿನತ್ತ ಸಾಗುವಂತೆ ಪ್ರೇರೇಪಿಸುತ್ತದೆ. ಇತರರ ಕೃತಿಗಳ ಛಾಯೆಯಿರದೇ ಆಕಾರಗಳಲ್ಲಿ, ರೇಖಾ ವಿನ್ಯಾಸದಲ್ಲಿ, ಬಣ್ಣಲೇಪನದಲ್ಲಿ ಹಾಗೂ ಪ್ರಸ್ತುತ ಪಡಿಸುವಲ್ಲಿ ಭಿನ್ನ ರೀತಿಯ ಸಂಯೋಜನೆಯನ್ನು ಇವರ ಕೃತಿಗಳಲ್ಲಿಯೂ[೧೪] ಕಾಣಬಹುದು.

ವರ್ಣ ಸಂಯೋಜನೆಯಲ್ಲಿ ಪಾರದರ್ಶಕ, ಅಪಾರದರ್ಶಕ ಎರಡೂ ವಿಧಾನಗಳನ್ನು ಇವರು ಕರಗತ ಮಾಡಿಕೊಂಡಿರುವುದು ಇವರ ಕೃತಿಗಳಿಂದ ಕಂಡು ಬರುತ್ತದೆ. ಚಿ.ಸು.ಕೃಷ್ಣಸೆಟ್ಟಿ ಹಳದಿ, ಕಪ್ಪು, ನೀಲಿ ಮತ್ತು ಕೆಂಪು ಬಣ್ಣಗಳನ್ನು ಹೆಚ್ಚಾಗಿ ಬಳಸಿರುತ್ತಾರೆ. ಇದು ಅವರ ಗ್ರಾಮ್ಯ ಸಂಸ್ಕೃತಿಯ ಪ್ರಭಾವವೆಂದು ತೋರುತ್ತದೆ. ಕಲಾಕೃತಿಯನ್ನು ರಚಿಸುವ ಮೊದಲು ಕಲಾವಿದರು ನೆಲದ ಮೇಲೆ ಕ್ಯಾನ್ವಸ್ ಮತ್ತು ಬಣ್ಣದ ಸಾಮಗ್ರಿಗಳನ್ನು ಹರಡಿಕೊಳ್ಳುತ್ತಾರೆ. ಚಿತ್ರಗಳನ್ನು ರಚಿಸಲು ಪ್ರಾರಂಭಿಸಿದರೆ ಮುಗಿಯುವವರೆಗೂ ನಿರಂತರ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಮುಂಜಾನೆಗಿಂತಲೂ

---

೧೩. ಡಾ.ಎಸ್.ಎಸ್.ಗಡ್ಡಿ: ಚಿತ್ರಕಲಾವಿದ ಎಂ.ಬಿ.ಪಾಟೀಲ ಕಲೆ ಮತ್ತು ಬದುಕು, ಪು.೯೩

೧೪. ಚಿ.ಸು.ಕೃಷ್ಣಸೆಟ್ಟಿಯವರ ಸಂದರ್ಶನ, ದಿ.೭.೯.೨೦೧೪, ಬೆಂಗಳೂರು ಅವರ ಮನೆ

ಮಧ್ಯಾಹ್ನದ ವೇಳೆಯನ್ನು ಹೆಚ್ಚು ಕೃತಿ ರಚನೆಗೆ ಸಮಯವನ್ನು ಬಳಸಿಕೊಳ್ಳುತ್ತಾರೆ. ಕೃತಿ ರಚನೆಯಲ್ಲಿ ಚಿ.ಸು.ಕೃಷ್ಣಸೆಟ್ಟಿ ಮೊದಲು ಬಣ್ಣವನ್ನು ಲೇಪಿಸಿ ನಂತರ ವಸ್ತುಗಳನ್ನು ಹುಡುಕಲು ಶುರುಮಾಡುತ್ತಾರೆ. ಹಾಕಿದ ಬಣ್ಣಗಳಲ್ಲೆ ರೇಖೆಗಳನ್ನು ಹುಡುಕಿ ಅದಕ್ಕೊಂದು ಅರ್ಥಗಳನ್ನು ತೋರ್ಪಡಿಸಿದ್ದುಂಟು ಅಂತಹ ಕಲಾಕೃತಿಗಳು ತುಂಬಾ ರಚನೆ ಮಡಿರುವುದು ವಿಶೇಷವಾಗಿರುತ್ತದೆ. ಕೃತಿಯೊಂದಕ್ಕೆ ಇಷ್ಟೇ ಕಾಲ ಮೀಸಲೆಂಬುದಿಲ್ಲ. ಒಮ್ಮೊಮ್ಮೆ ಕೃತಿಗಳನ್ನು ಅರ್ಧ ಗಂಟೆಯಲ್ಲೂ ಮಾಡಬಹುದು. ಒಂದೇ ದಿನದಲ್ಲಿ ಅನೇಕ ಕೃತಿಗಳನ್ನು ಮಾಡಬಹುದು ಅಥವಾ ಹತ್ತಾರು ದಿನಗಳವರೆಗೂ ಸಮಯ ತೆಗೆದುಕೊಳ್ಳಬಹುದು. ಒಟ್ಟಾರೆ ಆ ಕ್ಷಣದ ಕಲಾವಿದನ ಭಾವನೆಗಳನ್ನು ಆಧರಿಸಿ ಕೆಲಸ ಮಾಡಲಾಗುತ್ತದೆ ಎನ್ನುತ್ತಾರೆ ಚಿ.ಸು.ಕೃಷ್ಣಸೆಟ್ಟಿಯವರು.

ಕೃಷ್ಣಸೆಟ್ಟಿಯವರ ವ್ಯಕ್ತಿಚಿತ್ರ ರಚನೆ ಹಾಗೂ ಭಾವಚಿತ್ರ ರಚನಾ ವಿಧಾನಗಳು ವೈವಿಧ್ಯಮಯ ಪ್ರಭಾವಗಳಿಗೆ ಒಳಗಾಗಿರುತ್ತವೆ. ಕಲಿಯುವ ಹಂತದಲ್ಲಿರುವಾಗ ನೈಜವಾದ ಭಾವಚಿತ್ರ ರಚಿಸುವಾಗ ಕುಳಿತಿರುವ ಮಾಡಲ್‌ನ ಆಕಾರ, ಅವನ/ಅವಳ ಮುಖದ ಲಕ್ಷಣ, ಕಿವಿ, ಕಣ್ಣು, ಬಾಯಿ, ತುಟಿ, ಕೂದಲು, ದೇಹದ ರಚನೆ ಹೀಗೆ ಪ್ರತಿಯೊಂದನ್ನು ನೋಡಿ ಪ್ರಮಾಣ ಬದ್ಧವಾಗಿ ಚಿತ್ರಿಸಿಕೊಂಡು ನಂತರ ವರ್ಣ ಲೇಪನದಲ್ಲಿ ನೆರಳು ಬೆಳಕನ್ನು ಚಿತ್ರಿಸಬೇಕು. ಈ ಸಂದರ್ಭದಲ್ಲಿ ರೂಪದರ್ಶಿಯ ಹೋಲಿಕೆ, ಭಾವನೆಗಳು ಮಹತ್ವದ್ದಾಗಿವೆ ಅಂತಹ ಪ್ರಭಾವಗಳು ಅವರ ಕಲಾಕೃತಿಗಳಲ್ಲಿ ಕಾಲಕಾಲಕ್ಕೆ ಅನಾವರಣಗೊಂಡಿರುವುದು ಕಂಡುಬರುತ್ತದೆ. ಅದೇ ರೀತಿ ಅವರ ಒಟ್ಟು ಚಿತ್ರಕಲಾ ಬದುಕು ಹತ್ತು ಹಲವು ಪ್ರಭಾವಗಳಿಗೆ ಒಳಗಾಗಿದ್ದು ತಿಳಿದು ಬರುತ್ತದೆ.

ಕಲಾವಿದರು ಹೇಳುವಂತೆ ಕಲಾ ಶಾಲೆಯಲ್ಲಿ ಕಲಿಯುತ್ತಿದ್ದ ಅಲ್ಲಿನ ಕಿರಿಯ ಕಲಾವಿದರು, ಕಲಾ ವಿದ್ಯಾರ್ಥಿಗಳಿಂದಲೂ ಪ್ರಭಾವ ಆಗಿದ್ದುಂಟು. ಎನ್ನುವ ಕಲಾವಿದರು ತಮ್ಮ ಕಲಾ ಪ್ರದರ್ಶನ ಮಾಡಿದ ಪ್ರತಿ ಬಾರಿಯೂ ಹೊಸತನ್ನು ಹುಡುಕುವ ಪ್ರಯತ್ನ ಮಾಡುತ್ತಿದ್ದರಂತೆ. ಒಂದು ಪ್ರದರ್ಶನದಲ್ಲಿ ನಡೆದಿರಬಹುದಾದ ದೋಷಗಳನ್ನು ಮುಂದಿನ ಪ್ರದರ್ಶನದಲ್ಲಿ ಸಾಧ್ಯವಾದಷ್ಟು ತಿದ್ದಿಕೊಳ್ಳಲು ಪ್ರಯತ್ನಿಸುತ್ತಿದ್ದರಲ್ಲದೆ ಮತ್ತೊಬ್ಬರ ಅಭಿಪ್ರಾಯದ ಅವಶ್ಯಕತೆ ಕಲಾವಿದರಿಗಿಲ್ಲ ಅಂದುಕೊಂಡರವರಾದರೂ ಕೊನೆಯಲ್ಲಿ ತಾನು ಮಾಡಿದ್ದೆ ಸರಿ ಎನ್ನುವ ವಾದವೂ ಅವರಲ್ಲಿತ್ತು, ಯಾವುದೇ ಕಲಾಕೃತಿ ರಚಿಸಿದರೂ ಸಮರ್ಥಿಸಿಕೊಳ್ಳುವ ಜಾಣ್ಮೆ ಚಿ.ಸು.ಕೃಷ್ಣಸೆಟ್ಟಿಯವರಲ್ಲಿತ್ತು. ಕಲಾವಿಮರ್ಶೆಯಲ್ಲಿ ಬಂದಂತಹ ಸಲಹೆ ಸೂಚನೆಗಳನ್ನು ಅನುಸರಿಸಿ ಕೃತಿ ರಚಿಸುವ ಪ್ರಯತ್ನ ಮಾಡುತ್ತಿದ್ದರು. ಇದರಿಂದಾಗಿಯೇ ಅವರೊಬ್ಬ ಕಲಾವಿದನಾಗಿ ಬೆಳೆಯಲು ಸಾಧ್ಯವಾಯಿತು. ಹತ್ತು ಹಲವು ರೀತಿಯ ಪ್ರಭಾವಗಳಿಗೆ ಕೃಷ್ಣಸೆಟ್ಟಿ ಒಳಗಾದರೂ ಆ ಪ್ರಭಾವವನ್ನು ತಮ್ಮ ಸ್ವಂತಿಕೆಯಲ್ಲಿ ಪರಿವರ್ತಿಸುವ ಸೃಜನಶೀಲತೆ ಕೃಷ್ಣಸೆಟ್ಟರಿಗಿದೆ. ಕರ್ನಾಟಕ ಕಲಾಕ್ಷೇತ್ರದಲ್ಲಿ ಪ್ರಖ್ಯಾತರಾದ

ಪಿ.ಆರ್.ತಿಪ್ಪೇಸ್ವಾಮಿ, ಖಂಡೇರಾವ್, ಆರ್. ಎಂ. ಹಡಪದ, ಅಕ್ಕಿ, ಅಂದಾನಿ, ಕಾಚಾಪೂರ್, ವಿಜಯಸಿಂಧೂರ್, ಹಿರೇಗೌಡರ್, ಎಂ.ಟಿ.ವಿ.ಆಚಾರ್ಯ, ವಾಸುದೇವನ್, ಯುಸಫ್ ಅರಕ್ಕಲ್ ಪೀಟರ್ ಲೂಯಿಸ್, ವಿ.ಟಿ.ಕಾಳೆ, ಕೆ.ಜಿ.ಸುಬ್ರಮಣ್ಯಂ, ಮುಂತಾದವರ ಒಡನಾಟ, ಕಲಾ ಬದುಕಿನಲ್ಲಿ ಸ್ನೇಹಮಯ ಪ್ರಭಾವ ಆಗಿದೆ ಎನ್ನುತ್ತಾರೆ ಚಿ.ಸು.ಕೃಷ್ಣಸೆಟ್ಟಿ.

ಸಂದಿಗ್ಧ ಪರಿಸ್ಥಿತಿಯಲ್ಲಿ ಏಕಲವ್ಯನಂತೆ ಚಿತ್ರಕಲಾಕ್ಷೇತ್ರವನ್ನು ಆವರಿಸಿದ ಚಿ.ಸು.ಕೃಷ್ಣಸೆಟ್ಟಿ ಬರೀ ಚಿತ್ರ, ಶಿಲ್ಪ, ಗ್ರಾಫಿಕ್‌ಗಳನ್ನಷ್ಟೇ ರಚಿಸಲಿಲ್ಲ ಬದಲಾಗಿ ಸರಿಸುಮಾರು ಎರಡು ದಶಕಗಳ ಕಾಲ ಬರವಣಿಗೆ ಅದು ಕಲಾಬರಹಕ್ಕೆ ಮಾನ್ಯತೆ ಕೊಟ್ಟವರು, ಎಂಬತ್ತರ ದಶಕದಲ್ಲಿ ಕಲಾವಿದರನ್ನು ಮಾಧ್ಯಮದಲ್ಲಿ ಗುರುತಿಸುವವರೇ ತುಂಬಾ ವಿರಳವಿದ್ದಂತಹ ಸಮಯದಲ್ಲಿ ೧೯೮೬ರಿಂದ ನಿರಂತರವಾಗಿ ಕಲಾವಿದರ ಕಲಾಕೃತಿಗಳ ಕುರಿತು ವಿಮರ್ಶೆ ಬರೆಯುವುದರ ಮೂಲಕ ರಾಜ್ಯದಲ್ಲಿ ಯಶಸ್ವಿ ಕಲಾ ಬರಹಗಾರರಾಗಿ, ಕಲಾವಿಮರ್ಶಕರಾಗಿ ಗುರುತಿಸಿಕೊಂಡಿರುತ್ತಾರೆ. ಕಲಾಕೃತಿಗೆ ಒಂದು ರೀತಿಯ ಪ್ರಭಾವವಾದರೆ, ಬರವಣಿಗೆಗೆ ಒಂದು ಪ್ರಭಾವವಿದ್ದೆ ಇದೆ. ಅದು ಚಿಕ್ಕವನಿರುವಾಗಲೇ ಕೃಷ್ಣಸೆಟ್ಟಿ ಮಯೂರದಲ್ಲಿ ಬರುವ ಪತ್ತೆದಾರಿ ಕಥೆಗಳನ್ನು ಓದುತ್ತಿದ್ದವರು. ಜೊತೆಗೆ ಕಥೆ, ಕವನ ಬರೆದು ಶಿಕ್ಷಕರಿಂದ ಮತ್ತು ಮಿತ್ರರಿಂದ ಸೈಎನಿಸಿಕೊಂಡವರು. ಅದು ತಿರ್ಥಹಳ್ಳಿ ಸಾಹಿತ್ಯ ಲೋಕವನ್ನು ಸೃಷ್ಟಿಸಿದ ಪ್ರದೇಶ. ನಾಡಿನ ಪ್ರಖ್ಯಾತ ಸಾಹಿತಿಗಳ ತವರೂರು ಇಂತಹ ಪ್ರದೇಶದಲ್ಲಿ ಹುಟ್ಟಿ ಸಾಹಿತಿಗಳಾಗದಿದ್ದರೆಗೆ ಎಂಬ ಆತಂಕ ಬಂದಿದ್ದುಂಟು. ಅದೇ ರೀತಿಯಾಗಿ ದೂರಶಿಕ್ಷಣದ ಮೂಲಕ ಕನ್ನಡದಲ್ಲಿ ಪದವಿ ಪಡೆದು ದಿಗ್ಗಜರಾದ ಕುವೆಂಪು, ದ.ರಾ.ಬೇಂದ್ರೆ, ಮುಂತಾದವರ ಕಥೆ, ಕಾದಂಬರಿಗಳ ಪ್ರಭಾವ ಸಾಹಿತ್ಯಾಸಕ್ತಿಗೆ ಮೆರಗನ್ನು ನೀಡಿತೆನ್ನಬಹುದು. ಇನ್ನು ಬೆಂಗಳೂರಿಗೆ ಬಂದ ತಕ್ಷಣ ಸ್ನೇಹಿತರಾಗಿ ಡಿ.ಆರ್.ನಾಗರಾಜ್, ಮಲ್ಲೇಪುರಂ ವೆಂಕಟೇಶ್. ಆ.ಲ.ನರಸಿಂಹನ್, ಮರಿಶಾಮಾಚಾರ್, ಬೋರಲಿಂಗಯ್ಯ, ಎಚ್.ಎ.ಅನಿಲ್‌ಕುಮಾರ್, ಕೆ.ವಿ. ಸುಬ್ರಮಣ್ಯಂ ಮುಂತಾದವರ ಪರಿಚಯದೊಂದಿಗೆ ಸಾಹಿತ್ಯಲೋಕ ವಿಸ್ತರಿಸಿ ಕಲಾಸಾಹಿತ್ಯದ ಕಡೆ ಆಸಕ್ತಿ ಬಂದಿತು ಎಂಬುದನ್ನು ತಿಳಿಸುತ್ತಾರೆ ಚಿ.ಸು.ಕೃಷ್ಣಸೆಟ್ಟಿ.

ಈ ಅಧ್ಯಾಯದಲ್ಲಿ ಬಹುಮುಖ್ಯವಾಗಿ ಪ್ರಭಾವ, ಪ್ರೇರಣೆ ಮತ್ತು ಶೈಲಿಗಳಿಗೆ ಸಂಬಂಧಿಸಿದಂತೆ ವಿಷಯವನ್ನು ಕಟ್ಟಿಕೊಡಲಾಗಿದ್ದು, ಕಲಾಕೃತಿ ರಚಿಸುವುದರಲ್ಲಿನ ಮಹತ್ವ ಮತ್ತು ಬೆಳವಣಿಗೆ, ಹಾಗೆಯೇ ಕಲಾಬರವಣಿಗೆ ಬೆಳೆದು ಬಂದ ಬಗೆಯನ್ನು ಸರಳವಾಗಿ ಹೇಳಲಾಗಿದೆಯಾದರೂ ಅದರಲ್ಲಿ ಕಂಡುಕೊಂಡ ಕೆಲವು ಘಟನೆಗಳನ್ನು ಇತರೆ ಯುವಕಲಾವಿದರು ಗಮನಿಸಲೇಬೇಕು. ಮತ್ತು ಗಂಭೀರವಾಗಿ ಯೋಚಿಸಿ ಹೆಜ್ಜೆಗಳನ್ನಿಟ್ಟರೆ ಖಂಡಿತಾ ಮುಂದೊಂದುದಿನ ತಾನಂದುಕೊಂಡಂತೆ ಸುಲಭವಾಗಿ ಗುರಿಮುಟ್ಟಬಲ್ಲ ಎಲ್ಲಾ ಲಕ್ಷಣಗಳುಳ್ಳ ವ್ಯಕ್ತಿಗಳಾಗಿ ಬೆಳೆಯಬಲ್ಲರು.

ಅಧ್ಯಾಯ: ಏಳು

# ಸಮಾರೋಪ

"the happiest person is one who has brought happiness to everyone" ಈ ಮಾತನ್ನು ಪ್ರಸಿದ್ದ ಯುಗಪುರುಷ ಕಾರ್ಲ್‌ಮಾರ್ಕ್ಸ್ ಹೇಳಿರುತ್ತಾರೆ. ಇದರ ವ್ಯಾಕ್ಯಾರ್ಥದ ಧ್ಯೇಯವು ನಮ್ಮ ಭಾರತೀಯರಿಗೆ ಹೊಸದಲ್ಲ. ಆದರೆ ಒಬ್ಬ ಮಹಾಪುರುಷನು ಅದನ್ನು ಪುನರುಚ್ಚರಿಸಿದಾಗ ಅದರ ಮೌಲ್ಯವು ಇಮ್ಮಡಿಸುತ್ತದೆ. ಈ ಧ್ಯೇಯದ ಪ್ರಸ್ತುತ ಅವಶ್ಯಕತೆಯ ಅರಿವನ್ನುಂಟುಮಾಡುತ್ತದೆ. ಇದು ಪ್ರತಿಯೊಬ್ಬ ಪ್ರಜೆಗೂ ಮಾತ್ರವಲ್ಲದೇ ಕಲಾವಿದರಿಗೂ ವಿಶೇಷವಾಗಿ ಅನ್ವಯಿಸುತ್ತದೆ. ಯಾವ ವೃತ್ತಿಯವರಾದರೂ ಜೀವನದ ನಿಜ ದೃಷ್ಟಿಯೇನೆಂಬುದನ್ನು ತಿಳಿಯಲು ಮಾರ್ಕ್ಸ್‌ನ ಈ ಮಾತನ್ನು ನೆನಪಿಡಬೇಕು.

ಅದೇರೀತಿ ಚಿತ್ರಕಲಾವಿದರಾದವರಿಗೆ ಚಿತ್ರಕಲೆಯೇ ಜೀವನಧರ್ಮ. ಅದೇ ಅವರ ಭಾಷೆಯೂ ಸಹ. ಸಾಹಿತ್ಯಕಲೆಗಿಂತ ಹೆಚ್ಚಾಗಿ ವಿಶಾಲ ಜನತೆಯ ಮೇಲೆ ಪ್ರಗಲ್ಪ ಪ್ರಭಾವ ಬೀರಬಲ್ಲ ಕಲೆಯು ಚಿತ್ರಕಲೆಯೇ ಆಗಿದ್ದರೂ ಇಂದಿನ ನಮ್ಮ ಪ್ರಜಾಪ್ರಬುತ್ವದಲ್ಲಿ ಇದಕ್ಕೆ ಎಷ್ಟು ಜನಪ್ರಿಯ ಸ್ಥಾನಮಾನ, ಪ್ರಾಶಸ್ತ್ಯಗಳು ದೊರಕಬೇಕೋ ಅಷ್ಟು ದೊರಕದೇ ಇರಲು ಅನೇಕ ಕಾರಣಗಳಿವೆ.

ಪ್ರಜಾ ಸರ್ಕಾರದ ನೀತಿಯಂತೆ ಪ್ರಜೆಗಳು ನಿರೀಕ್ಷಿಸುವುದು ಒಂದು ವರ್ಗದವರ ಪ್ರಭುತ್ವವನ್ನಲ್ಲ ಅಥವಾ ಒಂದು ವೃತ್ತಿ ಅಥವಾ ಗುಂಪಿನವರ ಪ್ರಗತಿ ಅಥವಾ ಉತ್ಕರ್ಷೆಯನ್ನಲ್ಲ ಎಂಬ ಚಿತ್ರಕಲಾವಿದ ಎಂ.ಟಿ.ವಿ.ಆಚಾರ್ಯರವರ ಮಾತಿನಂತೆ ಕಲೆ ಎಂಬುದು ಒಮ್ಮನಸ್ಸಿನಿಂದ ಬಂದದ್ದಾಗಬೇಕು ಅದವಾಗಲೇ ಸಂಪೂರ್ಣ ಸ್ಥಾನಮಾನಗಳು ಲಭಿಸುತ್ತವೆ ಎಂಬಂತೆ ಇಲ್ಲಿ ಚಿತ್ರಕಲಾವಿದ ಚಿ.ಸು.ಕೃಷ್ಣಸೆಟ್ಟಿ ಕಲಾವಿದನಾಗಿ ಗುರುತಿಸಿಕೊಂಡಿರುವುದಕ್ಕೆ ಇಂತಹ ಬೆರಳಣಿಕೆಯ ಕಲಾವಿದರ ಪ್ರಭಾವವೂ ಆಗಿರಬಹುದು.

ನಮ್ಮ ಕಲಾವಿದರು ನಾಡಿನ ಸಂಸ್ಕೃತಿಯ ಒಂದು ಮುಖವನ್ನು ಪ್ರತಿಬಿಂಬಿಸುತ್ತಾರೆಂದರೆ ತಪ್ಪಿಲ್ಲ. ಸಾಹಿತಿಗಳಂತೆ ಕಲಾವಿದರೂ ಸಹ ಇಂದಿನ ಸಮಾಜದ ಒಂದು ಅವಿಭಾಜ್ಯ

ಅಂಗವೇಹೊರತು, ಬೇರೆ ಪ್ರಪಂಚದ ನಿವಾಸಿಗಳಂತೆ ಇರಲು ಸಾಧ್ಯವಿಲ್ಲ. ಮುಖ್ಯವಾಗಿ ಚಿ.ಸು.ಕೃಷ್ಣಸೆಟ್ಟಿಯವರ ಜೀವನದ ಕುರಿತಾಗಿರುವ ಪ್ರಸ್ತುತ ಅಧ್ಯಯನದಲ್ಲಿ ಮೇಲೆ ಹೇಳಲಾಗಿರುವ ವೈವಿಧ್ಯ ದೃಷ್ಟಿಕೋನಗಳಿಂದಲೇ ವಿಷಯವನ್ನು ಚರ್ಚೆಗೊಳಪಡಿಸಲಾಗಿದೆ. ಚಿ.ಸು.ಕೃಷ್ಣಸೆಟ್ಟಿ ತಮ್ಮ ಕಲೆ ಮತ್ತು ಸಾಹಿತ್ಯದ ಬದುಕಿನುದ್ದಕ್ಕೂ ವಿವಿಧ ಆಯಾಮದಲ್ಲಿ ಚಿತ್ರಕೃತಿಗಳನ್ನು ರಚಿಸುತ್ತಾ ಬಂದಿದ್ದಾರೆ. ಚಿತ್ರಶೈಲಿ, ಮಾಧ್ಯಮ, ರಚನಾ ವಿಧಾನ, ಪರಿಕರಗಳ ಬಳಕೆ, ವಿಷಯದ ಆಯ್ಕೆ, ಸಂಯೋಜನೆ ಹಾಗೂ ನಿರೂಪಣಾ ಶೈಲಿ ಮತ್ತು ಕಲಾಸಾಹಿತ್ಯ ವಿಮರ್ಶೆ ಹೀಗೆ ಎಲ್ಲ ವಿಭಾಗ ಗಳಲ್ಲಿಯೂ ಕಾಲದಿಂದ ಕಾಲಕ್ಕೆ ಬದಲಾವಣೆಗಳು ಕಂಡು ಬಂದಿರುತ್ತವೆ.

ಬಾಲ್ಯದ ಅನುಭವಗಳು, ಪ್ರೌಢಾವಸ್ಥೆಯ ನಿರ್ಧಾರಗಳು, ಇಳಿವಯಸ್ಸಿನ ಪಕ್ವತೆಗಳು, ಹೋರಾಟ ಮತ್ತು ರಾಜಕೀಯದಲ್ಲಿನ ತೊಳಲಾಟದ ಹಿನ್ನೆಲೆಯಲ್ಲಾದ ನೋಟಗಳು, ಹಿಂದಿನ ಜೀವನ ಪದ್ಧತಿ, ಪ್ರಸ್ತುತ ಜೀವನ ಪದ್ಧತಿಯಲ್ಲಿನ ಸಾಮಾಜಿಕ ವ್ಯವಸ್ಥೆ, ಮಾನವ ಸಂಬಂಧಗಳು, ಪರಿಸರ ಕಾಳಜಿ, ಸಾಮಾಜಿಕ ಮೌಲ್ಯಗಳನ್ನು ತಮ್ಮ ಕೃತಿಗಳಲ್ಲಿ ಹೆಚ್ಚಾಗಿ ಬಿಂಬಿಸಿರುವ ಚಿ.ಸು.ಕೃಷ್ಣಸೆಟ್ಟಿ ಇನ್ನುಳಿದ ಸಂಗತಿಗಳಿಗೂ ಪ್ರಾಸಂಗಿಕವಾಗಿ ಆಧ್ಯತೆ ನೀಡಿದ್ದಾರೆ. ಕಲಾವಿದ ತನ್ನ ಕಲಾ ಬದುಕನ್ನು ಅವಲೋಕಿಸಿದಾಗ ಕುತೂಹಲಕರವಾದ ಹಲವಾರು ಸಂಗತಿಗಳು ಕಣ್ಮುಂದೆ ಬರುವುದು ಸಹಜವೂ ಕೂಡ. ಕೇವಲ ಒಬ್ಬ ಕಲಾವಿದರಾಗಿ ಮಾತ್ರವಲ್ಲದೆ, ಸಾಮಾಜಿಕ ಜವಾಬ್ದಾರಿ ಹೊಂದಿದ ಆದರ್ಶ ವ್ಯಕ್ತಿಯಾಗಿಯೂ ಗುರುತಿಸಿಕೊಂಡವರಾಗಿದ್ದಾರೆ. ಜೊತೆಗೆ ಮಾತುಗಾರನಾಗಿ, ಹೋರಾಟದ ಮನೋಸ್ಥೈರ್ಯವನ್ನು ಹೊಂದಿದ, ಸಹಾಯ ಹಸ್ತವನ್ನು ಸದಾ ಚಾಚುವಂತಹ ಗುಣವುಳ್ಳವನಾಗಿ, ನೇರ ನಡೆ,ನುಡಿಯುಳ್ಳ ವ್ಯಕ್ತಿಯಾಗಿ ಸುಮಾರು ಎರಡುವರೇ ದಶಕಗಳ ಕಾಲ ಸಮಾಜದಲ್ಲಿನ ವಿವಿಧ ಕಲಾವಿದರ ಕೃತಿಗಳನ್ನು ನೋಡಿ ಅವುಗಳನ್ನು ಮಾಧ್ಯಮದ ಮೂಲಕ ಪರಿಚಯಿಸುವ ಕೆಲಸ ಮಾಡಿದ ಶ್ರೇಯಸ್ಸು ಕೃಷ್ಣಸೆಟ್ಟಿಯವರದ್ದು. ಇಂತಹ ಎಲ್ಲ ಸಂಗತಿಗಳನ್ನು ತಿಳಿದುಕೊಳ್ಳುವ ಉದ್ದೇಶ ಹೊಂದಿರುವ ಈ ಅಧ್ಯಯನದಲ್ಲಿ ಒಟ್ಟು ಏಳು ಅಧ್ಯಾಯಗಳಲ್ಲಿ ವಿಷಯ ನಿರೂಪಣೆಗೊಂಡಿದೆ. ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸಲ್ಪಟ್ಟ ಸಂಗತಿಗಳ ಸರಳ ನೋಟ ಕೆಳಗಿನಂತಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆಗಳ ಕುರಿತು ಹೇಳಲಾಗಿದೆ. ಪ್ರಾರಂಭದಲ್ಲಿ ಕಲೆ, ಚಿತ್ರಕಲೆ, ಸಾಹಿತ್ಯ, ಕಲಾಸಾಹಿತ್ಯ, ಚಿತ್ರವಿನ್ಯಾಸ ಇವುಗಳ ಬಗ್ಗೆ ವಿವರಣೆಯನ್ನು ನೀಡಿ, ಚಿತ್ರಕಲಾವಿದರ ಕುರಿತು ಹೇಳಲಾಗಿದೆ. ಕಲೆ, ಕಲಾವಿದ, ಕಲಾಕೃತಿ, ಕಲಾಸಾಹಿತ್ಯ ಸಹೃದಯ ಇವುಗಳ ಸಹ ಸಂಬಂಧಗಳ ವಿಶ್ಲೇಷಣೆ ಮಾಡುತ್ತ ಕಲಾವಿದನ ಗಮನಾರ್ಹ ಪಾತ್ರದ ಬಗ್ಗೆ ತಿಳಿಸಲಾಗಿದೆ. ಜೊತೆಗೆ ಕಲಾವಿದನ ಸಾಮಾಜಿಕ

ಜವಾಬ್ದಾರಿ, ಅಭಿವ್ಯಕ್ತಿ ಸ್ವಾತಂತ್ರ್ಯ ಇವುಗಳೆಲ್ಲವನ್ನು ಸ್ಥೂಲವಾಗಿ ಬಿಂಬಿಸುವುದರ ಜೊತೆಗ್ಲೆ ಚಿ.ಸು.ಕೃಷ್ಣಸೆಟ್ಟಿಯವರ ಕಲಾಬದುಕನ್ನು ಕುರಿತು ಪ್ರಸ್ತುತ ಅಧ್ಯಯನವನ್ನು ಏಕೆ ಕೈಗೆತ್ತಿಕೊಳ್ಳಲಾಗಿದೆ ಎಂಬುದನ್ನು ಸಹ ವಿವರಿಸಿದೆ. ಕಲೆ, ಕಲಾಪ್ರಕಾರಗಳು ಮತ್ತು ಕಲಾವಿದರ ಕುರಿತಾಗಿರುವ ಅಧ್ಯಯನಗಳಿಗೆ ಇರುವ ಮಹತ್ವ, ಇಂತಹ ಅಧ್ಯಯನಗಳನ್ನು ಯಾವ ಕಾರಣಗಳಿಗಾಗಿ ತುರ್ತಾಗಿ ಕೈಗೊಳ್ಳಬೇಕಿದೆ ಎಂಬುದನ್ನು ವಿವೇಚಿಸಲಾಗಿದೆ. ಇದಲ್ಲದೆ ಚಿ.ಸು.ಕೃಷ್ಣಸೆಟ್ಟಿ ಕಲಾಕ್ಷೇತ್ರಕ್ಕೆ ನಾಡಿನ ಸಂಸ್ಕೃತಿಗೆ ನೀಡಿದ ಕೊಡುಗೆಗಳನ್ನು ಬಿಂಬಿಸುತ್ತ ಅವುಗಳ ಬಗ್ಗೆ ಅಧ್ಯಯನ ಮಾಡಬೇಕಾಗಿರುವ ಮಹತ್ವವನ್ನು ಹೇಳಲಾಗಿದೆ. ಅಂದರೆ ಚಿ.ಸು.ಕೃಷ್ಣಸೆಟ್ಟಿಯವರ ಕುರಿತಾಗಿರುವ ಈ ಅಧ್ಯಯನವು ಕರ್ನಾಟಕದ ಕಲಾಕ್ಷೇತ್ರಕ್ಕೆ, ಸಾಂಸ್ಕೃತಿಕ ಲೋಕಕ್ಕೆ, ಸಮಾಜಕ್ಕೆ ಯಾವ ರೀತಿಯಲ್ಲಿ ಪ್ರಯೋಜನಕಾರಿ ಯಾಗಿದೆ ಎಂಬುದನ್ನು ಹೇಳುತ್ತ ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶಗಳನ್ನು ತಿಳಿಸಲಾಗಿದೆ. ಇದಲ್ಲದೆ ಈ ಅಧ್ಯಯನದ ಸ್ವರೂಪ, ಅದರ ವ್ಯಾಪ್ತಿ ಕುರಿತು ಕೂಡ ಚರ್ಚಿಸಲಾಗಿದೆ. ಕೊನೆಗೆ ಪ್ರಸ್ತುತ ಅಧ್ಯಯನದಲ್ಲಿ ಅನುಸರಿಸಲಾದ ವೈಧಾನಿಕತೆ, ಕ್ಷೇತ್ರಕಾರ್ಯ, ಆಕರ ಸಾಮಗ್ರಿಗಳ ಬಗ್ಗೆ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಚಿ.ಸು.ಕೃಷ್ಣಸೆಟ್ಟಿ ಬಾಲ್ಯ ಪರಿಸರ, ವಿದ್ಯಾಭ್ಯಾಸ ಕಲಾಶಿಕ್ಷಣ ಮತ್ತು ವೃತ್ತಿ ಬದುಕುಗಳ ಬಗ್ಗೆ ವಿವೇಚಿಸಲಾಗಿದೆ. ಇವರು ೧೭ ಆಗಸ್ಟ್ ೧೯೫೦ರಲ್ಲಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಎಂಬ ಗ್ರಾಮದಲ್ಲಿ ಜನಿಸಿದರು. ಬಾಲ್ಯಾವಸ್ಥೆಯಲ್ಲಿಯೇ ಸ್ವಾತಂತ್ರ್ಯ ಸಂಗ್ರಾಮದ ಕೆಚ್ಚು, ದೇಶಭಕ್ತಿ, ಸ್ವಾಭಿಮಾನಗಳನ್ನು ಅಳವಡಿಸಿಕೊಳ್ಳುವಂತಹ ಅನೇಕ ಸಂದರ್ಭ ಇವರ ಮುಂದೆ ಬಂದವು. ಒಂದು ಕಡೆಗೆ ಬ್ರಿಟಿಷರ ವಿರುದ್ಧದ ಆಂದೋಲನಗಳ ಕಾವು ಏರುತ್ತಿದ್ದರೆ, ಇನ್ನೊಂದು ಕಡೆಗೆ ಶಿವಮೊಗ್ಗದ ಸುತ್ತಮುತ್ತ ಆ ಚಿಕ್ಕವಯಸ್ಸಿನ ಸಂದರ್ಭದಲ್ಲಿ ಕಮ್ಯೂನಿಷ್ಟ ಪಕ್ಷದ ಪ್ರಚಾರಕ್ಕಿಳಿದು ಹೋರಾಟದ ಮನೋಬಲವನ್ನು ಸ್ವಂತಿಕೆಯಿಂದಲೇ ಮೈಗೂಡಿಸಿಕೊಂಡವರು.

ಚಿ.ಸು.ಕೃಷ್ಣಸೆಟ್ಟಿಯವರದ್ದು ಮಧ್ಯಮವರ್ಗದ ಕುಟುಂಬವಾಗಿತ್ತು. ತಂದೆ ಸುಬ್ಬಯ್ಯ ಕೆಲಸದ ನಿಮಿತ್ತ ಚಿಕ್ಕನಾಯಕನಹಳ್ಳಿಯಿಂದ ಶಿವಮೊಗ್ಗಕ್ಕೆ ವಲಸೆ ಬಂದು ರೈಸ್ಮಿಲ್‌ನಲ್ಲಿ ಡ್ರೈವರ್ ವೃತ್ತಿಯಲ್ಲಿ ಮುಂದುವರಿಯುತ್ತಾ ಜೀವನ ಪ್ರಾರಂಭಮಾಡಿಕೊಂಡವರು. ಹಂತಹಂತವಾಗಿ ದುಡಿಯುವ ಛಲ ಮೈಗೂಡಿಸಿಕೊಂಡ ಸುಬ್ಬಯ್ಯನವರು ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಅಡ್ಡಾಡಲು ಸ್ವಲ್ಪ ಬಿಗುವಾದ ವಾತಾವರಣವಿದ್ದ ಕಾರಣ ತನ್ನ ಸಂಸಾರವನ್ನು ತೀರ್ಥಹಳ್ಳಿಗೆ ಕರೆತಂದರು. ಅದಾಗಲೇ ಮೂವರು ಮಕ್ಕಳನ್ನು ಹೊಂದಿದ್ದ ಈ ದಂಪತಿಗೆ ನಾಲ್ಕನೆ ಮಗುವಾಗಿ ಜನಿಸಿದವರೆ ಕೃಷ್ಣಮೂರ್ತಿ. ಸಂಬಳ ಸಾಲದೆಂಬಂತೆ ಮನೆಗಂಟಿಕೊಂಡೆ ಕಿರಾಣಿ ಅಂಗಡಿಯನ್ನು ಹಾಕಿ ಮಕ್ಕಳಿಗೆ ಅದರ ಜವಾಬ್ದಾರಿಯನ್ನು ವಹಿಸಿದರು. ಈ ಸಂದರ್ಭದಲ್ಲಿ ಬಾಲಕ ಕೃಷ್ಣಮೂರ್ತಿಯ ಮಾಧ್ಯಮಿಕ

ಶಾಲಾ ಶಿಕ್ಷಣ ತೀರ್ಥಹಳ್ಳಿಯಲ್ಲಿ ಮುಗಿಸಿ, ಪ್ರೌಢಶಾಲೆಗೆ ಮಲ್ಲಾಡಿಹಳ್ಳಿ ಮಠಕ್ಕೆ ಸೇರಿಸುತ್ತಾರೆ. ಅಲ್ಲಿ ಎರಡು ವರ್ಷಗಳ ಅಭ್ಯಾಸಗಳ ಜೊತೆ ಪಠ್ಯೇತರ ಚಟುವಟಿಕೆಯಲ್ಲೂ ತುಂಬಾ ಚುರುಕಾಗಿ ಬೆಳೆಯುತ್ತಾನಾದರೂ ಕಾರಣಾಂತರಗಳಿಂದ ಎಸ್.ಎಸ್.ಎಲ್.ಸಿಗೆ ಮತ್ತೆ ತವರೂರಿಗೆ ತಂದು ಸೇರಿಸುತ್ತಾರೆ.

ಬಾಲಕ ಕೃಷ್ಣಮೂರ್ತಿಗೆ ಶಾಲೆಯಲ್ಲಿ ಅಕ್ಷರ ಅಭ್ಯಾಸ ಮಾಡುವಲ್ಲಿ ತುಂಬಾ ಆಸಕ್ತಿ ಇತ್ತಾದರೂ ಲೆಕ್ಕದಲ್ಲಿ ಸ್ವಲ್ಪ ಎಡವಟ್ಟು, ಆದರೆ ಚಿಕ್ಕವನಿರುವಾಗಲೇ ಹಾಡು, ಪದ್ಯ, ಪತ್ತೆದಾರಿ ಕಥೆಗಳೆಂದರೆ ಪಂಚಪ್ರಾಣ, ಚಿಕ್ಕವನಿರುವಾಗ ಕಥೆ, ಕವಿತೆಗಳನ್ನು ಬರೆದು ಶಿಕ್ಷಕರಿಂದ ಮತ್ತು ಸ್ನೇಹಿತರಿಂದ ಬೆನ್ನು ತಟ್ಟಿಸಿಕೊಂಡ ಅನೇಕ ಪ್ರಸಂಗಗಳು ಬಂದು ಹೋಗಿರುತ್ತವೆ. ಆದರೆ ಮನೆಯಲ್ಲಿ ಸಾಹಿತ್ಯಕ್ಕೆ ಅಷ್ಟು ಬೇಡಿಕೆಯಿರಲಿಲ್ಲ, ತಂದೆ ಸುಬ್ಬಯ್ಯನಿಗೆ ಒಂದೇ ಕನಸು, ನನ್ನ ಮಕ್ಕಳು ಜೀವನ ಸಾಗಿಸಲು ಇನ್ನೊಬ್ಬರನ್ನು ಅವಲಂಬಿಸಬಾರದು. ಆದ್ದರಿಂದ ಮಕ್ಕಳು ಲೆಕ್ಕ ಕಲಿಯಬೇಕು ಮುಂದೆ ರೈಸ್‌ಮಿಲ್‌ಗಳನ್ನು ಪ್ರಾರಂಭಿಸಬಹುದು. ಈ ಭಾಗದಲ್ಲಿ ಹೆಚ್ಚು ಬತ್ತದ ಭರಾಟೆಯಿದೆ. ನಾವು ಎಷ್ಟಂತಾ ಬೇರೆಯವರಲ್ಲಿ ದುಡಿಯೋದು, ನಮ್ಮದೂ ಅಂತಾ ಒಂದು ಕಂಪನಿ ಹುಟ್ಟಿ ಹಾಕಿದರೆ ನಾಲ್ಕಾರೂ ನಿರುದ್ಯೋಗಿಗಳಿಗೆ ಉದ್ಯೋಗ ಕೊಟ್ಟಂಗಾಗುತ್ತದೆ ಎಂಬ ಮುಂದಾಲೋಚನೆ ಯಂತೆ ಸುಬ್ಬಯ್ಯಶೆಟ್ಟಿ ಮಕ್ಕಳನ್ನು ಶಾಲೆಗೆ ಸೇರಿಸಿದರಾದರೂ ಅಣ್ಣಂದಿರಿಗಿಂತ ತಮ್ಮ ಕೃಷ್ಣಮೂರ್ತಿ ಗಣಿತದಲ್ಲಿ ಯಾವಾಗಲೂ ಹಿಂದೆನೇ! ಎಸ್.ಎಸ್.ಎಲ್.ಸಿಯಲ್ಲಂತೂ ಅದೇ ವಿಷಯದಲ್ಲಿ ನಪಾಸಾಗಿದ್ದು ತಂದೆಗೆ ನುಂಗಲಾರದ ತುತ್ತು. ಹೇಗಾದರೂ ಎಸ್.ಎಸ್.ಎಲ್.ಸಿ ಪಾಸಾಗಲಿ ಎಂಬ ಆಶಯ ತಂದೆಯದ್ದಾಗಿರುವುದರಿಂದ ಬೆಂಗಳೂರಿನಲ್ಲಿ ಟ್ಯೂಷನ್‌ಗೆ ಹಾಕ್ತಾರೆ, ಆರು ತಿಂಗಳ ಕಾಲ ಅಭ್ಯಾಸ ಮಾಡಿಯೂ ಪರೀಕ್ಷೆಯಲ್ಲಿ ಪಾಸಾಗಲಿಲ್ಲ. ಮುಂದೆ ದಾರಿ ತೋಚದ ಸ್ಥಿತಿಯಲ್ಲಿ ತಂದೆಯಂತೆ ಮನೆಯಲ್ಲಿದ್ದ ಕಿರಾಣಿ ಅಂಗಡಿಯನ್ನು ನೋಡಿಕೊಳ್ಳುತ್ತಾ, ಹೋರಾಟ, ಪ್ರತಿಭಟನೆಗಳಲ್ಲಿ ತಮ್ಮನ್ನ ತಾವು ತೊಡಗಿಸಿಕೊಳ್ಳುತ್ತಾರೆ. ಈ ಬಿಡುವಿನ ಸಂದರ್ಭದಲ್ಲಿ ಮಯೂರದಲ್ಲಿ ಬರುವಂತಹ ಪತ್ತೆದಾರಿ ಕಾದಂಬರಿಗಳನ್ನು ಓದಲು ಶುರುಮಾಡಿದ್ದು, ಜೊತೆಜೊತೆಗೆ ಕವನ ಮತ್ತು ಕಥೆಗಳನ್ನು ಬರೆದು ಸ್ನೇಹಿತರಿಂದ ಶಿಕ್ಷಕರಿಂದ ಸೈ ಎನಿಸಿಕೊಂಡವನು. ಅವರು ನೆಲೆಸಿದ್ದ ಸ್ಥಳದಲ್ಲಿ ನಿರಂತರವಾಗಿ ಸಂಘಟನೆಗಳ ಪ್ರತಿಭಟನೆಯ ಭರಾಟೆಯಾದರೆ ಮತ್ತೊಂದು ಕಡೆ ಚುನಾವಣೆಯ ಗಲಾಟೆ, ಈ ಚುನಾವಣೆಯಲ್ಲಿ ತನ್ನ ಆಪ್ತರೆನಿಸುವ ತನಗರಿವಿಲ್ಲದೇ ಪಕ್ಷ, ವ್ಯಕ್ತಿಗಳನ್ನು ಬೆಂಬಲಿಸಬೇಕು ಎಂಬ ಆಶಯವನ್ನಿಟ್ಟುಕೊಂಡ ಕೃಷ್ಣಸೆಟ್ಟಿ ಆಪ್ತಗೆಳೆಯನೊಟ್ಟಿಗೆ ತಮ್ಮದೇ ಖರ್ಚಿನಲ್ಲಿ ಬಣ್ಣ, ಬಕೇಟ್, ಬ್ರೇಷ್‌ಗಳನ್ನು ಖರೀದಿಸಿ ರಾತ್ರಿ ಸಮಯದಲ್ಲಿ ಶಿವಮೊಗ್ಗದ ಪ್ರಮುಖ ಬೀದಿಗಳ ಕಾಂಪೌಂಡ್ ಮೇಲೆ ಜಾಹಿರಾತು ಬರೆಯಲು ಪ್ರಾರಂಭಿಸುತ್ತಾರೆ. ಈ ಸಂದರ್ಭದಲ್ಲಿ ಪೋಲಿಸರ ಕೈಗೆ ಸಿಕ್ಕು

ಪಡುಪಾಡಲಪಟ್ಟು ತಪ್ಪಿಸಿ ಕೊಂಡೋಗಿದ್ದುಂಟು. ಹೀಗೆ ರಾಜಕೀಯ ಮುಖಂಡರಿಗೆ ಪರಿಚಯವಾಗಿ ಇನ್ನೂ ಹೆಚ್ಚಿನ ಕಲಾಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವಂತಹ ಸನ್ನಿವೇಶ ದೊರಕಿದಾಗ, ಇವರ ತಂದೆಯ ಗೆಳೆಯನೊಬ್ಬ ಅಲ್ಲಿನ ವಾಸ್ತವವನ್ನು ಗಮನಿಸಿ ಗೆಳೆಯ ಸುಬ್ಬಯ್ಯನವರಿಗೆ ವಿಷಯವನ್ನು ಮುಟ್ಟಿಸುತ್ತಾರೆ. ಅದೇನೆಂದರೆ ನಿಮ್ಮ ಮಗ ಕೃಷ್ಣಸೆಟ್ಟಿ ಒಬ್ಬ ಉತ್ತಮ ಕಲಾವಿದನಾಗುವ ಎಲ್ಲಾ ಲಕ್ಷಣಗಳಿವೆ. ಅದನ್ನು ಮುಂದುವರೆಸಿ ಎಂದಾಗ ಅದರ ಬಗ್ಗೆ ತಂದೆಗೆ ಗೊತ್ತಿಲ್ಲ ಗೆಳೆಯ ನನಗೆ ಆ ಕೋರ್ಸ್ ಬಗ್ಗೆ ಏನು ತಿಳಿದಿಲ್ಲ ನೀನೇ ಒಂದು ಹಂತಕ್ಕೆ ಅವನನ್ನು ಸೇರಿಸಿ, ದಡಮುಟ್ಟಿಸಿ ಪುಣ್ಯಕಟ್ಟಿಕೋ ಎಂದಾಗ ಚಿತ್ರಕಲಾ ಶಿಕ್ಷಕನಾಗಿದ್ದ ಅವರಿಗೆ ಖುಷಿಯಾಗಿ ಮುಂದೆ ೧೯೭೦ರಲ್ಲಿ ದಾವಣಗೆರೆಯಲಿದ್ದ ಲಲಿತಕಲಾ ಮಹಾವಿದ್ಯಾಲಯದಲ್ಲಿ ಚಿತ್ರಕಲೆಯ ಶಿಕ್ಷಣಕ್ಕೆ ಪ್ರವೇಶ ಪಡೆಯುತ್ತಾರೆ.

ದಾವಣಗೆರೆಯ ಪರಿಸರದಲ್ಲಿ ಕೃಷ್ಣಸೆಟ್ಟಿ ಕಲೆಯ ಕುರಿತು ಕಲಿಯುವುದಕ್ಕಿಂತ ಹೆಚ್ಚು, ಹೋರಾಟದ ನೇತೃತ್ವವಹಿಸಿದ್ದು, ಎ.ಬಿ.ವಿ.ಪಿಯಂತ ಸಂಘಟನೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ತನ್ನಲ್ಲಿರುವ ಧ್ವನಿಯಲ್ಲಿಯೇ ನೂರಾರು ಜನಸಮೂಹವನ್ನು ಕಂಡುಕೊಂಡವರು. ಇದು ಮುಂದುವರಿದು ಕಲಿಯುವ ಹಂತದಲ್ಲಿರುವಾಗಲೇ ಜೈಲಿಗೆ ಹೋಗಿಬಂದದ್ದು, ಜೈಲಿನಲ್ಲಿದ್ದಂಗೆ ಸೆಕ್ಯೂರಿಟಿಯ ಮೂಲಕ ಪರೀಕ್ಷೆ ಬರೆದು ಚಿತ್ರಕಲಾ ಡಿಪ್ಲೊಮವನ್ನು ಮುಗಿಸಿರುತ್ತಾರೆ. ಇಂತಹ ಅನೇಕ ಸಂದರ್ಭಗಳನ್ನು ಅಧ್ಯಾಯದಲ್ಲಿ ವಿವರಿಸಲಾಗಿದೆ.

ಮುಂದೆ ಜಯಪ್ರಕಾಶ್ ನಾರಾಯಣ್ ಅವರು ವಿಧ್ಯಾರ್ಥಿ ಯೋಜನಾ ಸಂಘರ್ಷ ಸಮಿತಿಯನ್ನು ರಚಿಸಿದ್ದರು. ಅದು ಎಮೆರ್ಜೆನ್ಸಿ ಮುಗಿದ ಸಮಯದಲ್ಲಿ, ಅದರ ರಾಜ್ಯಮಟ್ಟದ ಕಮಿಟಿಯಲ್ಲಿ ಚಿ.ಸು.ಕೃಷ್ಣಸೆಟ್ಟಿಯವರ ಹೆಸರಿತ್ತು, ಇವರ ಹೆಸರಿನ ಜೊತೆ ಜೀವರಾಜ ಆಳ್ವ, ಪಿ.ಜಿ.ಆರ್.ಸಿಂಧ್ಯ, ಪ್ರಭಾಕರ್ ಮುಂತಾದವರು. ಕೃಷ್ಣಸೆಟ್ಟಿಯವರನ್ನು ರಾಜಕೀಯಕ್ಕೆ ಎಳೆದುತರ ಬೇಕೆಂದ ಮನಸ್ಸುಗಳ ಸಾಕಷ್ಟಿದ್ದವಾದರೂ ಅದು ಸಾಧ್ಯವಾಗಲಿಲ್ಲ. ಮುಂದೆ ಸಂಘಪರಿವಾರವನ್ನು ಬಿಟ್ಟು ೧೯೮೦ರಿಂದ ಕಲಾಚಟುವಟಿಕೆಯಲ್ಲಿ ಗುರುತಿಸಿಕೊಳ್ಳುವ ಪ್ರಯತ್ನ ಮಾಡಿದರು. ಇದೇ ಸಮಯದಲ್ಲಿ ಶಿವಮೊಗ್ಗದ ಮಧ್ಯಮವರ್ಗದ ಕುಟುಂಬದವರಾದ ಅಂಜಲಿಯವರನ್ನು ಮದುವೆಯಾಗುವರು. ಇನ್ನೂ ತಿಂಗಳಾಗಿಲ್ಲ ಅದಾಗಲೇ ಕೇಂದ್ರ ಲಲಿತಕಲಾ ಅಕಾಡೆಮಿಯಿಂದ ಗ್ರಾಫಿಕ್ ಕಲಿಯಲು ಶಿಷ್ಯವೇತನಕ್ಕ ಆಯ್ಕೆಯಾಗಿದ್ದೀರಿ ಎಂಬ ಸಂದೇಶ ಬಂದ ಹಿನ್ನೆಲೆಯಲ್ಲಿ ಒಂದು ವರ್ಷ ಗಡಿ ಸ್ಟುಡಿಯೋ ದೆಹಲಿಯಲ್ಲಿದ್ದು, ಗ್ರಾಫಿಕ್ ಕಲೆಯನ್ನು ಕಲಿಯುತ್ತಾರೆ.

ಆರ್ಥಿಕ ಸಂಕಷ್ಟದಲ್ಲಿದ್ದ ಕೃಷ್ಣಸೆಟ್ಟಿಗೆ ಸರ್ಕಾರಿ ಕೆಲಸದಲ್ಲಿದ್ದ ಶ್ರೀಮತಿ ಅಂಜಲಿಸೆಟ್ಟಿಯವರು ಹಣದ ಜವಾಬ್ದಾರಿ ಹೊತ್ತು ಪತಿಗೆ ಸಹಕರಿಸಿ ಪ್ರೋತ್ಸಾಹಿಸುತ್ತಾರೆ. ಮುಂದೆ ಹೆಂಡತಿಯ ಸರ್ಕಾರಿ ಕೆಲಸ ಬಿಡಿಸಿ ಅಂಜಲಿಸೆಟ್ಟಿಯವರಲ್ಲಿದ್ದ ನೃತ್ಯಕಲೆಯನ್ನು ಕಲಿಯಲು, ಅದರಲ್ಲೇ ಮುಂದು ವರಿಯಲು

ಸಹಕಾರಿಯಾಗುವಂತೆ ಪತಿ ಕೃಷ್ಣಸೆಟ್ಟಿಯವರು ಬೆಂಗಳೂರಿಗೆ ಕರೆತಂದು ಈ ದಂಪತಿಗಳು ಕಲಾವಲಯದಲ್ಲೇ ಮುಂದುವರಿಯಲು ಪ್ರಾರಂಭಿಸುತ್ತಾರೆ. ಮುಂದುವರಿದು ವಿನ್ಯಾಸ್ ಜಾಹೀರಾತು ಸಂಸ್ಥೆಯನ್ನು ಹುಟ್ಟು ಹಾಕಿ, ನಿರ್ದೇಶಕರಾಗಿ ಕೆಲಸ ಮಾಡುತ್ತಾದರೂ ಕಾರಣಾಂತರಿಂದ ಅಲ್ಪ ದಿನಗಳಲ್ಲಿ ಆ ಹುದ್ದೆಯನ್ನು ತೊರೆದು, ಹೆಸರಾಂತ ಕ್ಲಾರಿಯನ್ ಸಂಸ್ಥೆಯಲ್ಲಿ ಕಲಾವಿನ್ಯಾಸಕಾರನಾಗಿ ಸೇರಿಕೊಂಡು ಸಾಕಷ್ಟು ಅನುಭವವನ್ನು ಪಡೆದುಕೊಳ್ಳುತ್ತಾರೆ. ಇದರ ಜೊತೆಯಲ್ಲಿಯೇ ಕಲಾಸಾಹಿತ್ಯವನ್ನು ಮೈಗಂಟಿಸಿಕೊಂಡ ಚಿ.ಸು.ಕೃಷ್ಣಸೆಟ್ಟಿ ೧೯೮೬ರಿಂದ ೧೯೯೫ರ ವರೆಗೆ ಕನ್ನಡ ಪ್ರಭದಲ್ಲಿ ಅಂಕಣಕಾರರಾಗಿ ಕಾರ್ಯನಿರ್ವಹಿಸುತ್ತಾರೆ. ನಂತರ ೧೯೯೬ ರಿಂದ ೨೦೦೨ರವರೆಗೆ ಪ್ರಜಾವಾಣಿಯಲ್ಲಿ ಅಂಕಣಕಾರರಾಗಿ ಕೆಲಸ ಮಾಡಿರುತ್ತಾರೆ. ಇದರ ಮಧ್ಯೆ ಸಂಯುಕ್ತ ಕರ್ನಾಟಕ, ವಿಜಯಕರ್ನಾಟಕ ಮುಂತಾದ ಪತ್ರಿಕೆಗಳಲ್ಲಿ ನೂರಾರು ಲೇಖನಗಳನ್ನು ಅದ್ರಲ್ಲೂ ಕಲಾ ವಿಮರ್ಶೆ ಗಳನ್ನು ಬರೆದು ಗುರುತಿಸಿಕೊಳ್ಳುವ ಮೂಲಕ ರಾಜ್ಯದ ಮುಂಚೂಣಿಯಲ್ಲಿರುವ ಕಲಾವಿಮರ್ಶಕ ನಾಗಿದ್ದವರು. ಮುಂದೆ ಬೆಂಗಳೂರಿನ ಬೆಮೆಲ್ ಸಂಸ್ಥೆಯಲ್ಲಿ ಕಲಾನಿರ್ದೇಶಕನ ಹುದ್ದೆ ಅಲಂಕರಿಸಿ, ನಿರ್ದೇಶಕರಾಗಿ ದುಡಿದು ೨೦೧೧ರಲ್ಲಿ ನಿವೃತ್ತಿಯಾಗುತ್ತಾರೆ. ಅದರಾಚೆಗೂ ಕೃಷ್ಣಸೆಟ್ಟಿಯವರು ಮಾಡಿದ ಕಾರ್ಯಗಳೇನು ಎಂಬುದನ್ನು ವಿವರವಾಗಿ ಈ ಅಧ್ಯಾಯನದಲ್ಲಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಚಿ.ಸು.ಕೃಷ್ಣಸೆಟಿಯವರ ದೃಶ್ಯಕಲಾ ಸಾಹಿತ್ಯ ಮತ್ತು ವಿಮರ್ಶೆ ಕುರಿತಾಗಿದ್ದು, ನಿರಂತರವಾದ ಇಪ್ಪತ್ತು ವರ್ಷಗಳ ಈ ಒಡನಾಟದಲ್ಲಿ ೮೦ರ ದಶಕದಿಂದ ಕಲಾ ಸಾಹಿತ್ಯವನ್ನು ಹೊರಜಗತ್ತಿಗೆ ಪರಿಚಯಿಸಿದವರೆಂದರೆ ಚಿ.ಸು.ಕೃಷ್ಣಸೆಟ್ಟಿ. ಇಲ್ಲಿಯವರೆಗೂ ಸರಿಸುಮಾರು ಐನೂರಕ್ಕೂ ಹೆಚ್ಚು ಕಲಾಸಂಗಾತಿಗಳ ಚಿತ್ರಗಳ ಕುರಿತು ವಿಮರ್ಶಿಸಿರುತ್ತಾರೆ. ಈಗಿನಷ್ಟು ಕಂಪ್ಯೂಟರ್ ಬಳಕೆ ಆಗಿರಲಿಲ್ಲ ಪತ್ರಬರೆಯಬೇಕಿತ್ತು, ಮಧ್ಯಾಹ್ನ ಪತ್ರಿಕಾ ಕಛೇರಿ ತಲುಪಿಸಬೇಕಿತ್ತು ಅಂತಹ ಸಮಯದಲ್ಲಿ ಲೇಖನಗಳನ್ನು ಬರೆದಿದ್ದು, ಆ ತುರ್ತು ಪರಿಸ್ಥಿಯಲ್ಲಿ ಕಲಿತಪಾಠ ಮುಂದೆ ಕಲಾಬರವಣಿಗೆಯಲ್ಲಿ ಸರಳವಾಯಿತು ಎನ್ನುವ ಕೃಷ್ಣಸೆಟ್ಟಿಯವರು ಕಲಾಸಾಹಿತ್ಯ ಮತ್ತು ವಿಮರ್ಶೆಯ ಬೆಳೆದ ಸಂದರ್ಭದ ವಿವರವನ್ನು ಈ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿರುತ್ತದೆ.

ಕನ್ನಡದಲ್ಲಿ ವಿಮರ್ಶೆಯ ಕ್ಷೇತ್ರ ಅಷ್ಟೊಂದು ಹುಲುಸಾದುದೇನಲ್ಲ. ಕಲಾಸಾಹಿತ್ಯ ಮತ್ತು ವಿಮರ್ಶೆ ಇದಕ್ಕೆ ಅಪವಾದವೆನಿಸಬಹುದಾದರೂ ಉಳಿದ ಕಲಾಪ್ರಕಾರಗಳ ಬಗ್ಗೆ ಈ ಮಾತು ನಿಜ. ನೋಟದಲ್ಲಿ ಸಿಗುವ ಅನುಭವಕ್ಕೆ ಅಕ್ಷರಾಭಿವ್ಯಕ್ತಿ ನೀಡುವುದೂ ಸುಲಭದ ಕೆಲಸವೇನಲ್ಲ. ಹಾಗೆಂದು ಚಿತ್ರಕಲೆ ಕೊಡುವ ಸೌಂದರ್ಯಾನುಭವ, ಅದು ಮಿಟುವ ಭಾವಲಹರಿಗಳಿಗೆ ಮಾತಿನ ರೂಪಕೊಡುವ ಪ್ರಯತ್ನ ನೆಡೆದಿಲ್ಲವೆಂದೂ ಈ ಮಾತಿನ ಅರ್ಥವಲ್ಲ. ನಡೆಯಬೇಕಾದ ಪ್ರಮಾಣದಲ್ಲಿ, ಆಯಾಮಗಳಲ್ಲಿ ನಡೆದಿಲ್ಲವೆಂಬ ಕೊರಗಿನ ಮಧ್ಯೆಯು ಇಂಥ ಪ್ರಯತ್ನದಲ್ಲಿ ಗಮನಾರ್ಹವಾದುದನ್ನು

ಸಾಧಿಸಿರುವ ಹಲವಾರು ಮಂದಿ ಲೇಖಕರು ಕರ್ನಾಟಕದಲ್ಲಿದ್ದಾರೆ. ಅಂಥವರ ಪೈಕಿ ಹಿರಿಯ ತಲೆಮಾರಿನವರಲ್ಲಿ ಪ್ರೊ.ಎಸ್.ಕೆ. ರಾಮಚಂದ್ರರಾವ್, ಬಿ.ವಿ.ಕೆ.ಶಾಸ್ತ್ರಿ, ಎಸ್.ಎನ್.ಚಂದ್ರಶೇಖರ್, ಎಂ.ವಿ.ಸೀತಾರಾಮಯ್ಯ, ಪ್ರೊ. ಎಂ.ಎಚ್.ಕೃಷ್ಣಯ್ಯ, ಪ್ರೊ.ಎಸ್.ಸಿ.ಪಾಟೀಲ, ಸಿ. ಚಂದ್ರಶೇಖರ್, ಡಾ.ವಿ.ಟಿ.ಕಾಳೆ, ಎಂ.ಎಸ್.ಮೂರ್ತಿ, ಎನ್.ಮರಿಶಾಮಾಚಾರ್, ಎಚ್.ಎ.ಅನಿಲ್‌ಕುಮಾರ್ ಪ್ರಮುಖರ ಸಾಲಿನಲ್ಲಿ ನಿಂತಿರುವವರು ಕಲಾವಿದ, ಕಲಾಸಾಹಿತಿ ಚಿ.ಸು.ಕೃಷ್ಣಸೆಟ್ಟಿ.

ಚಿ.ಸು.ಕೃಷ್ಣಸೆಟ್ಟಿಯವರು ಮೂಲತಃ ಕಲಾವಿದರು, ಆದರೆ ಈಚಿನ ವರ್ಷಗಳಲ್ಲಿ ಅವರ ಒಲವು ಚಿತ್ರಕಲಾ ಮಾಧ್ಯಮದ ಬರವಣಿಗೆಯತ್ತ ಹರಿದಿರುವಂತಿದೆ. ಅದರಲ್ಲೂ ವಿಶೇಷವಾಗಿ ಪರಿಚಯ, ಅಧ್ಯಯನ ಮತ್ತು ಕಲಾಸಾಹಿತ್ಯ ಮತ್ತು ವಿಮರ್ಶೆ ಅವರ ಬರವಣಿಗೆಯ ಧ್ಯೇಯ ಬಿಂದು. ದೃಶ್ಯಕಲಾ ಕ್ಷೇತ್ರದಲ್ಲಿ ಸಾಹಿತ್ಯ ಮತ್ತು ವಿಮರ್ಶೆ ತುಂಬಾನೆ ಕಡಿಮೆಯಂತಲೆ ಹೇಳ ಬಹುದಾದರೂ ೯೦ರ ದಶಕದಿಂದ ಪ್ರಾರಂಭವಾಗಿರುವ ದೃಶ್ಯಕಲೆಯಲ್ಲಿ ಸಂಶೋಧನೆ ದಟ್ಟವಾಗಿ ಬೆಳೆಯಲು ಮುಂದಾಗಿದೆ. ಇದರ ಹೊರತಾಗಿಯೂ ಚಿ.ಸು.ಕೃಷ್ಣಸೆಟ್ಟಿಯವರು ಸುಮಾರು ೮೦ರ ದಶಕದಿಂದಲೆ ಚಿತ್ರಕಲಾ ಕೃತಿಗಳ ಕುರಿತು ಪತ್ರಿಕೆಯಲ್ಲಿ ವಿಮರ್ಶೆ ಮಾಡುತ್ತಲೆ ಬಂದಿದ್ದು, ಅವು ನೂರಾರು, ಅವುಗಳಲ್ಲಿ ಪ್ರಮುಖವಾಗಿ ಸಾಹಿತ್ಯ ಮತ್ತು ಚಿತ್ರಕಲೆ, ಕಲೆಯಲ್ಲಿ ನಗ್ನತೆ: ಭೂತ ವರ್ತಮಾನಗಳ ದ್ವಂದ್ವ, ಚಿಕಣಿ ಚಿತ್ರಗಳು ಮತ್ತು ಸಮಕಾಲೀನ ಚಿತ್ರಗಳ ದಾಂಪತ್ಯ, ದೃಶ್ಯಕಲೆ ಎಂದರೇನು?, ಪರಂಪರೆಯಲ್ಲಿನ ಪಲ್ಲಟ, ನವ್ಯಕಲೆಯನ್ನಾಸ್ವಾದಿಸುವ ಕಲೆ, ಭಾರತದ ಸಮಕಾಲೀನ ರೇಖಾ ಚಿತ್ರಗಳು, ಆಧುನಿಕ ಕಲೆಯಲ್ಲಿನ ವಿಶಿಷ್ಟ ಪ್ರಯೋಗಗಳು, ನಮ್ಮ ಈಚೀನ ಸಮಕಾಲೀನ ಕಲೆಯಲ್ಲಿನ ಪ್ರವೃತ್ತಿಗಳು, ಯುದ್ಧಗಳ ಮೇಲೆ ಯುದ್ಧ ಸಾರಿದ ಗೆರ್ನಿಕಾ ಮತ್ತು ಕರ್ನಾಟಕದಲ್ಲಿ ಆಧುನಿಕ ಶಿಲ್ಪಕಲೆ ಹೀಗೆ ಸರಿ ಸುಮಾರು ಐನೂರಕ್ಕೂ ಅಧಿಕ ವಿಮರ್ಶಾ ಲೇಖನಗಳ ಜೊತೆ ಕಲೆಗೆ ಸಂಬಂಧಿಸಿದ ಲೇಖನಗಳನ್ನು ಬರೆದಿರುತ್ತಾರೆ. ರಾಜ್ಯದ ಅಲ್ಲಲ್ಲಿ ನಡೆಯುವ ವಿಚಾರ ಸಂಕಿರಣದಲ್ಲಿ ಭಾಗವಹಿಸಿ ಪ್ರಬಂಧ ಮಂಡಿಸಿರುತ್ತಾರೆ. ಹಾಗೆಯೇ ಕಲೆಯ ಕುರಿತು ಚಿತ್ತಾ-ಚಿತ್ತ, ವರ್ಣಾವರಣ, ದೃಶ್ಯಕಲೆ ಎಂದರೇನು, ಎಕ್ಸ್‌ಪ್ರೇಶನಿಸಂ, ಎಂ.ಟಿ.ವಿ.ಆಚಾರ್ಯ, ಯುಸಫ್‌ಆರಕ್ಕಲ್ ಮತ್ತು ಲೋಹ ಮಾಂತ್ರಿಕ ಎಲ್.ಪಿ.ಅಂಚನ್ ಎಂಬ ಪುಸ್ತಕಗಳನ್ನು ರೂಪಿಸಿ ಹೊರತಂದಿರುತ್ತಾರೆ. ಹೀಗೆ ಒಟ್ಟು ಕೃಷ್ಣಸೆಟ್ಟಿಯವರು ರಚಿಸಿರುವ ಕಲಾಸಾಹಿತ್ಯ ಮತ್ತು ವಿಮರ್ಶೆಯ ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಕೃಷ್ಣಸೆಟ್ಟಿಯವರ ಕಲಾಕೃತಿಗಳ ವಸ್ತುವಿಷಯಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದ್ದು, ಕಲಾವಿದರು ರಚಿಸಿದ ಒಟ್ಟು ಕಲಾಕೃತಿಗಳನ್ನು ಸಂಗ್ರಹಿಸಿ ಅವುಗಳನ್ನು ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲಾಗಿರುತ್ತದೆ. ವ್ಯಕ್ತಿ ಬೆಳವಣಿಗೆ ಹೊಂದಿದಂತೆ ಆತನ ದೈಹಿಕ ಮತ್ತು ಬೌದ್ಧಿಕ ಸಾಮರ್ಥ್ಯಗಳು ಬೆಳೆಯುತ್ತ ಹೋಗುತ್ತವೆ. ಬಾಲ್ಯ, ಪ್ರೌಢ, ಮುಪ್ಪಿನಾವಸ್ಥೆಗಳಲ್ಲಿ

ದೈಹಿಕ ಹಾಗೂ ಬೌದ್ಧಿಕ ಸಾಮರ್ಥ್ಯಗಳಿಗೆ ಅನುಸಾರವಾಗಿಯೇ ಮಾನವನ ಕ್ರಿಯಾ ಚಟುವಟಿಕೆಗಳು, ಮಾನಸಿಕ ಚಿಂತನೆಗಳು ರೂಪುಗೊಳ್ಳುತ್ತವೆ. ಹಾಗಾಗಿ ಕಲಾವಿದನೊಬ್ಬನ ಕಲಾಕೃತಿಗಳನ್ನು ಅಧ್ಯಯನ ಮಾಡುವಾಗ ಕಾಲಘಟ್ಟಗಳಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡುವುದು ಹೆಚ್ಚು ಸೂಕ್ತವಾಗುತ್ತದೆ. ಅದರಿಂದ ಕಲಾಕೃತಿಯ ಮೂಲಕ ಕಲಾವಿದನ ಮಾನಸಿಕ ಮತ್ತು ಬೌದ್ಧಿಕ ಸ್ಥಿತಿಗತಿಗಳನ್ನು ವಿಶ್ಲೇಷಿಸಬಹುದಾಗಿದೆ. ಕಲಾಕೃತಿಯ ರಚನೆಯ ಸಂದರ್ಭದಲ್ಲಿ ರಚನಾಕಾರನ ಮನೋಭೂಮಿಕೆ ಗಳಲ್ಲದೆ ಅವನ ಕಾಲದ ಸಂಸ್ಕೃತಿ, ಪರಿಸರ, ನಂಬಿಕೆ, ಆಚರಣೆಗಳು, ಕಲಾಕೃತಿ ರಚನೆಯ ಅನುಭವಗಳ ವಿವರವನ್ನು ಈ ಅಧ್ಯಾಯದಿಂದ ಕಂಡುಕೊಂಡದ್ದು ಮತ್ತು ಅವುಗಳನ್ನು ವಿಮರ್ಶಿ ಸುವ ಪ್ರಯತ್ನ ಮಾಡಲಾಗಿರುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿರುತ್ತದೆ.

ಕೃಷ್ಣಸೆಟ್ಟಿಯವರು ತೊಂಬತ್ತರ ದಶಕದ ಪೂರ್ವಾರ್ಧದಲ್ಲಿ ಪ್ರಾಯಶಃ ಒಂದು ನಿರ್ಧಿಷ್ಠ ಕಲಾಶೈಲಿಯನ್ನು ರೂಢಿಸಿಕೊಳ್ಳಲು ಪ್ರಯತ್ನಿಸಿ ಅದರಲ್ಲಿ ಯಶಸ್ವಿಯಾಗಿರುವಂತೆ ತೋರುತ್ತದೆ. ಪಾಶ್ಚಾತ್ಯ ನವ್ಯಕಲಾ ಶೈಲಿಗಳ ಮಧ್ಯದಲ್ಲಿ ತಮ್ಮದೇ ವಿಶಿಷ್ಠ ಚಿತ್ರಶೈಲಿಯ ಹುಡುಕಾಟಕ್ಕಾಗಿ ಹಾತೊರೆದ ಕೃಷ್ಣಸೆಟ್ಟಿಯವರು ತಮ್ಮದೇ ವಿಶಿಷ್ಟ ಶೈಲಿಯನ್ನು ಕಂಡುಕೊಂಡು ಕಲಾಕೃತಿ ರಚಿಸತೊಡಗಿದರು. ಅವರ ಚಿತ್ರಶೈಲಿಯು ಆ ಕಾಲಮಾನದ ಕರ್ನಾಟಕದ ಚಿತ್ರಕಲಾವಿದರಲ್ಲಿಯೆ ವಿಶಿಷ್ಠವಾಗಿತ್ತಲ್ಲದೆ ಇತರೆಲ್ಲ ಕಲಾವಿದರಿಗಿಂತ ಭಿನ್ನವಾಗಿತ್ತು. ಅದು ಇಂದಿಗೂ ಮುಂದುವರೆದು ಕೊಂಡು ಬಂದಿರುತ್ತದೆ. ಅವರು ಇಲ್ಲಿಯವರೆಗೆ ರಚಿಸಿರುವ ಪ್ರತ್ಯೇಕ ಚಿತ್ರಶೈಲಿಯು ಇಂದಿಗೂ ಕೃಷ್ಣಸೆಟ್ಟಿಯವರ ವೈಯಕ್ತಿಕ ಕಲಾಶೈಲಿಯಾಗಿ ಗುರುತಿಸಲ್ಪಡುತ್ತಿದೆ.

ಕಲೆಯ ವಾತಾವರಣವನ್ನು ಮೂಡಿಸುವ, ನಿರಂತರ ಶ್ರಮಿಸುತ್ತಿರುವ ಕರ್ನಾಟಕದ ಖ್ಯಾತ ಕಲಾವಿದ ಚಿ.ಸು.ಕೃಷ್ಣಸೆಟ್ಟಿರವರಲ್ಲಿ ಪುಟಿಯುವ ಉತ್ಸಾಹಕ್ಕೆ, ಭಾವಚಿತ್ರ, ನೈಸರ್ಗಿಕ ಚಿತ್ರಗಳು, ಮ್ಯೂರಲ್-ಶಿಲ್ಪಕಲಾಕೃತಿಗಳು, ನವ್ಯಕಲೆಯ ಭಿನ್ನ ಸಂಯೋಜನೆಗಳು, ಅಮೂರ್ತ ಕಲೆಗಳು ಸೃಷ್ಟಿಗೊಂಡಿರುತ್ತವೆ. ತಮ್ಮ ಪರಿಸರದ ಹಿನ್ನೆಲೆಯಲ್ಲಿ ದಟ್ಟವಾದ ಅನುಭವಗಳ ಅಭಿವ್ಯಕ್ತಿಯನ್ನು ಮಾಧ್ಯಮವಾಗಿ ಬಳಸಿಕೊಳ್ಳುತ್ತಾ ಬಂದಿರುತ್ತಾರೆ. ಕಲೆಯಲ್ಲಿ ಕ್ರಿಯಾಶೀಲರಾಗಿರುವ ಚಿ.ಸು. ಕೃಷ್ಣಸೆಟ್ಟಿರವರು ಪ್ರಯೋಗಶೀಲರು ಕೂಡ. ಅವರ ಅಭಿವ್ಯಕ್ತಿಯ ತೀವ್ರತೆ ಹಲವು ಬಗೆಯಿಂದ ಕೂಡಿರುತ್ತವೆ. ವಿವಿಧ ಘಟ್ಟಗಳಲ್ಲಿ, ವಿಭಿನ್ನ ಸಂವೇದನೆಗಳಿಗೆ ಒಳಗಾಗಿ ವೈವಿಧ್ಯಮಯವಾಗಿ ನವ್ಯಕಲಾ ಶೈಲಿಯಲ್ಲಿ ಅನೇಕ ಸಂಯೋಜನೆಯ ಕಲಾಕೃತಿಗಳನ್ನು ಸೃಷ್ಟಿಸಿದ್ದಾರೆ. ಅವರ ಸೃಜನ ಸಾಮರ್ಥ್ಯಕ್ಕೆ ಹಲವು ಭಾವಚಿತ್ರಗಳು ಹಾಗೂ ಮೂರ್ತ, ಅಮೂರ್ತ ನವ್ಯಕಲಾ ಶೈಲಿಯ ಸರಣಿ ಕಲಾಕೃತಿಗಳು ಇದಕ್ಕೆ ಸಾಕ್ಷಿಯಾಗಿವೆ. ಪ್ರಮುಖವಾಗಿ ಅವರ ಚಿತ್ರಕಲಾಕೃತಿಗಳು ತೈಲವರ್ಣ, ಅಕ್ರಲಿಕ್ ಮತ್ತು ಮಿಶ್ರ ಮಾಧ್ಯಮದಲ್ಲಿದ್ದು ಅವು ಅಕ್ರಾಲಿಕ್ ಚಿತ್ರಕೃತಿಗಳು, ಗ್ರಾಫಿಕ್ ಚಿತ್ರಕೃತಿಗಳು

ಮತ್ತು ತೈಲವರ್ಣದಲ್ಲಿನ ಚಿತ್ರಕೃತಿಗಳು ಎಂದು ವಿಂಗಡಿಸಿ ಅಧ್ಯಯನ ಮಾಡಲಾಗಿದೆ. ತೈಲವರ್ಣ ಕಲಾವಿದರಿಗೆ ಸ್ವಲ್ಪ ಪ್ರಮಾಣದ ಪ್ರಿಯವಾದ ಮಾಧ್ಯಮವಾಗಿದೆ. ಚಿ.ಸು.ಕೃಷ್ಣಸೆಟ್ಟಿರವರು ೭೦ರ ದಶಕದಿಂದ ಪ್ರಸ್ತುತ ದಿನಗಳವರೆಗೂ ತೈಲವರ್ಣದ ಕಲಾಕೃತಿಗಳ ರಚನೆಯಲ್ಲಿ ಸಂಪೂರ್ಣವಾಗಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

ಎಂಭತ್ತರ ದಶಕದಿಂದ ಆರಂಭವಾದ ಚಿ.ಸು.ಕೃಷ್ಣಸೆಟ್ಟಿಯವರ ಕಲಾ ಜೀವನದಲ್ಲಿ ಉತ್ತಮ ಕೃತಿಗಳು ಮೂಡಿಬಂದಿದ್ದಾವೆ. ಸಂಯೋಜನಾಚಿತ್ರ, ಗ್ರಾಫಿಕ್ ಚಿತ್ರ, ವ್ಯಕ್ತಿಚಿತ್ರ, ಭಾವಚಿತ್ರ, ಹೀಗೆ ಯಾವುದೇ ಕೃತಿ ರಚಿಸಿದರೂ ಅದರಲ್ಲಿ ಸ್ವಂತಿಕೆ, ಸೃಜನಶೀಲತೆಗಳು ಕಂಡು ಬರುತ್ತವೆ. ತೊಂಬತ್ತರ ದಶಕದ ಉತ್ತರಾರ್ಧದಲ್ಲಿ ಅಮೂರ್ತ ಚಿತ್ರಗಳ ಕಡೆಗೆ ಇವರ ಆಸಕ್ತಿ ಹೊರಳಿದೆ. ಈ ಸಂದರ್ಭದಲ್ಲಿ ಅಮೂರ್ತ ಆಕಾರಗಳನ್ನು ವಿವಿಧ ರೀತಿಯಲ್ಲಿ ಸೃಷ್ಟಿಸಿದ್ದಾರೆ. ರೇಖಾ ಪ್ರಧಾನ, ವರ್ಣ ಪ್ರಧಾನ ಹಾಗೂ ವಿನ್ಯಾಸ ಪ್ರಧಾನವಾದ ಅಮೂರ್ತ ಕಲಾಕೃತಿಗಳು ಇವರಿಂದ ರಚನೆಗೊಂಡಿವೆ. ಇಲ್ಲಿ ಪ್ರಖರ ವರ್ಣಗಳು ಪ್ರಧಾನವಾಗಿ ಬಳಸಲ್ಪಟ್ಟಿವೆ. ಕೆಲವು ಕೃತಿಗಳನ್ನು ಕೇವಲ ರೇಖೆಯಲ್ಲಿ ರಚಿಸಿದ್ದರೆ ಮತ್ತೆ ಕೆಲವು ಕೃತಿಗಳಲ್ಲಿ ರೇಖೆಯ ವಿನ್ಯಾಸಗಳಲ್ಲಿ ಬಣ್ಣ ತುಂಬಲಾಗಿದೆ. ಇನ್ನು ಹಲವು ಕೃತಿಗಳಲ್ಲಿ ಕೇವಲ ಬಣ್ಣಗಳ ಚಲ್ಲಾಟದಿಂದ ಸಹವಾಗಿ ಅಮೂರ್ತ ಆಕಾರಗಳನ್ನು ಸೃಷ್ಟಿಸಿದ್ದಾರೆ.

ತೊಂಬತ್ತರ ದಶಕದ ಕೊನೆಯ ಹೊತ್ತಿಗೆ ಮತ್ತೆ ಹೆಚ್ಚಿನ ಪ್ರಮಾಣದಲ್ಲಿ ಕಲಾಕೃತಿಗಳನ್ನು ರಚಿಸಿದಂತೆ ಕಂಡು ಬರುತ್ತದೆ. ಹಿಂದಿನ ದಿನಗಳಲ್ಲಿ ರಾಜಕೀಯ, ಅಧಿಕಾರ ಕುರಿತಾಗಿರುವ ಚಿತ್ರಗಳಲ್ಲಿ ಪ್ರೇಮ, ಕಾಮ, ನಗ್ನತೆ, ರಾಜಕೀಯ, ಆಸೆ, ದುರಾಸೆ, ಲಾಭ, ನಷ್ಟ ಇಂತಹ ವಿಷಯ ಗಳು ಕಂಡು ಬಂದಿರುತ್ತವೆ. ಚಿ.ಸು.ಕೃಷ್ಣಸೆಟ್ಟಿರವರ ಮನೋಸ್ಥಿತಿ ಹಾಗೂ ಅನುಭವದ ಪ್ರಭಾವಳಿ ಇಲ್ಲಿ ಕೆಲಸ ಮಾಡಿರುವುದು ಕಂಡುಬರುತ್ತದೆ. ಯುವಕರಾಗಿದ್ದಾಗ ಸಹಜವಾಗಿ ಮಹಿಳೆಯರ ಬಗ್ಗೆ ಚಿಂತಿಸುವ ಸಂಗತಿಗಳು ಹಾಗೂ ಪ್ರೌಢ ವಯಸ್ಸಿನಲ್ಲಿ ಮಹಿಳೆಯರ ಬಗ್ಗೆ ಪುರುಷರು ಆಲೋಚಿಸುವ ರೀತಿಗಳಿಗೆ ವ್ಯತ್ಯಾಸವಿದೆ. ಅದು ವಯೋಮಾನದ ಸಹಜಗುಣವಾಗಿದೆ. ಇದು ಅವರ ಕಲಾಕೃತಿ ರಚನೆಯ ಮೇಲೂ ಪ್ರಭಾವ ಬೀರುತ್ತದೆ. ಇಂತಹ ಮೌಲಿಕ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಚಿ.ಸು.ಕೃಷ್ಣಸೆಟ್ಟಿಯವರ ಕಲಾಚಟುವಟಿಕೆಯ ಕುರಿತಾಗಿದ್ದು, ಇಲ್ಲಿ ಲಲಿತಕಲಾ ಮಹಾವಿದ್ಯಾಲಯ ದಾವಣಗೆರೆಯ ಕಾಲೇಜಿನಿಂದ ಪ್ರಾರಂಭವಾದ ಕಲಾಚಟುವಟಿಕೆ, ಪ್ರಸ್ತುತ ಇಂದಿನವರೆಗೂ ನಿರಂತರವಾಗಿ ಮುಂದುವರಿದಿದೆ. ಅದಕ್ಕೆ ಕಾರಣ ಅವರು ಇಲ್ಲಿಯವರೆಗೆ ರಚಿಸಿರುವ ಕಲಾಕೃತಿಗಳನ್ನು ಪ್ರದರ್ಶಿಸಿರುವುದು. ಮತ್ತು ಕಲಾ ವಿಮರ್ಶೆಯ

